ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೨೭–೩

# ಶ್ರೀತ್ರಿಪುರಾರಹಸ್ಯ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

## ಮಾಹಾತ್ಮ್ಯಖಂಡ

(ಅಧ್ಯಾಯ ೨೧–೪೦)



ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೬

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೨೭–೩

# ಶ್ರೀತ್ರಿಪುರಾರಹಸ್ಯ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

## ಮಾಹಾತ್ಮ್ಯಖಂಡ

(ಅಧ್ಯಾಯ ೨೧–೪೦)



ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ತ್ರಿಪುರಾರಹಸ್ಯ ಪದಾರ್ಥವನ್ನೂ, ಶಾಕ್ತೇಯದರ್ಶನದ ಸಿದ್ಧಾಂತಸಂಗ್ರಹವನ್ನೂ, ಈ ಶಾಕ್ತೇಯದರ್ಶನಕ್ಕೂ ವೇದಾಂತದ ದರ್ಶನಕ್ಕೂ ಇರುವ ಸಾಮರಸ್ಯವನ್ನೂ, ಇದರ ಮೊದಲನೆಯ ಸಂಪುಟದಲ್ಲಿ (೨-೧೨) ಪುಟಗಳಲ್ಲಿ ವಿವರಿಸಿರುತ್ತೇನೆ. ಈ ಪುರಾಣಕ್ಕೆ ಹಾರಿತಾಯನ ಸಂಹಿತೆ ಎಂದು ಇನ್ನೊಂದು ಹೆಸರೂ ಪ್ರಸಿದ್ಧವಾಗಿದೆ. ಮಲಯ ಪರ್ವತದ ತಪೋವನದಲ್ಲಿ ವಾಸಿಸುತ್ತಿದ್ದ ಪರಶುರಾಮನನ್ನು ಕುರಿತು ಅವನ ಶಿಷ್ಯರಲ್ಲಿ ಒಬ್ಬನಾದ ಹಾರಿತಾಯನನು ಶಾಶ್ವತವಾದ ಶ್ರೇಯಸ್ಸಿನ ಸ್ವರೂಪ, ಅದನ್ನು ಪಡೆಯಿಸುವ ಸಾಧನ, ಪಡೆಯಲು ಮಾಡಬೇಕಾದ ಕಾರ್ಯಕ್ರಮ, ಇವುಗಳನ್ನು ತಿಳಿಯಹೇಳಬೇಕೆಂದು ಪ್ರಾರ್ಥಿಸಲು, ಪರಶುರಾಮನು ತನ್ನ ಗುರುವಾದ ದತ್ತಾತ್ರೇಯ ಮಹರ್ಷಿಯ ಉಪದೇಶಗಳನ್ನು ಸ್ಮರಿಸಿ, ದತ್ತಭಾರ್ಗವಸಂವಾದ ರೂಪದಲ್ಲಿರುವ ಈ ತ್ರಿಪುರಾರಹಸ್ಯವನ್ನು ಶಿಷ್ಯನಿಗೆ ಉಪದೇಶಿಸಿದನು. ಆ ಸುಮೇಧನಿಗೇ ಹಾರಿತಾಯನನೆಂದು ಹೆಸರಾಗಿರುವುದರಿಂದ, ಅವನಿಂದ ರಚಿತವಾದ ಈ ಗ್ರಂಥಕ್ಕೆ ಹಾರಿತಾಯನಸಂಹಿತೆ ಎಂದು ಹೆಸರಿರುವುದೂ ಸಂಗತವಾಗಿಯೇ ಇದೆ. ಈ ಅಂಶವು ಈ ತ್ರಿಪುರಾರಹಸ್ಯದ ಮಹಾತ್ಮ್ಯಖಂಡದ ಮೊದಲನೆಯ ಅಧ್ಯಾಯದಿಂದ ಗೊತ್ತಾಗುತ್ತದೆ. ಎರಡನೆಯ ಅಧ್ಯಾಯದಲ್ಲಿ ಈ ಪುರಾಣದ ಪ್ರಥಮೋಪದೇಶಕನು ಮಹಾದೇವನೆಂದೂ, ಅವನಿಂದ ವಿಷ್ಣುವಿಗೂ, ಅವನಿಂದ ಬ್ರಹ್ಮನಿಗೂ ಉಪದೇಶದಿಂದ ಲಭಿಸಿತೆಂದೂ ಹೇಳಿದೆ. ಭೂಲೋಕದಲ್ಲಿ ಮಹಾವಿಷ್ಣು ಸ್ವರೂಪನಾದ ದತ್ತಾತ್ರೇಯ ಗುರುವು ತನ್ನ ಶಿಷ್ಯನಾದ ಪರಶುರಾಮನಿಗೆ ಉಪದೇಶಿಸಲು, ಅವನು ತನ್ನ ಶಿಷ್ಯನಾದ ಸುಮೇಧಾಹಾರಿತಾಯನನಿಗೆ ಹೇಳಿದನು ; ಅವನು ಗುರುವಿನ ಅಪ್ಪಣೆಯನ್ನನುಸರಿಸಿ ಹಾಲಾಸ್ಯಕ್ಷೇತ್ರದಲ್ಲಿರುತ್ತಾ, ಮೀನಾಕ್ಷೀ ದೇವಿಯನ್ನು ಸೇವಿಸುತ್ತಾ, ಈ ಗ್ರಂಥವನ್ನು ರಚಿಸಲು ಸಂಕಲ್ಪಿಸಿದನು. ಈ ವೃತ್ತಾಂತವನ್ನು ಕೇಳಿ ನಾರದನು ಅಲ್ಲಿಗೆ ಬರಲು, ಗುರೂಪದೇಶವು ಮರೆತುಹೋಗಿದ್ದುದನ್ನು ಸುಮೇಧನು ದುಃಖಿತನಾಗಿ ನಾರದನಿಗೆ ವಿಜ್ಞಾಪಿಸಲು, ನಾರದನು ಕರುಣೆಯಿಂದ ಬ್ರಹ್ಮನನ್ನು ಬರಮಾಡಿ ಸುಮೇಧನ ಪೂರ್ವಜನ್ಮ ವೃತ್ತಾಂತವನ್ನು ಕೇಳಿದನು.

ಹಿಂದಿನ ಕಾಲದಲ್ಲಿ ಸುಮಂತುವಿನ ಮಗನಾದ ಅಲರ್ಕನೆಂಬ ದ್ವಿಜನು ಸರಸ್ವತೀ ನದಿಯ ತೀರದಲ್ಲಿ ವಾಸವಾಗಿದ್ದನು. ಸುಮಂತುವು ತನ್ನ ಹೆಂಡಿತಿಯನ್ನು ಅಯಿ ಎಂದು ಸಂಬೋಧಿಸಿದ್ದನ್ನು ಐದು ವರ್ಷದ ಹುಡುಗನಾಗಿದ್ದ ಅಲರ್ಕನು ಕೇಳಿ, ಐ, ಐ, ಎಂದು ಬಿಂದುರಹಿತವಾದ ಬೀಜಾಕ್ಷರವನ್ನು ಅಭ್ಯಾಸ ಮಾಡುತ್ತಿದ್ದನು. ಪೂರ್ವಕರ್ಮಾನುಸಾರವಾಗಿ ರೋಗಬಾಧೆಯಿಂದ ಅವನು ಮೃತನಾದನು. ಪರಮ ದಯಾಳುವಾದ ಲಲಿತಾ ಶ್ರೀಮಾತೆಯ ಕುಮಾರಿಯಾದ ಬಾಲಾಂಬಾದೇವಿಯು ಆ ಬೀಜಾಕ್ಷರ ಜಪದಿಂದ ಪ್ರಸನ್ನಳಾದಳು. ಆದರೂ ಆ ಬೀಜಾಕ್ಷರ ಜಪವು ಅಜ್ಞಾನಪೂರ್ವಕವಾಗಿದ್ದುದರಿಂದ ಇವನಿಗೆ ಧಾರಣಶಕ್ತಿಯು ಉಂಟಾಗಿರಲಿಲ್ಲ. ಇನ್ನು ಮುಂದೆ ಇವನು ನನ್ನ ಅನುಗ್ರಹದಿಂದ ಎಲ್ಲವನ್ನೂ ತಿಳಿಯುತ್ತಾನೆ ಮತ್ತು ತ್ರಿಪುರಾರಹಸ್ಯ ಗ್ರಂಥವನ್ನೂ ರಚಿಸುತ್ತಾನೆಂದು ಹೇಳಿ, ಇವನು ಪ್ರತಿದಿನವೂ ನಾಲ್ಕು ಅಧ್ಯಾಯಗಳಂತೆ ರಚಿಸುತ್ತಾ, ಮೂವತ್ತಾರು ದಿನಗಳಲ್ಲಿ ಮಾಹಾತ್ಮ್ಯ, ಜ್ಞಾನ, ಚರ್ಯಾ, ಎಂಬ ಮೂರು ಖಂಡಗಳುಳ್ಳ ಈ ಪುರಾಣದ ರಚನೆಯನ್ನು ಮುಗಿಸುತ್ತಾನೆಂದೂ ಅನುಗ್ರಹಿಸಲು, ಅದರಂತೆ ಈ ಕಾರ್ಯವು ನೆರವೇರಿತೆಂದು ಗೊತ್ತಾಗುತ್ತದೆ. ಈ ಗ್ರಂಥವು ಓಂ ನಮಃ ಎಂದು ಆರಂಭವಾಗಿ ತ್ರಿಪುರೈವಹ್ರೀಂ ಎಂದು ಮುಗಿದಿದೆ. ಇದು ಶಿವಶಕ್ತಿತತ್ವವನ್ನು ನಿರೂಪಿಸುವುದರಿಂದ ಶಿವಪ್ರಣವದಿಂದ ಆರಂಭವಾಗಿ ಶಕ್ತಿಪ್ರಣವದಿಂದ ಮುಗಿದಿರುವುದು ಉಚಿತವಾಗಿದೆ. ವೇದಗಳಂತೆ ಇದು ಪವಿತ್ರತಮವಾದ ತತ್ವವನ್ನು ತಿಳಿಯಹೇಳುವುದರಿಂದ ಇದಕ್ಕೆ ಸಂಹಿತಾ ಎಂದೂ ಹೆಸರಿರುವುದೂ ಉಚಿತವಾಗಿಯೇ ಇದೆ. ಇದರಲ್ಲಿ ಹೇಳಿರುವ ಕಥೆಗಳೂ, ವರ್ಣಿಸಿರುವ ನೀತಿಧರ್ಮಗಳೂ, ವಿವರಿಸಿರುವ ತತ್ವವೂ, ಜಿಜ್ಞಾಸುವಾದ ಸಾಧಕನನ್ನು ಸಗುಣಸಾಕಾರಮೂರ್ತಿಯ ಆರಾಧನೆಯಿಂದ ಚಿತ್ತವು ಏಕಾಗ್ರವಾಗಲು ನಿರ್ಗುಣೋಪಾಸನೆಯ ಮೂಲಕ ಪರಬ್ರಹ್ಮಾತ್ಮೈಕ್ಯತತ್ವದ ಅಪರೋಕ್ಷಾನುಭವಕ್ಕೆ ಕ್ರಮವಾಗಿ ತಲಪಿಸಲು ಉತ್ತಮವಾದ ಸ್ವಾಭಾವಿಕವೂ ಆದ ಮಾರ್ಗವನ್ನು ತಿಳಿಯಹೇಳುತ್ತವೆ.

ಈ ಭಾಗದಲ್ಲಿ ಅಧಿಕಾರಮದದಿಂದ ದೊಡ್ಡವರಿಗೂ ಅಜ್ಞಾನದುಃಖಗಳು ತಪ್ಪವೆಂಬುದೂ, ಗಾಯತ್ರೀ, ಸಾವಿತ್ರೀ, ಸರಸ್ವತೀದೇವಿಯರ ಏಕತ್ವವೂ, ದೇವೀಭಾಗವತ, ಸೂತಸಂಹಿತೆಗಳಲ್ಲಿಯೂ ಹೇಳಿರುವಂತೆ, ಗಾಯತ್ರೀಕಥಾ, ಪ್ರಭಾವಗಳ ವಿಶೇಷೋಪದೇಶ, ಶಿವಲಿಂಗದ ಸ್ವರೂಪ, ತತ್ವ, ಪೂಜಾಕ್ರಮ, ಫಲಮಹಿಮೆಗಳನ್ನು ಸೂತಸಂಹಿತೆಯಲ್ಲೂ ಹೇಳಿರುವಂತೆ, ಇಲ್ಲೂ ವಿವರಿಸಿರುವುದೂ,

ಎಲ್ಲಕ್ಕಿಂತ ಮಿಗಿಲಾಗಿ ತ್ರಿಪುರಾತತ್ತ್ವವು ವ್ಯಾಪಕತಮವಾದ ಶಕ್ತಿರೂಪವೆಂದು ವಿವರಿಸಿರುವುದೂ, ಸೌಭಾಗ್ಯಾಷ್ಟೋತ್ತರನಾಮ, ಸೌಭಾಗ್ಯವಿದ್ಯೆ, ಸೌಭಾಗ್ಯನವ ರತ್ನಸ್ತೋತ್ರಗಳು ಹೆಚ್ಚು ಹೃದಯಂಗಮಗಳಾದ ವಿಶಿಷ್ಟೋಪದೇಶಗಳಾಗಿವೆ. ಕಾಮದ ದುಷ್ಫಲವೂ, ಅಕಾಮದ ಮಹಿಮೆಯೂ, ಗಮನಾರ್ಹವಾಗಿವೆ.

ಇಂತಹ ಉತ್ತಮ ಗ್ರಂಥವನ್ನು ಜನಗಳ ದಿನಗಟ್ಟಲೆಯ ಜೀವನಕ್ರಮ ವನ್ನು ಉತ್ತಮಗೊಳಿಸುವ ಉಪಯೋಗಕ್ಕೆ ಬರುವಂತೆ ಮಾಡಲು ಧಾರ್ಮಿಕ ಪ್ರಜಾವತ್ಸಲರಾಗಿ ನಮ್ಮನ್ನಾಳುತ್ತಾ ದಯಮಾಡಿಸಿರುವ **ಶ್ರೀ ಜಯಚಾಮ ರಾಜೇಂದ್ರ ಒಡೆಯರ್ ಬಹದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾ ಪ್ರಭುಗಳ ಉದಾರವಾದ ಅಪ್ಪಣೆಯಂತೆ ಈ ಗ್ರಂಥವನ್ನೂ ಕನ್ನಡ ಅರ್ಥಾನುವಾದ ವಿವರಣೆಗಳೊಡನೆ ಪ್ರಕಟಿಸಲಾಗಿದೆ. ಈ ಮಹೋಪಕಾರಕ್ಕಾಗಿ ಮಹಾಸ್ವಾಮಿ ಯವರಲ್ಲಿ ನನ್ನ ಕೃತಜ್ಞತೆಯನ್ನು ರಾಜಭಕ್ತಿ ಪೂರ್ವಕವಾಗಿ ಸಮರ್ಪಿಸಿ, ಈ ಸೇವೆಯಿಂದ ಜಗನ್ಮಾತೆಯಾದ ಪರಶಕ್ತಿಸ್ವರೂಪಳಾದ ಶ್ರೀಚಾಮುಂಡೇಶ್ವರೀ ಮಹಾತಾಯಿಯು ಸಂತುಷ್ಟಳಾಗಿ ಇವರಿಗೆ ಆಯುರಾರೋಗ್ಯ ಐಶ್ವರ್ಯ ಸತ್ಸಂತಾನಾದಿ ಸಕಲ ಸೌಭಾಗ್ಯಗಳನ್ನೂ ಕರುಣಿಸುತ್ತಿರಲೆಂದು ಆ ತಾಯಿಯ ಅಡಿದಾವರೆಗಳಲ್ಲಿ ಪ್ರಾರ್ಥಿಸುತ್ತಿರುತ್ತೇನೆ.

ಶ್ರೀ ವ್ಯಯಸಂವತ್ಸರದ
ಆಷಾಢ ಶುಕ್ಲ ಪೂರ್ಣಿಮಾ
ಭಾನುವಾರ, 14—7—1946

ಎಡತೊರೆ ದೇವಯ್ಯದೀಕ್ಷಿತರ ಮಗ
ಚಂದ್ರಶೇಖರಶಾಸ್ತ್ರೀ



# ಶ್ರೀತ್ರಿಪುರಾರಹಸ್ಯದ ಮಾಹಾತ್ಮ್ಯಖಂಡದಲ್ಲಿರುವ ವಿಷಯಗಳ ಸೂಚಿಕೆ


| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| ೨೧. | ವೀರವ್ರತನ ಏಟಿನಿಂದ ಮೂರ್ಛೆಗೊಂಡಿದ್ದ ಕಾಮನನ್ನು ದೂತರು ಲಕ್ಷ್ಮಿಯ ಸಮೀಪಕ್ಕೆ ತಂದು ನಡೆದ ಸಮಾಚಾರವನ್ನು ಹೇಳಿದರು ; ಲಕ್ಷ್ಮಿಯು ತ್ರಿಪುರಾದೇವಿಯನ್ನು ಧ್ಯಾನಿಸಿ ಕಾಮನನ್ನು ಅಮೃತಮಯವಾದ ದೃಷ್ಟಿಯಿಂದ ನೋಡಲು ಅವನು ಮೂರ್ಛೆತಿಳಿದೆದ್ದನು ; ವೀರವ್ರತನು ಶಿವಭಕ್ತನಾದುದರಿಂದ ಕಾಮನಿಗೆ ಸೋಲುಂಟಾಯಿತೆಂದು ತಾಯಿಯಿಂದ ತಿಳಿದು, ಕಾಮನು ತಾಯಿಯ ಬುದ್ಧಿವಾದದಂತೆ ಶಿವನನ್ನು ಪ್ರಾರ್ಥಿಸದೆ ಅವನನ್ನೂ ಜಯಿಸುವೆನೆಂದನು ; ಆಗ ತ್ರಿಪುರಾದೇವಿಯನ್ನು ಲಕ್ಷ್ಮಿಯು ಪ್ರಾರ್ಥಿಸಲು, ಗೌರಿಯು ಅಲ್ಲಿಗೆ ಬಂದಳು ; ಶಿವನನ್ನು ಪ್ರಾರ್ಥಿಸೆಂದು ಗೌರಿಯ ಬುದ್ಧಿವಾದವನ್ನು ಕಾಮನು ತಿರಸ್ಕರಿಸಲು, ಕಾಮನನ್ನು ಶಿವನಿಂದ ಬೂದಿಯಾಗೆಂದು ಶಪಿಸಿದಳು. ಕುಪಿತಳಾದ ಲಕ್ಷ್ಮಿಯು ಗೌರಿಯನ್ನು ದಕ್ಷಯಾಗದಲ್ಲಿ ಬೂದಿಯಾಗೆಂದು ಶಪಿಸಿದಳು ; ಹೀಗೆ ಶಾಪಪ್ರತಿಶಾಪಗಳಾಗಿ, ಲಕ್ಷ್ಮೀ ಗೌರೀದೇವಿಯರಿಗೆ ಯುದ್ಧವಾಗಿ, ಗೌರಿಯು ಮೂರ್ಛಿತಳಾಗಲು, ಕಡೆಗೆ ಬ್ರಹ್ಮ, ವಿಷ್ಣು, ಮಹೇಶ್ವರರು ಬಂದು ಕಳುಹಿಸಿದ ಸರಸ್ವತಿದೇವಿಯಿಂದ ಶಾಪವಿಮೋಚನೆಯು ಸೂಚಿತವಾಗಿ ಇಬ್ಬರಿಗೂ ಸಮಾಧಾನವು ಏರ್ಪಟ್ಟಿತು ; .... | ೧–೨೧ |
| ೨೨. | ಇವರ ಶಾಪಗಳಿಗೆ ಅನುಸಾರವಾಗಿ ಲಕ್ಷ್ಮಿದೇವಿಗೆ ಪತಿವಿರಹ ದುಃಖ ಮೃತಿಗಳೂ, ಗೌರೀದೇವಿಗೂ ಅವು ಹೇಗೆ ಸಂಭವಿಸಿದುವೆಂಧು ಪರಶುರಾಮನು ದತ್ತಾತ್ರೇಯನನ್ನು ಕೇಳಿ | |

ಅಧ್ಯಾಯ ವಿಷಯ ಪುಟಸಂಖ್ಯಾ

ದನು ; ಬೃಂದಾ ಮತ್ತು ಭೂದೇವಿಯರು ವಿಷ್ಣುವನ್ನು ಪೂಜಿಸಿ ಒಲಿಸಿಕೊಂಡರು ; ಲಕ್ಷ್ಮಿಗೆ ಅಸಹನೆಯಾಯಿತು ; ವಿಷ್ಣುವು ಗುಟ್ಟಾಗಿ ಅವರೊಡನೆ ವಿಹರಿಸುತ್ತಿದ್ದುದನ್ನು ಸರಸ್ವತಿಯ ಮನೆಯಿಂದ ಹಿಂತಿರುಗಿದ ಲಕ್ಷ್ಮಿಯು ಬಂದು ಕಂಡು ವಿಷ್ಣುವನ್ನು ಬಿಟ್ಟುಹೋದಳು ; ಲಕ್ಷ್ಮಿಯು ದುಃಖದಿಂದ ಕರಗಿ ಪದ್ಮಾನದಿಯಾಗಿ ಹರಿದಳು ; ಬ್ರಹ್ಮನ ಸಭೆಯಲ್ಲಿ ಸರಸ್ವತಿಯು ಕಚ್ಛಪೀ ವೀಣೆಯಲ್ಲಿ ನುಡಿಸಿದ ರಾಗಗತಿಯನ್ನು ನಾರದನು ಕಲಿಯುತ್ತಿದ್ದಾಗ ಅಪಸ್ವರವನ್ನು ನುಡಿಸಲು ಪದ್ಮಾನದಿಯು ನಕ್ಕಳು ; ಅದರಿಂದ ಕೋಪಗೊಂಡ ನಾರದನ ಶಾಪದಿಂದ ಆ ನದಿಯ ನೀರೆಲ್ಲವೂ ಬತ್ತಿಹೋಯಿತು ; ಭಗೀರಥನು ಗಂಗಾನದಿಯನ್ನು ಕರೆದುಕೊಂಡು ಹೋಗುವಾಗ ಅದು ಪದ್ಮಾನದೀ ಪಾತ್ರದಲ್ಲಿ ಪ್ರವಹಿಸಿತು ; ಇದರಿಂದ ಶಾಪವಿಮೋಚನೆಯಾಗಲು ಪದ್ಮಾನದಿಯು ಬಹುದೂರದ ಮೇಲೆ ಬೇರೆಯಾಗಿ ಹರಿಯಿತು ; ಸಂಗಮದ ತೀರ್ಥದಲ್ಲಿ ಹೇಗೋ ಹಾಗೆ ವಿಭಾಗ ತೀರ್ಥದಲ್ಲಿ ಸ್ನಾನವು ಸದ್ಗತಿಪ್ರದವು ; ಗಂಗಾವತರಣದ ಕಥೆಯನ್ನು ನಾರದನು ಪದ್ಮಾನದೀದೇವಿಗೆ ಹೇಳಿದನು ; ವಾಷ್ಕಲಿ ಎಂಬ ದಾನವರಾಜನ ತಪಸ್ಸು, ಬ್ರಹ್ಮನ ವರ, ಧರ್ಮಾಚರಣೆಗಳಿಂದ ತ್ರಿಲೋಕಾಧಿಪತ್ಯ, ಇಂದ್ರಜಯ, ವಿಷ್ಣುವು ವಾಮನನಾಗಿ ಬಂದು ಮೂರಡಿ ನೆಲವನ್ನು ಬೇಡಿದುದು ; ಭಾರ್ಗವ ಬೃಹಸ್ಪತಿಯು ಬೇಡವೆಂದರೂ ದಾನವೇಶನು ದಾನಮಾಡಿದುದು ; ವಾಮನನು ತ್ರಿವಿಕ್ರಮನಾಗಿ ಎರಡು ಹೆಜ್ಜೆಗಳಿಂದ ಭೂವ್ಯೋಮಾಕಾಶಗಳನ್ನು ಆಕ್ರಮಿಸಿ ಮೂರನೆಯ ಹೆಜ್ಜೆಯಿಂದ ಅವನನ್ನು ಮೆಟ್ಟಿ ಮೋಕ್ಷವನ್ನು ಕೊಟ್ಟನು ; ಆಗ ಎರಡನೆಯ ಹೆಜ್ಜೆಯ ಅಂಗುಷ್ಠದಿಂದ ಬ್ರಹ್ಮಾಂಡಕಟಾಹವು ಭಿನ್ನವಾಗಿ ಗಂಗಾಪ್ರವಾಹ ಬಂದಿತು. ಬ್ರಹ್ಮನು ಕಮಂಡಲುವಿನಲ್ಲಿ ಅದನ್ನು

ಅಧ್ಯಾಯ | ವಿಷಯ | ಪುಟಸಂಖ್ಯಾ

ಹಿಡಿದಿಡಲು, ಇಂದ್ರನು ಅದನ್ನು ಸ್ವರ್ಗಕ್ಕೆ ತಂದನು ; ಸಗರಪುತ್ರರ ಸದ್ಗತಿಗಾಗಿ ಭಗೀರಥನ ತಪಸ್ಸಿನಿಂದ ಭೂಮಿಗೆ ಗಂಗಾ ಪ್ರಾಪ್ತಿ ; ಗಂಗಾ ಸಂಗದಿಂದ ಸದ್ಮಾ ಶಾಪಮೋಚನೆಯಾಗಿ ವಿಷ್ಣುಸಮಾಗಮ : ...... ೨೨–೨೯

೨೩. ಗೌರೀದೇವಿಯ ಕಥೆ; ಭಸ್ಮಾಸುರನ ತಪಸ್ಸಿಗೆ ಮೆಚ್ಚಿ ಈಶ್ವರನು ವರವನ್ನು ಕೊಡಲು, ಅದರ ಪರೀಕ್ಷೆಗಾಗಿ ಶಿವನ ತಲೆಯಮೇಲೆಯೇ ಕೈಯಿಟ್ಟು ನೋಡಲು ಬರಲು, ಈಶ್ವರನು ಓಡಿ ಅಂತರ್ಧಾನ ಹೊಂದಿದನು ; ವಿಷ್ಣುವು ಭಸ್ಮಾಸುರನನ್ನು ಕೊಂದನು ; ದಕ್ಷನ ತಪಸ್ಸಿಗೆ ಮೆಚ್ಚಿ ಗೌರಿಯು ಅವನ ಮಗಳಾಗಿ, ಉಮಾ, ದಾಕ್ಷಾಯಣೀ ಎನ್ನಿಸಿಕೊಂಡು, ಶಿವನನ್ನು ಮದುವೆಯಾದಳು ; ಸಭೆಗೆ ಹೆಮ್ಮೆಯಿಂದ ಬಂದ ದಕ್ಷನನ್ನು ಶಿವನು ಗೌರವಿಸದಿರಲು, ದಕ್ಷನು ಯಾಗಕ್ಕೆ ಶಿವನನ್ನು ಕರೆಯಲಿಲ್ಲ ; ಉಮೆಯು ತಂದೆಯ ಯಾಗಕ್ಕೆ ಹೋಗಿ, ಶಿವನಿಂದೆಯನ್ನು ಕೇಳಿ; ಯಾಗದ ಅಗ್ನಿಯಲ್ಲಿ ದೇಹವನ್ನು ಬಿಟ್ಟಳು ; ಪರಾ ಶಕ್ತಿಯು ಗಂಗೆಯಾದ ಕಥೆ ; ತ್ರಿಪುರಾದೇವಿಯೇ ಭಕ್ತಾನುಗ್ರಹಕ್ಕಾಗಿ ತ್ರಿಪಥಗಾ ಎನ್ನಿಸಿಕೊಂಡಿದಾಳೆ .... ೩೦–೫೦

೨೪. ಪರಶುರಾಮನು ದತ್ತಗುರುವನ್ನು ಕುರಿತು ಮಾನವರಲ್ಲಿ ಯಾಗಾಚರಣೆಯು ಹೇಗೆ ರೂಢಿಗೆ ಬಂದಿತು ? ಕಾಮನು ಶಂಕರನನ್ನು ಹೇಗೆ ಜಯಿಸಿದನು ? ಅವನನ್ನು ಶಂಕರನು ಹೇಗೆ ದಹಿಸಿದನು ? ಎಂದು ಕೇಳಿದನು ; ಗುರುವು ಹೇಳಿದನು ; ಮಾನವರು ನಿಷ್ಕಾಮರಾಗಿರುವುದರಿಂದ ದೇವತೆಗಳಿಗೆ ಅಧೀನರಾಗಿಲ್ಲವು. ವೃಷ್ಟಿಯು ಸಕಾಲದಲ್ಲಿ ಎಲ್ಲೆಡೆಯಲ್ಲೂ ತಾನಾಗಿಯೇ ಸ್ವತಂತ್ರವಾಗಿ ಆಗುತ್ತಿರುವುದರಿಂದ ಮಾನವರೂ ಸ್ವತಂತ್ರರಾಗಿದಾರೆ. ವೀರವ್ರತನು ಇಂದ್ರನನ್ನು ದೇವತೆಗಳನ್ನೂ ಬಿಟ್ಟಮೇಲೆ ಅವನು ಬದುಕಿರುವ

ಅಧ್ಯಾಯ — ವಿಷಯ — ಪುಟಸಂಖ್ಯಾ

ವರೆಗೆ ಇಂದ್ರಾದಿಗಳು ಸ್ನೇಹದಿಂದ ಇದ್ದರು. ಆಮೇಲೆ ಬ್ರಹ್ಮನಲ್ಲಿ ಮೊರೆಯಿಡಲು, ಅವನು ವೃಷ್ಟ್ಯಾಧಿಪತ್ಯವನ್ನು ಇಂದ್ರನಿಗೆ ಕೊಟ್ಟು ಅದಕ್ಕಾಗಿ ಮಾನವರು ಯಾಗಮಾಡಬೇಕಾಗಿ ಬಂದು, ದೇವತೆಗಳಿಗೆ ಅಧೀನರಾಗಿರುವಂತೆ ಮಾಡಿದನು; ಯಾಗಾಚರಣೆಯು ರೂಢಿಗೆ ಬಂದಿತು; ಕಾಮನು ಸರ್ವವಿಜಯವನ್ನು ಆಶಿಸಲು ಲಕ್ಷ್ಮಿಯು ತ್ರಿಪುರಾದೇವಿಯ ಸೌಭಾಗ್ಯಾಷ್ಟೋತ್ತರವನ್ನು ಉಪದೇಶಿಸಿದಳು; ಮಂದರಾಚಲದ ಗುಹೆಯಲ್ಲಿ ಕಾಮನ ತಪಸ್ಸು, ತ್ರಿಪುರಾದೇವಿಯು ಪ್ರಸನ್ನಳಾಗಿ ಆ ಅಷ್ಟೋತ್ತರದಲ್ಲಿರುವ ಪಂಚದಶಾಕ್ಷರಿಯ ಸೌಭಾಗ್ಯ ವಿದ್ಯೆಯನ್ನು ಸ್ವಪ್ನದಲ್ಲಿ ಉಪದೇಶಿಸಿದಳು; ಅದರಿಂದ ಅವನು ಸಿದ್ಧಿಯನ್ನು ಪಡೆದ ಬಗೆ; .... ೫೧—೬೫

೨೫. ತ್ರಿಪುರಾಮೂರ್ತಿಯ ಸ್ವರೂಪ ಧ್ಯಾನದಿಂದ ದೇವಿಯು ಪ್ರತ್ಯಕ್ಷಳಾದುದು; ಕಾಮನು ಸ್ತೋತ್ರಮಾಡಿದುದು; ಸೌಭಾಗ್ಯನವರತ್ನಸ್ತೋತ್ರದ ಮಹಿಮೆ; ಕಾಮನು ಆಪ್ತಕಾಮನಾಗಿ ಏನನ್ನೂ ಆಶಿಸದಿರಲು, ಅವನ ಮೊದಲಿನ ಆಶೆಯಂತೆ ಸರ್ವವಿಜಯಿತ್ವವನ್ನು ಪಡೆಯಲು, ದೇವಿಯು ತನ್ನ ಆಯುಧದಿಂದ ಧನುರ್ಬಾಣಗಳನ್ನು ಹೊರಹೊಮ್ಮಿಸಿ ತೆಗೆದುಕೊಟ್ಟಳು; ಅವನು ಸರ್ವವಿಜಯಕ್ಕೆ ಹೊರಟನು; ೬೬—೭೭

೨೬. ಪರಶುರಾಮನ ಪ್ರಾರ್ಥನೆಯಂತೆ ಗುರುವು ಸೌಭಾಗ್ಯಾಷ್ಟೋತ್ತರವನ್ನು ಉಪದೇಶಿಸಿದನು; ಅದರಿಂದ ಪಾಠ, ಹವನ, ಶ್ರೀಚಕ್ರಾರ್ಚನೆ, ಬ್ರಾಹ್ಮಣ ಸುವಾಸಿನೀ ಭೋಜನದಾನಗಳನ್ನು ಮಾಡಬೇಕು; ಮೊದಲಿನ ಕಥೆಯನ್ನು ಮುಂದುವರಿಸಿದುದು; ಪತಿನಿಂದಾಶ್ರವಣದಿಂದ ದೇಹತ್ಯಾಗಮಾಡಿ ಆಕಾಶರೂಪದಲ್ಲಿದ್ದ ಗೌರಿಯನ್ನು ಹಿಮವಂತನು ಆರಾಧಿಸಿದನು; ವಾಮದೇವನ ಉಪದೇಶದಿಂದ ತ್ರಿಪುರಾದೇವಿ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಯಲ್ಲಿ ಭಕ್ತನಾಗಿರುವುದನ್ನು ನಾರದನು ಶ್ಲಾಘಿಸಿ, ಗೌರೀ ದೇವಿಯಿಂದ ಪುತ್ರೀಪ್ರಾಪ್ತಿಯಾಗುವುದೆಂದು ತಿಳಿಸಿದನು ; ಗೌರೀದೇವಿಯ ಕಥೆಯನ್ನು ಹೇಳಿದನು ; .... | ೭೮–೯೫ |
| ೨೭. | ತಾರಕಾಸುರನು ತಪಸ್ಸಿನಿಂದ ಜಗತ್ಸೃಷ್ಟಿಸಾಮರ್ಥ್ಯವನ್ನೂ ಪಡೆದು, ಬ್ರಹ್ಮಾಂಡಗಳನ್ನೂ ವೇದಗಳನ್ನೂ ಇಂದ್ರ ಬ್ರಹ್ಮಾದಿಗಳನ್ನೂ ಸೃಷ್ಟಿಸಿ ಅವರಿಂದ ಸೇವಿಸಲ್ಪಡುತ್ತಾ, ಮದೋದ್ಧತನಾಗಿ, ಸ್ವಾಧೀನರಾಗದಿರುವ ಬ್ರಹ್ಮಾದಿಗಳನ್ನು ಶರೆಯಲ್ಲಿಟ್ಟನು, ಶಚಿಯನ್ನೂ ಪಡೆಯಲು ದೂತನನ್ನು ಕಳುಹಲು, ಅವಳು ತನಗಿಂತ ಅಧಿಕಳಾದ ಲಕ್ಷ್ಮಿಯನ್ನು ಪಡೆಯ ಹೇಳಿದಳು ; ಲಕ್ಷ್ಮೀ ವಿಷ್ಣುಗಳು ಯುದ್ಧದಲ್ಲಿ ಪರಾಜಿತರಾಗಿ ಅಂತರ್ಧಾನವಾದರು ; ಶಚಿಯು ಗುರುವಿನ ಉಪದೇಶದಂತೆ ಗೌರೀದೇವಿಯನ್ನು ಪ್ರಾರ್ಥಿಸಲು, ಅವಳು ಪ್ರತ್ಯಕ್ಷಳಾಗಿ ತಾರಕಾಸುರನೊಡನೆ ಯುದ್ಧಮಾಡಿ, ತನ್ನ ಕೋಪದಿಂದ ಹುಟ್ಟಿದ ಮಹಾಕಾಳಿಯು ತಾರಕಾಸುರನನ್ನು ವಧಿಸಿದಳು ; ಇಂತಹ ಗೌರಿಯನ್ನು ಭಜಿಸಿ ಸಿದ್ಧಿಯನ್ನು ಪಡೆ ಎಂದು ನಾರದನು ಹೇಳಿ ಹೋದನು ;.... | ೯೬-೧೨೨ |
| ೨೮. | ಪರಶುರಾಮನಿಗೆ ಗುರುವು ಗೌರಿಯ ಅಷ್ಟೋತ್ತರನಾಮವನ್ನು ಹೇಳಿದನು ; ಹಿಮವಂತನಿಗೆ ಗೌರಿಯು ಪ್ರತ್ಯಕ್ಷಳಾಗಲು ಅವನ ಕೋರಿಕೆಯಂತೆ ತಾನು ಜನ್ಮಗ್ರಹಣ ಮಾಡೆನೆನಲು, ಹಿಮವಂತನು ಒಂದುನೂರು ವರ್ಷಗಳವರೆಗೆ ಪುನಃ ಘೋರ ತಪಸ್ಸನ್ನು ಮಾಡಿದನು ; ಆ ತಪೋಜ್ವಾಲೆಯಿಂದ ನೊಂದ ಬ್ರಹ್ಮ, ವಿಷ್ಣು, ಮುಂತಾದವರೂ ಪ್ರಾರ್ಥಿಸಲು, ಜಗತ್ಕಾರ್ಯವು ಮುಂದುವರಿಯುವುದಕ್ಕಾಗಿಯೂ, ತ್ರಿಪುರಾದೇವಿಯ ಉದ್ದೇಶದಂತೆಯೂ ಗೌರಿಯು ಹಿಮವಂತನ ಮಗಳಾಗಿ ಹುಟ್ಟಿದಳು ; ಆದರೆ ಸ್ವಸ್ವರೂಪ ವಿಸ್ಮೃತಿಯಾಗಿರಲೆಂದು ಶಪಿಸಿದಳು ; | ೧೨೩–೧೪೩ |

ಅಧ್ಯಾಯ ವಿಷಯ ಪುಟಸಂಖ್ಯಾ

೨೯. ಗೌರೀದೇವಿಯು ದಿವ್ಯರೂಪದಿಂದ ಹುಟ್ಟಿದರೂ ಹಿಮವಂತನ ಕೋರಿಕೆಯಂತೆ ಪ್ರಾಕೃತಶಿಶುವಿನಂತೆ ಆದಳು ; ಮಂಗಳ ಕಾರ್ಯಗಳಾದವು ; ಅವಳು ದೊಡ್ಡವಳಾಗಲು ಗರ್ಗಾಚಾರ್ಯನ ಉಪದೇಶದಂತೆ ಅವಳನ್ನು ಶಿವನಿಗೆ ವಿವಾಹ ಮಾಡಿಕೊಡಲು ನಿಶ್ಚಯವಾಯಿತು ; ಆಮೇಲೆ ನಾರದನು ಬಂದು ಅವಳನ್ನು ವಿಷ್ಣುವಿಗೆ ಕೊಡುವುದು ಮೇಲೆನ್ನಲು ಹಿಮವಂತನು ಶಾಪದ ಮಹಿಮೆಯಿಂದ ಹಿಂದಿನದೆಲ್ಲವನ್ನೂ ಮರೆತು ಒಪ್ಪಿದನು : ನಾರದನು ಹಿಂತಿರುಗಿದನು ; ೧೪೪–೧೬೩

೩೦. ತಂದೆಯ ಈ ನಿಶ್ಚಯವನ್ನು ಒಪ್ಪದೆ ಪಾರ್ವತಿಯು ಯಾರಿಗೂ ತಿಳಿಸದೆ ಅರಮನೆಯನ್ನು ಬಿಟ್ಟು ಹೊರಟು ನಾಲ್ಕುಜನ ಸಖಿಯರೊಡನೆ ಕಾಡಿನಲ್ಲಿ ಗಂಗಾತೀರದಲ್ಲಿ ತ್ರಿಪುರಾಧ್ಯಾನದಲ್ಲಿದ್ದಳು ; ಜ್ಞಾನಕಲಿಕಾ ಸ್ತೋತ್ರ ; ತ್ರಿಪುರಾದೇವಿಯು ಪ್ರಸನ್ನಳಾಗಿ ಇಷ್ಟಾರ್ಥಸಿದ್ಧಿಯನ್ನು ಕರುಣಿಸಿದಳು ; ೧೬೪–೧೭೭

೩೧. ಪಾರ್ವತಿಯು ಹೊರಟುಹೋದಮೇಲೆ ಹಿಮವಂತನು ದುಃಖಿತನಾಗಿ ಮಗಳನ್ನು ಹುಡುಕುತ್ತಾ ಹೆಜ್ಜೆಗಳ ಗುರುತಿನ ಮೇಲೆ ಬಂದು ಪಾರ್ವತಿಯನ್ನು ಕಂಡನು ; ತನ್ನ ನಿಶ್ಚಯಕ್ಕೆ ವಿರೋಧವನ್ನು ಕಂಡು ತಂದೆಯು ವಾತ್ಸಲ್ಯದಿಂದ ಮಗಳ ನಿಶ್ಚಯವನ್ನು ಒಪ್ಪಿದನು ; ನಾರದನು ಅಲ್ಲಿಗೆ ಬರಲು ಮಗಳ ನಿಶ್ಚಯವನ್ನು ತಿಳಿಸಿದನು ; ಕೋಪಗೊಂಡ ನಾರದನ ಅಪ್ಪಣೆಯಂತೆ ವಿಜಯಾದಿಗಳು ಪರ್ವತರಾಜನನ್ನು ಬಂಧಿಸಿ, ಗೌರಿಯನ್ನೂ ಹಿಡಿದು ಕರೆದುಕೊಂಡು ಹೋಗಲು ಬರಲು, ತಾಯಿಯನ್ನೂ ಮಗಳನ್ನೂ ಪುರೋಹಿತನಾದ ಕಾಶ್ಯಪನು ಸಮಾಧಾನಪಡಿಸಿದನು ; ೧೭೮–೧೯೫

೩೨. ಕಾಶ್ಯಪನು ಗೌರಿಯ ಹಿಂದಿನ ತಪಸ್ಸೇ ಮುಂತಾದುದನ್ನು ತಿಳಿಸಲು ; ಪೂರ್ವಸ್ಮರಣೆಯಿಂದ ಮಹಿಮಾನ್ವಿತಳಾಗಿ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಸ್ವರೂಪವನ್ನು ಪಡೆದ ಗೌರಿಯನ್ನು ಕಾಶ್ಯಪನು ಸ್ತುತಿಸಿದನು ; ಹೀಗೆ ಹೊರಟ ಗೌರಿಯನ್ನು ನಾರದನೂ ಸ್ತುತಿಸಿದನು ; ಗೌರಿಯನ್ನು ಬಂಧಿಸಲು ಬಂದಿದ್ದ ವಿಷ್ಣುವಿನ ಪಾರ್ಷದರನ್ನು ನಿಗ್ರಹಿಸಿದಳು ; ಇದನ್ನು ಕೇಳಿ ವಿಷ್ಣುವು ಕೋಪಗೊಂಡು ಬಂದು ಚಕ್ರಾಯುಧದಿಂದ ಪ್ರಹರಿಸಲು, ಗೌರೀಕೋಪದಿಂದುಂಟಾದ ಜ್ವಾಲಾಮುಖೀದೇವಿಯು ಚಕ್ರಾಯುಧವನ್ನೂ ಗರುಡನನ್ನೂ ಸುಟ್ಟು, ವಿಷ್ಣುವನ್ನು ನುಂಗಿದಳು ; ದೇವತೆಗಳ ಪ್ರಾರ್ಥನೆಯಂತೆ ಗೌರಿಯು ಜ್ವಾಲಾಮುಖೀದೇವಿಯನ್ನು ಸಮಾಧಾನಪಡಿಸಿ, ವಿಷ್ಣುವನ್ನು ಬಿಡಿಸಿ, ಜ್ವಾಲಾಮುಖಿಯನ್ನು ಪ್ರಳಯಕಾರ್ಯವನ್ನು ನೆರವೇರಿಸಲು ಒದಗುವಂತೆ ಆ ಪರ್ವತದಲ್ಲಿ ಸ್ಥಾಪಿಸಿದಳು ; ಅಮೃತದೃಷ್ಟಿಯಿಂದ ವಿಷ್ಣುಮುಂತಾದವರನ್ನು ಬದುಕಿಸಿ ತಂದೆಯನ್ನೂ ಬಿಡಿಸಿ, ತನ್ನ ಬಾಲಾಸ್ವರೂಪವನ್ನು ಪಡೆದಳು ; ಆಮೇಲೆ ಬ್ರಹ್ಮನು ಹೇಳಿದಂತೆ ಪಾರ್ವತಿಯನ್ನು ಶಂಕರನಿಗೆ ಕೊಟ್ಟು ತ್ವಷ್ಟೃವಿನಿಂದ ನಿರ್ಮಿತವಾದ ವಿವಾಹ ಮಂಟಪದಲ್ಲಿ ಮದುವೆಯನ್ನು ನೆರವೇರಿಸಿದರು ; ಎಲ್ಲರೂ ಪ್ರೀತರಾಗಿ ಹಿಂತಿರುಗಿದರು ; .... | ೧೯೬—೨೧೭ |
| ೨೨. | ಕಾಮದಹನದ, ವಿಷ್ಣು ಚಕ್ರಪ್ರಾಪ್ತಿಯ ಕಥೆಗಳನ್ನು ಕೇಳಲು, ಪರಶುರಾಮನಿಗೆ ಗುರುವು ಹೇಳಿದನು ; ಜ್ವಾಲಾಮುಖೀದೇವಿಯಿಂದ ಸುದರ್ಶನ ಚಕ್ರವು ಸುಟ್ಟುಹೋದಮೇಲೆ ಮುರಾಸುರನು ವಿಷ್ಣುವನ್ನು ಜಯಿಸಲು ಬಂದನು ; ಚಕ್ರವಿಲ್ಲದೆ ವಿಷ್ಣುವು ಸೋತು ಅಂತರ್ಧಾನ ಹೊಂದಿದನು ; ವಿಷ್ಣುವು ಜ್ವಾಲಾಮುಖೀಪರ್ವತದಲ್ಲಿ ತಪಸ್ಸುಮಾಡಿ ಆ ದೇವಿಯಿಂದ ಹಿಂದಿನ ಚಕ್ರಾಯುಧಕ್ಕಿಂತ ಹೆಚ್ಚಿನ ಶಕ್ತಿಯುಳ್ಳ ಚಕ್ರವನ್ನು ಪಡೆದು, ಮುರಾಸುರನನ್ನು ಸಂಹರಿಸಿದನು ; ಶಿವನು ತಪಸ್ಸುಮಾಡುತ್ತಿರಲು, ತಾರಕಾ | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
| --- | --- | --- |
| | ಸುರನನು ಶೂರಪದ್ಮಾಸುರನೊಡನೆ ತಪಶ್ಶಕ್ತಿಯಿಂದ ಬ್ರಹ್ಮಾಂಡಗಳನ್ನು ಜಯಿಸಿ, ಇಂದ್ರಾದಿಗಳನ್ನು ನಿಗ್ರಹಿಸಿದನು; ಬ್ರಹ್ಮನ ಬುದ್ಧಿವಾದದಂತೆ ಶಿವಪುತ್ರನಾದ ಕುಮಾರಸ್ವಾಮಿಯಿಂದ ಮಾತ್ರ ಅವರ ನಿಗ್ರಹವು ಸಾಧ್ಯವೆಂದು ತಿಳಿದು, ಶಿವನನ್ನು ಪ್ರಾರ್ಥಿಸಲು ಹೊರಟ ಇಂದ್ರನಿಗೆ ತಪಸ್ಸಿನ ಸ್ಥಾನದಲ್ಲಿ ಎಲ್ಲವೂ ನಿಶ್ಚೇಷ್ಟವಾಗಿರುವುದು ಗೊತ್ತಾಯಿತು ; ಆಗ ಗುರುವು ಗೌರೀದೇವಿಯನ್ನು ಆರಾಧಿಸುವಂತೆ ಹೇಳಲು, ಅದರಂತೆ ಮಾಡಲು, ಗೌರೀದೇವಿಯು ಪ್ರತ್ಯಕ್ಷಳಾದಳು ; .... | ೨೧೪ - ೨೩೬ |
| ೩೪. | ಇಂದ್ರನ ಪ್ರಾರ್ಥನೆಯನ್ನು ಕೇಳಿ ಗೌರಿಯು ಋಷಿಶಾಪದಿಂದ ತನಗೆ ಮಕ್ಕಳಾಗುವ ಸಂಭವವಿಲ್ಲವೆನ್ನಲು, ಆ ಕಥೆಯನ್ನು ಕೇಳಿದ ಇಂದ್ರನಿಗೆ ಹೀಗೆ ಹೇಳಿದಳು ; ಒಂದು ದಿನ ಉದ್ಯಾನದಲ್ಲಿರುವಾಗ ಮೃಗಯುಗ್ಮವು ಕ್ರೀಡಿಸುತ್ತಿದ್ದುದನ್ನು ವಿನೋದಕ್ಕೆ ಹಿಡಿದುತರಿಸಿದಳು ; ಆಗ ಮೃಗರೂಪದಲ್ಲಿದ್ದ ಆ ಋಷಿಯಿಂದ ಮಕ್ಕಳಾಗದಿರಲೆಂದು ಶಾಪವು ಬಂದಿತು ; ಹಾಗೆಯೇ ಶಂಕರನಿಗೂ ಶಾಪವು ಬಂದಿತು, ಹೇಗೆಂದರೆ, ತ್ರೇತಾಯುಗದಲ್ಲಿ ಬ್ರಾಹ್ಮಣರು ತಪಃಪ್ರಭಾವದಿಂದ ದೇವತೆಗಳನ್ನೂ ವಶಪಡಿಸಿಕೊಂಡರು; ಇಂದ್ರನು ಬ್ರಹ್ಮನೊಡನೆ ವಿಷ್ಣುವಿನಲ್ಲಿ ವಿಜ್ಞಾಪಿಸಲು, ಎಲ್ಲರೂ ಶಿವನನ್ನು ಪಡೆದು ಪ್ರಾರ್ಥಿಸಲು, ಅವರ ಕೋರಿಕೆಯನ್ನು ಸಲ್ಲಿಸಲು ಮಹಾದೇವನು ವಿಪ್ರಸ್ತ್ರೀಯರ ಪಾತಿವ್ರತ್ಯದ ಭಂಗವನ್ನು ಮಾಡಿದನು ; ವಿಪ್ರರು ಶಿವನಿಗೆ ಸ್ತ್ರೀಯರಲ್ಲಿ ನಪುಂಸಕತ್ವವನ್ನೂ, ಲಿಂಗಪತನವನ್ನೂ ಉಂಟುಮಾಡುವಂತೆ ಶಪಿಸಿದರು ; ಲಿಂಗವು ಬೀಳುತ್ತಿರಲು ಜಗದ್ರಕ್ಷಣೆಗಾಗಿ ಬ್ರಹ್ಮನು ಪೀಠವಾಗಿ, ವಿಷ್ಣುವು ಯೋನಿ (ಪಾಣಿವಟ್ಟಲು) ಯಾಗಿ, ಆ ಲಿಂಗವನ್ನು ಧರಿ | |

ಅಧ್ಯಾಯ ವಿಷಯ ಪುಟಸಂಖ್ಯಾ

ಸಲು, ಭಾರದಿಂದ ಕುಸಿದ ಅವರೆಲ್ಲರನ್ನೂ ವಿಷ್ಣುವು ಮತ್ತೆ
ಆದಿಶೇಷರೂಪನಾಗಿ ಧರಿಸಿದನು ; ಶಿವನ ಕೋಪವನ್ನು
ತಡೆಯಲು ಬ್ರಹ್ಮನು ಲಿಂಗರೂಪನಾಗಿ ಆವಿರ್ಭವಿಸಲು,
ವಿಷ್ಣುವೂ ಲಿಂಗಾರ್ಚನೆಯನ್ನು ಮಾಡಿದನು ; ಹೀಗೆ
ಲಿಂಗಾರ್ಚನೆಯು ದೇವಲೋಕದಲ್ಲಿ ರೂಢಿಗೆ ಬಂದಿತು , ೨೩೭–೨೫೩

೩೫. ಭೂಲೋಕದಲ್ಲಿ ಲಿಂಗಾರ್ಚನೆಗೆ ಪ್ರಚಾರ ಲಾಭವಾದುದನ್ನು
ಪಾರ್ವತಿಯು ಹೀಗೆ ಹೇಳಿದಳು ; ಶಿವನು ತ್ರಿಪುರಾದೇವಿ
ಯನ್ನು ಉಪಾಸನೆ ಮಾಡಲು, ತ್ರಿಪುರಾದೇವಿಯು ಪ್ರತ್ಯಕ್ಷ
ಳಾಗಿ ಶಿವನು ಲಿಂಗಾತ್ಮಕನೆಂದೂ, ಲಿಂಗಾರ್ಚನೆ ಇಲ್ಲದೆ
ಯಾವ ಪೂಜೆಯೂ ಸಫಲವಾಗದೆಂದೂ ಅನುಗ್ರಹಿಸಿದಳು;
ಹೀಗೆ ವಿಘ್ನವಿದ್ದರೂ ಶಿವಜಯಕ್ಕಾಗಿ ಕಾಮನನ್ನು ಕಳುಹಿ
ಸುವ ಉಪಾಯವನ್ನು ಮಾಡೆಂದು ಪಾರ್ವತಿಯು ಇಂದ್ರ
ನಿಗೆ ಹೇಳಿ ಅಂತರ್ಧಾನವಾದಳು ; ಕಾಮನು ಇಂದ್ರನಿಗೆ
ವಾಗ್ದಾನಮಾಡಿದುದರಿಂದ ಹಿಂದಿನ ತನ್ನ ಪರಾಭವ
ವಿದ್ದರೂ, ತ್ರಿಪುರಾಧ್ಯಾನಮಾಡುತ್ತಾ ಶಿವಜಯಕ್ಕೆ
ಹೊರಟನು ; ದುಃಖಿತಳಾದ ರತಿಯನ್ನೂ ತಾಯಿಯಾದ
ಲಕ್ಷ್ಮಿಯ ವಶದಲ್ಲಿ ಬಿಟ್ಟು ಹೊರಡಲು ಲಕ್ಷ್ಮಿಯಿಂದ
ರತಿಯ ಸಮಾಧಾನ: ...... ೨೫೪–೨೬೮

೩೬. ಕಾಮನು ತ್ರಿಪುರಾದೇವಿಯನ್ನು ಆರಾಧಿಸಲು, ಆಕೆಯು
ಪ್ರಸನ್ನಳಾದಳು ; ಇದನ್ನು ತಿಳಿದು ಲಕ್ಷ್ಮಿಯು ಬಂದು
ಕಾಮನ ಮೇಲಿದ್ದ ಗೌರಿಯ ಶಾಪನಿವೃತ್ತಿಯನ್ನು ಪ್ರಾರ್ಥಿ
ಸಲು, ಗೌರೀಶಾಪದಂತೆ ಕಾಮನ ಈ ದೇಹವು ಉರಿದು
ಹೋಗಿ, ಇನ್ನೊಂದು ದೇಹದಿಂದ ಅವನು ತಾಯಿಯನ್ನು
ಸಂತೋಷಪಡಿಸುವುದಾಗಿ ಅನುಗ್ರಹಿಸಿದಳು; ಕಾಮನನ್ನು
ಕಣ್ಣಿನಲ್ಲಿ ಆಕರ್ಷಿಸಿದ್ದರಿಂದ ಕಾಮಾಕ್ಷೀ ಎಂದು ತ್ರಿಪುರಾ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ದೇವಿಗೆ ಹೆಸರಾಯಿತು ; ಪ್ರತಿಕಾಮನು ಶಿವನನ್ನು ಪುಷ್ಪ ಬಾಣದಿಂದ ಹೊಡೆಯಲು, ಅವನನ್ನು ದಹಿಸಿ, ಬ್ರಹ್ಮಾದಿಗಳ ಸ್ತುತಿಯಿಂದ ಶಿವನು ಶಾಂತನಾದನು ; ...... | ೨೬೯-೨೭೬ |
| ೩೭. | ಕಾಮದಾಹದಿಂದ ಇಷ್ಟಸಿದ್ಧಿಯಾಗದಿರಲು ಇಂದ್ರನು ಬ್ರಹ್ಮನ ಮೂಲಕ ಶಿವನನ್ನು ಪ್ರಾರ್ಥಿಸಿ ತಾರಕಾಸುರನ ನಾಶಕ್ಕಾಗಿ ಮಗನನ್ನು ಪಡೆಯುವಂತೆ ಒಪ್ಪಿಸಿದನು ; ಶಿವನು ಗಿರಿಜೆಯಲ್ಲಿ ರಮಿಸಲು ಜಾರಿಬಿದ್ದ ವೀರ್ಯವನ್ನು ಭೂಮಿಯೂ, ಅಗ್ನಿಯೂ, ಗಂಗೆಯೂ ಧರಿಸಲಾರದಿರಲು, ಕೈಲಾಸ ಪರ್ವತದಲ್ಲಿರುವ ಶರವಣದಲ್ಲಿ ಅದನ್ನು ಬಿಡಲು ಬ್ರಹ್ಮನು ಹೇಳಿದನು ; ಗಂಗಾದಿಗಳು ಧರಿಸಲಾರದ ವೀರ್ಯವನ್ನು ಶರವಣವು ಹೇಗೆ ಧರಿಸೀತೆಂದು ಗಂಗೆಯು ಕೇಳಲು ಭಸ್ಮಾಸುರನಿಂದ ಶಿವನು ಅಂತರ್ಹಿತನಾಗಲು, ಶೋಕದಿಂದ ಗೌರೀದೇವಿಯ ದೇಹವು ಚೂರಾಗಿ ಶರವಣವಾಗಿದ್ದುದರಿಂದ ಅದು ಶಿವವೀರ್ಯವನ್ನು ಧರಿಸಬಲ್ಲುದೆಂದು ಬ್ರಹ್ಮನು ತಿಳಿಯಹೇಳಲು, ಗಂಗೆಯು ಅಲ್ಲಿ ಅದನ್ನು ಬಿಟ್ಟಳು ; ಕೃತ್ತಿಕಾದೇವಿಯರ ತೃಪ್ತಿಗಾಗಿ ಸ್ಕಂದನು ಷಣ್ಮುಖನಾದುದು ; ದೇವತೆಗಳೆಲ್ಲರೂ ತಮ್ಮ ಆಯುಧಗಳಿಂದ ಹೆಚ್ಚು ಬಲವುಳ್ಳ ಆಯುಧಗಳನ್ನು ಹೊರಹೊಮ್ಮಿಸಿ ಅವನ್ನು ಸ್ಕಂದನಿಗೆ ಕೊಟ್ಟರು ; ಎಲ್ಲರೂ ಗೌರವಿಸಿದರೂ, ಇಂದ್ರನು ತಿರಸ್ಕರಿಸಲು, ಇಂದ್ರ ಸ್ಕಂದರಿಗೆ ಯುದ್ಧವಾಗಿ, ಇಂದ್ರನು ಸೋತು ಕ್ರೌಂಚಪರ್ವತದಲ್ಲಿ ಅಡಗಲು, ಅದನ್ನು ಸ್ಕಂದನು ಭೇದಿಸಿದನು ; ಕಡೆಗೆ ಬ್ರಹ್ಮನ ಮೂಲಕ ಇಂದ್ರನು ಸ್ಕಂದನಿಗೆ ಶರಣಾಗತನಾಗಿ ಪ್ರಾರ್ಥಿಸಿದಂತೆ ಸೇನಾಪತಿತ್ವವನ್ನು ಸ್ವೀಕರಿಸಿದನು ; ಆಮೇಲೆ ತಾರಕಾಸುರ, ಶೂರಪದ್ಮ ಇವರನ್ನು ಸಂಹರಿಸಿ ಸ್ಕಂದನು ಇಂದ್ರನಿಗೆ ಮುಂಚಿನಂತೆ ತ್ರೈಲೋಕ್ಯಾಧಿಪತ್ಯವನ್ನು ಕೊಟ್ಟನು ; ಸರ್ವಾಜೇಯರಾದ ಆ ರಾಕ್ಷಸರ | |

ಅಧ್ಯಾಯ ವಿಷಯ ಪುಟಸಂಖ್ಯೆ

ಜಯದ ವಿಸ್ತಾರವನ್ನು ಪರಶುರಾಮನು ಕೇಳಲು ದತ್ತ
ಗುರುವು ಹೇಳಿದನು ; ಸನತ್ಕುಮಾರನು ಋಷಭಪರ್ವತ
ದಲ್ಲಿ ತಪಸ್ಸು ಮಾಡಿ, ದೇವಾಸುರವಿಜಯದ ಸ್ವಪ್ನದ
ವಿವರಣೆಯನ್ನು ಅಲ್ಲಿಗೆ ಬಂದಿದ್ದ ಬ್ರಹ್ಮನಿಂದ ತಿಳಿದನು ;
ಸ್ವೇಚ್ಛಾಜನ್ಮ ; ಪಾರ್ವತೀಪರಮೇಶ್ವರರು ಅವನ ತಪಸ್ಸಿನ
ಸ್ಥಿರತೆ ವೈರಾಗ್ಯಗಳಿಗೆ ಮೆಚ್ಚಿದರು ; ಅವರಿಬ್ಬರ ಪ್ರಾರ್ಥನೆ
ಯಂತೆ ಅವರಿಗೆ ಮಗನಾದುದು ; ಅಯೋನಿಜನಾಗಿ ತಾರ
ಕಾದಿಗಳಸಂಹಾರವನ್ನು ಮಾಡಿದನು; ಸ್ಕಂದಃ, ಅಗ್ನಿಭೂಃ,
ಗಾಂಗೇಯಃ, ಪಾರ್ವತೀಸುತಃ, ಕಾರ್ತಿಕೇಯಃ, ಷಡಾ
ನನಃ, ದೇವಸೇನಾಪತಿಃ, ಎಂದು ಕುಮಾರಸ್ವಾಮಿಗೆ
ಅನ್ವರ್ಥನಾಮಗಳು ; ....... ೨೮೮–೩೦೮

೩೮. ದತ್ತಗುರುವು ಪರಶುರಾಮನಿಗೆ ಭಾರತೀದೇವಿಯ ಚರಿತ್ರೆ
ಯನ್ನು ಹೇಳಿದನು ; ಬ್ರಹ್ಮನು ಸಭೆಯಲ್ಲಿ ಸಾವಿತ್ರೀ
ಸ್ತುತಿಯನ್ನು ಕೇಳಿ ನಕ್ಕನು ; ಆ ಅನಾದರತಿರಸ್ಕಾರ
ವನ್ನು ವಾಣಿಯು ಆಕ್ಷೇಪಿಸಿ, ಸರ್ವಕಾರ್ಯನಿರ್ವಾಹಕ್ಕೂ
ಆವಶ್ಯಕವಾದ ಶಕ್ತಿಯಸ್ವರೂಪಳಾದ ತನ್ನ ಸಹಾಯ
ವಿಲ್ಲದೆ ಯಾರಿಂದಲೂ ಏನೂ ಸಾಗದೆಂಪಳು ; ಗಂಡ
ನನ್ನು ಅಲ್ಲಗಳೆದ ಹೆಂಡತಿಯು, ತನ್ನೊಡನೆ ಯಜ್ಞಭಾಗಿ
ನಿಯಾಗಲು ಅನರ್ಹಳೆಂದು ಶಪಿಸಲು, ಅವಳುಪತ್ನಿಯಾ
ಗಿರಲು ಅನರ್ಹಳಾದರೆ ಅವನು ಗೊಲ್ಲಿತಿಯ ಕಾಮುಕನಾಗ
ಲೆಂದು ಶಪಿಸಿದಳು ; ಅವರ ಕೋಪದಿಂದ ಜಗತ್ತು
ನಡುಗಿತು ; ಹರಿಹರರು ಬಂದು ವಾಣಿಯೇ ಗೋಪಸ್ತ್ರೀ
ಯಾಗಿ ಹುಟ್ಟುವಳೆಂದು ತಿಳಿಸಿ ಸಮಾಧಾನಮಾಡಿದರೂ,
ಕೋಪಶೇಷದಿಂದ ವಾಣೀದೇವಿಗೆ ಗೊಲ್ಲತಿಯಾಗಿರು
ವಾಗ ಸ್ವರೂಪದ ಅಜ್ಞಾನವಿರಲೆಂದೂ, ಬ್ರಹ್ಮನು ನಿಂದ್ಯ
ಸ್ತ್ರೀಯಲ್ಲಿ ಕಾಮುಕನಾಗಲೆಂದೂ ಶಪಿಸಿದರು ; ಆಮೇಲೆ
ಬ್ರಹ್ಮನು ಯಾಗಮಾಡಬೇಕಾದಾಗ ಭಾರತೀದೇವಿಯನ್ನು

| ಅಧ್ಯಾಯ | ವಿಷಯ | ಪುಟಸಂಖ್ಯೆ |
|---|---|---|
| | ಕರೆದರೂ ಬರದಿರಲು, ವಿಷ್ಣುವಿನಿಂದ ಗೋಪಸ್ತ್ರೀ ಒಬ್ಬಳನ್ನು ತರಿಸಿ ಮದುವೆಯಾಗಿ ಸಕಾಲದಲ್ಲಿ ಯಾಗವನ್ನು ಆರಂಭಿಸಿದನು ; ವಾಣಿಯು ಕೋಪಗೊಂಡು ಬೆಟ್ಟಕ್ಕೆ ಹೋದಳು ; ಅವಳ ಕೋಪಾಗ್ನಿಯು ಎಲ್ಲರನ್ನೂ ಸುಡುತ್ತಿರಲು, ನಿವಾರಿಸಲು ಬಂದ ದೇವಾದಿಗಳನ್ನು ಶರೆಯಲ್ಲಿ ಇಟ್ಟಳು ; ಲಕ್ಷ್ಮೀ, ಗೌರೀದೇವಿಯರೂ, ಹರಿ, ಹರರೂ, ಬ್ರಹ್ಮನೊಡನೆ ಬಂದು ಪ್ರಾರ್ಥಿಸಿದರು ; ಬ್ರಹ್ಮನನ್ನು ಕಂಡು ಸಾವಿತ್ರಿಯ ಕೋಪವು ಹೆಚ್ಚಲು ಪಾರ್ವತಿಯು ತ್ರಿಪುರಾದೇವಿಯನ್ನು ಪ್ರಾರ್ಥಿಸಿದಳು ; ತ್ರಿಪುರಾದೇವಿಯು ಬಂದು ಸಮಾಧಾನಮಾಡಿ ದೇವಾದಿಗಳನ್ನು ಬಿಡಿಸಿ, ಬ್ರಹ್ಮಾದಿಗಳನ್ನು ಉಜ್ಜೀವನಗೊಳಿಸಲು, ಸಾವಿತ್ರಿಯು ಕ್ಷಮಾಪ್ರಾರ್ಥನೆಮಾಡಿ ಬ್ರಹ್ಮನೊಡನೆ ಇರಲು ಒಪ್ಪದೆ ತ್ರಿಪುರಾಧ್ಯಾನದಲ್ಲಿರುವೆನೆಂದಳು ; .... | ೩೦೮–೩೨೬ |
| ೩೯. | ಆಮೇಲೆ ಬ್ರಹ್ಮನು ಸಾವಿತ್ರಿಯು ಇಲ್ಲದೆ ಯಾಗಾಚರಣೆಯೇ ಅಸಂಭವವಾಗಿ, ಜನರಿಗೆ ವ್ಯಾಧಿಪೀಡೆಯೂ, ತನಗೆ ನಿಂದಾಪ್ರಾಪ್ತಿಯೂ ಹೇಗೆ ನಿವಾರಣೆಯಾಗಬೇಕೆಂದು ಪ್ರಾರ್ಥಿಸಲು, ತ್ರಿಪುರಾದೇವಿಯು ಗೋಪಕನ್ಯೆಯ ಪೂರ್ವವೃತ್ತವನ್ನು ವಿವರಿಸಿದಳು ; ಹಿಂದೆ ಸುಪಾರ್ಶ್ವನೆಂಬ ವಿಪ್ರನು ತಪಸ್ಸಿನಿಂದ ಸಾವಿತ್ರಿಯನ್ನು ಪ್ರತ್ಯಕ್ಷಮಾಡಿಕೊಂಡನು ; ತಾನು ಬಲಾತ್ಕಾರದಿಂದ ಗೋಪವಧೂಸಂಗಮಾಡಿದುದನ್ನು ನಾರದನು ಕಂಡು, ಗೋಪನಾಗೆಂದು ಶಾಪಕೊಟ್ಟನು ; ಅದನ್ನು ಪರಿಹರಿಸೆಂದು ಪ್ರಾರ್ಥಿಸಲು, ದೇವಿಯು ಗೋಪನಾದರೂ ತನ್ನ ಅಂಶದ ಮಗಳನ್ನೂ, ವಿಷ್ಣುವಿನ ಅಂಶದ ಮಗನನ್ನೂ ಪಡೆದು, ಸದ್ಗತಿಯನ್ನು ಪಡೆಯುವೆ. ಎಂದು ಸಮಾಧಾನ ಹೇಳಿ ಸಾವಿತ್ರಿಯು ಅಂತರ್ಧಾನವಾದಳು ; ಆ ಸಾವಿತ್ರ್ಯಂಶಸಂಭೂತಳೇ ಈ | |

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|
| | ಗೋಪವಧೂ ಎಂದೂ, ಬ್ರಹ್ಮನ ಶಾಪದಿಂದ ನೀನು ತಿಳಿಯಲಿಲ್ಲವೆಂದೂ, ವಿವರಿಸಲು, ಸಾವಿತ್ರಿಯು ತೃಪ್ತಿಗೊಂಡಳು ; ಈ ವರ್ಣಮಯವಾದ ಗಾಯತ್ರೀ ಉಪದೇಶವನ್ನು ಉಪನಯನದಲ್ಲಿ ಪಡೆದು ತ್ರೈವರ್ಣಿಕರು ದ್ವಿಜರಾಗುವರು ; ಎಂದೂ, ಈ ಗಾಯತ್ರಿಯನ್ನು ನಿನ್ನ ಮುಖದಿಂದ ಹೊರಡುವ ವೇದಮಯಳಾದುದರಿಂದ ಅಂಗೀಕರಿಸಿ ಯಾಗವನ್ನು ಮಾಡು ಎಂದೂ ಹೇಳಿ, ತ್ರಿಪುರಾದೇವಿಯು ಗಾಯತ್ರೀಯಲ್ಲಿ ಪ್ರವೇಶಿಸಿದಳು ; ಎಲ್ಲರೂ ದೇವಿಯನ್ನು ಸ್ತುತಿಸಿದರು ; ಈ ಸಮಯದಲ್ಲಿ ಅಲ್ಲಿಗೆ ಬಂದ ಗೋಪಪತಿಯು ತನ್ನ ಮಗಳಾದ ಗಾಯತ್ರಿಯನ್ನು ತನ್ನ ಮನೆಗೆ ಬರಬೇಕೆಂದು ಪ್ರಾರ್ಥಿಸಲು, ಅವಳು ಮುಂದೆ ನಂದಗೋಪನಾಗಿ ಹುಟ್ಟುವ ನಿನಗೆ ಗೌರೀ ಎಂಬ ಮಗಳಾಗಿ ಹುಟ್ಟುವೆನು ; ಈ ವಿಷ್ಣುವು ನನ್ನ ತಮ್ಮನಾಗಿ ಹುಟ್ಟುವನು ; ಆಗ ನಾನು ವಿಂಧ್ಯವಾಸಿನಿಯಾಗಿ ಜನರನ್ನು ಉದ್ಧರಿಸುವೆನು ; ಎಂದು ಅನುಗ್ರಹಿಸಲು ಗೋಪಪತಿಯು ತೃಪ್ತನಾಗಿ ಹಿಂತಿರುಗಿದನು ; ತ್ರಿಪುರಾದೇವಿಯು ಅಂತರ್ಧಾನವಾದಳು ; ಸಾವಿತ್ರಿಯು ಪರ್ವತವನ್ನು ಆಶ್ರಯಿಸಿದಳು ; ಬ್ರಹ್ಮನು ಗಾಯತ್ರಿಯನ್ನು ಸ್ವೀಕರಿಸಿ ಯಾಗವನ್ನು ನೆರವೇರಿಸಿದನು ; .... | ೩೨೭--೩೪೩ |
| ೪೦. | ಗಾಯತ್ರಿಯ ಅವತಾರ ವಿಷಯವನ್ನು ತಿಳಿಸೆಂದು ಪರಶುರಾಮನು ಕೇಳಲು ದತ್ತಾತ್ರೇಯನು, ದೇವತೆಗಳು ತ್ರಿಪುರಾದೇವಿಯನ್ನು ಒಲಿಸುವ ಮಾತೃಕಾಸ್ತುತಿಯನ್ನು ಹೇಳಿ, ಗಾಯತ್ರಿಯು ಇಪ್ಪತ್ತೆಂಟನೆಯ ಯುಗದಲ್ಲಿ ರಾಕ್ಷಸರು ಮನುಷ್ಯರಾಗಿ ಹುಟ್ಟುವರು ; ಹೇಗೆಂದರೆ, ಕಾಲನೇಮಿಯು ಮಧುರಾಪಟ್ಟಣದಲ್ಲಿ ಚಂದ್ರವಂಶದ ಉಗ್ರಸೇನನಮಗನಾದ ಕಂಸನಾಗಿಯೂ, ಹಿರಣ್ಯಕಶಿಪುವು ಚೇದಿವಂಶದಲ್ಲಿ | |

ಅಧ್ಯಾಯ | ವಿಷಯ | ಪುಟಸಂಖ್ಯಾ

ಶಿಶುಪಾಲನಾಗಿಯೂ, ಹಿರಣ್ಯಾಕ್ಷನು ದಂತವಕ್ರನಾಗಿಯೂ, ನರಕಾಸುರನು ಜರಾಸಂಧನಾಗಿಯೂ ಹುಟ್ಟಿವರು ; ಇವರ ಭಾರವನ್ನು ತಡೆಯಲಾರದೆ ಭೂದೇವಿಯು ಬ್ರಹ್ಮಾದಿಗಳೊಡನೆ ವಿಷ್ಣುವಿನ ಸಮೀಪದಲ್ಲಿ ಪ್ರಾರ್ಥಿಸಲು, ಅಲ್ಲಿ ಪ್ರತ್ಯಕ್ಷನಾದ ಶಿವನೂ ಎಲ್ಲರೂ ತ್ರಿಪುರಾದೇವಿಯ ಪ್ರಾರ್ಥನೆಯನ್ನು ಮಾಡಿದರು ; ದೇವಿಯು ಪ್ರತ್ಯಕ್ಷಳಾಗಿ ಅವನ ಕೋರಿಕೆಯಂತೆ ನಂದರ ಮಗಳಾಗಿಯೂ, ವಿಷ್ಣುವು ವಸುದೇವನ ಮಗನಾದ ಕೃಷ್ಣನಾಗಿಯೂ ಅವತರಿಸುವುದಾಗಿ ಹೇಳಿ, ಕಂಸಾದಿಸಂಹಾರವಾಗುವುದೆಂದು ಅನುಗ್ರಹಿಸಿದಳು ; ಅದರಂತೆ ವಿಷ್ಣುವು ದೇವಕಿಯಲ್ಲಿ ಹುಟ್ಟಿದನು ; ಅವನನ್ನು ವಸುದೇವನು ನಂದನ ಮನೆಗೆ ತಂದು ಅಲ್ಲಿಟ್ಟು, ಅಲ್ಲಿ ಹುಟ್ಟಿದ್ದ ಕಾಲರಾತ್ರಿಯನ್ನು ತೆಗೆದು ಕೊಂಡುಹೋಗಿ, ಕಂಸನಿಗೆ ಕೊಟ್ಟನು ; ಅವನು ಆ ಮಗುವನ್ನೂ ಕೊಲ್ಲಲು ಹೊರಟಾಗ ಆ ಮಗುವು ಮೇಲೆ ಹಾರಿ ; ನಿನ್ನ ಶತ್ರುವು ಬೇರೆಕಡೆ ಬೆಳೆದು ಬಂದು ನಿನ್ನನ್ನು ನಾಶಮಾಡಲೆಂದು ಶಪಿಸಿ ಅಂತರ್ಧಾನವಾದಳು ; ಆಮೇಲೆ ಗೋಪಸ್ತ್ರೀಯರು ಕೃಷ್ಣಸಮಾಗಮವನ್ನು ಪಡೆಯಲು ಕಾತ್ಯಾಯನಋಷಿಯ ಸಹಾಯವನ್ನು ಕೇಳಲು, ಅವನು ತ್ರಿಪುರಾಧ್ಯಾನದಿಂದ ಅವರ ಕೋರಿಕೆಯನ್ನು ತಿಳಿಸಲು, ದೇವಿಯು ಕಾತ್ಯಾಯನೀವ್ರತವನ್ನು ಆಚರಿಸಿದರೆ ಇಷ್ಟಸಿದ್ಧಿಯಾಗುವುದೆಂದು ಅನುಗ್ರಹಿಸಿದಳು ; ಅವರು ಅದನ್ನಾಚರಿಸಿ ಇಷ್ಟಾರ್ಥವನ್ನು ಪಡೆದರು ; ಪರಶುರಾಮನಿಗೆ ಕಾತ್ಯಾಯನೀವ್ರತದ ವಿವರಗಳನ್ನೂ ಗುರುವು ಹೇಳಿದನು. .... ೩೪೪—೩೬೮

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಏಕವಿಂಶೋಽಧ್ಯಾಯಃ ॥

### ಇಪ್ಪತ್ತೊಂದನೆಯ ಅಧ್ಯಾಯವು

ಕಾಮಮಾದಾಯ ತೇ ದೂತಾಃ ಕಮಲಾ ಸನಿಧಂ ಗತಾಃ ।
ನ್ಯವೇದಯನ್ ಯುದ್ಧವೃತ್ತಂ ದೇವಾನಾಂ ಚ ಪರಾಭವಂ ॥೧॥

ಶ್ರುತ್ವಾ ಲಕ್ಷ್ಮೀರ್ಜಗನ್ಮಾತಾ ದೃಷ್ಟ್ವಾ ಕಾಮಂ ಗತಾಯುಷಂ ।
ಈಷಚ್ಛೋಕೇ ಸಮಾಕ್ರಾಂತಾ ಧೈರ್ಯಮಾಲಂಬ್ಯ ವೈ ಪುನಃ ॥೨॥

ತ್ರಿಪುರಾಂ ಪರಮೇಶಾನೀಂ ಧ್ಯಾತ್ವಾ ನಿಶ್ಚಲಮಾನಸಾ ।
ನಿಮೀಲ್ಯ ನೇತ್ರಯುಗಲಂ ತನ್ಮಯೀ ಸಂಸ್ಥಿತಾ ಕ್ಷಣಂ ॥೩॥

ಉನ್ಮೀಲ್ಯ ನೇತ್ರಯುಗಲ ಮಮೃತಾಂಶುಪ್ರವರ್ಷಣಂ ।
ಅಪಶ್ಯನ್ಮನ್ಮಥಂ ಲಕ್ಷ್ಮೀ ಸ್ತತ್ಕ್ಷಣಾದೇವ ಮನ್ಮಥಃ ॥೪॥

---

ಆ ದೂತರು ಮನ್ಮಥನನ್ನು ಎತ್ತಿಕೊಂಡು ಲಕ್ಷ್ಮಿಯ ಸಮೀಪಕ್ಕೆ ಹೋದರು. ಅವರು ಆಕೆಗೆ ಯುದ್ಧ ಸಮಾಚಾರವನ್ನೂ, ದೇವತೆಗಳ ಸೋಲನ್ನೂ ಅರುಹಿದರು. ಜಗನ್ಮಾತೆಯಾದ ಲಕ್ಷ್ಮಿಯು ಈ ಸಮಾಚಾರವನ್ನು ಕೇಳಿ ಮನ್ಮಥನು ಮೃತನಾಗಿರುವುದನ್ನು ನೋಡಿ, ಸ್ವಲ್ಪ ದುಃಖಪಟ್ಟು ಪುನಃ ಧೈರ್ಯವನ್ನು ಹೊಂದಿ, ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಧ್ಯಾನಮಾಡುತ್ತಾ ನಿಶ್ಚಲವಾದ ಮನಸ್ಸಿನಿಂದ ತನ್ನ ಕಣ್ಣುಗಳೆರಡನ್ನೂ ಮುಚ್ಚಿ ತ್ರಿಪುರಾದೇವಿಯಲ್ಲೇ ನೆಟ್ಟ ಮನಸ್ಸುಳ್ಳವಳಾಗಿ ಕ್ಷಣಕಾಲ ಸಮಾಧಿಯಲ್ಲಿ ತನ್ಮಯಳಾಗಿದ್ದಳು. ॥೧-೨-೩॥

ಅನಂತರದಲ್ಲಿ ಅಮೃತಧಾರೆಯನ್ನು ವರ್ಷಿಸುವ ತನ್ನ ಕಣ್ಣುಗಳೆರಡನ್ನೂ ತೆರೆದು ಮನ್ಮಥನನ್ನು ನೋಡಿದಳು. ತತ್ಕ್ಷಣದಲ್ಲಿಯೇ ಮನ್ಮಥನು ನಿದ್ರೆಮಾಡಿ

ಉತ್ತಸ್ಥೌ ನಿದ್ರಿತ ಇವ ಯುದ್ಧೋತ್ಸುಕಿತಮಾನಸಃ ।
ಸಂಪ್ರೇಕ್ಷ್ಯ ಪರಿತಃ ಸ್ವಂ ಚ ನಿರಾಯುಧಮವೇಕ್ಷ್ಯ ಸಃ ॥೫॥

ಲಜ್ಜಿತಃ ಪ್ರೇಕ್ಷ್ಯ ಜನನೀಂ ವವಂದೇ ತತ್ಪದಾಂಬುಜಂ ।
ವಂದಿತ್ವಾಽತಿವಿಷಣ್ಣಾಽಸ್ಯೋ ಲಕ್ಷ್ಮೀಂ ಪ್ರಾಹ ತದಾ ವಚಃ ॥೬॥

ಮಾತಃ ಕುತೋ ಮೇ ಸಮರೇ ಮರ್ತ್ಯೈರಾಸೀತ್ಪರಾಭವಃ ।
ಅಹಂ ತೇ ಮಾನಸ ಸುತೋ ವಿಷ್ಣುಪತ್ನ್ಯಾಃ ಸಮುದ್ಗತಃ ॥೭॥

ದೇವತಾ ವಿಜಯಾರ್ಥಂ ತೇ ಸಂಕಲ್ಪಾದಭವಂ ಶಿವೇ ।
ಮೋಘಃ ಕಥಂ ತೇ ಸಂಕಲ್ಪೋ ದೇವಾನಾಂ ಚಾಽಪಿ ಬಂಧನಂ ॥೮॥

ವದ ಮಾತರ್ದ್ರುತಂ ಹ್ಯೇತಚ್ಛೋಕೋ ಮಾಂ ದಹತೀಶ್ವರಿ ।
ಫಲ್ಗುಭೂತೋ ಮೃತೋ ಯುದ್ಧೇ ಕಿಮರ್ಥಂ ಜೀವಿತಸ್ತ್ವಯಾ ॥೯॥

---

ಎಚ್ಚರವಾದವನಂತೆ ಮೇಲಕ್ಕೆದ್ದನು. ಆಗಲೂ ಇವನು ಯುದ್ಧದಲ್ಲಿ ಉತ್ಸಾಹವುಳ್ಳ ಮನಸ್ಸುಳ್ಳವನಾಗಿ ಸುತ್ತಲೂ ನೋಡಿ ತನ್ನ ಹತ್ತಿರ ಆಯುಧಗಳಿಲ್ಲದಿರುವುದನ್ನು ಕಂಡು ನಾಚಿಕೆಗೊಂಡು ತಾಯಿಯಾದ ಲಕ್ಷ್ಮಿಯನ್ನು ನೋಡಿ, ಆಕೆಯ ಪಾದ ಕಮಲಗಳಿಗೆರಗಿದನು. ತರುವಾಯ ಅವನು ಬಹಳ ಖಿನ್ನನಾಗಿ ಲಕ್ಷ್ಮಿಯನ್ನು ಕುರಿತು ಈ ಮಾತನ್ನಾಡಿದನು. ॥೪-೫-೬॥

ಓ ತಾಯಿಯೇ, ನನಗೇಕೆ ಯುದ್ಧದಲ್ಲಿ ಮನುಷ್ಯರಿಂದ ಸೋಲುಂಟಾಯಿತು? ವಿಷ್ಣು ಪತ್ನಿಯಾದ ನಿನ್ನ ಮನಸ್ಸಿನಿಂದ ನಾನು ಸೃಷ್ಟಿಸಲ್ಪಟ್ಟಿದ್ದೇನೆ. ಓ ಮಂಗಳಕರಳಾದ ತಾಯಿಯೇ, ನೀನು ನನ್ನನ್ನು ದೇವತೆಗಳಿಗೆ ವಿಜಯವನ್ನು ಗಳಿಸಿ ಕೊಡುವುದಕ್ಕೋಸ್ಕರವೇ ಮನಸ್ಸಿನ ಸಂಕಲ್ಪದಿಂದಲೇ ಸೃಷ್ಟಿಸಿದೆಯಲ್ಲವೇ? ನಿನ್ನ ಸಂಕಲ್ಪವು ಹೇಗೆ ಏಕೆ ವ್ಯರ್ಥವಾಯಿತು? ಮತ್ತು ದೇವತೆಗಳಿಗೆ ಬಂಧನವೂ ಹೇಗೆ ಪ್ರಾಪ್ತವಾಯಿತು? ॥೭-೮॥

ಓ ಲೋಕೇಶ್ವರಿಯಾದ ತಾಯಿಯೇ, ನನ್ನನ್ನು ಈ ದುಃಖವು ಸುಡುತ್ತಿದೆ. ಆದ್ದರಿಂದ ಎಲ್ಲವನ್ನೂ ಜಾಗ್ರತೆಯಾಗಿ ಹೇಳು. ಯುದ್ಧದಲ್ಲಿ ವಿಫಲನಾಗಿ ಮೃತನಾಗಿದ್ದ ಅಲ್ಪನಾದ ನನ್ನನ್ನು ನೀನು ಪುನಃ ಏಕೆ ಬದುಕಿಸಿದೆ? ಹೇಳು. ಎಂದು ಪ್ರಾರ್ಥಿಸಿದನು. ॥೯॥

ಅಲ್ಪೀಯಸ್ಯೈಃ ಪರಾಭೂತೋ ಮನಸಸ್ತೇ ಸುತೋಽಪ್ಯಹಂ ।
ಮಮ ನೌಪಯಿಕಂ ಲೋಕೇ ಜೀವನಂ ಸರ್ವನಿಂದಿತಂ ॥೧೦॥

ಶ್ರುತ್ವಾಽತ್ರ ಕಾರಣಂ ಮಾತರ್ಹಾಸ್ಯಾಮಿ ಖಲು ಜೀವಿತಂ ।
ಶ್ರುತ್ವೈವಂ ಕಾಮವಚನಂ ಶೋಕೋದ್ಗಾರ ಸಮನ್ವಿತಂ ॥೧೧॥

ಪ್ರೋವಾಚ ಪದ್ಮಾ ಪದ್ಮಾಸ್ಯಾ ತತ್ಕಾಲಪ್ರತಿಮಂ ವಚಃ ।
ವತ್ಸ ಕಾಮ ಶೋಕಮೇತಂ ಜಹಿ ಕಾಪುರುಷಾಽಶ್ರಿತಂ ॥೧೨॥

ಪುರುಷಾ ನ ಹಿ ಶೋಚಂತಿ ಧೀರಾಃ ಕ್ವಾಽಪಿ ಮಹಾಶಯಾಃ ।
ಆಪದಂಭೋಧಿ ನಿರ್ಮಗ್ನಾ ಅಪಿ ಧೈರ್ಯಮಹಾಪ್ಲವಂ ॥೧೩॥

ಸಮಾಸಾದ್ಯ ಪ್ರಯಾಂತ್ಯೇವ ತೀರ್ತ್ವಾ ಸಂಪತ್ತಟಂ ದ್ರುತಂ ।
ಆಪತ್ಸು ಗ್ಲಾನಿಮಾಯಾಂತಿ ಜನಾಃ ಫಲ್ಗುಸ್ವಭಾವಜಾಃ ॥೧೪॥

---

ನಿನ್ನ ಮನಸ್ಸಿನ ಸಂಕಲ್ಪದಿಂದ ಹುಟ್ಟಿದ ಮಗನಾದರೂ ನನಗೆ ಹೀಗೆ ಅಲ್ಪರಾದ ಜನರಿಂದ ಸೋಲುಂಟಾಯಿತು. ಆದ್ದರಿಂದ ನನ್ನ ಜೀವನವು ವ್ಯರ್ಥವು ಮತ್ತು ಎಲ್ಲರ ನಿಂದೆಗೂ ಪಾತ್ರವೂ ಆಗಿದೆ. ॥೧೦॥

ಓ ತಾಯಿಯೇ, ನಿನ್ನಿಂದ ಇವಕ್ಕೆಲ್ಲಕ್ಕೂ ಕಾರಣವನ್ನು ತಿಳಿದು ನನ್ನ ಜೀವನವನ್ನು ಬಿಡುವೆನು. ಮನ್ಮಥನ ದುಃಖಪೂರ್ಣವಾದ ಈ ಮಾತನ್ನು ಕೇಳಿ ಕಮಲಮುಖಿಯಾದ ಲಕ್ಷ್ಮಿಯು ಆ ಕಾಲಕ್ಕೆ ಯೋಗ್ಯವಾದ ಈ ಮಾತನ್ನಾಡಿದಳು. ಎಲೈ ಮನ್ಮಥನೇ, ನೀಚರಾದ ಜನರಿಗೆ ಯೋಗ್ಯವಾದ ಇಂತಹ ಶೋಕವನ್ನು ನೀನು ಮಾಡಬಾರದು. ॥೧೨॥

ಧೀರರೂ, ಮಹಾಶಯರೂ, ಆದ ಪುರುಷರು ಯಾವಾಗಲೂ ಶೋಕಿಸು ಸುವುಲ್ಲ. ಅವರು ಕಷ್ಟವೆಂಬ ಸಮುದ್ರದಲ್ಲಿ ಮುಳುಗಿದ್ದಾಗ್ಯೂ ಧೈರ್ಯವೆಂಬ ದೊಡ್ಡ ಹಡಗನ್ನು ಹೊಂದಿ ಸಂಪತ್ತೆಂಬ ದಡವನ್ನು ಶೀಘ್ರವಾಗಿಯೇ ತಲಪುವರು. ತುಚ್ಛರಾದ ಜನರು ಸಂಕಟ ಬಂದಾಗ ಕೊರಗುತ್ತಾರೆ. ॥೧೩-೧೪॥

ಶೃಣು ತ್ವಂ ಕಾರಣಂ ವಕ್ಷ್ಯೇ ಯೇನ ತ್ವಂ ನಿರ್ಜಿತೋ ರಣೇ ।
ನ ಮರ್ತ್ಯವೀರ್ಯಾತ್ ತ್ವಂ ಯುದ್ಧೇ ಕೇವಲಂ ನಿರ್ಜಿತಃ ಖಲು ॥೧೫॥

ರಾಜಾ ವೀರವ್ರತಃ ಸಾಕ್ಷಾನ್ಮಹಾದೇವ ಮುಪಾಶ್ರಿತಃ ।
ತತ್ಪ್ರಸಾದೇನ ಯುದ್ಧೇ ತ್ವಂ ನಿರ್ಜಿತೋಽಸಿ ಮಹೀಪತೇ ॥೧೬॥

ತದ್ಗಚ್ಛಾಽಽರಾಧಯ ಶಿವಂ ಮಹಾದೇವಮಧೀಶ್ವರಂ ।
ಜೇತಾಽಸಿ ಸಮರೇ ಸರ್ವಾನ್ ಪ್ರಸಾದಾತ್ತಸ್ಯ ಶೂಲಿನಃ ॥೧೭॥

ತಚ್ಛ್ರುತ್ವಾ ಶ್ರೀವಚಃ ಕಾಮೋ ಜಗಾಮ ಕ್ರೋಧಮೂರ್ಛಿತಃ ।
ಮಾ ವದೈವಂ ಮಹಾದೇವಿ ಶತ್ರುಪಕ್ಷ ಸಮಾಶ್ರಯಂ ॥೧೮॥

ದೇವಂ ವಾ ಮನುಜಂ ವಾಽಪಿ ಮಾದೃಶೋ ಜಗತೀತಲೇ ।
ಕಥಂ ನು ಶರಣೀ ಕುರ್ಯಾದ್ದೀನಃ ಸನ್ ಜಗದೀಶ್ವರಿ ॥೧೯॥

---

ನೀನು ಯುದ್ಧದಲ್ಲಿ ಸೋಲಲು ಕಾರಣವನ್ನು ಹೇಳುವೆನು ಕೇಳು. ನೀನು ಮನುಷ್ಯಮಾತ್ರರ ಪರಾಕ್ರಮದಿಂದ ಈ ಯುದ್ಧದಲ್ಲಿ ಸೋಲಲಿಲ್ಲ. ॥೧೫॥

ದೊರೆಯಾದ ವೀರವ್ರತನು ಸಾಕ್ಷಾತ್ ಮಹಾದೇವನಾದ ಶಿವನನ್ನೇ ಪೂಜಿಸಿದವನು. ಅವನ ಅನುಗ್ರಹವನ್ನು ಪಡೆದಿದ್ದುದರಿಂದಲೇ ಅವನು ನಿನ್ನನ್ನು ಜಯಿಸಿದನು. ॥೧೬॥

ಎಲೈ ಮನ್ಮಥನೇ, ಆದ್ದರಿಂದ ಲೋಕಕ್ಕೆ ಅಧಿಪತಿಯಾದ, ದೊಡ್ಡ ಪ್ರಭುವೂ, ಮಹಾದೇವನೂ ಆದ ಶಿವನನ್ನೇ ಪೂಜಿಸಲು ಹೋಗಿ ಬಾ. ಶಿವನ ಅನುಗ್ರಹದಿಂದ ನೀನೂ ಯುದ್ಧದಲ್ಲಿ ಎಲ್ಲರನ್ನೂ ಜಯಿಸುವೆ. ॥೧೭॥

ಲಕ್ಷ್ಮಿಯು ಹೇಳಿದ ಆ ಮಾತನ್ನು ಕೇಳಿ ಮನ್ಮಥನು ಕೋಪದಿಂದ ಪ್ರಜ್ಞಾಶೂನ್ಯನಾಗಿ ಆಕೆಯನ್ನು ಕುರಿತು, ಓ ತಾಯಿಯೇ, ನಾನು ಶತ್ರುವಿಗೆ ಬೆಂಬಲವನ್ನು ಕೊಟ್ಟಿರುವವನನ್ನು ಆಶ್ರಯಿಸಬೇಕಾಗುವ ಅಂಥಾ ಮಾತನ್ನು ದಯವಿಟ್ಟು ನನಗೆ ಹೇಳಬೇಡ, ಎಂದನು. ॥೧೮॥

ಓ ಜಗದೀಶ್ವರಿಯೇ, ನನ್ನಂಥವನು ಜಗತ್ತಿನಲ್ಲಿ ಅಂತಹ ದೇವನನ್ನಾಗಲೀ ಮನುಷ್ಯನನ್ನಾಗಲೀ, ಕ್ಷುದ್ರಮನುಷ್ಯನಂತೆ ಹೇಗೆ ಶರಣು ಹೋದಾನು? ಎಂದನು. ॥೧೯॥

ತತೋಽನ್ಯಂ ವದ ದೇವೇಶಂ ಯತ್ಪ್ರಸಾದಾದಹಂ ದ್ರುತಂ ।
ಜೇತಾ ಭವೇಯಂ ಸರ್ವೇಷಾಂ ದೇವಾನಾಮಪಿ ವೈ ರಣೇ ॥೨೦॥

ಮಹಾದೇವಂ ವಿಜೇಷ್ಯಾಮಿ ಪ್ರಥಮಂ ತದನಂತರಂ ।
ದೇವಾನ್ ಮರ್ತ್ಯಾನ್ ದಾನವಾದೀನ್ ಸರ್ವಾನೇವ ಕ್ರಮೇಣ ತು ॥೨೧॥

ತಚ್ಛ್ರುತ್ವಾ ಕಾಮವಚನಂ ಪ್ರಾಹ ಪದ್ಮಾಲಯಾ ತದಾ ।
ವತ್ಸ ದೇವಂ ನ ಜಾನೀಷೇ ಮಹಾದೇವಂ ತ್ರಿಲೋಚನಂ ॥೨೨॥

ಸರ್ವದೇವಾಧಿದೇವೇಶಂ ಹಿತ್ವಾ ಕೋಽನ್ಯೋ ಮಹಾಂಸ್ತತಃ ।
ಯಥಾ ಜಲಾನಾಂ ಜಲಧಿಃ ಜ್ಯೋತಿಷಾಂ ಚ ನಭೋಮಣಿಃ ॥೨೩॥

ಪರ್ವತಾನಾಂ ಸುಮೇರುಶ್ಚ ತಥಾ ದೇವೇಷು ಶಂಕರಃ ।
ಪ್ರಾಣಿನಾಂ ಜಂಗಮಾಃ ಶ್ರೇಷ್ಠಾಸ್ತೇಷು ಮರ್ತ್ಯಾಸ್ತತಸ್ಸುರಾಃ ॥೨೪॥

---

ಆದ್ದರಿಂದ ಬೇರೆಯಾರನ್ನಾದರೂ ದೇವನನ್ನು ಆಶ್ರಯಿಸಲು ನನಗೆ ದಯವಿಟ್ಟು ಸೂಚಿಸು. ಆ ದೇವರ ಅನುಗ್ರಹದಿಂದ ಯುದ್ಧದಲ್ಲಿ ಎಲ್ಲ ಮಾನವರನ್ನೂ, ದೇವತೆಗಳನ್ನಾದರೂ ನಾನು ಜಯಿಸುವಂತಾಗಬೇಕು. ॥೨೦॥

ನಾನು ಆ ದೇವರ ಅನುಗ್ರಹದಿಂದ ಮೊಟ್ಟಮೊದಲು ಮಹಾದೇವನಾದ ಶಿವನನ್ನೇ ಜಯಿಸುವೆನು. ಅನಂತರದಲ್ಲಿ ನಾನು ದೇವತೆಗಳು, ಮನುಷ್ಯರು, ದಾನವರು ಇವರೆಲ್ಲರನ್ನೂ ಕ್ರಮವಾಗಿ ಜಯಿಸುವೆನು. ॥೨೧॥

ಮನ್ಮಥನ ಈ ಮಾತನ್ನು ಕೇಳಿ ಕಮಲದಲ್ಲಿ ವಾಸಮಾಡುವ ಲಕ್ಷ್ಮಿಯು ಅವನನ್ನು ಕುರಿತು, ಎಲೈ ಮಗುವೇ, ಮುಕ್ಕಣ್ಣನೂ, ಮಹಾದೇವನೂ ಆದ ಶಿವನ ಮಹಿಮೆಯು ನಿನಗೆ ಗೊತ್ತಿಲ್ಲವು. ಅದನ್ನು ಸ್ವಲ್ಪ ಮಟ್ಟಿಗೆ ನಿನಗೆ ತಿಳಿಯಹೇಳುವೆನು, ಕೇಳು. ಎಂದಳು. ॥೨೨॥

ಸರ್ವ ದೇವತೆಗಳಿಗೂ ಅಧೀಶ್ವರನಾದ ಶಿವನನ್ನು ಬಿಟ್ಟು ಅವನಿಗಿಂತಲೂ ದೊಡ್ಡ ದೇವನು ಇನ್ನಾವನಿರುವನು ? ನೀರಿಗೆ ಸಮುದ್ರವು ಹೇಗೋ, ನಕ್ಷತ್ರಗಳಿಗೆ ಸೂರ್ಯನು ಹೇಗೋ, ಮತ್ತು ಪರ್ವತಗಳಿಗೆಲ್ಲಕ್ಕೂ ಮೇರುಪರ್ವತವು ಹೇಗೋ, ಹಾಗೆ ದೇವತೆಗಳೆಲ್ಲರಿಗೂ ಶಂಕರನೇ ಅತ್ಯುತ್ತಮನೆಂದು ತಿಳಿ. ಅಲ್ಲದೇ ಪ್ರಾಣಿಗಳಲ್ಲಿ

ತೇಭ್ಯೋ ಬ್ರಹ್ಮಾ ಚತುರ್ವಕ್ತ್ರಃ ಸ್ರಷ್ಟಾ ಲೋಕಸ್ಯ ಚೋತ್ತಮಃ ।
ತತೋ ವಿಷ್ಣುಃ ಪಾಲಯಿತಾ ಯನ್ನಾಭಿ ಕಮಲಾದ್ವಿಧಿಃ ॥೧೫॥

ಸಂಜಾತಃ ಪ್ರಳಯಸ್ಯಾಂತೇ ಸ ಭವೇತ್ ಪುರುಷೋತ್ತಮಃ ।
ತತೋಽಪಿ ತ್ರ್ಯಂಬಕಃ ಶ್ರೇಷ್ಠಃ ಸರ್ವದೇವಾಧಿದೇವರಾಟ್ ॥೧೬॥

ಯಸ್ಯ ಸಂಹರಣಂ ಕೃತ್ಯ ಮಂಶಭೂತಾ ಮಹೇಶ್ವರಾಃ ।
ರುದ್ರಾಃ ಕುರ್ವಂತಿ ಸರ್ವೇಶಾ ಮನ್ಯುರೂಪಾಃ ಸುಭೀಷಣಾಃ ॥೧೭॥

ಸ ದೇವಃ ಸರ್ವದೇವೇಶಃ ಸದಾಶಿವ ಇತಿಸ್ಮೃತಃ ।
ಯಲ್ಲಿಂಗಸ್ಯ ಪುರಾ ವಿಷ್ಣುರಂತಂ ನಾಽಪಶ್ಯದಚ್ಯುತಃ ॥೧೮॥

ಯದಂಶೇನ ವಿಧೇರ್ಮೂರ್ಧನಂ ಭಜ್ತ್ವಾಭಿನ್ನಂ ಶಿರೋ ಮಹತ್ ।
ನಾಸ್ತಿ ತಸ್ಮಾಚ್ಛ್ರೇಷ್ಠತರ ಸ್ತಸ್ಮಾತ್ತಂ ಶರಣಂ ವ್ರಜ ॥೧೯॥

---

ಚಲಿಸುವ ಪ್ರಾಣಿಗಳು ಶ್ರೇಷ್ಠವಾದುವು. ಅವುಗಳಲ್ಲಿಯೂ ಮನುಷ್ಯರು ಶ್ರೇಷ್ಠರು. ಅವರಿಗಿಂತಲೂ ದೇವತೆಗಳು ಶ್ರೇಷ್ಠರು. ॥೧೩-೧೪॥

ದೇವತೆಗಳಿಗಿಂತಲೂ ನಾಲ್ಕುಮುಖಗಳುಳ್ಳ, ಪ್ರಪಂಚದ ಸೃಷ್ಟಿಕರ್ತನಾದ, ಬ್ರಹ್ಮನು ಶ್ರೇಷ್ಠನು. ಅವನಿಗಿಂತಲೂ, ಪ್ರಳಯಕಾಲವು ಮುಗಿದಮೇಲೆ ತನ್ನ ನಾಭಿಕಮಲದಿಂದಲೇ ಬ್ರಹ್ಮನನ್ನು ಸೃಜಿಸಿದ, ಲೋಕರಕ್ಷಕನಾದ, ಪುರುಷೋತ್ತಮನಾದ ನಾರಾಯಣನು ಶ್ರೇಷ್ಠನು. ಅವನಿಗಿಂತಲೂ ಎಲ್ಲಾ ದೇವತೆಗಳಿಗೂ ಅಧೀಶ್ವರನಾದ ಮುಕ್ಕಣ್ಣನಾದ ಶಿವನು ಶ್ರೇಷ್ಠನು. ॥೧೫-೧೬॥

ಶಿವನು ಜಗತ್ತಿಗೆ ಸಂಹಾರಕನು. ಅವನ ಅಂಶದಿಂದಲೇ ಹುಟ್ಟಿದ ಎಲ್ಲಕ್ಕೂ ಅಧಿಪತಿಗಳಾದ ಕೋಪಸ್ವರೂಪರಾದ ಬಹಳ ಭಯಂಕರವಾದ ಸ್ವರೂಪವುಳ್ಳ ರುದ್ರರು ಅವನ ಆಜ್ಞೆಯಿಂದಲೇ ಈ ಸಂಹಾರಕಾರ್ಯವನ್ನು ನಡೆಸುತ್ತಿರುತ್ತಾರೆ.॥೧೭॥

ಆತನೇ ಎಲ್ಲಾ ದೇವತೆಗಳಿಗೂ ಒಡೆಯನಾದ ಸದಾಶಿವನೆಂದು ಪ್ರಸಿದ್ಧನಾದ ಪರಮೇಶ್ವರನು. ಅಚ್ಯುತನಾದ ವಿಷ್ಣುವೂ ಕೂಡ ಶಿವಲಿಂಗದ ತುದಿಯ ಸ್ವರೂಪವನ್ನು ನಿರ್ಧರಿಸಲು ಅಸಮರ್ಥನಾದನು. ಶಿವನ ಅಂಶನಾದ ವೀರಭದ್ರನಿಂದಲೇ ಹಿಂದೆ ಬ್ರಹ್ಮನ ಅಹಂಕಾರವನ್ನಡಗಿಸಲು ಅವನ ದೊಡ್ಡದಾದ ತಲೆಯೊಂದು ಕತ್ತರಿಸ

ನಿಶಮ್ಯ ಜನನೀವಾಕ್ಯಂ ಪುನಃ ಪ್ರಾಹ ಸ ಮನ್ಮಥಃ ।
ಮಾತಃ ಸರ್ವೋತ್ತಮಮಪಿ ಶಿವಂ ತ್ರಿಭುವನೇಶ್ವರಂ ॥೩೦॥

ನಾಽಽರಾಧಯಾಮ್ಯಹಂ ಯಸ್ಮಾಚ್ಛತ್ರುಸಂಶ್ರಯಣೋ ಹಿ ಸಃ ।
ವದ ಮಾತಃ ಶಿವೋ ಯಸ್ಮಾನ್ಮಹಿಮಾನ ಮವಾಪ್ತವಾನ್ ॥೩೧॥

ತಂ ಸಮಾಽರಾಧ್ಯ ಜೇತಾಽಸ್ಮಿ ಮಹಾದೇವ ಮಪೀಶ್ವರಿ ।
ನೈಸರ್ಗಿಕೋ ವಾ ಮಹಿಮಾ ಯಸ್ಯ ದೇವಸ್ಯ ಮೇ ವದ ॥೩೨॥

ಆಕರ್ಣ್ಯ ಕಾಮವಚನಂ ತದಾ ಲಕ್ಷ್ಮೀಃ ಮಹೇಶ್ವರೀ ।
ಧ್ಯಾನನಿಷ್ಠಾ ಸಮಭವನ್ನಿಮೀಲ್ಯ ನಯನದ್ವಯಂ ॥೩೩॥

ಕ್ಷಣಂ ಧ್ಯಾತ್ವಾ ಮಹಾದೇವೀಂ ತ್ರಿಪುರಾಂ ಪರಮೇಶ್ವರೀಂ ।
ಪ್ರಾರ್ಥಯಾಮಾಸ ಕಾಮಸ್ಯ ಸೌಭಾಗ್ಯಪ್ರಾಪ್ತಯೇ ತದಾ ॥೩೪॥

---

ಲ್ಪಟ್ಟಿತು. ಆ ಕಾರಣದಿಂದಲೂ, ಶಿವನಿಗಿಂತಲೂ ಶ್ರೇಷ್ಠನು ಮತ್ತೊಬ್ಬನಿಲ್ಲ. ಆದುದರಿಂದ ಅವನನ್ನೇ ನೀನು ಶರಣುಹೋಗು. ॥೨೮-೨೯॥

ತಾಯಿಯ ಈ ಮಾತನ್ನು ಕೇಳಿ ಮನ್ಮಥನು ಪುನಃ ಆಕೆಯನ್ನು ಕುರಿತು ಓ ತಾಯಿಯೇ, ಮೂರು ಲೋಕಗಳಿಗೂ ಅಧಿಪತಿಯೂ, ಸರ್ವಶ್ರೇಷ್ಠನೂ, ಆದರೂ ಶಿವನನ್ನು ನಾನು ಪೂಜಿಸಲಾರೆ! ಏಕೆಂದರೆ ಅವನು ನನ್ನ ಶತ್ರುವಿಗೆ ಅನುಗ್ರಾಹಕನಾಗಿರುತ್ತಾನೆ. ನಾನು ಹಾಗೆ ಮಾಡಿದರೆ ಶತ್ರುವನ್ನೇ ಆಶ್ರಯಿಸಿದಹಾಗಾಗುವುದು. ॥೩೦-೩೧॥

ಓ ಲೋಕೇಶ್ವರಿಯಾದ ತಾಯಿಯೇ, ಆದ್ದರಿಂದ ಶಿವನೂ ಕೂಡ ಅವನಿಗಿರುವ ಈ ಮಹಿಮೆಯನ್ನು ಯಾರಿಂದ ಪಡೆದನೋ, ಅಥವಾ ಯಾರಿಗೆ ಮಹಿಮೆಯು ಸ್ವಾಭಾವಿಕವಾಗಿದೆಯೋ, ಆ ದೇವನನ್ನು ನನಗೆ ಹೇಳು. ಅವನನ್ನೇ ನಾನೂ ಪೂಜಿಸಿ ಮಹಾದೇವನಾದ ಶಿವನನ್ನೂ ಜಯಿಸುವೆನು ! ॥೩೨॥

ಆಗ ಮಹೇಶ್ವರಿಯಾದ ಲಕ್ಷ್ಮಿಯು ಮನ್ಮಥನ ಮಾತನ್ನು ಕೇಳಿ ಎರಡು ಕಣ್ಣುಗಳನ್ನೂ ಮುಚ್ಚಿ ಧ್ಯಾನಾಸಕ್ತಳಾಗಿ ಕ್ಷಣಕಾಲ ಆಲೋಚನೆಯನ್ನು ಮಾಡಿ, ಮಹಾದೇವಿಯೂ ಪರಮೇಶ್ವರಿಯೂ ಆದ ತ್ರಿಪುರಾದೇವಿಯನ್ನು ಮನ್ಮಥನ ಇಷ್ಟಾರ್ಥಪ್ರಾಪ್ತಿಗಾಗಿ ಪ್ರಾರ್ಥಿಸಿದಳು. ॥೩೩-೩೪॥

ವಿಜ್ಞಾಯ ಪ್ರಾರ್ಥನಂ ದೇವೀ ಲಕ್ಷ್ಮ್ಯಾಃ ಕಾಮಸ್ಯ ಸಿದ್ಧಯೇ ।
ಗೌರೀಂ ನಿಯೋಜಯಾಮಾಸ ಸಾ ತತ್ರಾಽವಿರ್ಬಭೂವ ಹ ॥೩೫॥

ದೃಷ್ಟ್ವಾ ಗೌರೀಂ ಮಹಾಲಕ್ಷ್ಮೀಃ ಸಹಸೋತ್ಥಾಯ ಸನ್ನತಾ ।
ಭೂತ್ವಾ ಗೌರೀಂ ಸಮಾದಾಯ ಕರೇಣ ವಿನಿವೇಶಯತ್ ॥೩೬॥

ರತ್ನಾಽಽಸನೇ ತತಃ ಪೂಜಾಂ ವಿಧಾಯ ಕಮಲೋದ್ಭವಾ ।
ಸ್ತುತ್ವಾ ಮಧುರಯಾ ವಾಚಾ ಪ್ರಾಹ ಗೌರೀಂ ಮಹೇಶ್ವರೀಂ ॥೩೭॥

ದೇವಿ ಧನ್ಯಾಽಸ್ಮಿ ಯತ್ತ್ವೇಽಹಂ ಕೃಪಯಾ ಹ್ಯವಲೋಕಿತಾ ।
ತ್ವಂ ಸಾಕ್ಷಾದ್ದೇವದೇವಸ್ಯ ಮಹಾದೇವಸ್ಯ ಪ್ರೇಯಸೀ ॥೩೮॥

ತ್ವದ್ದರ್ಶನಂ ನ ಸುಲಭಂ ಬ್ರಹ್ಮಾದೀನಾಮಪೀಶ್ವರಿ ।
ಅದ್ಯ ಮೇ ತ್ರಿಪುರಾ ಪ್ರೀತಾ ಯತ್ತ್ವಾಂ ದ್ರಕ್ಷ್ಯಾಮಿ ಚಕ್ಷುಷಾ ॥೩೯॥

---

ಲಕ್ಷ್ಮೀದೇವಿಯ ಪ್ರಾರ್ಥನೆಯನ್ನರಿತು ತ್ರಿಪುರಾದೇವಿಯು ಮನ್ಮಥನ ಇಷ್ಟಾರ್ಥಸಿದ್ಧಿಗಾಗಿ ಗೌರೀದೇವಿಯನ್ನು ನಿಯಮಿಸಿದಳು. ಕೂಡಲೇ ಆಕೆಯು ಲಕ್ಷ್ಮೀದೇವಿಯಿದ್ದ ಕಡೆಗೆ ಬಂದಳು. ॥೩೫॥

ಮಹಾಲಕ್ಷ್ಮಿಯು ಗೌರಿಯನ್ನು ನೋಡಿ ಜಾಗ್ರತೆಯಾಗಿ ಎದ್ದು ಅವಳಿಗೆ ಮಣಿದು, ತಾನೇ ಗೌರಿಯ ಕೈಹಿಡಿದುಕೊಂಡು ಬಂದು ರತ್ನಾಸನದ ಮೇಲೆ ಕುಳ್ಳಿರಿಸಿದಳು. ಅನಂತರದಲ್ಲಿ ಲಕ್ಷ್ಮಿಯು ಆಕೆಗೆ ಪೂಜೆಮಾಡಿ, ಸ್ತುತಿಸಿ, ಮಧುರವಾದ ಮಾತಿನಿಂದ ಆಕೆಯನ್ನು ಕುರಿತು ಹೀಗೆ ಹೇಳಿದಳು. ॥೩೬-೩೭॥

ಓ ದೇವಿಯೇ, ನಿನ್ನ ಕೃಪಾದೃಷ್ಟಿಗೆ ಪಾತ್ರಳಾದ ನಾನೇ ಧನ್ಯಳು. ನೀನು ಸಾಕ್ಷಾತ್ ಪರಮೇಶ್ವರನಾದ ಮಹಾದೇವನ ಪತ್ನಿಯು. ॥೩೮॥

ಓ ಲೋಕೇಶ್ವರಿಯೇ, ಬ್ರಹ್ಮನೇ ಮೊದಲಾದವರಿಗೂ ನಿನ್ನ ದರ್ಶನವು ದುರ್ಲಭವು. ಹೀಗಿರುವಾಗ ನಿನ್ನ ದರ್ಶನವು ನನಗೆ ಈಗ ದೊರೆತುದರಿಂದ ನನ್ನ ಧ್ಯಾನದಿಂದ ತ್ರಿಪುರಾದೇವಿಯು ಸಂತೋಷಗೊಂಡಳೆಂದು ಭಾವಿಸುತ್ತೇನೆ. ॥೩೯॥

ಅನುಜಾಂ ವಾಸುದೇವಸ್ಯ ಪತ್ನೀಂ ಪಶುಪತೇಃ ಪ್ರಿಯಾಂ ।
ಇತಿ ತದ್ವಚನಂ ಶ್ರುತ್ವಾ ಗೌರೀ ಪ್ರೋವಾಚ ಸಸ್ಮಿತಂ ॥೪೦॥

ಕಿಂ ಪದ್ಮೇ ನೇತ್ರಯುಗಲಂ ನಿಮೀಲ್ಯ ಧ್ಯಾನಮಾಸ್ಥಿತಾ ।
ಕಿಂ ಚಿಂತಯಸಿ ಮೇ ಬ್ರೂಹಿ ದ್ರುತಂ ಕಮಲವಾಸಿನಿ ॥೪೧॥

ನಿಶಮ್ಯ ಗೌರೀವಚನಂ ಪ್ರಾಹ ಸಾಽಮೃತಪೇಶಲಂ ।
ಗೌರಿ ತೇ ವಚ್ಮಿ ವೃತ್ತಾಂತಂ ಶೃಣು ಯಚ್ಚಿಂತಯಾಮ್ಯಹಂ ॥೪೨॥

ಅಯಂ ಕುಮಾರಃ ಕಾಮಾಽಖ್ಯಃ ಸುತೋ ಮೇ ಮಾನಸಃ ಶಿವೇ ।
ದೇವಾನಾಮಿಷ್ಟಸಿದ್ಧ್ಯರ್ಥಮುದ್ಭಾವಿತ ಇಹೇಶ್ವರಿ ॥೪೩॥

ಸ ನಿರ್ಜಿತೋ ರಣೇ ವೀರವ್ರತೇನ ಧರಣೀತಲೇ ।
ಸ ರಾಜಾ ಪರಮೇಶಸ್ಯ ತವ ಪತ್ಯುಃ ಪ್ರಸಾದತಃ ॥೪೪॥

---

ವಿಷ್ಣುವಿನ ತಂಗಿಯೂ, ಶಿವನ ಪ್ರಿಯಪತ್ನಿಯೂ ಆದ ನಿನ್ನನ್ನು ದರ್ಶನ ಮಾಡಿದ ನಾನೇ ಧನ್ಯಳು. ಎಂದು ಲಕ್ಷ್ಮಿಯು ಆಡಿದ ಮಾತನ್ನು ಕೇಳಿ ಗೌರಿಯು ಮುಗುಳುನಗೆಯಿಂದ ಆಕೆಯನ್ನು ಕುರಿತು ಈ ಮುಂದೆ ಹೇಳುವ ರೀತಿಯಲ್ಲಿ ಹೇಳಿದಳು. ॥೪೦॥

ಎಲೌ ಲಕ್ಷ್ಮೀದೇವಿಯೇ, ನೀನು ನಿನ್ನ ಕಣ್ಣುಗಳೆರಡನ್ನೂ ಮುಚ್ಚಿಕೊಂಡು ಏನನ್ನು ಧ್ಯಾನಿಸುತ್ತಿರುವೆ ? ಎಲೌ ಕಮಲವಾಸಿಯಾದ ಲಕ್ಷ್ಮಿಯೇ, ನೀನು ಏನನ್ನು ಚಿಂತಿಸುತ್ತಿರುವೆಯೆಂಬುದನ್ನು ನನಗೆ ಶೀಘ್ರವಾಗಿ ಹೇಳು. ॥೪೧॥

ಅಮೃತಕ್ಕೆ ಸಮಾನವಾದ ಮೃದುವಾದ ಗೌರಿಯ ಮಾತನ್ನು ಕೇಳಿ ಲಕ್ಷ್ಮಿಯು ಆಕೆಯನ್ನು ಕುರಿತು, ಎಲೌ ಗೌರಿಯೇ, ನಾನು ಚಿಂತಿಸುತ್ತಿರುವವಿಷಯ ವೇನೆಂಬುದನ್ನು ನಿನಗೆ ಈಗ ಅರುಹುವೆನು ಕೇಳು. ಎಂದು ಹೇಳಿದಳು. ॥೪೨॥

ಎಲೌ ಲೋಕೇಶ್ವರಿಯೂ, ಶಿವನ ಪತ್ನಿಯೂ, ಆದ ಗೌರಿಯೇ, ಮನ್ಮಥ ನೆಂಬ ಹೆಸರಿನ ಈ ಮಗುವು ದೇವತೆಗಳ ಇಷ್ಟಾರ್ಥಸಿದ್ಧಿಗಾಗಿ ನನ್ನ ಮನಸ್ಸಿನಿಂದ ಉತ್ಪನ್ನನಾದನು. ॥೪೩॥

ಇವನನ್ನು ಭೂಮಿಯಲ್ಲಿ ವೀರವ್ರತನೆಂಬ ಧೊರೆಯು ಯುದ್ಧದಲ್ಲಿ ಜಯಿಸಿ ದನು. ಎಲೌ ಶಿವನ ಪತ್ನಿಯಾದ ಗೌರಿಯೇ, ಆ ಧೊರೆಯು ನಿನ್ನ ಪತಿಯಾದ

ಅಜೇಯಮಪಿ ಮೇ ಪುತ್ರಂ ಜಿತವಾನ್ ಸಂಯುಗೇ ಶಿವೇ ।
ವಿಷಣ್ಣೋ ನಿರ್ಜಿತಸ್ತೇನ ಸರ್ವಾನ್ ಜೇತುಮಿಹೇಚ್ಛತಿ ॥೪೫॥

ಶಿವಮಾರಾಧಯೇತ್ಯುಕ್ತೋ ನ ಶೃಣೋತಿ ವಚೋ ಮಮ ।
ಇತಿ ಶ್ರುತ್ವಾ ರಮಾವಾಕ್ಯಂ ದದರ್ಶ ಕಾಮಮಂತಿಕೇ ॥೪೬॥

ಸ್ಮಿತಪೂರ್ವಂ ವತ್ಸ ಕಾಮ ಏಹೀತಿ ಪ್ರಾಹ ಶಂಕರೀ ।
ಶ್ರುತ್ವಾ ಗೌರೀ ವಚಃ ಕಾಮ ಉಪಸೃತ್ಯ ಶಿವಾಂ ತದಾ ॥೪೭॥

ದಂಡವತ್ಪ್ರಣಿಪತ್ಯಾಥ ಬದ್ಧಾಂಜಲಿ ಪುಟಃ ಸ್ಥಿತಃ ।
ಪ್ರಾಹ ಗೌರೀ ವತ್ಸ ಕಿಂ ತೇ ಕರ್ತುಂ ವ್ಯವಸಿತಂ ವದ ॥೪೮॥

ಕಾಮಃ ಪ್ರಾಹ ತತೋ ಮಾತಃ ಶೃಣು ಮೇ ಯಚ್ಚಿಕೀರ್ಷಿತಂ ।
ಯುದ್ಧೇ ಸರ್ವಾನ್ ವಿಜೇಷ್ಯಾಮಿ ತಪಸ್ತಪ್ತ್ವಾ ಸುದುಷ್ಕರಂ ॥೪೯॥

---

ಶಿವನ ಅನುಗ್ರಹದಿಂದ ಜಯಿಸಲು ಅಸಾಧ್ಯನಾದ ನನ್ನ ಮಗನನ್ನೂ ಯುದ್ಧದಲ್ಲಿ ಜಯಿಸಿದನು. ಇದರಿಂದ ಸಂಕಟಪಡುತ್ತಿರುವ ನನ್ನ ಕುಮಾರನು ಅವರೆಲ್ಲರನ್ನೂ ಜಯಿಸಲು ಅಪೇಕ್ಷಿಸುತ್ತಿದಾನೆ. ॥೪೪-೪೫॥

ಹಾಗೆ ಜಯಿಸುವುದಕ್ಕೆ ಶಿವನನ್ನು ಆರಾಧಿಸು. ಎಂದು ನಾನು ಹೇಳಿದರೂ ಇವನು ನನ್ನ ಮಾತನ್ನು ಕೇಳುತ್ತಿಲ್ಲ. ಹೀಗೆ ಲಕ್ಷ್ಮಿಯು ಹೇಳಿದ ಮಾತನ್ನು ಕೇಳಿ ಗೌರಿಯು ಸಮೀಪದಲ್ಲಿದ್ದ ಮನ್ಮಥನನ್ನು ನೋಡಿದಳು. ॥೪೬॥

ಶಂಕರನ ಪತ್ನಿಯಾದ ಗೌರಿಯು ಮುಗುಳು ನಗೆಯಿಂದ ಅವನನ್ನು ಕುರಿತು ಎಲೈ ಮಗುವಾದ ಮನ್ಮಥನೇ, ಹತ್ತಿರಕ್ಕೆ ಬಾ. ಎಂದಳು. ಆಗ ಗೌರಿಯ ಮಾತನ್ನು ಕೇಳಿ ಮನ್ಮಥನು ಆಕೆಯನ್ನು ಸಮೀಪಿಸಿ ದಂಡಾಕಾರವಾಗಿ ಪ್ರಣಾಮಮಾಡಿ, ಕೈಜೋಡಿಸಿಕೊಂಡು ನಿಂತಿದ್ದನು. ಗೌರಿಯು ಅವನನ್ನು ಕುರಿತು ಎಲೈ ಮಗುವೇ, ನೀನು ಏನನ್ನು ಮಾಡಬೇಕೆಂದು ನಿಶ್ಚಯಿಸಿದ್ದೀಯೆ ? ಎಂದು ಮನ್ಮಥನನ್ನು ಕೇಳಿದಳು. ॥೪೮॥

ಅನಂತರ ಮನ್ಮಥನು ಆಕೆಯನ್ನು ಕುರಿತು, ಎಲೌ ತಾಯಿಯೇ, ನಾನು ಏನನ್ನು ಮಾಡಬೇಕೆಂದಿರುವುದನ್ನು ಹೇಳುವೆನು ಕೇಳು. ಎಂದನು. ಬಹಳ ಘೋರವಾದ ತಪಸ್ಸನ್ನು ಮಾಡಿ ಅನಂತರ ನಾನು ಯುದ್ಧದಲ್ಲಿ ಎಲ್ಲರನ್ನೂ ಜಯಿಸು

ತತ್ರ ದೇವಂ ನ ಜಾನಾಮಿ ಯಸ್ತುಷ್ಟೋ ವಾಂಛಿತಪ್ರದಃ ।
ಇತಿ ಶ್ರುತ್ವಾ ಗಿರಂ ತಸ್ಯ ಪ್ರೋವಾಚ ಶಿವವಲ್ಲಭಾ ॥೫೦॥

ವ್ಯವಸಾಯೋ ಮಹಾನೇಷ ನ ಶಿವಾಽಽರಾಧನಂ ವಿನಾ ।
ಭವಿಷ್ಯತಿ ತತಃ ಕಾಮ ಶಿವಮಾರಾಧಯ ದ್ರುತಂ ॥೫೧॥

ನ ಕಶ್ಚಿನ್ಮತ್ಪ್ರಿಯಾಲ್ಲೋಕೇ ಶಿವಾದನ್ಯೋ ಹಿ ವಿದ್ಯತೇ ।
ದುರ್ಲಭಾರ್ಥಪ್ರದಾನಾಯ ತಸ್ಮಾದ್ಭಜ ಮಹೇಶ್ವರಂ ॥೫೨॥

ಇತ್ಯುಕ್ತ್ವಾ ಮದನಂ ಗೌರೀ ಪ್ರಾಹ ಲಕ್ಷ್ಮೀಂ ತತೋ ವಚಃ ।
ಪ್ರೇಷಿತಾಽಸ್ಮಿ ಮಹಾದೇವ್ಯಾ ತ್ವಚ್ಛ್ರೇಯೇ ತ್ರಿಪುರಾಽಽಖ್ಯಯಾ ॥೫೩॥

ಚಿಂತಾಂ ಪರಿತ್ಯಜ ತವ ಪುತ್ರಃ ಪ್ರಾಪ್ನೋತಿ ವಾಂಛಿತಂ ।
ಇತಿ ತಸ್ಯಾ ನಿಗದಿತುಂ ಸಂದೇಶಮಹಮಾಗತಾ ॥೫೪॥

---

ವೆನು. ನನ್ನ ತಪಸ್ಸನ್ನು ಮೆಚ್ಚಿ ನನ್ನ ಇಷ್ಟಾರ್ಥಗಳನ್ನು ಸಲ್ಲಿಸುವ ದೇವನು ಯಾರೆಂಬುದು ನನಗೆ ಗೊತ್ತಿಲ್ಲ. ಹೀಗೆ ಮನ್ಮಥನು ಹೇಳಿದ ಮಾತನ್ನು ಕೇಳಿ, ಶಿವನ ಪತ್ನಿಯಾದ ಗೌರಿಯು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೪೯-೫೦॥

ಎಲೈ ಮನ್ಮಥನೇ, ನೀನು ನಿಶ್ಚಯಿಸಿರುವ ವಿಚಾರವು ಬಹಳ ದೊಡ್ಡದು. ಶಿವನ ಆರಾಧನೆಯನ್ನು ಮಾಡದೇ ಅದು ಸಿದ್ಧಿಸಲಾರದು. ಆದ್ದರಿಂದ ಶೀಘ್ರವಾಗಿ ಶಿವನನ್ನು ಆರಾಧಿಸು. ॥೫೧॥

ಎಲೈ ಮನ್ಮಥನೇ, ನನ್ನ ಗಂಡನಿಗಿಂತಲೂ ಬೇರೊಬ್ಬನು ಲೋಕದಲ್ಲಿ ದುರ್ಲಭವಾದ ಇಷ್ಟಾರ್ಥಗಳನ್ನೂ ನೀಡಲು ಸಮರ್ಥನಲ್ಲ. ಆದ್ದರಿಂದ ನೀನು ಮಹೇಶ್ವರನಾದ ಅವನನ್ನೇ ಭಜಿಸಬೇಕು. ॥೫೨॥

ಹೀಗೆ ಮನ್ಮಥನಿಗೆ ಹೇಳಿ ಗೌರಿಯು ಲಕ್ಷ್ಮಿಯನ್ನು ಕುರಿತು ಈ ಮಾತನ್ನಾಡಿದಳು. ಓ ಲಕ್ಷ್ಮಿಯೇ, ಮಹಾದೇವಿಯಾದ ತ್ರಿಪುರಾಂಬಿಕೆಯೇ ನಿನ್ನ ಶ್ರೇಯಸ್ಸಿಗಾಗಿ ನನ್ನನ್ನು ನಿನ್ನಲ್ಲಿಗೆ ಕಳುಹಿಸಿದಳು. ॥೫೩॥

ಎಲೌ ಲಕ್ಷ್ಮಿಯೇ, ನೀನು ಇನ್ನು ಚಿಂತೆಯನ್ನು ಬಿಡು. ನಿನ್ನ ಮಗನು ಇಷ್ಟಾರ್ಥವನ್ನು ಖಂಡಿತವಾಗಿಯೂ ಹೊಂದುವನು. ಹೀಗೆ ಆ ದೇವಿಯ ಸಂದೇಶ

ಪ್ರಸಾದಯತು ದೇವೇಶಂ ಶಿವಂ ಕಾಮಾ(ಮೋಃ)ರ್ಥಲಬ್ಧಯೇ ।
ಏವಂ ವದಂತ್ಯಾಂ ಗೌರ್ಯಾಂ ಸ ಕಾಮಃ ಪ್ರಾಹ ರುಷಾಽನ್ವಿತಃ ॥೪೪॥

ಶೃಣು ಶರ್ವಾಣಿ ಮದ್ವಾಕ್ಯಂ ಶತ್ರುಪಕ್ಷ ಸಮಾಶ್ರಯಂ ।
ಶಿವಂ ಕದಾಽಪ್ಯಹಂ ನೈವ ಶರಣಂ ಯಾಮಿ ಶಂಕರಿ ॥೪೫॥

ಶಿವಾದಪ್ಯಧಿಕಂ ದೇವಂ ಪ್ರಸಾದ್ಯ ಪ್ರಾಪ್ಯ ಚೇಹಿತಂ।
ಶಿವಂ ತದಾಶ್ರಿತಾಂಶ್ಚಾಪಿ ವಿಜೇಷ್ಯಾಮ್ಯಹಮೋಜಸಾ ॥೪೬॥

ತ್ಯಜಾಮಿ ವಾ ದೇಹಮಿಮಂ ನ ಶಿವಂ ಸಂಶ್ರಯೇ ಕ್ವಚಿತ್ ।
ಶ್ರುತ್ವೈವಂ ಕಾಮವಚನಂ ಕ್ರುದ್ಧಾ ಪ್ರಾಹ ಮಹೇಶ್ವರೀ ॥೪೭॥

ಯಸ್ಮಾನ್ಮದ್ವಚನಂ ಪಥ್ಯಮಪಿ ತ್ವಂ ನ ಶೃಣೋಷ್ಯತಃ ।
ಶಿವಂ ಯುದ್ಧೇ ಸಮಾಸಾದ್ಯ ಭಸ್ಮಶೇಷತ್ವ ಮೃಚ್ಛಸಿ ॥೪೮॥

---

ವನ್ನು ನಿನಗೆ ತಿಳಿಸುವುದಕ್ಕಾಗಿಯೇ ನಾನು ನಿನ್ನಲ್ಲಿಗೆ ಬಂದಿರುವೆನು. ಎಂದು ಹೇಳಿದಳು. ॥೪೩॥

ಮನ್ಮಥನು ತನ್ನ ಇಷ್ಟಸಿದ್ಧಿಗಾಗಿ ದೇವೇಶನಾದ ಶಿವನನ್ನು ಮೆಚ್ಚಿಸಲಿ. ಹೀಗೆ ಗೌರಿಯು ಹೇಳುತ್ತಿರಲು ಮನ್ಮಥನು ಕೋಪಾವಿಷ್ಟನಾಗಿ ಈರೀತಿಯಲ್ಲಿ ಮಾತನಾಡಿದನು. ॥೪೪॥

ಎಲೌ ಶಂಕರನ ಪತ್ನಿಯಾದ ಗೌರಿಯೇ, ಶತ್ರುವಿಗೆ ಆಶ್ರಯವನ್ನು ಕೊಟ್ಟು ಶತ್ರುಪಕ್ಷದವನಾಗಿರುವ ಶಿವನನ್ನು ನಾನೆಂದಿಗೂ ಶರಣುಹೋಗಲೊಲ್ಲೆನು. ॥೪೫॥

ಶಿವನಿಗಿಂತಲೂ ಮೇಲಾದ ದೇವನನ್ನು ಮೆಚ್ಚಿಸಿ ಅವನಿಂದ ಇಷ್ಟಾರ್ಥವನ್ನು ಪಡೆದು ನಾನು ಶಿವನನ್ನೂ ಮತ್ತು ಅವನನ್ನು ಆಶ್ರಯಿಸಿದವರನ್ನೂ ನನ್ನ ಪರಾಕ್ರಮದಿಂದ ಜಯಿಸುವೆನು. ಅದು ಸಾಧ್ಯವಾಗದಿದ್ದರೆ, ॥೪೬॥

ನಾನು ಪ್ರಾಣವನ್ನಾದರೂ ಬಿಡುವೆನೇ ವಿನಾ ಶಿವನನ್ನು ಮಾತ್ರ ಎಂದಿಗೂ ಆಶ್ರಯಿಸಲಾರೆ ಎಂದು ಹೇಳಿದನು. ಮನ್ಮಥನು ಹೇಳಿದ ಈ ಮಾತುಗಳನ್ನು ಕೇಳಿ ಮಹೇಶ್ವರನ ಪತ್ನಿಯಾದ ಗೌರಿಯು ಕೋಪಗೊಂಡು ಈರೀತಿಯಲ್ಲಿ ಹೇಳಿದಳು. ॥೪೭॥

ಎಲೈ ಮನ್ಮಥನೇ, ನಾನು ನಿನಗೆ ಹಿತಕರವಾದ ಮಾತುಗಳನ್ನು ಹೇಳಿದರೂ

ಶಶಾಪೈವಂ ತದಾ ಲಕ್ಷ್ಮೀಃ ಶ್ರುತ್ವಾ ಶಾಪಂ ಸುತಸ್ಯ ತಂ ।
ಕ್ರುದ್ಧಾ ಶಶಾಪ ಗೌರೀಂ ಸಾ ರೋಷಾಽರುಣಿತಲೋಚನಾ ॥೬೦॥

ಯಸ್ಮಾತ್ಕುಮಾರೇ ನೋ ಶಾಪೋ ದತ್ತಸ್ತಸ್ಮಾತ್ತ್ವಯಾಽಧುನಾ ।
ಭರ್ತೃನಿಂದಾ ಶ್ರುತಿವಶಾತ್ ಭಸ್ಮಶೇಷೀ ಭವಿಷ್ಯಸಿ ॥೬೧॥

ತತೋಽತಿ ಕ್ರೋಧಸಂಯುಕ್ತಾ ಗೌರೀ ಪ್ರಾಹ ಹರೇಃ ಪ್ರಿಯಾಂ ।
ಕುಮಾರೇ ಪ್ರೇಮಭಾವೇನ ವಿಚಾರರಹಿತಾ ಯತಃ ॥೬೨॥

ತತಸ್ತ್ವಂ ಭರ್ತೃವಿಯುತಾ ಶೋಕಂ ಪ್ರಾಪ್ಸ್ಯಸಿ ವೈ ಚಿರಂ ।
ಸಪತ್ನೀಭಿರಪಿ ಕ್ಲಿಷ್ಟಾ ಭವಿಷ್ಯಸಿ ಹರಿಪ್ರಿಯೇ ॥೬೩॥

ಇತಿ ಶಪ್ತಾ ಪುನರ್ಲಕ್ಷ್ಮೀಃ ಕ್ರುದ್ಧಾ ಯೋದ್ಧುಂ ಸಮುತ್ಥಿತಾ ।
ರುದ್ರಾಣ್ಯಪಿ ಮೃಗೇಂದ್ರಂ ಸ್ವಂ ವಾಹನಂ ಸಮುಪಸ್ಥಿತಾ ॥೬೪॥

---

ನೀನು ಕೇಳದೇ ಇರುವುದರಿಂದ ನೀನು ಯುದ್ಧದಲ್ಲಿ ಶಿವನಿಗೆ ಎದುರಾಗಿ ಹೋರಾಡಿ ಅವನಿಂದ ಬೂದಿಮಾಡಲ್ಪಡುತ್ತೀಯೆ! ಎಂದು ಗೌರಿಯು ಅವನಿಗೆ ಶಾಪವನ್ನು ಕೊಟ್ಟಳು. ಲಕ್ಷ್ಮಿಯು ತನ್ನ ಮಗನಿಗೆ ಗೌರಿಯು ಶಾಪಕೊಟ್ಟದ್ದನ್ನು ಕೇಳಿ, ಬಹಳ ಶಿಟ್ಟುಗೊಂಡು ಕೋಪದಿಂದ ಕೆಂಪೇರಿದ ಕಣ್ಣುಳ್ಳವಳಾಗಿ ಅವಳನ್ನು ಉದ್ದೇಶಿಸಿ, ನೀನು ನನ್ನ ಮಗನಿಗೆ ಶಾಪಕೊಟ್ಟದ್ದರಿಂದ ನೀನೂ ಕೂಡ ದಕ್ಷಯಾಗದಲ್ಲಿ ನಿನ್ನ ಪತಿಯ ನಿಂದೆಯನ್ನು ಕೇಳಿ ಬೂದಿಯಾಗುತ್ತೀಯೆ! ಎಂದು ಶಾಪವನ್ನು ಕೊಟ್ಟಳು. ॥೫೯-೬೦-೬೧॥

ಅನಂತರ ಬಹಳ ಕೋಪಗೊಂಡ ಗೌರಿಯು ವಿಷ್ಣುವಿನ ಪತ್ನಿಯಾದ ಲಕ್ಷ್ಮಿಯನ್ನು ಉದ್ದೇಶಿಸಿ ನೀನು ನಿನ್ನ ಮಗನ ವ್ಯಾಮೋಹದಿಂದ ಮೂಢಳಾಗಿ ಯುಕ್ತಾಯುಕ್ತ ವಿಚಾರವಿಲ್ಲದವಳಾಗಿ ವರ್ತಿಸಿದ್ದರಿಂದ ನೀನೂ ಕೂಡ ನಿನ್ನ ಗಂಡನಿಂದ ವಿರಹವನ್ನು ಪಡೆದು ಬಹಳಕಾಲ ದುಃಖವನ್ನು ಅನುಭವಿಸುವೆ. ಅಲ್ಲದೆ ನೀನು ಸವತಿಯರ ಕಾಟಕ್ಕೂ ಸಿಕ್ಕುವೆ ಎಂದು ಶಾಪಕೊಡಲು, ಪುನಃ ಲಕ್ಷ್ಮಿಯು ಕೋಪಗೊಂಡು ಅವಳೊಂದಿಗೆ ಯುದ್ಧಮಾಡಲು ಎದ್ದಳು! ಶಿವನ ಪತ್ನಿಯಾದ ರುದ್ರಾಣಿಯೂ ಕೂಡ ಅವಳ ವಾಹನವಾದ ಶ್ರೇಷ್ಠ ಸಿಂಹವನ್ನೇರಿ ಸಿದ್ಧಳಾದಳು! ॥೬೨-೬೩-೬೪॥

ಧನುರ್ದಿವ್ಯಂ ಸಮಾದಾಯ ಶರವರ್ಷಾಣಿ ಚಕ್ರತುಃ ।
ವಿವಿಧಾನಿ ಚ ಶಸ್ತ್ರಾಣಿ ತಥಾಽಸ್ತ್ರಾಣಿ ಚ ಭಾರ್ಗವ ॥೬೫॥

ಏವಂ ತಯೋಃ ಸಮುಭವದ್ಯುದ್ಧಮತ್ಯಂತ ದಾರುಣಂ ।
ಗೌರ್ಯಾ ಸಮಾಗತಾ ಸ್ತತ್ರ ಪ್ರಮಥಾ ಯುಯುಧುರ್ಭೃಶಂ ॥೬೬॥

ಲಕ್ಷ್ಮೀಸ್ತಾನ್ಪ್ರಮಥಾ ನಸ್ತ್ರೈರ್ವಿವ್ಯಾಧ ಬಲವತ್ತರೈಃ ।
ಹತಾಸ್ತದಾ ಮಹಾಽಸ್ತ್ರೇಣ ಪ್ರಮಥಾ ಭೃಶ ಪೀಡಿತಾಃ ॥೬೭॥

ಪಲಾಯಿತಾಃ ಶಿವಂ ಪ್ರೋಚು ರ್ಯುದ್ಧಂ ದೈವ್ಯಾಶ್ಚ ಪದ್ಮಯಾ ।
ಶ್ರುತ್ವಾ ಶಿವೋ ವೃಷಾಽಽರೂಢಃ ಪ್ರಯಯೌ ಯತ್ರ ಸಂಗರಃ ॥೬೮॥

ತದಂತರೇ ಯುದ್ಧವೃತ್ತಂ ಶ್ರುತ್ವಾ ವಿಷ್ಣುಃ ಸಮಾಗತಃ ।
ಬ್ರಹ್ಮಾಽಪಿ ಯುದ್ಧ ಸಂದೇಶಂ ಪ್ರಾಪ್ಯ ದೇವೈಃ ಸಮಾವೃತಃ ॥೬೯॥

---

ಹೀಗೆ ಗೌರೀ ಲಕ್ಷ್ಮಿಯರಿಬ್ಬರೂ ಸೊಗಸಾದ ಧನುಸ್ಸನ್ನು ಹಿಡಿದು ಒಬ್ಬರಿಗೊಬ್ಬರು ಬಾಣಗಳಮಳೆಯನ್ನೇ ಕರೆದರು. ಎಲೈ ಪರಶುರಾಮನೇ, ಅವರಿಬ್ಬರೂ ಅನೇಕ ವಿಧವಾದ ಅಸ್ತ್ರಗಳನ್ನೂ ಮತ್ತು ಶಸ್ತ್ರಗಳನ್ನೂ ಪರಸ್ಪರವಾಗಿ ಪ್ರಯೋಗಿಸಿದರು. ॥೬೫॥

ಹೀಗೆ ಅವರಿಬ್ಬರಿಗೂ ಅತ್ಯಂತ ಭಯಂಕರವಾದ ಯುದ್ಧವು ಸಂಭವಿಸಿತು. ಗೌರಿಯ ಜೊತೆಯಲ್ಲಿ ಸೇರಿ ಪ್ರಮಥಗಣಗಳೂ, ಲಕ್ಷ್ಮಿಯೊಂದಿಗೆ ಬಹಳವಾಗಿ ಕಾದಾಡಿದವು. ॥೬೬॥

ಲಕ್ಷ್ಮಿಯು ಅತ್ಯಂತ ಬಲವಾದ ಅಸ್ತ್ರಗಳಿಂದ ಆ ಪ್ರಮಥಗಣಗಳನ್ನು ಹೊಡೆದಳು. ಆಗ ಆಕೆಯ ಮಹಾಸ್ತ್ರಗಳಿಂದ ಹೊಡೆಯಲ್ಪಟ್ಟ ಆ ಪ್ರಮಥಗಣಗಳು ಬಹಳ ನೋವನ್ನು ಅನುಭವಿಸಿದರು. ॥೬೭॥

ಹೀಗೆ ಬಹಳ ಪೆಟ್ಟುತಿಂದು ಪಲಾಯನಮಾಡಿ ಅವರು ಗೌರೀದೇವಿಗೂ, ಲಕ್ಷ್ಮಿಗೂ ನಡೆಯುತ್ತಿರುವ ಯುದ್ಧಸಮಾಚಾರವನ್ನು ಶಿವನಿಗೆ ಹೇಳಿದರು. ಈ ಸಮಾಚಾರವನ್ನು ಕೇಳಿ ಶಿವನು ನಂದೀಶ್ವರನ ಮೇಲೇರಿ ಯುದ್ಧವು ನಡೆಯುತ್ತಿದ್ದ ಕಡೆಗೆ ಬಂದನು. ॥೬೮॥

ಆಜಗಾಮ ಸರಸ್ವತ್ಯಾ ಸಮೇತೋ ಯುದ್ಧಮೀಕ್ಷಿತುಂ ।
ಸಿದ್ಧ ಗಂಧರ್ವ ವಿದ್ಯಾಧ್ರಾಃ ಸ ಕಿನ್ನರ ಮಹೋರಗಾಃ ॥೭೦॥

ಆಜಗ್ಮುರ್ಯುರ್ಯುದ್ಧಮಭವದ್ಯತ್ರ ತತ್ರ ಸಮೀಕ್ಷಕಾಃ ।
ಅಭವತ್ತುಮುಲಂ ಯುದ್ಧಂ ಲಕ್ಷ್ಮೀಗೌರ್ಯೋಃ ಪರಸ್ಪರಂ ॥೭೧॥

ಸೃಜತೋಽ(ಃ) ವಿವಿಧಾಃಸ್ತ್ರಾಣಿ ಪರಸ್ಪರ ಜಯೇಚ್ಛಯಾ ।
ನಿವಾರಯಿತು ಮಾಯಾತೌ ಶಿವವಿಷ್ಣೂ ಸಮೀಪತಃ ॥೭೨॥

ಅಸ್ತ್ರಾಗ್ನಿನಾ ವಿನಿರ್ದಗ್ಧೌ ಮೂರ್ಛಿತೌ ಸಂಬಭೂವತುಃ ।
ಅಥ ಲಕ್ಷ್ಮೀರ್ಧನುರ್ದಿವ್ಯಂ ಗೌರ್ಯಾಶ್ಚಿಚ್ಛೇದ ಸಾಯಕೈಃ ॥೭೩॥

---

ಈ ಸಂದರ್ಭದಲ್ಲಿ ಯುದ್ಧಸಮಾಚಾರವನ್ನು ತಿಳಿದು ವಿಷ್ಣುವೂ ಅಲ್ಲಿಗೆ ಬಂದನು. ಬ್ರಹ್ಮನೂ ಈ ಸಮಾಚಾರವನ್ನು ಕೇಳಿ ದೇವತೆಗಳೊಡಗೂಡಿ, ಅಲ್ಲಿಗೆ ಬಂದನು. ॥೬೯॥

ಬ್ರಹ್ಮನು ಸರಸ್ವತಿಯಿಂದೊಡಗೂಡಿ ಆ ಯುದ್ಧವನ್ನು ನೋಡಲು ಬಂದನು. ಅಲ್ಲದೇ ಸಿದ್ಧರೂ, ಗಂಧರ್ವರೂ ಮತ್ತು ವಿದ್ಯಾಧರರೂ, ಕಿನ್ನರರು ಮತ್ತು ಮಹಾ ನಾಗಗಳೊಡನೆ ಆ ಯುದ್ಧವು ನಡೆಯುತ್ತಿದ್ದ ಕಡೆಗೆ ಬಂದು ನೋಡುತ್ತಿದ್ದರು. ಆಗ ಲಕ್ಷ್ಮೀ ಮತ್ತು ಗೌರೀ ಇವರಿಬ್ಬರಿಗೂ ತುಮುಲಯುದ್ಧವು ನಡೆಯಿತು. ॥೭೦-೭೧॥

ಗೌರೀ ಮತ್ತು ಲಕ್ಷ್ಮಿ ಇವರಿಬ್ಬರೂ ಅನೇಕ ವಿಧವಾದ ಹೊಸ ಅಸ್ತ್ರಗಳನ್ನು ಸೃಜಿಸಿ ಬಿಡುತ್ತಿರುವುದನ್ನು ನೋಡಿ ಅದನ್ನು ತಡೆಗಟ್ಟಲು ಶಿವ ಮತ್ತು ವಿಷ್ಣು ಇವರಿಬ್ಬರೂ ಅವರ ಹತ್ತಿರಕ್ಕೆ ಬಂದರು. ॥೭೨॥

ಇವರ ಅಸ್ತ್ರಗಳಿಂದುಂಟಾದ ಬೆಂಕಿಗೆ ಸಿಕ್ಕಿ ಶಿವ, ವಿಷ್ಣು ಇವರಿಬ್ಬರೂ ಮೂರ್ಛಾಕ್ರಾಂತರಾದರು. ಅನಂತರ ಲಕ್ಷ್ಮಿಯು ಬಾಣಗಳನ್ನು ಪ್ರಯೋಗಿಸಿ ಗೌರಿಯ ದಿವ್ಯವಾದ ಧನುಸ್ಸನ್ನು ಕತ್ತರಿಸಿದಳು. ॥೭೩॥

ಹೃದಿ ವಿವ್ಯಾಧ ನಿಶಿತ ಶರೇಣಾಽನತ ಪರ್ವಣಾ ।
ಹೃದಯಾಚ್ಛರಸಂವಿದ್ಧಾದ್ರುಧಿರಂ ಬಹು ನಿರ್ಯಯೌ ॥೨೪॥

ಗಾಢವಿದ್ಧಾ ಮೂರ್ಛಿತಾಽಭೂದ್ಗೌರೀ ತಸ್ಮಿನ್ಮಹಾರಣೇ ।
ಶೋಣಿತಂ ಹೃದಯಾತ್ತಸ್ಯಾ ನಿರ್ಗತಂ ಯದ್ರಣಾಽಜಿರೇ ॥೨೫॥

ಪ್ರಳಯಾಽಗ್ನಿರಿವಾಽತ್ಯಂತಂ ಪ್ರಜಜ್ವಾಲ ಸಮಂತತಃ ।
ತಜ್ಜ್ವಾಲಾಭಿಃ ಸಮಾಕೀರ್ಣಂ ಜಗನ್ನಾಶೋನ್ಮುಖಂ ಬಭೌ ॥೨೬॥

ತದಾ ಬ್ರಹ್ಮಾ ರಮಾಂ ಸ್ತೋತು ಮುಪಾಽಕ್ರಮತ್ ಕೃತಾಽಂಜಲಿಃ ।
ಭೀತೋ ಜಗನ್ನಿಧನತ ಸ್ತಾಂ ಕ್ಷಮಾಪಯಿತುಂ ವಿಧಿಃ ॥೨೭॥

ಜಯ ಲಕ್ಷ್ಮಿ ಮಹಾದೇವಿ ಜಯ ಸಂಪದಧೀಶ್ವರಿ ।
ಜಯ ಪದ್ಮಾಲಯೇ ಮಾತ ರ್ಜಯ ನಾರಾಯಣಪ್ರಿಯೇ ॥೨೮॥

---

ಲಕ್ಷ್ಮಿಯು ಸ್ವಲ್ಪ ಬಾಗಿದ ತುದಿಯುಳ್ಳ ತೀಕ್ಷ್ಣವಾದ ಬಾಣವನ್ನು ಗೌರಿಯ ಹೃದಯಕ್ಕೆ ಹೊಡೆದಳು ಬಾಣದ ಪೆಟ್ಟಿಗೆ ಸಿಕ್ಕಿದ ಗೌರಿಯ ಹೃದಯದಿಂದ ರಕ್ತವು ಹೆಚ್ಚಾಗಿ ಹೊರಗೆ ಹೊರಟಿತು. ||೨೪||

ಲಕ್ಷ್ಮಿಯ ಬಾಣದಿಂದ ಬಹಳ ಬಿರುಸಾಗಿ ಹೊಡೆಯಲ್ಪಟ್ಟ ಗೌರಿಯು ಆ ಮಹಾ ಯುದ್ಧದಲ್ಲಿ ಮೂರ್ಛಾಕ್ರಾಂತಳಾದಳು. ಆ ರಣಾಂಗಣದಲ್ಲಿ ಗೌರಿಯ ಹೃದಯದಿಂದ ಹೊರಟುಬಂದ ರಕ್ತವು ಎಲ್ಲಾ ಕಡೆಯಲ್ಲಿಯೂ, ಪ್ರಳಯ ಕಾಲದ ಬೆಂಕಿಯೋಪಾದಿಯಲ್ಲಿ ಪ್ರಜ್ವಲಿಸಿತು. ಅದರ ಜ್ವಾಲೆಗಳಿಂದ ವ್ಯಾಪಿಸಲ್ಪಟ್ಟ ಜಗತ್ತು ಇನ್ನೇನು ನಾಶವಾಗುವುದೋ ಎಂದು ತೋರಿತು. ||೨೫-೨೬||

ಆಗ ಬ್ರಹ್ಮನು ಜಗತ್ತು ನಾಶವಾಗುವುದೆಂಬ ಭೀತಿಯಿಂದ ಲಕ್ಷ್ಮಿಯ ಕ್ಷಮೆಯನ್ನು ಬೇಡಲು ತಾನು ಕೈಜೋಡಿಸಿಕೊಂಡು ಆಕೆಯನ್ನು ಸ್ತೋತ್ರಮಾಡಲು ಉಪಕ್ರಮಿಸಿದನು. ||೨೭||

ಎಲೌ ಮಹಾದೇವಿಯಾದ ಲಕ್ಷ್ಮಿಯೇ, ನಿನಗೆ ಜಯವಾಗಲಿ. ಸಂಪತ್ತಿಗೆ ಅಧಿದೇವತೆಯೂ, ಕಮಲದಲ್ಲಿ ವಾಸಮಾಡುವವಳೂ, ಲೋಕಮಾತೆಯೂ ನಾರಾಯಣನ ಪ್ರಿಯಳೂ, ಆದ ಲಕ್ಷ್ಮೀದೇವಿಯೇ, ನಿನಗೆ ಜಯವಾಗಲಿ. ||೨೮||

ಸಕೃತ್ಸನ್ನತಿಮಾತ್ರೇಣ ಭಕ್ತ್ಯಾ ದಾರಿದ್ರ್ಯನಾಶಿನಿ।
ಜಗತೋ ಹರ ಭೀತಿಂ ತ್ವಂ ನಾರಾಯಣಿ ನಮೋಽಸ್ತು ತೇ ॥೮೦॥

ಜಗತಾಂ ಜನಯಿತ್ರೀ ತ್ವಂ ಪಾಲಯಿತ್ರೀ ಹರಿಪ್ರಿಯಾ।
ಸಂಹಾರಿಣೀ ರುದ್ರರೂಪಾ ನಾರಾಯಣಿ ನಮೋಽಸ್ತು ತೇ ॥೮೧॥

ಪದ್ಮಾಽಸ್ಯೇ ಪದ್ಮನಿಲಯೇ ಪದ್ಮಕಿಂಜಲ್ಕವರ್ಣಿನೀ।
ಪದ್ಮಪ್ರಿಯೇ ಪದ್ಮಪದೇ ನಾರಾಯಣಿ ನಮೋಽಸ್ತು ತೇ ॥೮೨॥

ತ್ರಾಹಿ ತ್ರಾಹಿ ಕೃಪಾಮೂರ್ತೇ ಜಗದ್ವಿಧ್ವಂಸನಾದಿತಃ।
ಕೃಪಯಾ ರಕ್ಷ ಜಗತೀಂ ನಾರಾಯಣಿ ನಮೋಽಸ್ತು ತೇ ॥೮೩॥

---

ನೀನು ಎಲ್ಲಾ ಜಗತ್ತಿಗೂ ರಕ್ಷಕಳೂ, ಭಯಗೊಂಡವರ ಭಯವನ್ನು ಹೋಗಲಾಡಿಸುವವಳೂ, ಭಕ್ತರ ಕಷ್ಟಗಳನ್ನು ನಿವಾರಣೆ ಮಾಡುವವಳೂ, ನಾರಾಯಣನ ಪತ್ನಿಯೂ, ಆಗಿದ್ದೀಯೆ. ಇಂಥಾ ನಿನಗೆ ನಮಸ್ಕಾರಗಳು ॥೭೯॥

ಭಕ್ತರು ಒಂದಾವೃತ್ತಿ ನಿನ್ನನ್ನು ನಮಸ್ಕರಿಸಿದರೂ ಅವರ ಬಡತನವೆಲ್ಲವನ್ನೂ ನಾಶಮಾಡುತ್ತೀಯೆ. ಎಲೌ ನಾರಾಯಣನ ಪತ್ನಿಯಾದ ದೇವಿಯೇ, ನೀನು ದಯವಿಟ್ಟು ಜಗತ್ತಿಗೆ ಉಂಟಾಗಿರುವ ಭಯವನ್ನು ತೊಲಗಿಸು. ನಿನಗೆ ಅನೇಕ ನಮಸ್ಕಾರಗಳು. ॥೮೦॥

ನೀನು ಜಗತ್ತನ್ನು ಸೃಜಿಸಿದವಳೂ, ಅದರ ರಕ್ಷಗಳೂ, ವಿಷ್ಣುವಿಗೆ ಪ್ರಿಯಳೂ, ಜಗತ್ತಿನ ಸಂಹಾರಕಳೂ, ಭಯಂಕರಸ್ವರೂಪಳೂ, ನಾರಾಯಣ ಪ್ರಿಯೆಯೂ, ಆಗಿದ್ದೀಯೆ; ನಿನಗೆ ನಮಸ್ಕಾರಗಳು. ॥೮೧॥

ನೀನು ಕಮಲಮುಖಿಯೂ, ಕಮಲವಾಸಿನಿಯೂ, ಕಮಲದ ಕೇಸರದಂತೆ ಬಣ್ಣವುಳ್ಳವಳೂ, ಕಮಲದಲ್ಲಿ ಪ್ರೀತಿಯುಳ್ಳವಳೂ, ಕಮಲದಂತಿರುವ ಪಾದಗಳುಳ್ಳವಳೂ, ನಾರಾಯಣ ಪ್ರಿಯೆಯೂ ಆಗಿದ್ದೀಯೆ. ನಿನಗೆ ನಮಸ್ಕಾರಗಳು. ॥೮೨॥

ಎಲೌ ಕರುಣಾಪೂರ್ಣವಾದ ಸ್ವರೂಪವುಳ್ಳ ದೇವಿಯೇ, ಪ್ರಪಂಚವನ್ನು ನಾಶವೇ ಮೊದಲಾದ ಅನಿಷ್ಟಗಳಿಂದ ಪಾರುಮಾಡು. ಎಲೌ ನಾರಾಯಣ ಪ್ರಿಯೆಯಾದ ದೇವಿಯೇ, ದಯವಿಟ್ಟು ಜಗತ್ತನ್ನು ಕಾಪಾಡು. ನಿನಗೆ ಅನೇಕ ನಮಸ್ಕಾರಗಳು. ॥೮೩॥

ಇತಿ ಸ್ತುತ್ವಾ ಚತುರ್ವಕ್ತ್ರೋ ದಂಡವತ್ಪತಿತೋ ಭುವಿ ।
ಇಂದ್ರಾದ್ಯಾ ನಿಖಿಲಾ ದೇವಾಃ ಸಿದ್ಧವಿದ್ಯಾಧರಾದಿಕಾಃ ॥೮೪॥

ತ್ರಾಹಿ ದೇವಿ ಮಹಾಲಕ್ಷ್ಮೀ ತ್ಯೇವ ಮುಚ್ಚುಕ್ರುಶುರ್ಭೃಶಂ ।
ಮಹಾಗ್ನೇರ್ವಿಬುಧಾನ್ದೃಷ್ಟ್ವಾ ಮಿತ್ರಸ್ತಾನ್ ಶರಣಾಗತಾನ್ ॥೮೫॥

ವಿಧಿಸ್ತುತ್ಯಾ ಚ ತರಸಾ ಪ್ರಸನ್ನಾ ಚಾ ಭವತ್ ಕ್ಷಣಾತ್ ।
ಮಾ ಬಿಭ್ಯಥೇತಿ ತಾನ್ ದೇವಾನುಕ್ತ್ವಾ ತಾನ್ ಪರಮೇಶ್ವರೀ ॥೮೬॥

ತಮಗ್ನಿಂ ರುಧಿರೋದ್ಭೂತಂ ಭಕ್ಷಯಾಮಾಸ ವೈ ಕ್ಷಣಾತ್ ।
ಅಗ್ನಿಜ್ವಾಲಾ ವಿನಿರ್ದಗ್ಧಾನ್ ದೇವಾನ್ಮರ್ತ್ಯಾನಪೀತರಾನ್ ॥೮೭॥

ದೃಷ್ಟ್ವಾ ಪೀಯೂಷ ವರ್ಷಿಣ್ಯಾ ಜೀವಯಾಮಾಸ ಚ ಕ್ಷಣಾತ್ ।
ಅಥ ವಿಷ್ಣು ಶಿವೌ ಚಾಪಿ ಮೂರ್ಛಾಮುಕ್ತೌ ಸಮುತ್ಥಿತೌ ॥೮೮॥

---

ಬ್ರಹ್ಮನು ಈ ರೀತಿಯಲ್ಲಿ ಲಕ್ಷ್ಮೀದೇವಿಯನ್ನು ಸ್ತೋತ್ರಮಾಡಿ, ಭೂಮಿಯ ಮೇಲೆ ದಂಡಾಕಾರವಾಗಿ ಪ್ರಣಾಮಮಾಡಿದನು. ಇಂದ್ರಾದಿ ಸಮಸ್ತ ದೇವತೆಗಳೂ ಸಿದ್ಧರು, ವಿದ್ಯಾಧರರೇ ಮೊದಲಾದವರೂ ನಮಸ್ಕಾರಮಾಡಿದರು. ॥೮೪॥

ಇಂದ್ರಾದಿದೇವತೆಗಳೆಲ್ಲರೂ "ಎಲೌ ದೇವಿಯೇ, ಮಹಾಲಕ್ಷ್ಮಿಯೇ, ನಮ್ಮನ್ನು ದಯವಿಟ್ಟು ಕಾಪಾಡು" ಎಂದು ಗಟ್ಟಿಯಾಗಿ ಕೂಗುತ್ತಾ ಪ್ರಾರ್ಥಿಸಿದರು. ಗೌರಿಯ ರಕ್ತದಿಂದ ಹುಟ್ಟಿದ್ದ ದೊಡ್ಡ ಅಗ್ನಿಯ ಜ್ವಾಲೆಗೆ ಹೆದರಿ ಶರಣಾಗತರಾಗಿ ಬಂದ ದೇವತೆಗಳನ್ನು ನೋಡಿ ಮತ್ತು ಬ್ರಹ್ಮನ ಸ್ತೋತ್ರವನ್ನೂ ಗಮನಿಸಿ, ಆಕೆಯು ಅವರೆಲ್ಲರಿಗೂ ಶೀಘ್ರವಾಗಿ ತನ್ನ ಮೆಚ್ಚಿಗೆಯನ್ನು ತೋರಿಸಿದಳು. ಅಲ್ಲದೇ ಪರಮೇಶ್ವರಿಯಾದ ಆಕೆಯು, ಎಲೈ ದೇವತೆಗಳೇ, ಹೆದರಬೇಡಿ. ಎಂದು ಅವರಿಗೆ ಹೇಳಿದಳು. ॥೮೫-೮೬॥

ಲಕ್ಷ್ಮಿಯು ರಕ್ತದಿಂದ ಹುಟ್ಟಿದ ಆ ಅಗ್ನಿಯನ್ನು ಕ್ಷಣಕಾಲದಲ್ಲಿಯೇ ತಾನು ನುಂಗಿಬಿಟ್ಟಳು ! ಅಲ್ಲದೇ ಆಕೆಯು ಅಗ್ನಿಜ್ವಾಲೆಯಿಂದ ಸುಡಲ್ಪಟ್ಟಿದ್ದ ದೇವತೆಗಳೂ, ಮನುಷ್ಯರೂ ಮತ್ತು ಇತರರನ್ನೂ ತನ್ನ ಅಮೃತವರ್ಷವನ್ನು ಸುರಿಸುವ ದೃಷ್ಟಿಯಿಂದ ನೋಡಿ ಒಂದು ಕ್ಷಣಕಾಲದಲ್ಲೇ ಬದುಕಿಸಿದಳು. ಅನಂತರದಲ್ಲಿ ವಿಷ್ಣು ಮತ್ತು ಶಿವ ಇವರಿಬ್ಬರೂ ಮೂರ್ಛೆಯಿಂದ ತಿಳಿದೆದ್ದರು. ॥೮೭-೮೮॥

ತೇ ಸರ್ವೇ ದದೃಶುರ್ಲಕ್ಷ್ಮೀಂ ರುಧಿರೋತ್ಥಾಗ್ನಿಭಕ್ಷಣಾತ್ ।
ಜ್ವಾಲಾಮಾಲಾಂ ವಿಮುಂಚಂತೀಂ ರೋಮಕೂಪೇಭ್ಯ ಆತತಾಂ ॥೮೯॥

ವಿಮುಕ್ತಾ ಮೂರ್ಛಯಾ ಸಾಽಪಿ ಗೌರೀ ಶಂಕರವಲ್ಲಭಾ ।
ಕ್ರೋಧಾದಗ್ನಿಂ ಮಹಾಜ್ವಾಲಂ ವಮಂತೀಂ ಪರ್ಯುಪಸ್ಥಿತಾ ॥೯೦॥

ದೃಷ್ಟ್ವಾ ಲಕ್ಷ್ಮೀಂ ರಮಾಂ ಚಾಽಪಿ ಕ್ರೋಧವ್ಯಾಕುಲಿತೇಕ್ಷಣಾಂ ।
ತಯೋಃ ಸಮಾಧಾನಹೇತೋಃ ಬ್ರಹ್ಮವಿಷ್ಣುಶಿವಾಸ್ತದಾ ॥೯೧॥

ಭಾರತೀಂ ಪ್ರೇಷಯಾಮಾಸುಃ ಪ್ರಸಾದ್ಯ ವಿಧಿವಲ್ಲಭಾಂ ।
ಸಾ ಸಮಾಗತ್ಯ ತರಸಾ ಭವಾನೀಂ ಚ ಹರಿಪ್ರಿಯಾಂ ॥೯೨॥

ಸಮಾದಾಯ ಸ್ವಪಾಣಿಭ್ಯಾಂ ಅಕರೋನ್ಮೇಲನಂ ತಯೋಃ ।
ಹೇ ರಮೇ ಹೇ ಭವಾನಿ ತ್ವಂ ಶೃಣು ಮದ್ವಚನಂ ಶುಭಂ ॥೯೩॥

---

ಅವರೆಲ್ಲರೂ ರಕ್ತದಿಂದ ಹುಟ್ಟಿದ್ದ ಅಗ್ನಿಯನ್ನು ನುಂಗಿದುದರಿಂದ ಜ್ವಾಲೆಗಳ ಸಮೂಹವನ್ನೇ ಹೊರಗೆ ಬಿಡುತ್ತಿರುವ ರೋಮಕೂಪಗಳಿಂದ ವ್ಯಾಪಿಸಲ್ಪಟ್ಟ ಶರೀರವುಳ್ಳ ಲಕ್ಷ್ಮಿಯನ್ನು ನೋಡಿದರು. ॥೮೯॥

ಶಿವನ ಪತ್ನಿಯಾದ ಗೌರಿಯೂ ಕೂಡ ಮೂರ್ಛೆಯಿಂದ ಬಿಡಲ್ಪಟ್ಟವಳಾಗಿ ರೋಮಕೂಪದಿಂದ ಮಹಾಜ್ವಾಲೆಗಳುಳ್ಳ ಅಗ್ನಿಯನ್ನು ಕಾರುತ್ತಾ ಇರುವ ಲಕ್ಷ್ಮಿಯ ಸಮೀಪಕ್ಕೆ ಬಂದಳು. ॥೯೦॥

ಆಗ ಕೋಪದಿಂದ ವಿಕಾರವಾದ ಕಣ್ಣುಗಳುಳ್ಳ ಲಕ್ಷ್ಮಿಯನ್ನು ನೋಡಿ ಅವರಿಬ್ಬರನ್ನೂ ಸಮಾಧಾನಮಾಡಲು ಬ್ರಹ್ಮ, ವಿಷ್ಣು ಮತ್ತು ಶಿವ, ಈ ಮೂವರೂ ಬ್ರಹ್ಮನ ಪತ್ನಿಯಾದ ಸರಸ್ವತಿಯನ್ನು ಮೆಚ್ಚಿಸಿ, ಲಕ್ಷ್ಮೀ ಮತ್ತು ಗೌರಿಯರ ಸಮೀಪಕ್ಕೆ ಆಕೆಯನ್ನು ಕಳುಹಿಸಿದರು. ಸರಸ್ವತಿಯು ಜಾಗ್ರತೆಯಾಗಿ ಬಂದು ವಿಷ್ಣುಪತ್ನಿಯಾದ ಲಕ್ಷ್ಮಿಯನ್ನೂ ಮತ್ತು ಶಿವಪತ್ನಿಯಾದ ಗೌರಿಯನ್ನೂ ತನ್ನ ಕೈಗಳಿಂದ ಹಿಡಿದುಕೊಂಡು ಅವರಿಬ್ಬರೂ ಮಿಳಿತವಾಗುವಂತೆ ಮಾಡಿದಳು. ಅನಂತರ ಸರಸ್ವತಿಯು ಅವರನ್ನು ಕುರಿತು, "ಎಲೌ ಲಕ್ಷ್ಮಿ ಮತ್ತು ಗೌರಿಯರೇ, ನನ್ನ ಮಂಗಳಕರವಾದ ಮಾತುಗಳನ್ನು ಕೇಳಿ" ಎಂದು ಹೇಳಿದಳು. ॥೯೧-೯೨-೯೩॥

ಅನರ್ಹಮೇತದ್ಯುವಯೋಃ ಕ್ರೋಧಂ ಲೋಕಸ್ಯ ನಾಶನಂ ।
ಸಮಾಧಾನಂ ವಿಧಾಸ್ಯೇಽಹಂ ಶಾಪಾನಾಂ ಚ ಪರಸ್ಪರಂ ॥೯೪॥

ಗೌರ್ಯಾಃ ಶಾಪಾದೇಷ ಕಾಮಃ ಶಿವಾದ್ಭಸ್ಮೀ ಭವಿಷ್ಯತಿ ।
ಪುನರುಜ್ಜೀವನಂ ಪ್ರಾಪ್ಯ ಗೌರ್ಯಾಃ ಪ್ರಿಯನಿಮಿತ್ತಕಃ ॥೯೫॥

ಶಿವಂ ಜೇಷ್ಯತಿ ಹೇ ಗೌರಿ ತವ ದೇಹಾಂತರೇ ಪುನಃ ।
ಭರ್ತೃನಿಂದಾ ಶ್ರವಣತೋ ಭಸ್ಮೀಭಾವೋ ಭವಿಷ್ಯತಿ ॥೯೬॥

ರಮೇ ತವಾಽಪಿ ಸಾಪತ್ನ್ಯ ದುಃಖಾಚ್ಛೀಘ್ರಂ ಕಲೇಬರಂ ।
ವಿನಷ್ಟಂ ಸತ್ಪುನಶ್ಚಾರುತರಂ ಸ್ಯಾಚ್ಚ ಕಲೇಬರಂ ॥೯೭॥

ಅಂಶಾಽವತಾರೇ ಚ ತವ ಭರ್ತ್ರಾ ಸ್ಯಾಚ್ಚ ವಿಯುಕ್ತತಾ ।
ಮೋಹಂ ಪರಿತ್ಯಜ್ಯ ಪರಂ ಸ್ವರೂಪಂ ಪರಿಚಿಂತಯ ॥೯೮॥

---

ನೀವಿಬ್ಬರೂ ಹೀಗೆ ಕೋಪಗೊಂಡಿರುವುದು ಅನುಚಿತವು. ಮತ್ತು ಇದು ಲೋಕಕ್ಕೆ ನಾಶಕವು. ಆದ್ದರಿಂದ ನಾನು ನಿಮ್ಮನ್ನು ಸಮಾಧಾನಗೊಳಿಸುವೆನು. ಮತ್ತು ನೀವಿಬ್ಬರೂ ಕೊಟ್ಟ ಶಾಪಗಳಿಗೂ ವಿಮೋಚನೆಯನ್ನು ಹೇಳುವೆನು. ||೯೪||

ಗೌರಿಯ ಶಾಪದಿಂದ ಮನ್ಮಥನು ಶಿವನಿಂದ ಬೂದಿಮಾಡಲ್ಪಡುವನು. ಪಾರ್ವತಿಯ ಇಷ್ಟ ನೆರವೇರುವುದಕ್ಕಾಗಿ ಪುನಃ ಇವನು ಬದುಕಿ ಶಿವನನ್ನು ಜಯಿಸುವನು. ಎಲೌ ಗೌರಿಯೇ, ನೀನು ಬೇರೆಯ ದೇಹವನ್ನು ತೆಗೆದುಕೊಂಡಿರುವಾಗ ನಿನ್ನ ಪತಿಯ ನಿಂದೆಯನ್ನು ಕೇಳಿ ನೀನು ಬೂದಿಯಾಗುವೆ. ||೯೫-೯೬||

ಎಲೌ ಲಕ್ಷ್ಮಿಯೇ, ಸವತಿಯ ನಿಮಿತ್ತವಾಗಿ ಉಂಟಾದ ದುಃಖದಿಂದ ಶೀಘ್ರವಾಗಿಯೇ ನಿನ್ನ ದೇಹವು ನಷ್ಟವಾಗಿ ಪುನಃ ಇನ್ನೂ ಹೆಚ್ಚು ಮನೋಹರವಾದ ದೇಹವು ಬರುವುದು. ಅಲ್ಲದೇ ನಿನ್ನ ಗಂಡನು ತನ್ನ ಅಂಶದಿಂದ ಅವತಾರ ಮಾಡುವ ಕಾಲಗಳಲ್ಲಿ ಅವನ ವಿಯೋಗವೂ ನಿನಗೆ ಪ್ರಾಪ್ತವಾಗುವುದು. ಆದ್ದರಿಂದ ನೀನು ಮೋಹವನ್ನು ಬಿಟ್ಟು ಮುಂದಾಗುವ ನಿನ್ನ ಉತ್ತಮಸ್ವರೂಪವನ್ನೇ ಚಿಂತಿಸು. ||೯೭-೯೮||

ಇತಿ ವಾಣೀ ವಚಃ ಶ್ರುತ್ವಾ ಗೌರೀ ಚ ಹರಿವಲ್ಲಭಾ ।
ಪ್ರಕೃತಿಸ್ಥಾ ತಮೋಭಾವಂ ತ್ಯಕ್ತ್ವಾ ಶಾಂತಿಂ ಪರಾಂ ಯಯೌ॥೯೯॥

ಇತಿ ತೇ ರಾಮ ಸಂಪ್ರೋಕ್ತಂ ರಮಾಽಽಖ್ಯಾನಂ ಶುಭೋದಯಂ ।
ಯ ಏತತ್ ಶೃಣುಯಾತ್ತಸ್ಯ ರಮಾ ಸ್ಯಾದ್ವಾಂಛಿತಾಽರ್ಥದಾ ॥೧೦೦॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಏಕವಿಂಶತಿತಮೋಽಧ್ಯಾಯಃ

---

ಸರಸ್ವತಿಯು ಹೇಳಿದ ಈ ಮಾತನ್ನು ಕೇಳಿ ಗೌರಿಯೂ, ಲಕ್ಷ್ಮಿಯೂ, ಸಮಾಧಾನವನ್ನು ಹೊಂದಿ ಅಜ್ಞಾನಪೂರ್ಣವಾದ ಆಗಿನ ಸ್ವಭಾವವನ್ನು ತೊರೆದು ಬಹಳ ಶಾಂತಿಯನ್ನು ಹೊಂದಿದರು. ॥೯೯॥

ಎಲೈ ಪರಶುರಾಮನೇ, ನಾನು ಬಹಳ ಮಂಗಳಕರವಾದ ಲಕ್ಷ್ಮಿಯ ಆಖ್ಯಾನವನ್ನು ನಿನಗೆ ಹೇಳಿದ್ದೇನೆ. ಈ ಉಪಾಖ್ಯಾನವನ್ನು ಯಾರು ಕೇಳುವರೋ ಅವರಿಗೆ ಲಕ್ಷ್ಮಿಯು ಸಕಲ ಇಷ್ಟಾರ್ಥಗಳನ್ನೂ ಕೊಡುವಳು. ॥೧೦೦॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ದ್ವಾವಿಂಶೋಽಧ್ಯಾಯಃ ॥

### ಇಪ್ಪತ್ತೆರಡನೆಯ ಅಧ್ಯಾಯವು

ಇತಿ ಶ್ರುತ್ವಾ ಮಹಾಽಖ್ಯಾನಂ ಜಾಮದಗ್ನ್ಯೋ ಮಹಾಶಯಃ ।
ದತ್ತಾತ್ರೇಯಂ ಪುನಃ ಪ್ರಾಹ ವಿಸ್ಮಿತೋಽತ್ಯದ್ಭುತಶ್ರುತೇಃ ॥೧॥

ಶ್ರೀಗುರೋ ಭವತಾ ಪ್ರೋಕ್ತಮಾಖ್ಯಾನಮತಿಶೋಭನಂ ।
ರಮಾಯಾಶ್ಚಿತ್ರಿತಂ ಸರ್ವ ವಿಸ್ಮಾಪನಕರಂ ತಥಾ ॥೨॥

ಕಥಂ ಲಕ್ಷ್ಮೀಃ ಭರ್ತೃರತಾ ವಿಯೋಗಾದ್ದುಃಖಿತಾಽಭವತ್ ।
ಸಪತ್ನೀಕೃತದುಃಖಂ ವಾ ದೇಹಾಂತಕರಣಂ ಮಹತ್ ॥೩॥

ಗೌರ್ಯಾಶ್ಚ ಭರ್ತೃನಿಂದಾತೋ ಭಸ್ಮತಾಽಭೂತ್ಕಥಂ ವದ ।
ಕೃಪಯಾ ನಾಥ ಮಯಿ ತತ್ ಸರ್ವಂ ವಕ್ತುಮಿಹಾರ್ಹಸಿ ॥೪॥

---

ಮಹನೀಯನಾದ ಪರಶುರಾಮನು ಇಂಥಾ ಮಹತ್ವವುಳ್ಳ ಲಕ್ಷ್ಮಿಯ ಆಖ್ಯಾನವನ್ನು ಕೇಳಿ, ಅತ್ಯಂತ ಆಶ್ಚರ್ಯಕರವಾದ ಆಖ್ಯಾನಶ್ರವಣದಿಂದ ಆಶ್ಚರ್ಯಪಟ್ಟು ಪುನಃ ದತ್ತಾತ್ರೇಯನನ್ನು ಕುರಿತು ಈರೀತಿಯಲ್ಲಿ ಕೇಳಿದನು. ॥೧॥

ಓ ಗುರುವೇ, ತಾವು ಈಗ ವರ್ಣಿಸಿದ ಲಕ್ಷ್ಮಿಯ ಆಖ್ಯಾನವು ಬಹಳ ಮಂಗಳಕರವೂ ಮತ್ತು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವಂಥಾದ್ದೂ ಆಗಿದೆ.॥೨॥

ಲಕ್ಷ್ಮಿಯು ಪತಿಯಲ್ಲಿ ಆಸಕ್ತಿಯುಳ್ಳವಳಾದಾಗ್ಯೂ ಅವಳಿಗೆ ಅವನ ವಿಯೋಗ ದುಃಖವು ಹೇಗೆ ಉಂಟಾಯಿತು ? ಮತ್ತು ಆಕೆಯು ಸವತಿಯಿಂದ ದುಃಖಕ್ಕೊಳಗಾದ ಬಗೆ ಹೇಗೆ ? ಮತ್ತು ಲಕ್ಷ್ಮಿಯು ಅದಕ್ಕಾಗಿ ಹೇಗೆ ಮೃತಿಯನ್ನು ಐದಿದಳು ? ಗೌರಿಯು ಪತಿಯ ನಿಂದೆಯನ್ನು ಕೇಳಿದುದರಿಂದ ಹೇಗೆ ಬೂದಿಯಾದಳು ? ಈ

ಇತ್ಯರ್ಥಿತೋ ಭಾರ್ಗವೇಣ ಪ್ರೀತಃ ಪ್ರಾಹ ದಯಾನಿಧಿಃ ।
ಶೃಣು ರಾಮ ಪುರಾವೃತ್ತಮಾಖ್ಯಾಸ್ಯೇ ಸಂಯತೋ ಭವ ॥೫॥

ಪುರಾ ವಿಷ್ಣುರ್ಮಹಾಲಕ್ಷ್ಮ್ಯಾ ವೈಕುಂಠೇ ಸಂಸ್ಥಿತೋಽಭವತ್ ।
ವೃಂದಾಂ ಭೂಮಿಂ ಚ ಸಂತುಷ್ಟಃ ಸ್ವೀಚಕಾರಾತಿ ಭಕ್ತಿತಃ ॥೬॥

ತಾಭ್ಯಾಂ ಚಿರಂ ಪೂಜಿತೋ ವೈ ಲಕ್ಷ್ಮ್ಯಾಃ ಕೋಪೇನ ಶಂಕಿತಃ ।
ಪರೋಕ್ಷಂ ರಮತೇ ತಾಭ್ಯಾಮೇವಂ ಚಿರತರಂ ಹ್ಯಭೂತ್ ॥೭॥

ಲಕ್ಷ್ಮ್ಯಾಪಿ ವಿದಿತಂ ಚೈತತ್ಪೃಷ್ಟ ಆಚ್ಛಾದಯದ್ಧರಿಃ ।
ಅಥ ಕಾಲೇನ ಮಹತಾ ಕದಾಚಿತ್ಪಾರ್ಷದೈರ್ಯುತಾ ॥೮॥

---

ಎಲ್ಲಾ ಪ್ರಶ್ನೆಗಳಿಗೂ ತಾವು ನನ್ನಮೇಲಿನ ಕೃಪೆಯಿಂದ ದಯವಿಟ್ಟು ಸಮಾಧಾನ ವನ್ನೀಯಬೇಕು. ॥೩-೪॥

ಪರಶುರಾಮನು ಈರೀತಿಯಲ್ಲಿ ಪ್ರಾರ್ಥಿಸಲು ಪರಮಕರುಣಾಶಾಲಿಯಾದ ದತ್ತಾತ್ರೇಯನು ಬಹಳ ಸಂತೋಷಪಟ್ಟು ಅವನನ್ನು ಕುರಿತು, ಎಲೈ ಪರಶುರಾಮನೇ, ಹಿಂದೆ ನಡೆದ ವೃತ್ತಾಂತವನ್ನು ಹೇಳುವೆನು. ಏಕಾಗ್ರಮನಸ್ಸಿನಿಂದ ನೀನು ಕೇಳು ವವನಾಗು. ಎಂದು ಹೇಳಿದನು. ॥೫॥

ಹಿಂದೆ ಶ್ರೀಮಹಾವಿಷ್ಣುವು ಮಹಾಲಕ್ಷ್ಮಿಯೊಂದಿಗೆ ವೈಕುಂಠದಲ್ಲಿ ವಾಸ ವಾಗಿದ್ದನು. ಆಗ ಬೃಂದಾ ಮತ್ತು ಭೂಮಿ ಇವರಿಬ್ಬರೂ ವಿಷ್ಣುವನ್ನು ಭಕ್ತಿಯಿಂದ ಪೂಜಿಸಲಾಗಿ ಬಹಳ ಸಂತೋಷಪಟ್ಟು ಅವರನ್ನು ಸ್ವೀಕರಿಸಿದನು. ॥೬॥

ಅವರಿಬ್ಬರೂ ಮಹಾವಿಷ್ಣುವನ್ನು ಬಹಳಕಾಲ ಪೂಜಿಸಲು ಇವರನ್ನು ಸ್ವೀಕರಿ ಸಿದ್ದರಿಂದ ಲಕ್ಷ್ಮಿಯು ಕೋಪಗೊಂಡಳೆಂಬ ಶಂಕೆಯಿಂದ ವಿಷ್ಣುವು ಅವರೊಂದಿಗೆ ಗುಟ್ಟಾಗಿ ಕ್ರೀಡಿಸುತ್ತಿದ್ದನು. ಹೀಗೆಯೇ ಬಹಳಕಾಲ ಕಳೆಯಿತು. ॥೭॥

ಲಕ್ಷ್ಮಿಗೂ ಈ ವಿಷಯ ಗೊತ್ತಾಯಿತು. ಆಗ ಅವಳು, ಈ ವಿಚಾರವನ್ನು ಕುರಿತು ಪ್ರಶ್ನಿಸಲಾಗಿ ವಿಷ್ಣುವು ಹೇಗೋ ಈ ವಿಷಯವನ್ನು ಮುಚ್ಚಿಬಿಟ್ಟನು. ಹೀಗೆ ಬಹಳಕಾಲ ಕಳೆಯಲು ಒಂದು ದಿನ ಲಕ್ಷ್ಮಿಯು ತನ್ನ ಸಭೆಯವರೊಡನೆ ಕುಳಿತಿರುವಾಗ ಸರಸ್ವತೀದೇವಿಯು ತನ್ನ ಲೋಕಕ್ಕೆ ಬರುವಂತೆ ಆಹ್ವಾನವನ್ನು ಕಳುಹಿಸಿದಳು. ವಿಷ್ಣುವಿನ ಅಪ್ಪಣೆಯನ್ನು ಪಡೆದು ಈಕೆಯು (ಲಕ್ಷ್ಮಿಯು) ಸರಸ್ವತಿಯ ಲೋಕಕ್ಕೆ ತೆರಳಿದಳು. ॥೮॥

ಲಕ್ಷ್ಮ್ಯಾ ವಾಣ್ಯಾ ಸಮಾಹೂತಾ ವಿಷ್ಣುನಾಽಽಜ್ಞಾಪಿತಾ ಯಯೌ ।
ತದಾ ಲಕ್ಷ್ಮ್ಯಾ ವಿಹೀನಃ ಸ ಭೂವೃಂದಾಭ್ಯಾಂ ಚ ಸಂಬಭೌ ॥೯॥

ಕ್ರೀಡನ್ ಸಮಾಸ್ಥಿತಸ್ತಾಭ್ಯಾಂ ಲಾಲಿತೋಽತಿತರಾಂ ಹರಿಃ ।
ತದಾಽಕಸ್ಮಾದ್ರಮಾದೇವೀ ಸಂಪ್ರಾಪ್ತಾ ಸತ್ಯಲೋಕತಃ ॥೧೦॥

ಭೂವೃಂದಾಭ್ಯಾಂ ಸಮಾಲಕ್ಷ್ಯ ಕ್ರೀಡಂತಮತಿಕಾಮುಕಂ ।
ಕ್ರೋಧಾಽಗ್ನಿನಾ ಪ್ರಜಜ್ವಾಲ ಹರಿರಾಲಕ್ಷ್ಯ ಶಂಕಿತಃ ॥೧೧॥

ನಿರ್ಗತಾ ವೈಕುಂಠನಾಮ್ನೋ ಯಯೌ ದ್ರುತತರಂ ರಮಾ ।
ಅನುವ್ರಜ್ಯ ಹರಿಃ ಶೀಘ್ರಂ ಹಿಮಾಽದ್ರೌ ತಾಂ ಪರಾಮೃಶತ್ ॥೧೨॥

ಜಗ್ರಾಹ ದಕ್ಷಹಸ್ತೇ ತಾಂ ಸಾಂತ್ವಯಾಮಾಸ ವೈ ತದಾ ।
ಕ್ರೋಧೇನ ಸಾ ಪ್ರಜ್ವಲಂತೀ ವಹ್ನಿನಾ ಘೃತಪಿಂಡವತ್ ॥೧೩॥

---

ಲಕ್ಷ್ಮಿಯು ಇಲ್ಲದೇ ಇರುವಾಗ ನಾರಾಯಣನು ಭೂಮಿ ಮತ್ತು ಬೃಂದೆಯರೊಡನೆ ಕ್ರೀಡಿಸುತ್ತಾ ವಿಶೇಷವಾಗಿ ಪ್ರಕಾಶಿಸಿದನು. ಅವರಿಬ್ಬರೂ ಅವನನ್ನು ಅತ್ಯಂತವಾಗಿ ವಿನೋದಪಡಿಸಿದರು. ಆಗ ಲಕ್ಷ್ಮಿಯು ಸತ್ಯಲೋಕದಿಂದ ಅಕಸ್ಮಾತ್ತಾಗಿ ಅಲ್ಲಿಗೆ ಬಂದುಬಿಟ್ಟಳು. ॥೯-೧೦॥

ಲಕ್ಷ್ಮಿಯು ತನ್ನ ಪತಿಯಾದ ನಾರಾಯಣನು ಬಹಳ ಕಾಮುಕನಾಗಿ ಭೂಮಿ ಮತ್ತು ಬೃಂದೆಯರೊಡನೆ ಆಟವಾಡುತ್ತಿರುವುದನ್ನು ನೋಡಿ, ಕೋಪಾಗ್ನಿಯಿಂದ ಜ್ವಲಿಸಿದಳು. ನಾರಾಯಣನು ಇದನ್ನು ನೋಡಿ ಆತಂಕಕ್ಕೆ ಒಳಗಾದನು.॥೧೧॥

ಲಕ್ಷ್ಮಿಯು ಬಹಳ ಜಾಗ್ರತೆಯಾಗಿ ವೈಕುಂಠದ ವಾಸಸ್ಥಳವನ್ನು ಬಿಟ್ಟು ಹೊರಟುಹೋದಳು. ವಿಷ್ಣುವೂ ಕೂಡಲೇ ಆಕೆಯನ್ನು ಹಿಂಬಾಲಿಸಿ ಅವಳನ್ನು ಹಿಮವತ್ಪರ್ವತದಲ್ಲಿ ಹಿಡಿದನು. ॥೧೨॥

ವಿಷ್ಣುವು ಆದರದಿಂದದ ತನ್ನ ಕೈಗಳಲ್ಲಿ ಅವಳನ್ನು ಹಿಡಿದುಕೊಂಡು ಸಮಾಧಾನಮಾಡಿದನು. ಆದರೆ ಲಕ್ಷ್ಮಿಯು ಕೋಪಾಗ್ನಿಯಿಂದುರಿಯುತ್ತಾ ಬೆಂಕಿಯಿಂದ ತುಪ್ಪದಗಟ್ಟಿಯಂತೆ ಕರಗಿಹೋದಳು. ॥೧೩॥

ದ್ರವೀಭೂತಾ ಜಲಮಯೀ ಸಂಜಾತಾ ಕಮಲಾಽಲಯಾ ।
ಅಕ್ಷಯಂ ಸಲಿಲಂ ತಚ್ಚ ನದೀರೂಪೇಣ ಚಾಽವಹತ್ ॥೧೪॥

ಸೈವಂ ಪದ್ಮಾಽಭಿಧಾ ಜಾತಾ ನದೀ ಪರಮಪಾವನೀ ।
ನಾರದಸ್ಯ ತು ಶಾಪೇನ ಶುಷ್ಕತೋಯಾಽಭವದ್ಧಿ ಸಾ ॥೧೫॥

ಭಗೀರಥೋಽಪಿ ರಾಜರ್ಷಿಸ್ತಪಸ್ತಪ್ತ್ವಾ ಸುದುಷ್ಕರಂ ।
ಗಂಗಾಂ ರಥಾನುಗಾಂ ಚಕ್ರೇ ರಥಸ್ತನ್ಮಾರ್ಗಜೋ ಯಯೌ ॥೧೬॥

ಗಂಗಯಾ ಸಂಗತಾ ಪದ್ಮಾ ಶಾಪಾನ್ಮುಕ್ತಾ ಯದಾ ಬಭೌ ।
ತದಾ ಪದ್ಮಾ ಗಂಗಯಾ ತು ಮಿಳಿತಾ ಪ್ರವಹಚ್ಚಿರಂ ॥೧೭॥

ಕಾಲಾಽಂತರೇ ವಿಭಕ್ತಾ ಚ ಪ್ರಾಕ್ಸಮುದ್ರೇಣಸಂಗತಾ ।
ಪದ್ಮಾ ಗಂಗಾ ವಿಭೇದೇತು ಸ್ನಾನಾತ್ಸ್ವರ್ಗಮವಾಪ್ನುಯಾತ್॥೧೮॥

---

ಕಮಲವಾಸಿನಿಯಾದ ಲಕ್ಷ್ಮಿಯು ಈರೀತಿಯಲ್ಲಿ ಕರಗಿ ನೀರಾದಳು. ನಾಶವೇ ಇಲ್ಲದ ಆ ನೀರು ನದಿಯರೂಪದಲ್ಲಿ ಪ್ರವಹಿಸಿತು. ॥೧೪॥

ಆ ನೀರು ಪರಮಪವಿತ್ರವಾದ ಪದ್ಮಾ ಎಂಬ ಹೆಸರಿನ ನದಿಯಾಯಿತು. ನಾರದನ ಶಾಪದಿಂದ ಈ ನದಿಯ ನೀರೆಲ್ಲವೂ ಬತ್ತಿಹೋಯಿತು. ॥೧೫॥

ರಾಜರ್ಷಿಯಾದ ಭಗೀರಥನೂ ಕೂಡ ಬಹಳ ಕಠಿಣವಾದ ತಪಸ್ಸನ್ನು ಮಾಡಿ, ಗಂಗೆಯು ತನ್ನ ರಥವನ್ನನುಸರಿಸುವಂತೆ ಮಾಡಿದನು. ಅವನ ರಥವು ಪದ್ಮಾನದಿಯ ಮಾರ್ಗದಲ್ಲಿ ಹೋಯಿತು. ॥೧೬॥

ಗಂಗೆಯೊಡನೆ ಸೇರಿದ ಪದ್ಮಾನದಿಯು ಶಾಪದಿಂದ ಬಿಡುಗಡೆಯನ್ನು ಹೊಂದಿ ಪ್ರಕಾಶಿಸಿತು. ಆಗ ಪದ್ಮಾನದಿಯು ಗಂಗೆಯೊಡನೆ ಸೇರಿ ಬಹಳಕಾಲದವರೆವಿಗೂ ಪ್ರವಹಿಸಿತು. ॥೧೭॥

ಕೆಲವುಕಾಲವಾದಮೇಲೆ ಗಂಗಾ ಪದ್ಮಾ ನದಿಗಳೆರಡೂ ವಿಭಾಗವನ್ನು ಹೊಂದಲು, ಪದ್ಮಾನದಿಯು ಮೊದಲು ಸಮುದ್ರಕ್ಕೆ ಸೇರಿತು. ಈ ಪದ್ಮಾ ಗಂಗಾನದಿಗಳೆರಡೂ ವಿಭಾಗವಾಗುವ ಕಡೆ ಸ್ನಾನವನ್ನು ಮಾಡಿದರೆ ಮನುಷ್ಯನು ಸ್ವರ್ಗವನ್ನು ಹೊಂದುವನು. ॥೧೮॥

ಇತಿ ಶ್ರುತ್ವಾ ಗುರೋರ್ವಾಕ್ಯಂ ರಾಮಃ ಪಪ್ರಚ್ಛ ಸಾದರಂ ।
ಭಗವನ್ ನಾರದೋಽತ್ಯಂತ ಶಾಂತಚಿತ್ತೋ ದಯಾನಿಧಿಃ ॥೧೯॥

ತಸ್ಮಾತ್ತೇನ ನದೀ ಶಪ್ತಾ ವಿಮುಕ್ತಾ ಶಾಪತಃ ಕಥಂ ।
ಏತನ್ಮೇ ಶಂಸ ಭಗವನ್ ಸಂಭಿನ್ನಾ ಗಂಗಯಾ ಕುತಃ ॥೨೦॥

ಏವಂ ಪೃಷ್ಟೋ ಭಾರ್ಗವೇಣ ಪ್ರಾಹ ದತ್ತೋ ಮಹಾಮುನಿಃ ।
ಶೃಣು ರಾಮ ಪುರಾವೃತ್ತಂ ನಾರದಸ್ಯಾತಿಚಿತ್ರತಂ ॥೨೧॥

ಕದಾಚಿನ್ನಾರದೋ ಬ್ರಹ್ಮಲೋಕೇ ಬ್ರಹ್ಮಸಭಾಗತಃ ।
ತತ್ರ ಪ್ರಸಂಗೋ ಗಾಂಧರ್ವವೇದಸ್ಯ ಸಮಜಾಯತ ॥೨೨॥

ತತ್ರ ಗಂಧರ್ವಮುಖ್ಯಾಶ್ಚ ದೇವಾ ಯಕ್ಷಾಶ್ಚ ಕಿನ್ನರಾಃ ।
ಗಾಂಧರ್ವಂ ಸಮುಪಾಕ್ರಾಮುತ್ಪ್ರಶಸ್ತಂ ಚೋತ್ತರೋತ್ತರಂ ॥೨೩॥

---

ಗುರುವು ಹೇಳಿದ ಈ ಮಾತನ್ನು ಕೇಳಿ ಪರಶುರಾಮನು ಭಕ್ತಿಪೂರ್ವಕ ವಾಗಿ ಅವನನ್ನು ಕುರಿತು, ಓ ಪೂಜ್ಯಗುರುಗಳೇ, ನಾರದರು ಬಹಳ ಶಾಂತಚಿತ್ತರೂ ಮತ್ತು ದಯಾನಿಧಿಗಳೂ ಅಲ್ಲವೆ ? ಎಂದು ಪ್ರಶ್ನಿಸಿದನು. ॥೧೯॥

ಹೀಗಿದ್ದಾಗ್ಯೂ ನಾರದರು ಏಕೆ ಪದ್ಮಾನದಿಗೆ ಶಾಪವನ್ನು ಕೊಟ್ಟರು ? ಶಾಪ ವಿಮೋಚನೆಯಾದ ಬಗೆ ಹೇಗೆ ? ಓ ಪೂಜ್ಯರೇ, ಗಂಗೆಯಿಂದ ಪದ್ಮಾನದಿಯು ಹೇಗೆ ಬೇರ್ಪಟ್ಟಿತು ? ಇವೆಲ್ಲವನ್ನೂ ದಯವಿಟ್ಟು ತಿಳಿಸಿರಿ. ॥೨೦॥

ಪರಶುರಾಮನು ಹೀಗೆ ಪ್ರಶ್ನಿಸಲು ಮುನೀಶ್ವರನಾದ ದತ್ತಾತ್ರೇಯನು ಅವನನ್ನು ಕುರಿತು ನಾರದನ ಅತ್ಯಾಶ್ಚರ್ಯಕರವಾದ ಹಿಂದಿನ ನಡವಳಿಕೆಯನ್ನು ಹೇಳುವೆನು. ಕೇಳು. ಎಂದನು. ॥೨೧॥

ಒಂದು ಸಲ ನಾರದನು ಬ್ರಹ್ಮಲೋಕದಲ್ಲಿ ಬ್ರಹ್ಮನ ಸಭೆಗೆ ಬಂದನು. ಅಲ್ಲಿ ಗಾಂಧರ್ವವೇದವಾದ ಸಂಗೀತಶಾಸ್ತ್ರದ ಪ್ರಸಂಗವು ನಡೆಯಿತು. ॥೨೨॥

ಅಲ್ಲಿ ಗಂಧರ್ವಶ್ರೇಷ್ಠರೂ, ದೇವತೆಗಳೂ, ಯಕ್ಷರೂ, ಕಿನ್ನರರೂ, ಸಂಗೀತ ವನ್ನು ಪ್ರಾರಂಭಿಸಿದರು. ಅವರು ಕ್ರಮಕ್ರಮವಾಗಿ ಮುಂದುಮುಂದಿನ ರಾಗ ಗಳನ್ನು ಒಬ್ಬರಿಗಿಂತೊಬ್ಬರು ಹೆಚ್ಚು ಚನ್ನಾಗಿ ಹಾಡಿದರು. ॥೨೩॥

ವೀಣಾಯಾಂ ಮೂರ್ಛಯದ್ರಾಗಂ ನಾರದಶ್ಚಾಽಪಿ ತಂ ತದಾ ।
ತದ್ರಾಗಸ್ಯ ಮೂರ್ಛನಯಾ ಸರ್ವೇ ಬ್ರಹ್ಮಸಭಾಸದಃ ॥೨೪॥

ನಾದಬ್ರಹ್ಮಣಿ ಸಂಲೀನಾಃ ಪ್ರಾಪುರ್ನಿರ್ವಾಣವತ್ಸುಖಂ ।
ಪ್ರಶಂಸುರ್ನಾರದಂ ಸರ್ವೇ ಸಾಧುಸಾಧ್ವಿತಿ ವೈ ತದಾ ॥೨೫॥

ಅಥ ವಾಣೀ ಕಚ್ಛಪೀಂ ಸ್ವಾಂ ರಾಗಮೂರ್ಛನಕೋವಿದಾ ।
ಅವಾದಯತ್ತದ್ಗತಿಂ ತು ನಾರದಾದ್ಯಾಶ್ಚ ನೋ ವಿದುಃ ॥೨೬॥

ಅಂತೇ ಸಭಾ ವಿಸೃಷ್ಟಾಽಭೂನ್ನಾರದೋ ನಿರ್ಗತಸ್ತತಃ ।
ಸರಸ್ವತ್ಯಾ ಗತಿಂ ತಾಂ ತು ಚಿಂತಯನ್ ಪಥಿ ಸಂಯಯೌ ॥೨೭॥

ನಾರದೇನ ನ ವಿದಿತಾ ಸಾ ಗತಿಃ ಸರ್ವತೋತ್ತಮಾ ।
ಪದ್ಮಾತೀರೇ ಸಮಾಗತ್ಯ ನಾರದೋ ನಿರ್ಜನೇವನೇ ॥೨೮॥

---

ಆಗ ನಾರದನೂ ಕೂಡ ಆಯಾಯ ರಾಗಗಳನ್ನು ವೀಣೆಯಲ್ಲಿ ನುಡಿಸಿದನು. ಆಗ ಬ್ರಹ್ಮನ ಆಸ್ಥಾನದಲ್ಲಿದ್ದವರೆಲ್ಲರೂ ನಾರದನ ರಾಗಾಲಾಪನೆಯಿಂದಲೂ ಮತ್ತು ವೀಣಾನಾದದಿಂದಲೂ ಬಹಳ ಸಂತೋಷಪಟ್ಟು ನಾದಬ್ರಹ್ಮನಲ್ಲಿ ಸಂಪೂರ್ಣವಾಗಿ ಲೀನರಾಗಿ ಮೋಕ್ಷಕ್ಕೆ ಸಮಾನವಾದ ಸುಖವನ್ನು ಹೊಂದಿದರು. ಅಲ್ಲದೇ ಅವರೆಲ್ಲರೂ ನಾರದನು ಭಲೆ, ಭೇಷ್ ಎಂದು ಪ್ರಶಂಸೆಯನ್ನು ಮಾಡಿದರು. ॥೨೪-೨೫॥

ಅನಂತರದಲ್ಲಿ ರಾಗಾಲಾಪನೆಯಲ್ಲಿ ನಿಪುಣಳಾದ ಸರಸ್ವತಿಯು ಕಚ್ಛಪೀ ಎಂಬ ತನ್ನ ವೀಣೆಯನ್ನು ನುಡಿಸಿದಳು. ಸರಸ್ವತಿಯ ಈ ರಾಗದ ಗತಿಯನ್ನು ನಾರದನೇ ಮೊದಲಾದವರು ಗ್ರಹಿಸಲು ಸಮರ್ಥರಾಗಲಿಲ್ಲ. ॥೨೬॥

ಕೊನೆಯಲ್ಲಿ ಸಭೆಯು ಮುಕ್ತಾಯವಾಯಿತು. ಅನಂತರದಲ್ಲಿ ನಾರದನು ಅಲ್ಲಿಂದ ಹೊರಟನು. ಅವನು ಸರಸ್ವತಿಯ ರಾಗದ ರೀತಿಯನ್ನು ಚಿಂತಿಸುತ್ತಾ ದಾರಿಯಲ್ಲಿ ಹೋಗುತ್ತಿದ್ದನು. ॥೨೭॥

ನಾರದನು ಸರಸ್ವತಿಯು ನುಡಿಸಿದ ಸರ್ವೋತ್ಕೃಷ್ಟವಾದ ಆ ಗತಿಯನ್ನು ತಿಳಿಯಲು ಆಗಲೇ ಇಲ್ಲ. ಆಗ ಅವನು ಪದ್ಮಾನದಿಯ ತೀರದಲ್ಲಿರುವ ನಿರ್ಜನವಾದ ಕಾಡಿಗೆ ಬಂದು ಸರಸ್ವತಿಯು ಚೆನ್ನಾಗಿ ನುಡಿಸಿದ ರೀತಿಯಲ್ಲಿ ನುಡಿಸತೊಡಗಿದನು. ಆದರೆ ನಾರದನು ಅಪಶ್ರುತಿಯಾಗಿ ನುಡಿಸಿದ್ದನ್ನು ಕೇಳಿ ಪದ್ಮಾನದಿಯು ಗಟ್ಟಿಯಾಗಿ ನಕ್ಕಳು. ॥೨೮-೨೯॥

ತಾಂ ಗತಿಂ ಮೂರ್ಛಯಾಮಾಸ ಸರಸ್ವತ್ಯಾ ಸುಮೂರ್ಛಿತಾಂ ।
ಅಪಶ್ರುತಿಂ ತತ್ರ ಶ್ರುತ್ವಾ ಜಹಾಸೋಚ್ಚೈಸ್ತದಾ ನದೀ ॥೨೯॥

ನಾರದಃ ಸ್ವೋಪಹಾಸೇನ ಲಜ್ಜಿತೋ ಮನ್ಯುನಾಽಽವೃತಃ ।
ಶಶಾಪ ಪದ್ಮಾಂ ಸರಿತಂ ಯತೋಽಹಂ ಹಸಿತಸ್ತ್ವಯಾ ॥೩೦॥

ತತೋ ನಷ್ಟ ಜಲಾ ತ್ವಂ ವೈ ಭವಿಷ್ಯಸಿ ಸರಿದ್ವರೇ ।
ಇತಿ ಶಾಪಂ ಸುಭೀಮಂ ಸಾ ಶ್ರುತ್ವಾ ತಂ ದಂಡವನ್ನತಾ ॥೩೧॥

ಪ್ರಾರ್ಥಯಾಮಾಸ ಬಹುಧಾ ಶಾಪಸ್ಯಾಂತಂ ತದಾ ನದೀ ।
ಪ್ರಾರ್ಥಿತೋ ನಾರದಃ ಶಾಪಸ್ಯಾಂತಮಾಹ ನದೀಂ ಪ್ರತಿ ॥೩೨॥

ಗಂಗಯಾ ಶ್ರೀ ಬ್ರಹ್ಮಮಯ್ಯಾ ಭವಿಷ್ಯಸಿ ಯದಾ ಸಹ ।
ತದಾ ತ್ವಂ ಶಾಪತೋ ಮುಕ್ತಾ ಭವಿಷ್ಯಸಿ ಮಹಾನದಿ ॥೩೩॥

ಅಥ ಪದ್ಮಾ ನಾರದಂ ತಂ ಪಪ್ರಚ್ಛ ಪ್ರಣತಾ ಸತೀ ।
ದೇವರ್ಷೇ ಕಾ ಹಿ ಸಾ ಗಂಗಾ ಕಥಂ ಭೂಮಿಂ ಪ್ರಯಾಸ್ಯತಿ ॥೩೪॥

---

ಪದ್ಮಾನದಿಯು ತನ್ನನ್ನು ಹಾಸ್ಯಮಾಡಿದ್ದರಿಂದ ನಾರದನು ಕೋಪಗೊಂಡನು. ಅವನು ನನ್ನನ್ನು ನೀನು ಹಾಸ್ಯಮಾಡಿದ್ದರಿಂದ ನಿನ್ನ ನೀರೆಲ್ಲವೂ ಬತ್ತಿಹೋಗಲಿ. ಎಂದು ಪದ್ಮಾನದಿಗೆ ಶಾಪವನ್ನು ಕೊಟ್ಟನು. ನಾರದನ ಈ ಭಯಂಕರವಾದ ಶಾಪವನ್ನು ಪದ್ಮಾನದಿಯು ಕೇಳಿ ಆಕೆಯು ನಾರದನಿಗೆ ದಂಡಾಕಾರವಾಗಿ ನಮಸ್ಕಾರಮಾಡಿದಳು. ॥೩೦-೩೧॥

ಆಗ ಪದ್ಮಾನದಿಯು ನಾರದನನ್ನು ಕುರಿತು ಶಾಪವಿಮೋಚನೆಯನ್ನು ಹೇಳೆಂದು ಬಹಳವಾಗಿ ಪ್ರಾರ್ಥಿಸಿದಳು. ಆಕೆಯು ಹೀಗೆ ಬಹಳವಾಗಿ ಪ್ರಾರ್ಥಿಸಿದ ನಂತರ ಅವನು ಆಕೆಯು ಶಾಪವಿಮೋಚನೆಯ ಕಾಲವನ್ನು ಹೀಗೆ ತಿಳಿಸಿದನು.॥೩೨॥

ಎಲೌ ಮಹಾನದಿಯೇ, ಶ್ರೀಬ್ರಹ್ಮಸ್ವರೂಪಳಾದ ಗಂಗಾನದಿಯೊಂದಿಗೆ ನೀನು ಸೇರಿದಾಗ ನೀನು ಶಾಪದಿಂದ ವಿಮೋಚನೆಯನ್ನು ಹೊಂದುವೆ. ಎಂಬುದಾಗಿ ಹೇಳಿದನು. ॥೩೩॥

ಅನಂತರದಲ್ಲಿ ಆ ಪದ್ಮಾ ಎಂಬ ದೇವನದಿಯು ದೇವರ್ಷಿಯಾದ ನಾರದನಿಗೆ

ಕಥಂ ಬ್ರಹ್ಮಮಯೀ ಸಾ ಚ ವದ ಮೇ ಕೃಪಯಾಽಖಿಲಂ ।
ಇತಿ ಪದ್ಮಾವಚಃ ಶ್ರುತ್ವಾ ಹೃಷ್ಟೋ ದೇವರ್ಷಿಸತ್ತಮಃ ॥೩೫॥

ಪ್ರಾಹ ಗಂಗಾಸುಚರಿತಂ ಪದ್ಮಾಂ ಪ್ರತಿ ಮಹಾನೃಷಿಃ ।
ಶ್ರುಣು ಪದ್ಮೇ ಕಥಾಂ ಪುಣ್ಯಾಂ ಮಹಾಪಾತಕನಾಶಿನೀಂ ॥೩೬॥

ಪರಸ್ಯ ಜಗತಃ ಕರ್ತುರ್ಬ್ರಹ್ಮಣಃ ಶಿವರೂಪಿಣಃ ।
ಶಕ್ತಿಃ ಸರ್ವಮಯೀ ತಸ್ಯ ಸಾರಭೂತಾ ಹೃದಾತ್ಮಿಕಾ ॥೩೭॥

ಮಹಾಕಾಶಮಯೀ ಯಸ್ಯಾಂ ಪ್ರಾಪ್ತಾನ್ಯಣು ವಿಧಿಂ ನದಿ ।
ಅಸಂಖ್ಯಾತಾನ್ಯಂಡಕಾನಿ ಯತ್ರಾಂಡೇ ಭುವನಾವಲಿಃ ॥೩೮॥

---

ನಮಸ್ಕಾರವನ್ನು ಮಾಡಿ ಅವನನ್ನು ಕುರಿತು, ಓ ದೇವರ್ಷಿಯೇ, ಗಂಗೆಯು ಯಾರು? ಆಕೆಯು ಭೂಮಿಗೆ ಬರುವ ಬಗೆ ಹೇಗೆ? ಎಂದು ಕೇಳಿದಳು. ॥೩೪॥

ಗಂಗಾನದಿಯು ಬ್ರಹ್ಮಸ್ವರೂಪಳೆಂಬುದು ಹೇಗೆ? ಇವೇ ಮುಂತಾದ ಎಲ್ಲಾ ವಿಷಯಗಳನ್ನೂ ದಯವಿಟ್ಟು ತಿಳಿಸಿ. ಪದ್ಮಾನದಿಯು ಹೇಳಿದ ಈ ಮಾತನ್ನು ಕೇಳಿ ದೇವರ್ಷಿಗಳಲ್ಲಿ ಶ್ರೇಷ್ಠನಾದ ನಾರದನು ಬಹಳ ಸಂತೋಷಪಟ್ಟನು. ॥೩೫॥

ಮಹರ್ಷಿಯಾದ ನಾರದನು ಪದ್ಮಾನದಿಯನ್ನು ಕುರಿತು, ಎಲೌ ಮಹಾನದಿಯೇ, ಮಹಾಪಾಪಗಳನ್ನು ನಾಶಮಾಡುವ ಪುಣ್ಯಕರವಾದ ಈ ಕಥೆಯನ್ನು ಕೇಳು. ಎಂದು ಹೇಳಿ ಗಂಗಾನದಿಯ ಶ್ರೇಷ್ಠವಾದ ಕಥೆಯನ್ನು ಅವಳಿಗೆ ಹೇಳಲು ಪ್ರಾರಂಭಿಸಿದನು. ॥೩೬॥

ಶಿವಸ್ವರೂಪಿಯಾದ, ಪ್ರಪಂಚಕ್ಕೆ ಸೃಷ್ಟಿಕರ್ತನಾದ, ಬ್ರಹ್ಮನ ಸರ್ವಸ್ವರೂಪವೂ ಸಾರಭೂತವೂ, ಹೃದಯಸ್ವರೂಪವೂ ಆದ ಶಕ್ತಿ ಎಂಬ ತತ್ವವು ಇದೆ. ॥೩೭॥

ಎಲೌ ನದಿಯೇ, ಈ ಶಕ್ತಿಯು ಮಹಾಕಾಶಸ್ವರೂಪವಾಗಿದೆ. ಈ ಶಕ್ತಿ ತತ್ವದ ಗರ್ಭದಲ್ಲಿ ಅಸಂಖ್ಯಾತವಾದ ಅಂಡಗಳೂ, ಸಮಸ್ತಲೋಕಗಳೂ, ಅಣುವಿನಷ್ಟು ಸಣ್ಣವಾಗಿ ಅಡಗಿವೆ! ಮತ್ತು ಈ ಅಣುಗಳು ಮಹಾಕಾಶಸ್ವರೂಪವೂ ಆಗಿರುತ್ತವೆ! ॥೩೮॥

ಏವಂ ಸ್ಥಿತಾ ಮಹಾಶಕ್ತಿರ್ಬ್ರಹ್ಮಾದ್ಯಾಸ್ತುಷ್ಟುವುಶ್ಚ ತಾಂ ।
ಮಹತಾ ತಪಸಾ ಯುಕ್ತಾ ಪ್ರಸನ್ನಾ ಸಾಽಭವತ್ತದಾ ॥೩೯॥

ವರಂ ವೃಣೀಧ್ವಂ ಭೋ ದೇವಾ ಇತ್ಯಭೂನ್ನಾಭಸಂ ವಚಃ ।
ತಚ್ಛ್ರುತ್ವಾ ಪ್ರಾಽವದನ್ ದೇವಾ ಬ್ರಹ್ಮ ವಿಷ್ಣು ಪುರಃ ಸರಾಃ ॥೪೦॥

ದೇವಿ ತ್ವಂ ವರದಾತ್ರೀ ಚೇನ್ಮೂಢಜೀವಾ ಅಪಿ ದ್ರುತಂ ।
ಅನಾಯಾಸೇನ ಪರಮಾಂ ಪ್ರಾಪ್ನುಯುರ್ಯೇನ ಸದ್ಗತಿಂ ॥೪೧॥

ತಥಾ ವ್ಯಕ್ತಸ್ವರೂಪಾ ತ್ವಂ ಭೂತ್ವಾ ತಿಷ್ಠೇಹ ಸರ್ವತಃ ।
ನಿಶಮ್ಯೈವಂ ವಿಧಿಮುಖ ವಚನಂ ಪ್ರತ್ಯಭಾಷತ ॥೪೨॥

ದೇವಾಃ ಶೃಣುಧ್ವಂ ವಃ ಪ್ರೀತ್ಯೈ ವ್ಯಕ್ತರೂಪಾ ಭವಾಮ್ಯಹಂ ।
ಯದಾ ತು ವಾಷ್ಕಲಿರ್ನಾಮ ದಾನವೇಶೋ ಮಹಾಬಲಃ ॥೪೩॥

---

ಆಗ ಬ್ರಹ್ಮಾದಿಗಳೂ ಮಹಾತಪಸ್ಸನ್ನುಮಾಡುತ್ತಾ ಇಂಥಾ ಮಹಾಶಕ್ತಿಯನ್ನು ಸ್ತೋತ್ರಮಾಡಿದರು. ಆಗ ಆಕೆಯು ಅವರನ್ನು ಮೆಚ್ಚಿದಳು. ॥೩೯॥

ಆಗ ಎಲೈ ದೇವತೆಗಳೇ, ವರವನ್ನು ಕೇಳಿರಿ. ಎಂದು ಆಕಾಶವಾಣಿಯು ಕೇಳಿಸಿತು. ಆಗ ಬ್ರಹ್ಮಾ, ವಿಷ್ಣು, ಮೊದಲಾದ ದೇವತೆಗಳು ಇದನ್ನು ಕೇಳಿ ಈರೀತಿಯಲ್ಲಿ ಕೇಳಿಕೊಂಡರು. ॥೪೦॥

ಎಲೌ ದೇವಿಯೇ, ನೀನು ವರವನ್ನು ಕೊಡಲು ಇಷ್ಟಪಡುವುದಾದರೆ, ಮೂಢಜನರೂ ಅನಾಯಾಸವಾಗಿ ಸದ್ಗತಿಯನ್ನು ಹೊಂದಲು ಅನುಕೂಲವಾಗುವ ನಿನ್ನ ವ್ಯಕ್ತಸ್ವರೂಪವನ್ನು ತೋರಿಸು. ॥೪೧॥

ಆರೀತಿಯಲ್ಲಿ ನಿನ್ನ ಸ್ವರೂಪವನ್ನು ಪ್ರಕಾಶಗೊಳಿಸಿ ನೀನು ಎಲ್ಲಾಕಡೆಯಲ್ಲಿಯೂ ದಯವಿಟ್ಟು ಇರಬೇಕು. ಬ್ರಹ್ಮನೇ ಮೊದಲಾದವರ ಈ ಮಾತನ್ನು ಕೇಳಿ ದೇವಿಯು ಈರೀತಿಯಲ್ಲಿ ಪ್ರತ್ಯುತ್ತರವನ್ನು ಇತ್ತಳು. ॥೪೨॥

ಎಲೈ ದೇವತೆಗಳೇ, ಕೇಳಿರಿ. ಮಹಾಬಲಿಷ್ಠನೂ, ದಾನವಾಧಿಪತಿಯೂ ಆದ ವಾಷ್ಕಲಿ ಎಂಬುವನು ತನ್ನ ಪರಾಕ್ರಮದಿಂದ ಇಂದ್ರಾದಿಗಳನ್ನೂ ಜಯಿಸಿ ಮೂರು ಲೋಕಗಳನ್ನೂ ವಶಪಡಿಸಿಕೊಳ್ಳುವನು. ಆಗ ವಿಷ್ಣುವು ಬ್ರಹ್ಮಚಾರಿಯ ವೇಷ

ತ್ರಿಲೋಕೀಂ ಸ್ವವಶೇ ಕುರ್ಯಾಜ್ಜಿತ್ವೇಂದ್ರಾದೀನ್ ಸ್ವತೇಜಸಾ ।
ತದೈಷ ವಿಷ್ಣುರಿಂದ್ರಾರ್ಥಂ ವಟುರೂಪೇಣ ದಾನವಂ ॥೪೪॥

ಭಿಕ್ಷಿತ್ವಾ ತ್ರಿಪದಂ ಸ್ಥಾನಂ ತ್ರಿಲೋಕೀಮಾಹರಿಷ್ಯತಿ ।
ವಿಷ್ಣೋರುತ್ಕ್ಷಿಪ್ತ ಪಾದೇನ ಭಿನ್ನೋರ್ಧ್ವಾಂಡಕಟಾಹತಃ ॥೪೫॥

ತೋಯರೂಪಾಽಮೃತಮಯೀ ನಿರ್ಗಚ್ಛಾಮಿ ಮಹಾನದೀ ।
ತಾಂ ಮಾಂ ದೃಷ್ಟ್ವಾ ಚ ಸ್ಪೃಷ್ಟ್ವಾ ಚ ಪೀತ್ವಾ ವಾ ಸದ್ಗತಿಂವ್ರಜೇತ್॥೪೬॥

ಗಂಗಾ ತ್ರಿಪಥಗಾ ಚೇತಿ ತದಾ ಸಿದ್ಧಾ ವದಂತಿ ಮಾಂ ।
ಇತ್ಯುಕ್ತ್ವಾ ವಿರರಾಮಾಽಥ ನಭೋರೂಪಾ ಮಹೇಶ್ವರೀ ॥೪೭॥

ಏವಂ ಸಾ ವಿಧಿಮುಖ್ಯಾನಾಂ ವರಂ ದತ್ವಾ ಮಹಾನದೀ ।
ಭವಿಷ್ಯತಿ ಹಿ ಸಾ ಗಂಗಾ ತತ್ಸಂಗಾತ್ತೇ ಶುಭೋದಯಃ ॥೪೮॥

---

ವನ್ನು ಹಾಕಿಕೊಂಡು ಅವನ ಹತ್ತಿರ ಭಿಕ್ಷೆಯ ನೆಪದಿಂದ ಅವನನ್ನು ನಾಶಪಡಿಸುವನು. ಆಗ ನಾನು ವ್ಯಕ್ತಸ್ವರೂಪದಿಂದ ಕಾಣಿಸಿಕೊಳ್ಳುವೆನು. ಹೇಗೆಂದರೆ,॥೪೩-೪೪॥

ಆಗ ವಿಷ್ಣುವು ಆ ರಾಕ್ಷಸನ ಹತ್ತಿರ ಮೂರು ಹೆಜ್ಜೆಯ ಸ್ಥಳವನ್ನು ಯಾಚಿಸಿ ಮೂರು ಲೋಕವನ್ನೂ ಅಳೆದುಕೊಳ್ಳುವನು. ವಿಷ್ಣುವು ಇದಕ್ಕಾಗಿ ತನ್ನ ಎರಡನೆಯ ಪಾದವನ್ನು ಮೇಲಕ್ಕೆ ಎತ್ತಲು ಮೇಲುಭಾಗದಲ್ಲಿರುವ ಬ್ರಹ್ಮಾಂಡದ ಕಟಾಹವು ಒಡೆದು ಅದರಿಂದ ಅಮೃತಸ್ವರೂಪಳಾದ ನಾನೇ ನೀರಿನ ಸ್ವರೂಪದಲ್ಲಿ ಮಹಾನದಿಯಾಗಿ ಹೊರಗೆ ಹೊರಡುವೆನು. ಇಂತಹ ನದೀಸ್ವರೂಪಳಾದ ನನ್ನನ್ನು ನೋಡಿ, ಅಥವಾ ಮುಟ್ಟಿ, ನೀರನ್ನು ಕುಡಿದು, ಯಾವ ಮನುಷ್ಯನಾದರೂ, ಭಕ್ತಿಯಿಂದ ಸದ್ಗತಿಯನ್ನು ಹೊಂದುವನು. ॥೪೫-೪೬॥

ಆಗ ಸಿದ್ಧರಾದ ಯೋಗಿಗಳು ನನ್ನನ್ನು ಗಂಗಾ, ತ್ರಿಪಥಗಾ, ಎಂಬ ಹೆಸರಿನಿಂದ ಕರೆಯುವರು. ಆಕಾಶಸ್ವರೂಪಳೂ, ಮಹೇಶ್ವರಿಯೂ ಆದ ದೇವಿಯು ಹೀಗೆ ಹೇಳಿ, ಸುಮ್ಮನಾದಳು. ॥೪೭॥

ಬ್ರಹ್ಮನೇ ಮೊದಲಾದವರಿಗೆ ಹೀಗೆ ವರವನ್ನು ಕೊಟ್ಟು ಆ ದೇವಿಯು ಮಹಾನದಿಯಾದ ಗಂಗೆಯಾಗುವಳು. ಗಂಗಾನದಿಯ ಸಂಪರ್ಕದಿಂದ ನಿನಗೆ ಮಂಗಳವುಂಟಾಗುವುದು. ॥೪೮॥

ಶ್ರುತ್ವೈವಂ ನಾರದವಚಃ ಪುನಃ ಪಪ್ರಚ್ಛ ಸಾ ನದೀ ।
ದೇವರ್ಷೇ ತದ್ವದ ಮಮ ಕಥಂ ವಿಷ್ಣುಪದಕ್ಷತಾತ್ ॥೪೯॥

ಗಂಗಾಽವತೀರ್ಣಾ ತತ್ಪಶ್ಚಾದ್ಭುವಂ ಚ ಕಥಮೇಷ್ಯತಿ ।
ಶ್ರೋತುಮಿಚ್ಛಾಮಿ ತತ್ಸರ್ವಂ ಭವಿಷ್ಯಮಪಿ ಸುಸ್ಫುಟಂ ॥೫೦॥

ಪದ್ಮಯೈವಂ ಪುನಃ ಪೃಷ್ಟಃ ಪ್ರಾಹ ದೇವರ್ಷಿಸತ್ತಮಃ ।
ಶೃಣು ಪದ್ಮೇ ಕಥಾಂ ಪುಣ್ಯಾಂ ಗಂಗಾವತರಣಾಽಭಿಧಾಂ ॥೫೧॥

ಇತಸ್ತ್ರಯೋವಿಂಶತಮೇ ಪರ್ಯಾಯೇ ದಾನವೇಶ್ವರಃ ।
ತ್ರೇತಾಯಾಂ ವಾಷ್ಕಲಿರ್ನಾಮ ವಿಷ್ಣುಭಕ್ತೋಽತಿ ಧರ್ಮವಿತ್ ॥೫೨॥

ತಪಸಾ ತೋಷಯಿತ್ವಾ ತಂ ಬ್ರಹ್ಮಾಣಂ ಕಮಲಾಸನಂ ।
ವರಂ ಲಬ್ಧ್ವಾ ಸ ವಿಪುಲಂ ಯುಧಿ ನಿರ್ಜಿತ್ಯ ವಾಸವಂ ॥೫೩॥

---

ನಾರದನ ಈ ಮಾತನ್ನು ಕೇಳಿ ಪುನಃ ಪದ್ಮಾನದಿಯು ಅವನನ್ನು ಕುರಿತು, ಓ ದೇವರ್ಷಿಯೇ, ವಿಷ್ಣುಪಾದದ ಆಘಾತದಿಂದ ಗಂಗಾನದಿಯು ಅವತರಿಸಿದ್ದು ಹೇಗೆ? ಅನಂತರ ಅದು ಭೂಮಿಗೆ ಬಂದದ್ದು ಹೇಗೆ? ಇವೆಲ್ಲವೂ ಮುಂದಾಗುವುದಾದರೂ ಈಗಲೇ ನಿಮ್ಮಿಂದ ಇವೆಲ್ಲವನ್ನೂ ಚೆನ್ನಾಗಿ ಕೇಳಲು ಇಷ್ಟಪಡುತ್ತೇನೆ. ಆದ್ದರಿಂದ ತಾವು ದಯವಿಟ್ಟು ನನಗೆ ಈ ವಿಷಯಗಳೆಲ್ಲವನ್ನೂ ಹೇಳಬೇಕು. ಎಂದು ಕೇಳಿಕೊಂಡಳು. ॥೪೯-೫೦॥

ಪದ್ಮಾನದಿಯು ಪುನಃ ಈರೀತಿಯಲ್ಲಿ ಪ್ರಶ್ನಿಸಲಾಗಿ ದೇವರ್ಷಿಶ್ರೇಷ್ಠನಾದ ನಾರದನು ಆಕೆಯನ್ನು ಕುರಿತು, ಎಲೌ ಪದ್ಮಾನದಿಯೇ, ಗಂಗಾವತರಣ ಎಂಬ ಪುಣ್ಯಕರವಾದ ಕಥೆಯನ್ನು ಹೇಳುವೆನು ಕೇಳು. ಎಂದು ಹೇಳಿದನು. ॥೫೧॥

ಈ ಯುಗಕ್ಕೆ ಮುಂಚೆ ಇಪ್ಪತ್ತುಮೂರನೆಯ ಸರದಿಯಲ್ಲಿ ಬಂದ ತ್ರೇತಾಯುಗದಲ್ಲಿ ದಾನವರಿಗೆ ಅಧಿಪತಿಯೂ, ಬಹಳ ಧಾರ್ಮಿಕನೂ ಆದ ವಾಷ್ಕಲಿಯೆಂಬುವನು ವಿಷ್ಣುಭಕ್ತನಾಗಿದ್ದನು. ॥೫೨॥

ಈ ದಾನವನು ಕಮಲಾಸನನಾದ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಅವನನ್ನು ಮೆಚ್ಚಿಸಿ, ಅವನಿಂದ ಬೇಕಾದಷ್ಟು ವರಗಳನ್ನು ಪಡೆದು ಇಂದ್ರನನ್ನೂ

ಭವಿಷ್ಯತಿ ತ್ರಿಲೋಕೇಶಃ ಸದಾ ಧರ್ಮಪರಾಯಣಃ ।
ಅಥೇಂದ್ರಾದ್ಯೈಃಸುರೈರ್ವಿಷ್ಣುಃ ಪ್ರಾರ್ಥಿತೋ ಮಾಯಯಾಽಭವತ್ ॥೫೪॥

ವಿಪ್ರಭಕ್ತಂ ವಾಷ್ಕಲಿಂ ತಂ ವಂಚಿತುಂ ವಿಪ್ರವೇಷತಃ ।
ವಟೋಃ ಖರ್ವತರೋಽಗಚ್ಛದ್ಭಿಕ್ಷಿತುಂ ದಾನವಾಧಿಪಂ ॥೫೫॥

ಯೋಗದೃಷ್ಟ್ಯಾ ಭಾರ್ಗವಸ್ತಂ ಗುರುಃ ಪ್ರಾಹ ವಿದನ್ ಹರಿಂ ।
ದಾನವೇಶ ನ ವಿಪ್ರೋಽಯಂ ವಿಷ್ಣುರಿಂದ್ರಾರ್ಥಮಾಗತಃ ॥೫೬॥

ವಂಚಿತುಂ ತ್ವಾಂ ವಿಜಾನೀಹಿ ನಾಸ್ಮೈ ತ್ವಂ ದಾತುಮರ್ಹಸಿ ।
ಅಥ ದೃಷ್ಟ್ವಾ ಸಮಾಯಾಂತಂ ವಿಷ್ಣುಂ ವಟುಕರೂಪಿಣಂ ॥೫೭॥

ಮುಮೋದಾತಿತರಾಂ ಸಾಕ್ಷಾದ್ವಿಷ್ಣುದರ್ಶನತೋ ಹಿ ಸಃ ।
ಉತ್ಥಾಯ ಶೀಘ್ರಂ ಪ್ರಣತಃ ಸ್ವಾಸನೇ ಸನ್ನಿವೇಶಯತ್ ॥೫೮॥

---

ಯುದ್ಧದಲ್ಲಿ ಜಯಿಸಿ, ಯಾವಾಗಲೂ ಧರ್ಮಪರಾಯಣನಾಗಿ, ಮೂರು ಲೋಕಗಳಿಗೂ ಅಧಿಪತಿಯಾಗುವನು. ಆಗ ಇಂದ್ರಾದಿದೇವತೆಗಳ ಪ್ರಾರ್ಥನೆಯನ್ನು ಲಾಲಿಸಿ ವಿಷ್ಣುವು ಮಾಯಾರೂಪವನ್ನು ಧರಿಸುವನು. ॥೫೩-೫೪॥

ವಿಷ್ಣುವು ಬ್ರಾಹ್ಮಣವೇಷವನ್ನು ಹಾಕಿಕೊಂಡು ಬ್ರಾಹ್ಮಣರಿಗೆ ಭಕ್ತನಾದ ವಾಷ್ಕಲಿಯನ್ನು ವಂಚಿಸಲು ಅತ್ಯಂತ ಕುಳ್ಳನಾದ ಬ್ರಹ್ಮಚಾರಿಯಂತೆ ಕಾಣಿಸಿಕೊಂಡು ದಾನವಶ್ರೇಷ್ಠನಾದ ಅವನ ಹತ್ತಿರ ಭಿಕ್ಷೆ ಬೇಡಲು ಬರುವನು. ॥೫೫॥

ಭೃಗುವಿನ ಮಗನಾದ ಬೃಹಸ್ಪತಿಯು ಬ್ರಾಹ್ಮಣವೇಷದಿಂದ ವಿಷ್ಣುವೇ ಬಂದಿರುವನೆಂದು ಯೋಗದೃಷ್ಟಿಯಿಂದ ತಿಳಿದು ವಾಷ್ಕಲಿಯನ್ನು ಕುರಿತು, ಎಲೈ ದಾನವೇಶ್ವರನೇ, ಇವನು ಬ್ರಾಹ್ಮಣನಲ್ಲ. ಇಂದ್ರನ ಕಾರ್ಯಸಿದ್ಧಿಗಾಗಿ ವಿಷ್ಣುವೇ ಈ ವೇಷದಲ್ಲಿ ಬಂದಿರುವನೆಂದು ತಿಳಿ, ಎಂದನು. ॥೫೬॥

ಎಲೈ ವಾಷ್ಕಲಿಯೇ, ಹೀಗೆ ವಿಷ್ಣುವೇ ನಿನ್ನನ್ನು ವಂಚಿಸಲು ಬಂದಿರುವನು. ಆದ್ದರಿಂದ ನೀನು ಇವನಿಗೆ ಏನನ್ನೂ ಕೊಡಬೇಡ. ಎಂದು ಬೃಹಸ್ಪತಿಯು ವಾಷ್ಕಲಿಯನ್ನು ಕುರಿತು ಹೇಳಿದನು. ಅನಂತರದಲ್ಲಿ ಬ್ರಹ್ಮಚಾರಿಯ ವೇಷದಿಂದ ವಿಷ್ಣುವೇ ಬರುತ್ತಿರುವುದನ್ನು ಕಂಡು ವಾಷ್ಕಲಿಯು ಸಾಕ್ಷಾತ್ ವಿಷ್ಣುದರ್ಶನದಿಂದ ಬಹಳ

ಪ್ರಕ್ಷಾಲ್ಯ ಪಾದೌ ತೋಯೇನ ತೀರ್ಥಂ ಮೂರ್ಧ್ನಿ ವಿಧಾರಯತ್ ।
ಸಂಪೂಜ್ಯ ಭಕ್ತಿಭಾವೇನ ಕೃತಾಂಜಲಿ ರಭಾಷತ ॥೫೯॥

ಭಗವನ್ ಕಿಂ ಪ್ರಿಯಂ ತೇಽದ್ಯ ಯದಸ್ಮತ್ತೋಽಭಿವಾಂಛಿತಂ ।
ತತ್ಪ್ರತೀಚ್ಛ ಮಯಾ ದತ್ತಂ ಜಾನೀ ಹ್ಯೇವ್ಯಾವಿಶಂಕಿತಂ ॥೬೦॥

ವಟುರಾಹ ದಾನವೇಶಂ ರಾಜಂಸ್ತ್ವಂ ಬ್ರಹ್ಮಚಾರಿಣೇ ।
ಮಹ್ಯಂ ಭೂಮಿಂ ಪ್ರಯಚ್ಛಾಽಶು ಪಾದತ್ರಿತಯ ಸಂಮಿತಾಂ ॥೬೧॥

ತಚ್ಛ್ರುತ್ವಾ ವಾಷ್ಕಲಿಃ ಪ್ರಾಹ ಭಗವನ್ ಗುರುಣಾ ಹ್ಯಹಂ ।
ಪ್ರತಿಷಿದ್ಧೋಽಪಿ ತೇ ದದ್ಯಾಂ ಕಥಂ ಸರ್ವಾಂತರಾತ್ಮನೇ ॥೬೨॥

ಈಶ್ವರಾಯ ಭಗವತೇ ನ ದದ್ಯಾಂ ಯಾಚಿತಂ ಕಿಲ ।
ತಾಂ ಕ್ಷಮಸ್ವಗುರೋರ್ವಾಕ್ಯ ವಿಹತಿಂ ಪುರುಷೋತ್ತಮ ॥೬೩॥

---

ಸಂತೋಷಪಟ್ಟನು. ಅಲ್ಲದೇ ಇವನು ಜಾಗ್ರತೆಯಾಗಿ ಎದ್ದು ಆ ಬ್ರಹ್ಮಚಾರಿಗೆ ನಮಸ್ಕಾರವನ್ನು ಮಾಡಿ, ತನ್ನ ಪೀಠದ ಮೇಲೆ ಕುಳ್ಳಿರಿಸಿದನು. ||೫೮||

ವಾಷ್ಕಲಿಯು ಬ್ರಹ್ಮಚಾರಿಯ ಪಾದಗಳನ್ನು ನೀರಿನಿಂದ ತೊಳೆದು ಆ ತೀರ್ಥವನ್ನು ತನ್ನ ತಲೆಯ ಮೇಲೆ ಪ್ರೋಕ್ಷಿಸಿಕೊಂಡನು. ಅನಂತರ ಇವನು ಬ್ರಹ್ಮಚಾರಿಗೆ ಅತ್ಯಂತ ಭಕ್ತಿಯಿಂದ ಪೂಜಿಸಿ ಕೈಜೋಡಿಸಿಕೊಂಡು ಅವನೊಂದಿಗೆ ಕುಶಲಪ್ರಶ್ನೆ ಮಾಡಿದನು. ||೫೯||

ಪೂಜ್ಯರೇ, ನನ್ನಿಂದ ತಾವು ಅಪೇಕ್ಷಿಸುವ ತಮಗೆ ಇಷ್ಟವಾದ ವಸ್ತುವಾವುದು ? ಅದನ್ನು ತಾವು ದಯವಿಟ್ಟು ಹೇಳಬೇಕು. ತಾವು ಕೇಳಿದ ಕೂಡಲೇ ಆ ವಸ್ತುವನ್ನು ತಮಗೆ ನಿಸ್ಸಂದೇಹವಾಗಿ ಅರ್ಪಿಸುವೆನೆಂದು ತಿಳಿಯಿರಿ. ||೬೦||

ಎಲೈ ದಾನವೇಶನೇ, ನೀನು ಧೊರೆಯು. ಬ್ರಹ್ಮಚಾರಿಯಾದ ನನಗೆ ಮೂರು ಹೆಜ್ಜೆ ಭೂಮಿಯನ್ನು ನನಗೆ ಶೀಘ್ರವಾಗಿ ದಾನಮಾಡು. ಎಂದು ಬ್ರಹ್ಮಚಾರಿಯು ದಾನವಾಧಿಪತಿಯನ್ನು ಕೇಳಿದನು. ||೬೧||

ಬ್ರಹ್ಮಚಾರಿಯ ಈ ಮಾತನ್ನು ಕೇಳಿ ವಾಷ್ಕಲಿಯು, ಪೂಜ್ಯನೇ, ಗುರುವಿನಿಂದ ಈ ವಿಷಯದಲ್ಲಿ ತಡೆಯಲ್ಪಟ್ಟಿದ್ದಾಗ್ಯೂ, ನಾನು ಸರ್ವಾಂತರ್ಯಾಮಿಯೂ, ಲೋಕೇಶ್ವರನೂ ಆದ ನಿನಗೆ ಕೇಳಿದುದನ್ನು ಕೊಡದಿರಲು ನನ್ನ ಮನಸ್ಸೊಪ್ಪದು.

ಇತ್ಯುಕ್ತ್ವಾ ತತ್ಕರತಲೇ ಪಾನೀಯಂ ಸಮವಾಸೃಜತ್ ।
ಪ್ರತಿಗೃಹ್ಯತಾಮಿತಿ ವದನ್ ವಾಷ್ಕಲಿರ್ದೃಢಭಾವನಃ ॥೬೪॥

ವಿಷ್ಣುಸ್ತದೇಶ್ವರೀ ಶಕ್ತಿ ಮಾವಿಷ್ಟೋಽವರ್ಧತ ಕ್ಷಣಾತ್ ।
ಸವ್ಯೇನ ಭುವಮಾಕ್ರಮ್ಯ ಪಾದಮನ್ಯಮಥೋತ್ಕ್ಷಿಪತ್ ॥೬೫॥

ಪಾದಾಂಗುಷ್ಠ ನಖೋದ್ಭಿನ್ನ ಬ್ರಹ್ಮಾಂಡೋರ್ಧ್ವತಲಾತ್ಸುತಾ ।
ಬ್ರಹ್ಮದ್ರವಾ ತದಾ ಗಂಗಾ ಸುಧಾ ವಿಶದ ಭಾಸುರಾ ॥೬೬॥

ತ್ರಿತೀಯಪಾದಂ ನಿಕ್ಷೇಪ್ತುಂ ಸ್ಥಲಂ ಯಾಚತ ದಾನವಂ ।
ಏಕೇನ ಭೂಮಿಃ ಸಂಕ್ರಾಂತಾ ದ್ವಿತೀಯೇನ ನಭಸ್ತಲಂ ॥೬೭॥

---

ಆದ್ದರಿಂದ ಭಗವಂತನಾದ ನಿನ್ನ ಭಿಕ್ಷೆಯನ್ನು ನಾನು ನೀಡದೇ ಇರಲಾರೆನು. ಓ ಪುರುಷೋತ್ತಮನೇ, ಹೀಗೆ ನಿನಗೆ ದಾನಕೊಡುವುದರಿಂದುಂಟಾಗುವ ನನ್ನ ಗುರುವಿನ ಆಜ್ಞೋಲ್ಲಂಘನೆಯ ದೋಷವನ್ನು ದಯವಿಟ್ಟು ಕ್ಷಮಿಸು. ಎಂದು ಕೇಳಿದನು. ॥೬೨-೬೩॥

ವಾಷ್ಕಲಿಯು ಬ್ರಹ್ಮಚಾರಿಯನ್ನು ಕುರಿತು ಆ ರೀತಿಯಲ್ಲಿ ಹೇಳಿ ಅವನ ಕೈಗೆ ನೀರನ್ನು ಬಿಟ್ಟು ದೃಢವಾದ ಮನಸ್ಸಿನಿಂದ ಭೂಮಿಯನ್ನು ಸ್ವೀಕರಿಸು ಎಂದು ಹೇಳಿದನು. ॥೬೪॥

ಆಗ ವಿಷ್ಣುವು ತನ್ನ ಈಶ್ವರೀಶಕ್ತಿಯ ಆವೇಶಕ್ಕೊಳಗಾಗಿ ಕ್ಷಣಕಾಲದಲ್ಲಿಯೇ ಬಹಳ ಉದ್ದವಾಗಿ ಬೆಳೆದನು. ಅವನು ತನ್ನ ಬಲಗಾಲಿನಿಂದ ಭೂಮಿ ಎಲ್ಲವನ್ನೂ ಆಕ್ರಮಿಸಿಕೊಂಡು ಎಡಗಾಲನ್ನು ಆಕಾಶಕ್ಕೆ ಎತ್ತಿದನು. ॥೬೫॥

ವಿಷ್ಣುವಿನ ಕಾಲಿನ ಹೆಬ್ಬೆರಳಿನ ಉಗುರಿನಿಂದ ಸೀಳಲ್ಪಟ್ಟ ಬ್ರಹ್ಮಾಂಡ ಕಟಾಹದ ಮೇಲುಭಾಗದಿಂದ ನೀರು ಸುರಿಯುವುದಕ್ಕೆ ಪ್ರಾರಂಭವಾಗಿ, ಆಗ ಬ್ರಹ್ಮ ಸ್ವರೂಪವಾದ ಪ್ರವಾಹವುಳ್ಳ ಗಂಗಾನದಿಯು ಅಮೃತದಂತೆ ಶುಭ್ರವಾದ ಕಾಂತಿಯುಳ್ಳದ್ದಾಗಿ ಪ್ರವಹಿಸುತ್ತಾ ಕಾಣಿಸಿತು. ॥೬೬॥

ಆಗ ವಿಷ್ಣುವು ಆ ದಾನವನನ್ನು ಕುರಿತು ತನ್ನ ಮೂರನೆಯ ಕಾಲನ್ನಿಡಲು ಸ್ಥಳವನ್ನು ಬೇಡಿದನು. ಅವನು ವಾಷ್ಕಲಿಯನ್ನು ಕುರಿತು, ಎಲೈ ದಾನವನೇ, ನನ್ನ ಒಂದು ಕಾಲಿನಿಂದ ಭೂಮಿಯನ್ನು ಆಕ್ರಮಿಸಿದ್ದೇನೆ. ಮತ್ತೊಂದರಿಂದ ಆಕಾಶವನ್ನು ಆಕ್ರಮಿಸಿದ್ದೇನೆ, ಎಂದನು. ॥೬೭॥

ತೃತೀಯೆಪಾದವಿನ್ಯಾಸ ಸ್ಥಾನಂ ವದ ನೃಪೋತ್ತಮ ।
ಶ್ರುತ್ವಾ ವಿಷ್ಣುವಚಃ ಪ್ರಾಹ ವಾಷ್ಕಲಿರ್ದಾನವೇಶ್ವರಃ ॥೧೮॥

ಭಗವನ್ ಅಸ್ತಿ ಮೂರ್ಧಾ ಮೇ ಸ್ಥಾನಂ ತತ್ರೇ ದಿಶಾಮ್ಯಹಂ ।
ಇತಿ ಶ್ರುತ್ವಾ ಪದಂ ಮೂರ್ಧ್ನಿ ನ್ಯಸ್ಯತ ಭೂತಲೇನ ಯತ್ ॥೧೯॥

ಪ್ರಸನ್ನೋ ದಾನವೇಶಾಯ ಸಾಯುಜ್ಯಂ ದಿಶದುತ್ತಮಂ ।
ಭಿನ್ನೋಧ್ವಾಂಡ ಮಹಾಭಿತ್ತೇರ್ನಿರ್ಗತಾಂ ಬ್ರಹ್ಮರೂಪಿಣೀಂ ॥೨೦॥

ಗಂಗಾಂ ಕಮಂಡಲೌ ಬ್ರಹ್ಮಾ ಗ್ರಹಿಷ್ಯತಿ ಮಹೌಜಸಾ ।
ಅಥ ಕಾಲೇನ ಮಹತಾ ದೇವೇಂದ್ರಃ ಸು ಮಹತ್ತಪಃ ॥೨೧॥

ತಪ್ತ್ವಾ ಪ್ರಸಾದ್ಯ ಬ್ರಹ್ಮಾಣಂ ಸಮಾನೇಷ್ಯತಿ ವೈ ದಿವಂ ।
ತತಃ ಕಾಲಾಂತರೇ ಸೂರ್ಯವಂಶೇ ರಾಜಾ ಭವಿಷ್ಯತಿ ॥೨೨॥

---

ಎಲೈ ಶ್ರೇಷ್ಠರಾಜನೇ, ನಾನು ಮೂರನೆಯ ಕಾಲನ್ನಿಡಲು ಸ್ಥಳವನ್ನು ತೋರಿಸು. ಎಂದು ವಿಷ್ಣುವು ಅವನನ್ನು ಕುರಿತು ಹೇಳಿದನು. ವಿಷ್ಣುವಿನ ಈ ಮಾತನ್ನು ಕೇಳಿ ದಾನವಾಧಿಪತಿಯಾದ ವಾಷ್ಕಲಿಯು ಈ ರೀತಿಯಲ್ಲಿ ವಿಷ್ಣುವನ್ನು ಕುರಿತು ಹೇಳಿದನು. ॥೧೮॥

ಓ ಪೂಜ್ಯನೇ, ನನ್ನ ತಲೆಯೇ ಬೇರೊಂದು ಸ್ಥಾನವಾಗಿದೆ. ಅದನ್ನೇ ನಿನಗೆ ನೀಡುವೆನು. ಎಂದು ವಾಷ್ಕಲಿಯು ಹೇಳಲು ವಿಷ್ಣುವು ಭೂಮಿಯ ಮೇಲಿಟ್ಟಿದ್ದ ಕಾಲನ್ನು ತೆಗೆದು ಅವನ ತಲೆಯಮೇಲಿಟ್ಟನು. ॥೧೯॥

ಅನಂತರ ವಿಷ್ಣುವು ದಾನವೇಶನನ್ನು ಮೆಚ್ಚಿ ತನ್ನಲ್ಲಿಯೇ ಐಕ್ಯವಾಗುವ ಮೋಕ್ಷವನ್ನು ಅವನಿಗೆ ನೀಡಿದನು. ಆಗ ಭೇದಿಸಲ್ಪಟ್ಟ ಬ್ರಹ್ಮಾಂಡದ ದೊಡ್ಡ ಕಟಾಹದಿಂದ ಬ್ರಹ್ಮಸ್ವರೂಪಳಾದ ಗಂಗೆಯು ಹೊರಟಿತು. ॥೨೦॥

ಹೀಗೆ ಹೊರಟಂಥಾ ಗಂಗೆಯನ್ನು ಬ್ರಹ್ಮನು ಅಪರಿಮಿತವಾದ ತೇಜಸ್ಸಿನ ಪ್ರವಾಹದಿಂದ ತನ್ನ ಕಮಂಡಲುವಿನಲ್ಲಿ ಹಿಡಿದನು. ಅನಂತರ ಪ್ರಳಯಕಾಲ ಕಳೆದ ಮೇಲೆ ದೇವೇಂದ್ರನು ಬಹು ದೊಡ್ಡದಾದ ತಪಸ್ಸನ್ನು ಆಚರಿಸುವನು. ॥೨೧॥

ದೇವೇಂದ್ರನು ಹಾಗೆ ತಪಸ್ಸುಮಾಡಿ, ಬ್ರಹ್ಮನನ್ನು ಮೆಚ್ಚಿಸಿ ಅವಳನ್ನು

ಸಗರಾಖ್ಯೋ ವಾಜಿಮೇಧ ಸಹಸ್ರಂ ಸ ವಿಧಾಸ್ಯತಿ ।
ಹರಿಷ್ಯತಿ ಚ ತತ್ರಾಶ್ವ ಮಿಂದ್ರಃ ಕಪಿಲಸನ್ನಿಧಿಂ ॥೭೩॥

ಷಷ್ಟಿಸಹಸ್ರ ಸಂಖ್ಯಾತಾಃ ಸಗರಸ್ಯ ತು ಯೇ ಸುತಾಃ ।
ಅಶ್ವಂ ಮೃಗಯಮಾಣಾಸ್ತೇ ಭೇತ್ಸ್ಯಂತಿ ತ್ವರಿತೋ(ತಾ)ಭುವಂ॥೭೪॥

ತತ್ರ ತೇಜಃ ಸಮಾಸಾದ್ಯ ಕಾಪಿಲಂ ಭಸ್ಮತಾಂ ಗತಾಃ ।
ಸಾಗರಾ ಅಥ ತತ್ಪೌತ್ರೋ ಭಗೀರಥ ಇತೀರಿತಃ ॥೭೫॥

ಭವಿಷ್ಯತಿ ಸ ಧರ್ಮಾತ್ಮಾ ಗತಿಂ ಪೈತಾಮಹೀಮಥ ।
ವಿಚಿಂತ್ಯ ತಪ ಆತಿಷ್ಠದತ್ಯುಗ್ರಂ ಚ ಮಹತ್ತರಂ ॥೭೬॥

ತಪ್ತ್ವಾ ಸ್ವರ್ಗಾದ್ದ್ರುತಂ ಗಂಗಾಂ ಪತಂತೀಂ ಶಿವಮೂರ್ಧನಿ ।
ಪುನರ್ಮಹತ್ತಪಸ್ತಪ್ತ್ವಾ ತತೋ ಭೂಮಿಂ ಭಗೀರಥಃ ॥೭೭॥

---

ಸ್ವರ್ಗಕ್ಕೆ ಕರೆತರುವನು. ಅನಂತರ ಸ್ವಲ್ಪಕಾಲ ಕಳೆದ ಮೇಲೆ ಸೂರ್ಯವಂಶದಲ್ಲಿ ಒಬ್ಬ ರಾಜನು ಹುಟ್ಟುವನು. ॥೭೨॥

ಸಗರನೆಂಬ ಆ ರಾಜನು ಸಾವಿರ ಅಶ್ವಮೇಧಯಾಗಗಳನ್ನು ಮಾಡುವನು. ಈ ಸಂದರ್ಭದಲ್ಲಿ ಇಂದ್ರನು ಸಗರನು ಬಿಟ್ಟಿದ್ದ ಕುದುರೆಯನ್ನು ಅಪಹರಿಸಿ ಕಪಿಲ ಋಷಿಗಳ ಹತ್ತಿರ ಮುಚ್ಚಿಡುವನು. ॥೭೩॥

ಸಗರಚಕ್ರವರ್ತಿಯ ಅರವತ್ತುಸಾವಿರ ಮಕ್ಕಳು ಆ ಕುದುರೆಯನ್ನು ಹುಡುಕುವವರಾಗಿ ಶೀಘ್ರದಲ್ಲಿಯೇ ಭೂಮಿಯನ್ನೇ ಬಗೆಯುವರು. ॥೭೪॥

ಈ ಸಂದರ್ಭದಲ್ಲಿ ಸಗರನ ಮಕ್ಕಳೆಲ್ಲರೂ ಆ ಕಪಿಲಋಷಿಯ ಕೋಪಕ್ಕೆ ಪಾತ್ರರಾಗಿ ಅವನ ತೇಜಸ್ಸಿಗೆ ಆಹುತಿಯಾಗಿ ಬೂದಿಯಾಗುವರು. ಅನಂತರದಲ್ಲಿ ಅವನಿಗೆ ಭಗೀರಥನೆಂಬ ಹೆಸರಿನ ಮೊಮ್ಮಗನಾಗುವನು. ॥೭೫॥

ಭಗೀರಥನು ಧರ್ಮಾತ್ಮನಾಗಿದ್ದುಕೊಂಡು ತಮ್ಮ ತಾತಂದಿರಿಗೆ ಸಂಭವಿಸಿದ ದುರ್ಗತಿಯನ್ನು ಯೋಚಿಸಿ, ಅತ್ಯಂತ ದೊಡ್ಡದೂ, ಘೋರವೂ ಆದ ತಪಸ್ಸನ್ನು ಕೈಗೊಳ್ಳುವನು. ॥೭೬॥

ಭಗೀರಥನು ತಪಸ್ಸುನ್ನು ಮಾಡಿದನಂತರ ಸ್ವರ್ಗದಿಂದ ಶಿವನ ಶಿರಸ್ಸಿನಲ್ಲಿ ಬೀಳುತ್ತಿರುವ ಗಂಗೆಯನ್ನು ಪುನಃ ಘೋರತಪಸ್ಸನ್ನು ಆಚರಿಸುವುದರ ಮೂಲಕ

ಅವತಾರಯಿಷ್ಯತಿ ನ್ಯೈ ರಥಂ ಸಾಽನುಗಮಿಷ್ಯತಿ ।
ಭಗೀರಥೋ ರಥೇ ಸ್ಥಿತ್ವಾ ತ್ವನ್ಮಾರ್ಗೇಣಾಽನುಯಾಸ್ಯತಿ ॥೭೮॥

ತದಾ ತ್ವಂ ಶಾಪತೋ ಮುಕ್ತಾ ಭವಿಷ್ಯಸಿ ಸರಿದ್ವರೇ ।
ಏವಂ ರಮಾ ಸಪತ್ನೀಜಂ ದುಃಖಂ ಪ್ರಾಪ್ತಾ ಮಹತ್ತರಂ ॥೭೯॥

ಪುನಃ ಕಾಲಾಂತರೇ ರಾಮ ರಾವಣಂ ರಾಕ್ಷಸಾಧಿಪಂ ।
ರಾವಣಂ ಸರ್ವಲೋಕಾನಾಂ ಹಂತುಂ ವಿಷ್ಣುರಭೂನ್ನರಃ ॥೮೦॥

ಸೂರ್ಯವಂಶಂ ಸಮಾಸಾದ್ಯ ಚತುರ್ಧಾ ಸ್ವಂ ವಿಭಜ್ಯ ತು ।
ತಸ್ಯ ಪತ್ನೀ ಮಹಾಲಕ್ಷ್ಮೀರ್ಜಾನಕೀ ಭೂ ಸಮುದ್ಭವಾ ॥ ೮೧॥

ಭೂತ್ವಾ ಭರ್ತೃವಿಯೋಗಂ ಸಾ ಪ್ರಾಪ್ತಾ ಗೌರ್ಯಾಸ್ತು ಶಾಪತಃ ।
ಗೌರೀ ಚಾಽಪಿ ಪುರಾ ರಾಮ ಮಹಾದೇವೇನ ಕಾರಣಾತ್ ॥೮೨॥

---

ಭೂಮಿಗೆ ಇಳಿಯುವಂತೆಮಾಡುವನು. ಆಗ ಗಂಗೆಯು ಭಗೀರಥನ ರಥವನ್ನು ಅನುಸರಿಸಿಕೊಂಡು ಬರುವಳು. ಭಗೀರಥನು ರಥದಲ್ಲಿ ಕುಳಿತು ನಿನ್ನ ದಾರಿಯಲ್ಲಿ ಬರುವನು. ॥೭೮॥

ಎಲೌ ಶ್ರೇಷ್ಠನದಿಯಾದ ಪದ್ಮಾನದಿಯೇ, ಆಗ ನೀನು ಶಾಪದಿಂದ ಬಿಡುಗಡೆ ಹೊಂದುವೆ. ಹೀಗೆ ಲಕ್ಷ್ಮಿಯು ಸವತಿಯಿಂದ ಸಂಭವಿಸಿದ ಮಹತ್ತರವಾದ ದುಃಖ ವನ್ನು ಹೊಂದಿದಳು. ॥೭೯॥

ಎಲೈ ಪರಶುರಾಮನೇ, ಪುನಃ ಬೇರೊಂದು ಕಾಲದಲ್ಲಿ ವಿಷ್ಣುವು ರಾಕ್ಷಸಾಧಿ ಪತಿಯಾದ ಎಲ್ಲಾ ಲೋಕಗಳಿಗೂ ಹಿಂಸೆಯನ್ನುಂಟುಮಾಡುತ್ತಿದ್ದ ರಾವಣನನ್ನು ಕೊಲ್ಲಲು ಮನುಷ್ಯನ ಸ್ವರೂಪವನ್ನು ಧರಿಸುವನು. ॥೮೦॥

ವಿಷ್ಣುವು ಸೂರ್ಯವಂಶದಲ್ಲಿ ತನ್ನ ಸ್ವರೂಪವನ್ನು ನಾಲ್ಕು ವಿಧವಾಗಿ ವಿಭಾಗಿಸಿಕೊಂಡು ಮನುಷ್ಯಸಹೋದರರಾಗಿ ಅವತರಿಸುವನು. ಮಹಾಲಕ್ಷ್ಮೀಸ್ವ ರೂಪಳಾದ ಭೂಮಿಯಲ್ಲಿ ಹುಟ್ಟಿದ ಸೀತಾದೇವಿಯೇ ಇವನ ಪತ್ನಿಯಾದಳು. ॥೮೧॥

ಲಕ್ಷ್ಮೀಸ್ವರೂಪಳಾದ ಸೀತಾದೇವಿಯು ಗೌರಿಯ ಶಾಪದ ದೆಸೆಯಿಂದ ತನ್ನ ಪತಿಯ ವಿರಹವನ್ನನುಭವಿಸುವಳು. ಎಲೈ ಪರಶುರಾಮನೇ, ಗೌರಿಯೂ

ವಿಯುಕ್ತಾಽಭೂದ್ದಕ್ಷಕನ್ಯಾ ತದ್ಯಜ್ಞೇ ಶಿವನಿಂದನಂ ।
ಶ್ರುತ್ವಾ ಭಸ್ಮೀ ಭವತ್ಯೋರ್ಧಾಲ್ಲಕ್ಷ್ಮೀ ಶಾಪೇನ ಭಾರ್ಗವ ॥೮೩॥

ಇತಿ ಶ್ರುತ್ವಾ ದತ್ತಗುರೋರ್ವಾಕ್ಯಂ ಪಶ್ಚಾತ್ ಭೃಗೂದ್ವಹಃ ।
ಪುನಃ ಪಪ್ರಚ್ಛ ಸ ಗುರುಂ ವಿಸ್ತರೇಣ ಕಥಾಂ ಹಿ ತಾಂ ॥೮೪॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ದ್ವಾವಿಂಶೋಽಧ್ಯಾಯಃ

---

ಕೂಡ ಹಿಂದೆ ಶಿವನ ಪ್ರಾಪ್ತಿಗಾಗಿ ದಕ್ಷಕನ್ಯೆಯಾದ ಈಕೆಯು ಶಿವನಿಂದೆಯನ್ನು ಕೇಳಿ ದಕ್ಷನು ಮಾಡುತ್ತಿದ್ದ ಯಾಗದಲ್ಲಿ ಲಕ್ಷ್ಮಿಯ ಶಾಪನಿಮಿತ್ತವಾಗಿ ಬೂದಿ ಯಾದಳು. ॥೮೨-೮೩॥

ಭೃಗುವಂಶಶ್ರೇಷ್ಠನಾದ ಪರಶುರಾಮನು ದತ್ತಾತ್ರೇಯಗುರುವಿನ ಈ ಮಾತನ್ನು ಕೇಳಿದನಂತರ ಪುನಃ ಗೌರೀಕಥೆಯನ್ನು ವಿಸ್ತಾರವಾಗಿ ಹೇಳಬೇಕೆಂದು ಅವನನ್ನು ಪ್ರಾರ್ಥಿಸಿದನು. ॥೮೪॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ತ್ರಯೋವಿಂಶೋಽಧ್ಯಾಯಃ ॥

### ಇಪ್ಪತ್ತುಮೂರನೆಯ ಅಧ್ಯಾಯವು

ಶ್ರೀಗುರೋ ಶ್ರೋತುಮಿಚ್ಛಾಮಿ ವಿಸ್ತರೇಣ ಕಥಾಮಿಮಾಂ ।
ಗೌರೀ ಕೇನ ನಿಮಿತ್ತೇನ ವಿಯುಕ್ತಾ ಶಂಕರೇಣ ವೈ ॥೧॥

ಕುತೋ ದಕ್ಷಾತ್ಸಮುತ್ಪನ್ನಾ ನಿಂದಾ ಕೇನ ಕೃತಾ ತದಾ ।
ಕುತೋ ದೇವಾಧಿದೇವಸ್ಯ ನಿಂದಾ ವೈ ಸಮುಜಾಯತ ॥೨॥

ಏತನ್ಮೇ ಭಗವನ್ ಶಂಸ ಕೃಪಯಾ ತವ ಸೇವಕೇ ।
ಸುಪೃಷ್ಟೋ ಭಾರ್ಗವೇಣೈವಂ ಪ್ರಾಹ ಪ್ರವದತಾಂ ವರಃ ॥೩॥

---

ಓ ಗುರುಗಳೇ, ನಾನು ಈ ಕಥೆಯನ್ನು ವಿಸ್ತಾರವಾಗಿ ಕೇಳಲು ಇಷ್ಟಪಡುತ್ತೇನೆ. ಗೌರಿಯು ಯಾವ ಕಾರಣದಿಂದ ಶಿವನ ವಿರಹವನ್ನು ಅನುಭವಿಸಿದಳು? ಎಂಬುದನ್ನು ದಯವಿಟ್ಟು ಹೇಳಬೇಕು. ॥೧॥

ಗೌರಿಯು ಹೇಗೆ ದಕ್ಷನಿಗೆ ಮಗಳಾದಳು? ದಕ್ಷಯಜ್ಞದಲ್ಲಿ ಶಿವನಿಂದೆಯು ಸಂಭವಿಸಿದುದು ಹೇಗೆ? ದೇವಾಧಿದೇವನಾದ ಶಿವನಿಗೆ ನಿಂದೆಯು ಹೇಗೆ ಸಂಭವಿಸಿತು? ॥೨॥

ಓ ಪೂಜ್ಯಗುರುಗಳೇ, ನಿಮ್ಮ ಸೇವಕನಾದ ನನ್ನಲ್ಲಿ ಕೃಪೆಯಿಟ್ಟು ಈ ವಿಷಯಗಳೆಲ್ಲವನ್ನೂ ಹೇಳಿರಿ. ಮಾತುಗಾರರಲ್ಲಿ ಶ್ರೇಷ್ಠನಾದ ದತ್ತಾತ್ರೇಯನು ಪರಶುರಾಮನು ಹೀಗೆ ಪ್ರಾರ್ಥಿಸಲಾಗಿ ಅವನನ್ನು (ಪರಶುರಾಮನನ್ನು) ಕುರಿತು ಈರೀತಿಯಲ್ಲಿ ಹೇಳಿದನು. ॥೩॥

ರಾಮ ಭಾರ್ಗವ ವಕ್ಷ್ಯಾಮಿ ಗೌರ್ಯಾಃ ಶಾಪಕಥಾಂ ಶೃಣು ।
ಪುರಾ ಭಸ್ಮಾಸುರೋ ಲೋಕೇ ತಪಸ್ತಪ್ತ್ವಾ ಮಹತ್ತರಂ ॥೪॥

ಶಿವಂ ಸಂತೋಷಯಾಮಾಸ ವರಂ ಪ್ರಾಪ ತತೋಽದ್ಭುತಂ ।
ಕರಂ ನ್ಯಸೇದ್ಯಸ್ಯ ಮೂರ್ಧ್ನಿ ಸ ಯಾಯಾದ್ಭಸ್ಮತಾಂ ಕ್ಷಣಾತ್ ॥೫॥

ಏವಂ ಲಬ್ಧ್ವಾ ವರಂ ದೈತ್ಯಃ ಪ್ರತ್ಯೇತುಂ ಶಿವಮೂರ್ಧನಿ ।
ನಿಕ್ಷೇಪ್ತುಂ ಕರಮಾರಬ್ಧ ಸ್ತತೋ ದೇವಃ ಪಲಾಯಿತಃ ॥೬॥

ದೈತ್ಯೇನಾಽನುದ್ರುತೋ ಭೂಯೋ ಭೀತ್ಯಾಽಂತರ್ಧಿಂ ಸಮಾಯಯೌ ।
ಅಥ ದೇವೀ ಮಹಾದೇವಂ ಮೃಗಯಿತ್ವಾ ತು ಸರ್ವತಃ ॥೭॥

ವಿಯುಕ್ತಾ ದೇವದೇವೇನ ದುಃಖೇನಾಽತ್ಯಂತ ಭೂಯಸಾ ।
ದೇಹಂ ವಿಲೋಪಿತವತೀ ತತೋ ವಿಷ್ಣುರುಪಾಯತಃ ॥೮॥

---

ಎಲೈ ಪರಶುರಾಮನೇ, ಗೌರಿಯ ಶಾಪದ ವೃತ್ತಾಂತವನ್ನು ಹೇಳುವೆನು. ಹಿಂದೆ ಲೋಕದಲ್ಲಿ ಭಸ್ಮಾಸುರನು ಶಿವನನ್ನುದ್ದೇಶಿಸಿ ಅತ್ಯಂತ ಘೋರವಾದ ತಪಸ್ಸನ್ನು ಮಾಡಿದನು. ॥೪॥

ಭಸ್ಮಾಸುರನು ಘೋರತಪಸ್ಸನ್ನು ಮಾಡಿ ಶಿವನನ್ನು ಮೆಚ್ಚಿಸಿದನು. ಆದ್ದರಿಂದ ಶಿವನಿಂದ ಆಶ್ಚರ್ಯಕರವಾದ ವರವನ್ನು ಪಡೆದನು. ಆ ವರದಂತೆ ಭಸ್ಮಾಸುರನು ಯಾವನ ತಲೆಯಮೇಲೆ ಕೈಯಿಡುವನೋ ಅವನು ಬೂದಿಯಾಗುವಂತಾಯಿತು. ॥೫॥

ಈ ರಾಕ್ಷಸನು ಹೀಗೆ ವರವನ್ನು ಪಡೆದು ಇದನ್ನು ಪರೀಕ್ಷಿಸಲು ಶಿವನ ತಲೆಯ ಮೇಲೆಯೇ ತನ್ನ ಕೈಯ್ಯನ್ನಿಡಲು ಪ್ರಯತ್ನಪಟ್ಟನು. ಇದನ್ನು ಕಂಡು ಶಿವನು ಪಲಾಯನಮಾಡಿದನು. ॥೬॥

ಈ ದೈತ್ಯನು ಶಿವನನ್ನು ಹಿಂಬಾಲಿಸಿಕೊಂಡು ಓಡುತ್ತಿರಲು ಶಿವನು ಭಯದಿಂದ ಅಂತರ್ಧಾನವಾದನು. ಅನಂತರ ಗೌರಿಯು ಶಿವನನ್ನು ಎಲ್ಲಾ ಕಡೆಯಲ್ಲಿಯೂ ಹುಡುಕಿದಳು. ॥೭॥

ದೇವದೇವನಾದ ಶಿವನ ವಿರಹದಿಂದುಂಟಾದ ಬಹಳ ಹೆಚ್ಚಾದ ದುಃಖವನ್ನು ತಡೆಯಲಾರದೇ ಗೌರಿಯು ತನ್ನ ದೇಹತ್ಯಾಗವನ್ನು ಮಾಡಿದಳು. ಅನಂತರ ವಿಷ್ಣುವು ಉಪಾಯವಾಗಿ ಆ ದೊಡ್ಡ ದೈತ್ಯನನ್ನು ಕೊಂದುಹಾಕಿದನು. ಅನಂತರ

ಜಘಾನ ತಂ ಮಹಾದೈತ್ಯ ಮಥ ಕಾಲಾಂತರೇ ಭುವಿ ।
ದಕ್ಷಪ್ರಜಾಪತಿರ್ದೇವೀಂ ತಪಸಾತೋಷಯಚ್ಛಿವಾಂ ॥೯॥

ತದಾ ಗೌರೀ ದೇಹಹೀನಾ ಗಗನೈಕ ಸ್ವರೂಪಿಣೀ ।
ತುಷ್ಟಾ ತಂ ಛಂದಯಾಮಾಸ ವರೇಣ ವರದಾ ಸತೀ ॥೧೦॥

ಸ ವವ್ರೇ ತನಯಾ ಭೂತ್ವಾ ಗೃಹೇ ಮೇ ವಸ ಶಂಕರಿ ।
ಇತಿ ದತ್ವಾ ಸಮುತ್ಪನ್ನಾ ತನಯೋಮಾಭಿಧಾನತಃ ॥೧೧॥

ದಾಕ್ಷಾಯಣೀಂ ತಾಂ ಶಿವಾಯ ದದೌ ದಕ್ಷಃ ಪ್ರಜಾಪತಿಃ ।
ಅಥಾತ್ಮಾನಂ ಮಹಾದೇವಃ ಶ್ವಶುರತ್ವೇನ ವೈ ಗುರುಂ ॥೧೨॥

ಮಾನಯಾಮಾಸ ಕಸ್ಮಿಂಶ್ಚಿತ್ಕಾಲೇ ಬ್ರಹ್ಮಾ ಶಿವೇನ ವೈ ।
ಸಂಗತಃ ಕಾರ್ಯವಶತಃ ಸಹಿತೋ ವಿಷ್ಣುಮುಖ್ಯಕೈಃ ॥೧೩॥

---

ದಲ್ಲಿ ಬೇರೊಂದು ಕಾಲದಲ್ಲಿ ದಕ್ಷಬ್ರಹ್ಮನು ಭೂಲೋಕದಲ್ಲಿ ಶಿವನ ಪತ್ನಿಯಾದ ಪಾರ್ವತಿಯನ್ನು ಕುರಿತು ತಪಸ್ಸನ್ನು ಮಾಡಿ ಆಕೆಯನ್ನು ಮೆಚ್ಚಿಸಿದನು. ॥೮-೯॥

ಆಗ ವರವನ್ನು ಕೊಡಲು ಸಮರ್ಥಳಾದ ಗೌರಿಯು ತನಗೆ ದೇಹವಿಲ್ಲದೇ ಇದ್ದುದರಿಂದ ಆಕಾಶಸ್ವರೂಪಳಾಗಿ ದಕ್ಷಬ್ರಹ್ಮನ ತಪಸ್ಸಿಗೆ ಮೆಚ್ಚಿ ಅವನನ್ನು ಬೇಡುವಂತೆ ಪ್ರೇರಿಸಿದಳು. ॥೧೦॥

ದಕ್ಷನು ಎಲೌ ಶಂಕರಿಯೇ, ನೀನೇ ನನ್ನ ಮಗಳಾಗಿ ಹುಟ್ಟಿ ನನ್ನ ಮನೆಯಲ್ಲಿ ವಾಸಮಾಡು. ಎಂದು ಆಕೆಯನ್ನು ಪ್ರಾರ್ಥಿಸಿದನು. ಗೌರಿಯು ಹಾಗೆಯೇ ಆಗಲೆಂದು ಅವನು ಪ್ರಾರ್ಥಿಸಿದ ವರವನ್ನು ನೀಡಿದಳು. ಅನಂತರದಲ್ಲಿ ದಕ್ಷನಿಗೆ ಉಮಾ ಎಂಬ ಹೆಸರಿನಿಂದ ಆಕೆಯು ಮಗಳಾಗಿ ಹುಟ್ಟಿದಳು. ॥೧೧॥

ದಕ್ಷಬ್ರಹ್ಮನು ದಾಕ್ಷಾಯಣಿಯಾದ .ತನ್ನ ಮಗಳನ್ನು ಶಿವನಿಗೆ ಕೊಟ್ಟು ಮದುವೆಮಾಡಿದನು. ,ಅನಂತರದಲ್ಲಿ ದಕ್ಷನು ನಾನು ಶಿವನಿಗೆ ಮಾವನೆಂದು ಹೆಮ್ಮೆಯಿಂದ ತನ್ನನ್ನು ಗೌರವಿಸಿಕೊಂಡನು. ಇದಾದಮೇಲೆ ಒಂದು ಸಮಯದಲ್ಲಿ ಬ್ರಹ್ಮನು ವಿಷ್ಣುವೇ ಮೊದಲಾದವರೊಂದಿಗೆ ಕೂಡಿ ಯಾವುದೋ ಒಂದು ಕಾರ್ಯಕ್ಕಾಗಿ ಶಿವನ ಜೊತೆಯಲ್ಲಿ ಸೇರಿದನು. ॥೧೨-೧೩॥

ತತ್ರಾಽಜಗ್ಮುರ್ಬುಧಗಣಾಃ ಪ್ರಜಾಪತಿ ಗಣಾ ಅಪಿ ।
ಅಪಿ ದಕ್ಷಃ ಸಮಾ ಜಗಾಮಾಽಥ ತಂ ದೃಷ್ಟ್ವಾ ದೇವತಾಗಣಾಃ॥೧೪॥

ಪ್ರತ್ಯುತ್ಥಿತಾ ಋಷಿಗಣಾಶ್ಚಾಽನ್ಯೇ ಯೇ ತತ್ರ ಸಂಸ್ಥಿತಾಃ ।
ಬ್ರಹ್ಮ ವಿಷ್ಣು ಹರೇಭ್ಯೋಽನ್ಯೇ ಸರ್ವೇ ತಂ ಪ್ರತ್ಯುಪಸ್ಥಿತಾಃ ॥೧೫॥

ಅಥ ದಕ್ಷೋ ಮನ್ಯುಯುತೋ ಮಹಾಮಾನೀ ಶಿವಂ ಪ್ರತಿ ।
ಜ್ವಲನ್ ಕ್ರೋಧಾಗ್ನಿನೈವಾಽಸೌ ಪ್ರೋವಾಚ ಪರುಷಂ ವಚಃ॥೧೬॥

ಏಷ ಶಂಭುರ್ಮಮ ಗುರೋಃ ಪ್ರತ್ಯುತ್ಥಾನ ವಿವರ್ಜಿತಃ ।
ಮಾನಸ್ತಂಭ ಸಮಾರೂಢಃ ಶಿಷ್ಯಭೂತೋಽತಿಮೂಢಧೀಃ ॥೧೭॥

ಸಚ್ಚಾರಿತ್ರ ವಿಹೀನೋಽಯಂ ನಾಽತ್ರ ಸಂಸ್ಥಾತುಮರ್ಹತಿ ।
ನಿಶಮ್ಯ ದಕ್ಷವಚನಂ ಪದ್ಮಭೂರ್ಜಗದೀಶ್ವರಃ ॥೧೮॥

ಮೈವ ಮಜ್ಞ ಇವ ಬ್ರೂಹೀತ್ಯೇವಂ ತಂ ವಿನಿವಾರಯತ್ ।
ದಕ್ಷಸ್ತದಾ ಪ್ರಭೃತಿ ವೈ ಶಿವಂ ಸರ್ವತ್ರ ನಿಂದತಿ ॥೧೯॥

---

ಅಲ್ಲಿಗೆ ದೇವತೆಗಳ ಗುಂಪೂ ಪ್ರಜಾಪತಿಗಳ ಗುಂಪೂ ಬಂದು ಸೇರಿತು. ದಕ್ಷನೂ ಕೂಡ ಅಲ್ಲಿಗೆ ಬಂದನು. ಅವನನ್ನು ನೋಡಿ ದೇವತೆಗಳೂ, ಋಷಿಗಳೂ ಮತ್ತು ಇತರರೂ, ಎದ್ದು ನಿಂತು ಮರ್ಯಾದೆಮಾಡಿದರು. ಆದರೆ ಬ್ರಹ್ಮ, ವಿಷ್ಣು, ಶಿವ ಇವರ ಹೊರತು ಇತರರೆಲ್ಲರೂ ಎದ್ದು ನಿಂತರು. ||೧೪-೧೫||

ಅನಂತರದಲ್ಲಿ ದಕ್ಷನು ಕೋಪಗೊಂಡವನಾಗಿ ಬಹಳ ಗರ್ವದಿಂದ ಕೂಡಿದವನಾಗಿ ಕೋಪವೆಂಬ ಬೆಂಕಿಯಿಂದ ಉರಿಯುತ್ತಾ ಶಿವನನ್ನು ಕುರಿತು ಅತ್ಯಂತ ಕಠಿಣವಾದ ಈ ಮಾತನ್ನಾಡಿದನು. ||೧೬||

ಮಾವನಾಗಿ, ಗುರುವಾಗಿರುವ ನಾನು ಬಂದರೂ ಈ ಶಿವನು ಎದ್ದು ನಿಂತು ನಮಸ್ಕಾರವನ್ನು ಮಾಡಲಿಲ್ಲ. ಇವನು ಅಹಂಕಾರವೆಂಬ ಕಂಬದ ಮೇಲೆ ನಿಂತು, ಶಿಷ್ಯನಾಗಿದ್ದರೂ ಅತ್ಯಂತ ಮೂಢನಾಗಿದ್ದಾನೆ. ಒಳ್ಳೆಯ ನಡತೆಯೇ ಇಲ್ಲದುದರಿಂದ ಇವನು ಇಲ್ಲಿರಲು ಯೋಗ್ಯನಲ್ಲ. ದಕ್ಷನು ಆಡಿದ ಈ ಮಾತುಗಳನ್ನು ಕೇಳಿ ಕಮಲಭವನೂ, ಲೋಕೇಶ್ವರನೂ ಆದ ಬ್ರಹ್ಮನು ಹೀಗೆ ಹೇಳಿದನು. ||೧೭-೧೮||

ಎಲೈ ದಕ್ಷನೇ, ಮೂಢನಂತೆ ಈ ರೀತಿಯಲ್ಲಿ ಮಾತನಾಡಬೇಡ. ಎಂದು

ಕದಾಚಿದ್ದಕ್ಷ ಈಜಾನಃ ಸರ್ವಾನ್ ದೇವಾನ್ ಋಷೀನ್ ಮುನೀನ್ ।
ನಿಮಂತ್ರಯಚ್ಛಿವಮೃತೇ ಪೂರ್ವವಿದ್ವೇಷ ಹೇತುತಃ ॥೨೦॥

ದಾಕ್ಷಾಯಣೀ ಮಪ್ಯಾತ್ಮಭವಾಂ ಶಿವೇ ರೋಷಾನ್ನ ಚಾಹ್ವಯತ್ ।
ಪ್ರವೃತ್ತೇ ತು ಮಹಾಯಜ್ಞೇ ವೈಮಾನಿಕ ಗಣಾತ್ ಸತೀ ॥೨೧

ಶುಶ್ರಾವ ಯಜ್ಞಂ ಸುಶ್ರೇಷ್ಠಂ ಪಿತುಃ ಸರ್ವಸಮರ್ಹಣಂ ।
ಶಂಕರಂ ಪ್ರಾರ್ಥಯಾಮಾಸ ಪಿತೃಯಜ್ಞ ದಿದೃಕ್ಷಯಾ ॥೨೨॥

ಶಿವೇನ ಪ್ರತಿಷಿದ್ಧಾಽಪಿ ದರ್ಶನೋತ್ಕಂಠಿತಾ ಸತೀ ।
ಜಗಾಮ ಯಜ್ಞ ಸದನಂ ದೀಕ್ಷಿತೋ ಯತ್ರ ವೈ ಪಿತಾ ॥೨೩॥

ಅಥಾಽವಲೋಕ್ಯ ಪಿತರಂ ಪ್ರಣಯಾ ದಬ್ರವೀತ್ತದಾ ।
ತಾತ ಕಿಂ ತೇ ವಿಸ್ಮೃತಾಽಹಂ ಯಜ್ಞೇ ಸರ್ವ ಸಮರ್ಹಣೇ ॥೨೪॥

---

ಬ್ರಹ್ಮನು ಅವನನ್ನು ತಡೆಗಟ್ಟಿದನು. ಆಹೊತ್ತು ಮೊದಲುಮಾಡಿಕೊಂಡು ದಕ್ಷನು ಶಿವನನ್ನು ಎಲ್ಲೆಲ್ಲಿಯೂ ನಿಂದಿಸುತ್ತಿರುತ್ತಾನೆ. ॥೧೯॥

ಹೀಗಿರಲು ದಕ್ಷನು ಒಂದುದಿನ ಯಾಗಮಾಡಲು ಪ್ರಾರಂಭಿಸಿ ಎಲ್ಲಾ ದೇವತೆಗಳನ್ನೂ ಋಷಿಗಳನ್ನೂ, ಮುನಿಗಳನ್ನು ಕರೆಯಿಸಿದನು. ಆದರೆ ಹಿಂದಿನ ದ್ವೇಷನಿಮಿತ್ತವಾಗಿ ಶಿವನನ್ನು ಆಹ್ವಾನಿಸಲಿಲ್ಲ. ॥೨೦॥

ದಕ್ಷನು ತನ್ನ ಮಗಳೇ ಆದರೂ ದಾಕ್ಷಾಯಣಿಯನ್ನೂ ಶಿವನ ಮೇಲಣ ಕೋಪದಿಂದ ಕರೆಯಲೇ ಇಲ್ಲ. ಮಹಾಯಾಗವು ಪ್ರಾರಂಭವಾಗಲು ಸತಿಯು ದೇವತೆಗಳ ಮೂಲಕ ಅತ್ಯಂತ ಶ್ರೇಷ್ಠವಾದ, ಎಲ್ಲರ ಗೌರವಕ್ಕೆ ಅರ್ಹವಾದ, ತನ್ನ ತಂದೆಯು ಮಾಡುತ್ತಿರುವ ಯಾಗದ ವಿಷಯವನ್ನು ಕೇಳಿದಳು. ಆಗ ಆಕೆಯು ತನ್ನ ತಂದೆಯು ಮಾಡುತ್ತಿರುವ ಯಾಗವನ್ನು ನೋಡಬೇಕೆಂಬ ಇಚ್ಛೆಯಿಂದ ಶಿವನನ್ನು ಆ ವಿಚಾರವಾಗಿ ಪಾರ್ಥಿಸಿಕೊಂಡಳು. ॥೨೧-೨೨॥

ಶಿವನು ತನ್ನನ್ನು ತಡೆದಾಗ್ಯೂ ಲಕ್ಷಿಸದೆ ಯಾಗದ ದರ್ಶನಾಭಿಲಾಷೆಯಿಂದ ಸತಿಯು ತಮ್ಮ ತಂದೆಯಾದ ದಕ್ಷನು ಯಾಗಮಾಡುತ್ತಿದ್ದ ಯಜ್ಞಶಾಲೆಗೆ ತೆರಳಿದಳು. ॥೨೩॥

ಅನಂತರದಲ್ಲಿ ಸತಿಯು ಆ ಯಾಗಶಾಲೆಯಲ್ಲಿ ತಂದೆಯನ್ನು ನೋಡಿ ಪ್ರೀತಿಯಿಂದ ಅವನನ್ನು ಕುರಿತು "ಓ ತಂದೆಯೇ, ಎಲ್ಲರ ಪೂಜೆಗೂ ಯೋಗ್ಯವಾದ

ಇಮಾಸ್ತೇ ತನುಜಾಃ ಸರ್ವಾ ಜಾಮಾತೃ ಸಹಿತಾಃ ಕುತಃ ।
ನಿಮಂತ್ರಿತಾಃ ಶಿವಃ ಕಸ್ಮಾನ್ನಾಽಽಹೂತಃ ಸಹಿತೋ ಮಯಾ ॥೨೫॥

ಇತ್ಯಾಕರ್ಣ್ಯ ಮೃಡಾಣ್ಯೋಕ್ತಂ ದಕ್ಷೋ ರೋಷಾರುಣೇಕ್ಷಣಃ ।
ಶೃಣು ವತ್ಸೇ ನ ಯಜ್ಞೇಽಸ್ಮಿನ್ ಶಿವಃ ಪೂಜಾಂ ಸಮರ್ಹತಿ ॥೨೬॥

ಇತಿ ನಾಽಽಕಾರಿತ ಸ್ತ್ವಂ ತು ನ ಪೂಜ್ಯಾ ತಸ್ಯ ಯೋಗತಃ ।
ನಿಶಮ್ಯೈವಂ ಪಿತುರ್ವಾಕ್ಯಂ ಸತೀ ಪ್ರಾಹಾಪಮಾನಿತಾ ॥೨೭॥

ತಾತ ತೇ ಚಿತ್ತವಿಭ್ರಂಶೋ ಮಹಾನೇಷೋಽಶುಭೋದಯಃ ।
ಮ್ರಿಯಮಾಣಸ್ಯೇವ ಜಂತೋರ್ವಿಪರೀತಾರ್ಥ ದರ್ಶನಂ ॥೨೮॥

ಶಿವಃ ಪರಮಕಲ್ಯಾಣಮಯಃ ಸರ್ವಸುಪೂಜಿತಃ ।
ಪೂಜ್ಯತೇ ಯತ್ರ ನೋ ಯಜ್ಞೇ ನಸ ಯಜ್ಞೋ ಭವೇತ್ಕ್ವಚಿತ್॥೨೯॥

---

ಇಂಥಾ ಯಾಗವನ್ನು ಪ್ರಾರಂಭಿಸಿದ್ದರೂ ನನ್ನನ್ನು ಇಲ್ಲಿಗೆ ಕರೆಯಲು ನೀನು ಮರೆತೆಯಾ ? " ಎಂದು ಕೇಳಿದಳು. ॥೨೪॥

ನೀನು ಇತರ ಹೆಣ್ಣುಮಕ್ಕಳನ್ನೂ ಅವರ ಗಂಡಂದಿರೊಂದಿಗೆ ಕರೆದಿದ್ದರೂ ನನ್ನ ಪತಿಯಾದ ಶಿವನೊಂದಿಗೆ ನನ್ನನ್ನು ಮಾತ್ರ ಏಕೆ ಕರೆಯಲಿಲ್ಲ. ? ॥೨೫॥

ಸತಿಯು ಹೇಳಿದ ಈ ಮಾತನ್ನು ಕೇಳಿ ದಕ್ಷನು ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ ಆಕೆಯನ್ನು ಕುರಿತು, ಎಲೌ ಮಗಳೇ, ನನ್ನ ಮಾತನ್ನು ಕೇಳು. ಈ ಯಾಗದಲ್ಲಿ ಶಿವನು ಪೂಜಿಸಲ್ಪಡಲು ಯೋಗ್ಯನಾಗಿಲ್ಲ. ॥೨೬॥

ಆದ್ದರಿಂದಲೇ ನಾನು ಶಿವನನ್ನು ಕರೆಯಲಿಲ್ಲ. ಅವನಿಗೆ ಸಂಬಂಧಪಟ್ಟವಳಾದ್ದರಿಂದ ನೀನೂ ಪೂಜೆಗೆ ಯೋಗ್ಯಳಲ್ಲ. ಎಂದು ತಂದೆಯು ಹೇಳಿದ ಮಾತನ್ನು ಕೇಳಿ ಅವಮಾನದ ದುಃಖವನ್ನನುಭವಿಸುತ್ತಾ ಸತಿಯು ಅವನನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೨೭॥

ಓ ತಂದೆಯೇ, ಸಾಯುವ ಮನುಷ್ಯನಿಗೆ ಎಲ್ಲವೂ ವಿಪರೀತವಾಗಿ ಕಾಣುವಂತೆ ಅತ್ಯಂತ ಅಮಂಗಳಕರವಾದ ಬುದ್ಧಿಭ್ರಮಣೆಯು ಈ ರೀತಿಯಾಗಿ ನಿನಗುಂಟಾಗಿದೆ ! ॥೨೮॥

ಶಿವನು ಪರಮಮಂಗಳಕರನೂ, ಎಲ್ಲರಿಗೂ ಪೂಜಾಯೋಗ್ಯನೂ ಆಗಿದ್ದಾನೆ.

ಯಜ್ಞಸ್ತೇಽಯಂ ಸುಸಂಪನ್ನೋಽಪ್ಯೇಷ ನೈವೇಹ ಶೋಭತೇ ।
ವಿಭೂಷಿತಾಽಪಿ ಯುವತಿರ್ವ್ಯಂಶುಕಾ ಸುಂದರೀ ಯಥಾ ॥೩೦॥

ವಿದ್ಯಾ ಹೀನೋ ಯಥಾ ವಿಪ್ರೋ ಭರ್ತೃಹೀನಾ ಯಥಾಽಬಲಾ ।
ಶೌರ್ಯಹೀನೋ ಯಥಾ ರಾಜಾ ಕರ್ಣಹೀನಃ ಪ್ಲವೋ ಯಥಾ ॥೩೧॥

ಚಂದ್ರಹೀನಾ ಯಥಾ ರಾತ್ರಿಃ ಸೂರ್ಯಹೀನಂ ದಿನಂ ಯಥಾ ।
ತಥಾ ಕ್ರತುರಯಂ ತಾತ ಶಿವಹೀನೋ ನ ರಾಜತೇ ॥೩೨॥

ಶ್ರುತ್ವೈವಂ ವಚನಂ ತಸ್ಯಾಃ ಪ್ರಾಹ ದಕ್ಷೋಽತಿಮೂರ್ಛಿತಃ ।
ಧಿಗನಾರ್ಯೇ ವೃಥಾ ಜಲ್ಪೇ ಕಿಂ ನ ಪಶ್ಯಸಿ ವೈ ಪತಿಂ ॥೩೩॥

ಅಶಿವಂ ಶಿವನಾಮಾನಂ ಶ್ಮಶಾನಾವಾಸ ತತ್ಪರಂ ।
ನೃಕರೋಟಿಧರಂ ಚರ್ಮವಾಸಸಂ ಸರ್ಪಭೂಷಣಂ ॥೩೪॥

---

ಆತನು ಯಾವ ಯಾಗದಲ್ಲಿ ಪೂಜಿಸಲ್ಪಡುವುದಿಲ್ಲವೋ ಅದು ಯಾಗವೇ ಆಗಲಾರದು. ॥೨೯॥

ನೀನು ಮಾಡುತ್ತಿರುವ ಯಾಗವು ಎಲ್ಲಾ ವಿಧವಾದ ಸಾಮಗ್ರಿಗಳಿಂದಲೂ ಪೂರ್ಣವಾಗಿದ್ದರೂ, ಶಿವನು ಬಂದಿಲ್ಲವೇ ಇರುವುದರಿಂದ, ಯುವತಿಯು ಸುಂದರಿಯಾಗಿದ್ದರೂ ಮತ್ತು ಆಭರಣಗಳಿಂದ ಶೋಭಿಸುತ್ತಿದ್ದಾಗ್ಯೂ ಬಟ್ಟೆಯನ್ನು ಧರಿಸದೇ ಇದ್ದರೆ ಹೇಗೋ ಹಾಗೆ, ಶೋಭಿಸುತ್ತಿಲ್ಲ. ॥೩೦॥

ಓ ತಂದೆಯೇ, ವಿದ್ಯೆಯಿಲ್ಲದ ಬ್ರಾಹ್ಮಣನಂತೆಯೂ, ಗಂಡನಿಲ್ಲದ ಹೆಂಗುಸಿನಂತೆಯೂ, ಶೌರ್ಯವಿಲ್ಲದ ದೊರೆಯಂತೆಯೂ, ನಾವಿಕನಿಲ್ಲದ ದೋಣಿಯಂತೆಯೂ, ಚಂದ್ರನಿಲ್ಲದ ರಾತ್ರಿಯಂತೆಯೂ, ಸೂರ್ಯನಿಲ್ಲದ ಹಗಲಿನಂತೆಯೂ, ಶಿವನಿಲ್ಲದ ಈ ಯಾಗವು ಶೋಭಿಸುತ್ತಿಲ್ಲ. ॥೩೧-೩೨॥

ಸತಿಯಾಡಿದ ಈ ಮಾತುಗಳನ್ನು ಕೇಳಿ ದಕ್ಷನು ಬಹಳ ಕೋಪಗೊಂಡವನಾಗಿ ಅವಳನ್ನು ಕುರಿತು "ಎಲೌ ನೀಚಳೇ, ವ್ಯರ್ಥವಾಗಿ ಮಾತನಾಡುತ್ತಿರುವಳೇ, ನಿನ್ನ ಪತಿಯು ಹೀನವಾದ ಸ್ವರೂಪವು ನಿನಗೆ ಗೊತ್ತಿಲ್ಲವೋ ? ಎಂದು ಕೇಳಿದನು. ॥೩೩॥

ಅಮಂಗಳಕರನಾದರೂ ಶಿವ ಎಂದು ಹೆಸರನ್ನಿಟ್ಟುಕೊಂಡಿರುವ, 'ಯಾವಾಗಲೂ ಸ್ಮಶಾನದಲ್ಲಿಯೇ ವಾಸಮಾಡಲು ಇಷ್ಟಪಡುವ, ಮನುಷ್ಯರ ರುಂಡಗಳನ್ನು

ಭೂತಪ್ರೇತಾನುಗಂ ತ್ರ(ತ್ವ)ಸ್ಥಿಮಾಲಿನಂ ಜಟಿಲಂ ನಟಂ ।
ಏವಂ ವಿಧಃ ಕಥಂ ಪೂಜ್ಯಃ ಕ್ರತುಷು ಸ್ಯಾದ್ವಿನಿಂದಿತಃ ॥೩೫॥

ಗಚ್ಛ ತ್ವಂ ತತ್ರ ಯತ್ರಾಸ್ತಿ ಪತಿಸ್ತೇ ಹ್ಯಶಿವಂಕರಃ ।
ಇತಿ ಶ್ರುತ್ವಾ ಪಿತುರ್ವಾಕ್ಯಂ ಸತೀ ಪತಿ ವಿನಿಂದನಂ ॥೩೬॥

ಪಿಧಾಯ ಕರ್ಣೌ ಹಸ್ತಾಭ್ಯಾಂ ಮನ್ಯುನಾ ಜ್ವಲಿತಾ ಸತೀ ।
ಅಸಾಂಪ್ರತಂ ವಚಸ್ತೇಽದ್ಯ ದೇವದೇವಂ ವಿನಿಂದಸಿ ॥೪೭॥

ವ್ಯರ್ಥಂ ತೇಽತಃ ಕ್ರತುರಯಂ ವಿಹಿತೋಽಸ್ತು ಪಿತಸ್ತಥಾ ।
ಭರ್ತುರ್ಮಹೇಶ್ವರಸ್ಯೇತ್ಥಂ ನಿಂದಕಾದೇಷ ದೇಹಕಃ ॥೩೮॥

ಸಂಭೂತೋ ಧಾರಣ್ಯಾನರ್ಹಃ ಸಂಶ್ರುತಂ ಪತಿನಿಂದನಂ ।
ಇತ್ಯುಕ್ತ್ವಾಽತಿರುಷಾ ಸಂವರ್ತಾಽಗ್ನಿ ಧಾರಣಮಾಸ್ಥಿತಾ ॥೩೯॥

---

ಧರಿಸಿರುವ, ಚಕ್ಕಳಗಳನ್ನು ಹೊದ್ದುಕೊಂಡಿರುವ, ಸರ್ಪವನ್ನೇ ಅಲಂಕಾರವನ್ನಾಗಿ ಮಾಡಿಕೊಂಡಿರುವ, ಭೂತಗಳು ಮತ್ತು ಪಿಶಾಚಿಗಳನ್ನು ಅನುಸರಿಸಿಕೊಂಡು ಹೋಗುವ, ಜಟೆಗಳಿಂದ ಕೂಡಿರುವ, ನಟನಾದ ನಿನ್ನ ಗಂಡನ ಹೀನಸ್ವರೂಪ ವನ್ನು ಮರೆತಿಯೋ ? ಇಂಥಾ ವಿಶೇಷ ನಿಂದೆಗೆ ಪಾತ್ರನಾದ ನಿನ್ನ ಗಂಡನು ಯಾಗಗಳಲ್ಲಿ ಪೂಜೆಗೆ ಹೇಗೆ ಯೋಗ್ಯನಾದಾನು ? ॥೩೪-೩೫॥

ಅಮಂಗಳಕರನಾದ ನಿನ್ನ ಗಂಡನಿರುವ ಕಡೆಗೆ ನೀನು ಹೊರಡು, ಎಂದು ತಂದೆಯಾಡಿದ್ದ, ತನ್ನ ಪತಿಯಾದ ಶಿವನ ನಿಂದೆಯಿಂದ ಪೂರ್ಣವಾದ, ಮಾತನ್ನು ಕೇಳಿ, ಸತೀದೇವಿಯು ಸಹಿಸಲಾರದೇ ಕೈಗಳಿಂದ ತನ್ನ ಕಿವಿಗಳನ್ನು ಮುಚ್ಚಿ ಕೊಂಡು ಕೋಪದಿಂದ ಉರಿಯುತ್ತಾ “ ಓ ತಂದೆಯೇ, ದೇವದೇವನಾದ ನನ್ನ ಪತಿಯಾದ ಶಿವನನ್ನು ನೀನು ನಿಂದಿಸುತ್ತಿರುವುದು ಸರ್ವಥಾ ಅಯೋಗ್ಯವು. ॥೩೬-೩೭॥

ಓ ತಂದೆಯೇ, ನನ್ನ ಗಂಡನೂ, ಮಹೇಶ್ವರನೂ ಆದ ಶಿವನನ್ನು ನೀನು ಈ ರೀತಿಯಲ್ಲಿ ದೂಷಿಸಿದ್ದರಿಂದ ನೀನು ಮಾಡುವ ಯಾಗವು ವ್ಯರ್ಥವಾಗಿ ಹಾಳಾ ಯಿತೆಂದೇ ತಿಳಿ. ಹೀಗೆ ಪರಮೇಶ್ವರನನ್ನೇ ನಿಂದಿಸುತ್ತಿರುವ, ಪಾಪಿಯಾದ, ನಿನ್ನಿಂದುಂಟಾದ ಈ ನನ್ನ ದೇಹವನ್ನು ನಾನು ಇನ್ನು ಮುಂದೆ ಹೊಂದಿರುವುದೂ

ಕ್ಷಣಂ ಪ್ರಜಜ್ವಾಲ ತತೋ ದೇಹಸ್ತಸ್ಯಾ ಮಹಾಗ್ನಿನಾ ।
ಜ್ವಾಲಯಾ ಸಹಿತೋ ದೇಹೋ ಭಸ್ಮಶೇಷೀಭವತ್ಕ್ಷಣಾತ್ ॥೪೦॥

ಏವಂ ಸಾ ಭಸ್ಮತಾಂ ಪ್ರಾಪ್ತಾ ಲಕ್ಷ್ಮ್ಯಾಃ ಶಾಪೇನ ಭಾರ್ಗವ ।
ಭರ್ತೃನಿಂದಾ ಶ್ರುತಿವಶಾ ತ್ಕ್ರೋಧಾಗ್ನೌ ಭಸ್ಮತಾಂ ಗತಾ ॥೪೧॥

ಇತಿ ಶ್ರುತ್ವಾಥ ಪಪ್ರಚ್ಛ ರಾಮೋ ಭೃಗುಕುಲೋದ್ವಹಃ ।
ಕಥಾರಸ ಸಮಾಸ್ವಾದ ಹರ್ಷನಿರ್ಭರಿತಾಂತರಃ ॥೪೨॥

ಭಗವನ್ ಭವತಾ ಪ್ರೋಕ್ತಾ ಗಂಗಾ ಶಕ್ತಿಸ್ವರೂಪಿಣೀ ।
ಕಾ ಸಾ ಶಕ್ತಿರ್ಬ್ರಹ್ಮಮಯೀ ಲೋಕಾನುದ್ಧರ್ತುಮಿಚ್ಛಯಾ ॥೪೩॥

ಬ್ರಹ್ಮಾದ್ಯೈಃ ಪ್ರಾರ್ಥಿತಾ ಗಂಗಾರೂಪಿಣೀ ಸಮಜಾಯತ ।
ಶ್ರೋತುಂ ಮೇ ತದತೀವೇಚ್ಛಾ ವದ ಮೇऽನುಗ್ರಹಾದ್ಗುರೋ ॥೪೪॥

---

ಅಯುಕ್ತವು. ಹೀಗೆ ಹೇಳಿ ಬಹಳ ಕೋಪದಿಂದ ಸತಿಯು ಆ ಯಾಗಶಾಲೆಯಲ್ಲಿ ಸಂವರ್ತ ಎಂಬ ಅಗ್ನಿಕುಂಡದಲ್ಲಿ ಬಿದ್ದುಬಿಟ್ಟಳು. ಅದರ ದೊಡ್ಡ ಅಗ್ನಿಯಿಂದ ಅವಳ ದೇಹವು ಕ್ಷಣಕಾಲದಲ್ಲಿಯೇ ಉರಿದು ಬೂದಿಯಾಗಿಬಿಟ್ಟಿತು. ॥೩೮-೩೯-೪೦॥

ಎಲೈ ಪರಶುರಾಮನೇ, ಹೀಗೆ ಗೌರಿಯು ಲಕ್ಷ್ಮಿಯ ಶಾಪನಿಮಿತ್ತವಾಗಿ ಈ ಸಂದರ್ಭದಲ್ಲಿ ತನ್ನ ಪತಿಯನಿಂದೆಯನ್ನು ಕೇಳಿದ್ದರಿಂದ ಕೋಪಾಗ್ನಿಯಿಂದ ಉರಿಯುತ್ತಾ ಯಾಗಾಗ್ನಿಯಲ್ಲಿ ಬೂದಿಯಾದಳು. ॥೪೧॥

ಭೃಗುವಂಶ ಶ್ರೇಷ್ಠನಾದ ಪರಶುರಾಮನು ದತ್ತಾತ್ರೇಯ ಗುರುವು ಹೇಳಿದ ಈ ಕಥೆಯನ್ನು ಕೇಳಿ, ಕಥೆಯ ಸ್ವಾರಸ್ಯವನ್ನು ಅನುಭವಿಸಿದ್ದರಿಂದ ಅತ್ಯಂತ ಆನಂದ ಭರಿತನಾಗಿ ಪುನಃ ಅವನನ್ನು ಈರೀತಿಯಲ್ಲಿ ಪ್ರಶ್ನಿಸಿದನು. ॥೪೨॥

ಓ ಪೂಜ್ಯರೇ, ತಾವು ಹೇಳಿದ ಶಕ್ತಿಸ್ವರೂಪಳಾದ ಗಂಗೆ ಎಂಬವಳು ಯಾರು ? ಲೋಕೋದ್ಧಾರಕ್ಕಾಗಿ ಬ್ರಹ್ಮನೇ ಮೊದಲಾದವರಿಂದ ಪ್ರಾರ್ಥಿಸಲ್ಪಟ್ಟ, ಬ್ರಹ್ಮಸ್ವರೂಪಳೇ ಆದ, ಆ ಶಕ್ತಿ ದೇವಿಯು ಯಾರು ? ಆ ಶಕ್ತಿಯೇ ಗಂಗಾಸ್ವರೂಪಳಾಗಿ ಹೇಗೆ ಉಂಟಾದಳು ? ಓ ಗುರುಗಳೇ, ಇವೆಲ್ಲವನ್ನೂ ಕೇಳಬೇಕೆಂಬ ಇಚ್ಛೆಯು ನನಗೆ ಬಹಳವಾಗಿದೆ. ಆದ್ದರಿಂದ ತಾವು ನನ್ನ ಮೇಲೆ ಕೃಪೆಯಿಟ್ಟು ಈ ವಿಷಯಗಳನ್ನೆಲ್ಲವನ್ನೂ ಹೇಳಬೇಕು. ॥೪೩-೪೪॥

ಇತಿ ಪೃಷ್ಟೋ ಭಾರ್ಗವೇಣ ದತ್ತಾತ್ರೇಯಃ ಸಮಬ್ರವೀತ್ ।
ಶೃಣು ರಾಮ ಶಕ್ತಿರ್ಯಾ ತಥಾ ಗಂಗಾರೂಪಿಣೀ ಸ್ಮೃತಾ ॥೪೫॥

ಸಾ ಪುರೋಕ್ತೈವ ತ್ರಿಪುರಾ ಕುಮಾರೀ ಚ ತ್ರಿರೂಪಿಕಾ ।
ಯಾ ಸಂಭೂತಾ ಸೈವ ಶಕ್ತಿರ್ಗಂಗಾ ಭೂಲೋಕಪಾವನೀ ॥೪೬॥

ಯಾಂ ಬ್ರಹ್ಮಪ್ರಮುಖಾಶ್ಚಾಽಪಿ ಪೂಜಯಂತ್ಯತಿಭಕ್ತಿತಃ ।
ಸಾ ಪರಬ್ರಹ್ಮಮಹಿಷೀ ಗಂಗಾ ಮೋಕ್ಷಾಽತ್ಮರೂಪಿಣೀ ॥೪೭॥

ಯಾ ದೃಷ್ಟಾ ಚಾಽಥ ಸಂಸ್ಪೃಷ್ಟಾ ಪೀತಾಽಪಿ ಕಣಮಾತ್ರತಃ ।
ಪುನಾತಿ ಸರ್ವದುಷ್ಕೃತ್ಯಂ ಗಂಗಾ ಸರ್ವೋತ್ತಮೋತ್ತಮಾ ॥೪೮॥

ತ್ರಿಪುರಾ ಚ ತ್ರಿಮಾರ್ಗಸ್ಥಾ ತ್ರಿಪಥೇತಿ ಶ್ರುತಾ ಪುನಃ ।
ಸ್ಥೂಲಾ ತ್ರಿಪಥಗಾ ಜಾತಾ ಸ್ಥೂಲದೃಷ್ಟ್ಯನುಕಂಪಯಾ ॥೪೯॥

---

ಹೀಗೆ ಪರಶುರಾಮನು ಕೇಳಲಾಗಿ ದತ್ತಾತ್ರೇಯನು ಈರೀತಿಯಲ್ಲಿ ಹೇಳಿದನು. :—ಎಲೈ ಪರಶುರಾಮನೇ, ಗಂಗಾರೂಪಧಾರಿಣಿಯಾದ ಶಕ್ತಿಯು, ಹಿಂದೆ ಹೇಳಿದ ಕುಮಾರಿಯೂ, ಮೂರುಸ್ವರೂಪವನ್ನು ಧರಿಸಿರುವವಳೂ, ಆದ ತ್ರಿಪುರಾ ದೇವಿಯೇ ಎಂದು ತಿಳಿ. ಭೂಲೋಕವನ್ನು ಪವಿತ್ರವನ್ನಾಗಿ ಮಾಡುವುದಕ್ಕಾಗಿ ಆ ಶಕ್ತಿ ದೇವಿಯೇ ಗಂಗಾಸ್ವರೂಪಳಾಗಿ ಅವತರಿಸಿದಳು. ॥೪೫-೪೬॥

ಈ ಶಕ್ತಿಯನ್ನೇ ಬ್ರಹ್ಮನೇ ಮೊದಲಾದವರೂ ಬಹಳ ಭಕ್ತಿಯಿಂದ ಪೂಜಿಸುತ್ತಾರೆ. ಪರಬ್ರಹ್ಮನ ಪಟ್ಟದರಾಣಿಯಾದ ಮೋಕ್ಷಪ್ರದವಾದ ಆತ್ಮಸ್ವರೂಪಳಾದ ಗಂಗೆಯೇ ಈಕೆಯೆಂದು ತಿಳಿ. ॥೪೭॥

ಯಾವ ಗಂಗೆಯ ಜಲವನ್ನು ನೋಡಿದರೂ, ಮುಟ್ಟಿದರೂ, ಅಥವಾ ಒಂದು ತೊಟ್ಟು ಪಾನಮಾಡಿದರೂ ಅಂತಹ ಭಕ್ತರ ಎಲ್ಲಾ ಪಾಪಗಳ ನಿವಾರಣೆಯಾಗುತ್ತದೋ, ಅಂಥಾ ಎಲ್ಲರಿಗಿಂತಲೂ ಅತ್ಯಂತ ಶ್ರೇಷ್ಠಳಾದ ಗಂಗೆಯೇ ಈಕೆಯೆಂದು ತಿಳಿ. ॥೪೮॥

ಈ ತ್ರಿಪುರಾದೇವಿಯೇ ಸ್ವರ್ಗಮರ್ತ್ಯಪಾತಾಳ ಲೋಕಗಳೆಂಬ ಮೂರು ಮಾರ್ಗದಲ್ಲಿ ಪ್ರವಹಿಸುವವಳಾಗಿ ತ್ರಿಪಥಗಾ ಎಂದು ಹೆಸರನ್ನು ಪಡೆದಳು. ಸ್ಥೂಲ

ತಸ್ಮಾದ್ಗಂಗಾ ರಸಮಯೀ ತ್ರಿಪುರೈವ ಸಮೀರಿತಾ ।
ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟಂ ಭಾರ್ಗವ ತ್ವಯಾ ॥೫೦॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ತ್ರಯೋವಿಂಶೋಽಧ್ಯಾಯಃ

---

ವಾದ ಬುದ್ಧಿಯುಳ್ಳ ಜನಗಳ ಮೇಲಣ ಕೃಪೆಯಿಂದ ಈಕೆಯೇ ಸ್ಥೂಲವಾದ ಜಲ ಪ್ರವಾಹದ ಸ್ವರೂಪವನ್ನು ಹೊಂದಿ ತ್ರಿಪಥಗಾ ಎನ್ನಿಸಿಕೊಂಡಳು. ॥೪೯॥

ಆದ್ದರಿಂದ ನೀರಿನ ಸ್ವರೂಪವನ್ನು ಧರಿಸಿದ ತ್ರಿಪುರಾದೇವಿಯೇ ಗಂಗೆಯೆಂದು ಹೇಳಲ್ಪಟ್ಟಿದ್ದಾಳೆ. ಎಲೈ ಪರಶುರಾಮನೇ, ನೀನು ಕೇಳಿದ್ದ ಪ್ರಶ್ನೆಗಳಿಗೆ ಎಲ್ಲಕ್ಕೂ ಸಮಾಧಾನಕರವಾದ ಉತ್ತರವನ್ನು ಹೇಳಿದ್ದೇನೆ. ॥೫೦॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಚತುರ್ವಿಂಶೋಽಧ್ಯಾಯಃ ||

### ಇಪ್ಪತ್ತುನಾಲ್ಕನೆಯ ಅಧ್ಯಾಯವು

ಇತಿ ಶ್ರುತ್ವಾ ಜಾಮದಗ್ನ್ಯಃ ಕಥಾಽಮೃತರಸಾಽಽಪ್ಲುತಃ ।
ಪುನರ್ಗುರುಂ ಪೂರ್ವಕಥಾಂ ಪ್ರಷ್ಟುಂ ಸಮುಪಚಕ್ರಮೇ ॥೧॥

ಶ್ರೀಗುರೋ ಕರುಣಾಸಿಂಧೋ ತ್ವತ್ಪ್ರೋಕ್ತರಸ ಸೇವನಾತ್ ।
ಶೋಕಮೋಹಭಯಾಃ ಸರ್ವೇ ನಿಶ್ಶೇಷೇಣ ಲಯಂ ಗತಾಃ ॥೨॥

ನ ತೃಪ್ಯಾಮಿ ಮನಾಕ್ ಕ್ವಾಽಪಿ ಕಥಾ ಸಂಶ್ರವಣಾತ್ತವ ।
ಏವಂ ಪರಾಸ್ತೇ ಮದನೇ ಮನುಷ್ಯೇಷು ಮಹೀತಲೇ ॥೩॥

ದೇವಾನಾಂ ಪ್ರಿಯಕೃದ್ಯಾಗಃ ಕಿಂ ನಿಮಿತ್ತಮವರ್ತತ ।
ಕಾಮೇನಾಽಪಿ ಕಥಂ ದೇವಃ ಶಂಕರಃ ಖಲು ನಿರ್ಜಿತಃ ॥೪॥

---

ದತ್ತಾತ್ರೇಯನು ಹೇಳಿದ್ದನ್ನೆಲ್ಲವನ್ನೂ ಕೇಳಿ, ಪರಶುರಾಮನು ಕಥಾಮೃತ ರಸದಿಂದ ತೋಯಿಸಲ್ಪಟ್ಟ ಮನಸ್ಸುಳ್ಳವನಾಗಿ, ಪುನಃ ಗುರುಗಳನ್ನು ಹಿಂದೆ ಹೇಳಿದ ಕಥೆಗೆ ಮುಂಚೆ ಹೇಳಿದ್ದ ಕಥಾಭಾಗವನ್ನು ಹೇಳಲು ಉಪಕ್ರಮಿಸಿದನು. ||೧||

ಕರುಣಾಸಾಗರರಾದ ಶ್ರೀಗುರುಗಳೇ, ತಾವು ಹೇಳಿದ ಕಥಾಸಾರದ ಸೇವನೆ ಯಿಂದ ನನ್ನ ಸಮಸ್ತವಾದ ಶೋಕ, ಅಜ್ಞಾನ, ಭಯ, ಇವೆಲ್ಲವೂ ಸಂಪೂರ್ಣವಾಗಿ ತೊಲಗಿದವು. ||೨||

ತಾವು ಹೇಳುವ ಕಥೆಗಳನ್ನು ಎಷ್ಟು ಕೇಳಿದರೂ ನನಗೆ ಸಾಕೆನಿಸುವಷ್ಟು ತೃಪ್ತಿಯುಂಟಾಗದೇ ನನಗೆ ಇನ್ನೂ ಕೇಳಬೇಕೆನಿಸುತ್ತದೆ. ಭೂಮಿಯಲ್ಲಿ ಮನ್ಮಥನು ಈರೀತಿಯಲ್ಲಿ ನಾಶಮಾಡಲ್ಪಡಲು ದೇವತೆಗಳಿಗೆ ಇಷ್ಟವಾದ ಯಾಗವು ಹೇಗೆ

ಭಸ್ಮೀಭೂತಃ ಕಥಂ ಭೂಯೋ ಜೀವಿತೋ ವದ ಕೃತ್ಸ್ನಶಃ ।
ಏವಂ ರಾಮೇಣಾಽನುಯುಕ್ತೋ ದತ್ತಾತ್ರೇಯೋ ಗುರೂತ್ತಮಃ ॥೫॥

ಉಪಾಮಂತ್ರ್ಯ ಜಾಮದಗ್ನ್ಯಂ ಪ್ರಾಹ ಪ್ರವದತಾಂ ವರಃ ।
ಜಾಮದಗ್ನ್ಯ ಮಹಾಬುದ್ಧೇ ಶೃಣು ಪ್ರಶ್ನಾನ್ ಯಥಾ ಕ್ರಮಾತ್ ॥೬॥

ಇತಿಹಾಸಃ ಪೂರ್ವತನಶ್ಚಿತ್ರಿತೋಽಯಂ ಸುಖೋದಯಃ ।
ಏವಂ ವಿನಿರ್ಜಿತೇ ಕಾಮೇ ಬಂಧಾನ್ಮುಕ್ತೋ ದಿವಸ್ಪತಿಃ ॥೭॥

ನಿರ್ಜರೋಭಿಃ ಸಮೇತೋಽಗಾತ್ತ್ರಿವಿಷ್ಟಪಪುರಂ ಪ್ರತಿ ।
ಉವಾಸ ತತ್ರ ದೇವೇಂದ್ರಃ ಪೂರ್ವವದ್ದೇವತಾದಿಭಿಃ ॥೮॥

ಯಾವದ್ವೀರವ್ರತೋ ರಾಜಾ ಪೃಥಿವೀಮಧಿ ಸಂಸ್ಥಿತಃ ।
ತಾವದ್ದೇವ ಪತಿರ್ವೀರವ್ರತೇನ ಕೃತಸಖ್ಯಕಃ ॥೯॥

---

ರೂಢವಾಯಿತು? ಮನ್ಮಥನೂ ಕೂಡ ದೇವನಾದ ಶಂಕರನನ್ನು ಹೇಗೆ ಜಯಿಸಿದನು? ॥೩-೪॥

ಬೂದಿಯಾಗಿದ್ದ ಮನ್ಮಥನು ಪುನಃ ಬದುಕಿದ್ದು ಹೇಗೆ? ಇವೆಲ್ಲಕ್ಕೂ ವಿವರವಾಗಿ ಉತ್ತರವನ್ನು ಕೊಡಿ. ಹೀಗೆಂದು ಪರಶುರಾಮನು ಪ್ರಶ್ನಿಸಲು ಮಾತುಗಾರರಲ್ಲಿ ಉತ್ತಮನೂ, ಮತ್ತು ಶ್ರೇಷ್ಠಗುರುವಾದ ದತ್ತಾತ್ರೇಯನು ಪರಶುರಾಮನನ್ನು ಹತ್ತಿರಕ್ಕೆ ಕರೆದು, ಎಲೈ ಬಹಳ ಬುದ್ಧಿಶಾಲಿಯಾದ ಪರಶುರಾಮನೇ, ನಿನ್ನ ಪ್ರಶ್ನೆಗಳೆಲ್ಲಕ್ಕೂ ಕ್ರಮವಾಗಿ ಉತ್ತರವನ್ನು ಹೇಳುವೆನು, ಕೇಳು. ಎಂದನು. ॥೫-೬॥

ಹಿಂದೆ ನಡೆದ ಈ ಆಶ್ಚರ್ಯಕರವಾದ ಇತಿಹಾಸವು ಮನಸ್ಸಿಗೆ ಸುಖವಾಗುವಂತೆ ವರ್ಣಿಸಲ್ಪಟ್ಟಿದೆ. ಹೀಗೆ ಮನ್ಮಥನು ಮನುಷ್ಯರಿಂದ ಜಯಿಸಲ್ಪಡಲು, ಆಮೇಲೆ ಸ್ವರ್ಗಾಧಿಪತಿಯಾದ ಇಂದ್ರನು ಬಂಧನದಿಂದ ಬಿಡುಗಡೆಮಾಡಲ್ಪಟ್ಟನು. ॥೭॥

ಅನಂತರದಲ್ಲಿ ಇಂದ್ರನು ದೇವತೆಗಳೊಂದಿಗೆ ಸ್ವರ್ಗಲೋಕವನ್ನು ಕುರಿತು ತೆರಳಿದನು. ಅಲ್ಲಿ ಅವನು ಹಿಂದಿನಂತೆಯೇ ದೇವತೆಗಳೇ ಮೊದಲಾದವರೊಂದಿಗೆ ವಾಸಮಾಡುತ್ತಿದ್ದನು. ॥೮॥

ವೀರವ್ರತಧೊರೆಯು ಭೂಮಿಯಮೇಲೆ ಎಲ್ಲಿಯವರೆಗೆ ರಾಜ್ಯಭಾರಮಾಡುತ್ತಿದ್ದನೋ ಅಲ್ಲಿಯವರೆಗೂ ದೇವೇಂದ್ರನು ಅವನೊಂದಿಗೆ ಸ್ನೇಹವನ್ನು ಬೆಳೆಸಿದ್ದನು. ॥೯॥

ತತಃ ಕಾಲಾಂತರೇ ಶಕ್ರಃ ಪ್ರಾಯಾದ್ದೇವಗಣೈರ್ವೃತಃ ।
ಸತ್ಯಲೋಕಂ ತತ್ರ ವಿಧಿಂ ದಂಡವತ್ಪ್ರಣತೋ ಬುಧೈಃ ॥೧೦॥

ತದಾಲೋಕ್ಯ ವಿಧಿಃ ಶಕ್ರಂ ಸಂಗತಂ ಸಹ ದೇವತೈಃ ।
ಪ್ರೋವಾಚ ಕೃಪಯಾಽಽವಿಷ್ಟಃ ಸ್ನಿಗ್ಧಗಂಭೀರಯಾ ಗಿರಾ ॥೧೧॥

ವಿಬುಧೇಶ ಸಮುತ್ತಿಷ್ಠ ಕಿಂ ತೇ ಸಮಭಿವಾಂಛಿತಂ ।
ವದ ದ್ರುತಂ ತದ್ದಿಶಾಮಿ ಯೇನ ತ್ವಂ ಸುಖಮಾಪ್ಸ್ಯಸಿ ॥೧೨॥

ಇತಿ ಶ್ರುತ್ವಾ ವಿಧಿವಚೋ ವಿಬುಧೇಶ್ವರ ಉತ್ಥಿತಃ ।
ಬದ್ಧಾಂಜಲಿಃ ನಿಗದಿತುಂ ಪ್ರಾಕ್ರಮದ್ವಿಬುಧೈರ್ವೃತಃ ॥೧೩॥

ಪಿತಾಮಹ ಪುರಾಽಸ್ಮಾಭಿ ರ್ಭವತಾ ಪ್ರೇರಿತೈಃ ಕಿಲ ।
ಪ್ರಸಾದಿತಾ ಮಹಾಲಕ್ಷ್ಮೀಸ್ತಯಾ ಕಾಮೋ ಮಹಾಬಲೀ ॥೧೪॥

---

ಅನಂತರದಲ್ಲಿ ಬೇರೊಂದು ಕಾಲದಲ್ಲಿ ಇಂದ್ರನು ಇತರ ದೇವತೆಗಳ ಸಮೂಹದಿಂದ ಕೂಡಿದವನಾಗಿ ಸತ್ಯಲೋಕಕ್ಕೆ ಹೋದನು. ಅಲ್ಲಿ ಇವನು ಇತರ ದೇವತೆಗಳೊಡನೆ ಬ್ರಹ್ಮನಿಗೆ ದಂಡಾಕಾರವಾಗಿ ಸಾಷ್ಟಾಂಗವಾಗಿ ಪ್ರಣಾಮವನ್ನು ಮಾಡಿದನು. ॥೧೦॥

ಬ್ರಹ್ಮನು ಇದನ್ನು ನೋಡಿ ಇತರದೇವತೆಗಳೊಂದಿಗೆ ಬಂದಿದ್ದ ಇಂದ್ರನೇ ಮುಂತಾದ ದೇವತೆಗಳನ್ನು ಕುರಿತು ಬಹಳ ಕರುಣೆಯಿಂದ ಕೂಡಿದವನಾಗಿ ಸ್ನೇಹಗಾಂಭೀರ್ಯಗಳಿಂದ ಕೂಡಿದ ಮಾತುಗಳನ್ನಾಡಿದನು. ॥೧೧॥

ಎಲೈ ದೇವತೆಗಳಿಗೆ ಅಧಿಪತಿಯಾದ ದೇವೇಂದ್ರನೇ, ಏಳು. ನಿನಗೆ ಇಷ್ಟವಾದದ್ದನ್ನು ಶೀಘ್ರವಾಗಿ ಹೇಳು. ಅದನ್ನು ಕೂಡಲೇ ನೀಡುವೆನು. ಅದರಿಂದ ನಿನಗೆ ಸುಖವಾಗಲೆಂಬುದೇ ನನ್ನ ಇಷ್ಟವಾಗಿದೆ. ॥೧೨॥

ಬ್ರಹ್ಮನ ಈ ಮಾತನ್ನು ಕೇಳಿ ದೇವೇಂದ್ರನು ಮೇಲಕ್ಕೆದ್ದನು. ಅನಂತರದಲ್ಲಿ ಇವನು ದೇವತೆಗಳಿಂದ ಕೂಡಿ, ಕೈಜೋಡಿಸಿಕೊಂಡು ಬ್ರಹ್ಮನಿಗೆ ತನ್ನ ಅಭಿಲಾಷೆಯನ್ನು ವಿಜ್ಞಾಪಿಸಿಕೊಳ್ಳಲು ಪ್ರಾರಂಭಿಸಿದನು. ॥೧೩॥

ಓ ಬ್ರಹ್ಮನೇ, ನೀನು ನನಗೆ ಹಿಂದೆ ಪ್ರೇರಿಸಿದಂತೆ ನಾವು ಮಹಾಲಕ್ಷ್ಮಿಯನ್ನು ತಪಸ್ಸಿನಿಂದ ಮೆಚ್ಚಿಸಿದೆವು. ಆಕೆಯಿಂದ ನಮ್ಮ ಇಷ್ಟಸಿದ್ಧಿಗಾಗಿ ಮಹಾ ಬಲ

ಅಸ್ಮದರ್ಥಸ್ಯ ಸಂಸಿದ್ಧ್ಯೈ ಪ್ರೇರಿತಸ್ತೇನ ವೈ ಸಹ ।
ವೀರವ್ರತಾತ್ಪರಾಭೂತೋ ಬದ್ಧೋ ದೇವಗಣೈಃ ಸಹ ॥೧೫॥

ಕಥಂ ಚಿದ್ಗುರುವಾಕ್ಯೇನ ಮುಕ್ತೋ ಧರ್ಮಂ ವಿಜಾನತಾ ।
ಅಥ ತತ್ಸಖಿಭಾವೇನ ಕಾಲೋಽಯ ಮತಿವಾಹಿತಃ ॥೧೬॥

ನಾಽದ್ಯಾಽಪಿ ಮರ್ತ್ಯಾ ಭೂಲೋಕೇ ಯಜಂತೇ ವಿಬುಧಾನ್ ಕ್ವಚಿತ್ ।
ಇತಿ ವಿಜ್ಞಾಪನಾಽರ್ಥಾಯ ದೇವೈರತ್ರ ಸಮಾಗತಃ ॥೧೭॥

ಅಗ್ರೇ ಯಥಾ ಭವಾನಾಹ ತಥಾ ವರ್ತೇ ಸುರೈಃ ಸಹ ।
ಇತಿ ಶ್ರುತ್ವಾ ಶಕ್ರವಚಃ ಸ್ರಷ್ಟಾ ಧ್ಯಾತ್ವಾ ಕ್ಷಣಂ ತತಃ ॥೧೮॥

ಪ್ರಾಹ ಬ್ರಹ್ಮಾ ಶತಮುಖಂ ದೇವೇಶ ಶೃಣ್ವಿತೀರಯನ್ ।
ನ ಸಂಪ್ರತಿ ಮನುಷ್ಯಾ ವೋ ಯಷ್ಟುಮರ್ಹಂತಿ ಸರ್ವಥಾ ॥೧೯॥

---

ಶಾಲಿಯಾದ ಮನ್ಮಥನು ಕಳುಹಿಸಲ್ಪಟ್ಟನು. ಆದರೆ ಅವನು ವೀರವ್ರತನಿಂದ ಸೋಲಿಸಲ್ಪಟ್ಟು ದೇವತೆಗಳ ಜೊತೆಯಲ್ಲಿ ಬಂಧಿಸಲ್ಪಟ್ಟನು. ॥೧೪-೧೫॥

ಆದರೆ ಧರ್ಮಜ್ಞನಾದ ಆ ವೀರವ್ರತಧೊರೆಯು ತನ್ನ ಪುರೋಹಿತರಾದ ಗುರುಗಳ ಮಾತನ್ನು ಗೌರವಿಸಿ ಗೌರವದಿಂದ ಇವರನ್ನೆಲ್ಲರನ್ನೂ ಬಿಡುಗಡೆಮಾಡಿದನು. ಅನಂತರದಲ್ಲಿ ನಾನು ಅವನ ಸ್ನೇಹಿತನಾಗಿಯೇ ಇದ್ದುಕೊಂಡು ಇಷ್ಟು ಕಾಲವನ್ನೆಲ್ಲವನ್ನೂ ಕಳೆದಿದ್ದೇನೆ. ॥೧೬॥

ಈಗಲೂ ಕೂಡ ಮನುಷ್ಯರು ಭೂಮಿಯಲ್ಲಿ ದೇವತೆಗಳಾದ ನಮ್ಮನ್ನುದ್ದೇಶಿಸಿ ಯಾಗಗಳನ್ನು ಮಾಡುತ್ತಿಲ್ಲ. ಈ ವಿಷಯವನ್ನು ನಿನಗೆ ವಿಜ್ಞಾಪನೆ ಮಾಡಿಕೊಳ್ಳುವುದಕ್ಕಾಗಿಯೇ ದೇವತೆಗಳೊಂದಿಗೆ ನಾನು ಇಲ್ಲಿಗೆ ಬಂದಿದ್ದೇನೆ. ॥೧೭॥

ನೀನು ಹಿಂದೆ ಅಪ್ಪಣೆಮಾಡಿದ್ದಂತೆಯೇ ನಾನು ದೇವತೆಗಳೊಂದಿಗೆ ವಾಸಮಾಡುತ್ತಿರುವೆನು. ಎಂದು ಹೇಳಿದ ಇಂದ್ರನ ಮಾತನ್ನು ಕೇಳಿ, ಬ್ರಹ್ಮನು ಕ್ಷಣಕಾಲ ಯೋಚಿಸಿ ಈ ರೀತಿಯಲ್ಲಿ ಹೇಳಿದನು. ॥೧೮॥

ಬ್ರಹ್ಮನು ಇಂದ್ರನನ್ನು ಕುರಿತು, ಎಲೈ ದೇವೇಂದ್ರನೇ, ಕೇಳು. ಮನುಷ್ಯರು ದೇವತೆಗಳಾದ ನಿಮ್ಮನ್ನುದ್ದೇಶಿಸಿ ಯಾವ ವಿಧದಲ್ಲೂ ಈಗಲೇ ಯಾಗಮಾಡುವುದಿಲ್ಲ. ಏಕೆಂದರೆ, ॥೧೯॥

ನಿಷ್ಕಾಮತ್ವಾ ತ್ತಥಾಪ್ಯೇಕ ಮುಪಾಯಂ ಶೃಣು ವಚ್ಮಿ ತೇ ।
ಪರ್ಜನ್ಯಾನಾಮಧಿಪತಿಂ ತ್ವಾಂ ಕರೋಮ್ಯಥ ದೇವಪ ॥೨೦॥

ಯಸ್ತ್ವಾಂ ಯಜೇತ ಭೂಲೋಕೇ ತತ್ರ ತ್ವಮಭಿವರ್ಷಯ ।
ಅದ್ಯ ಯಾವತ್ಸ್ವತಂತ್ರಾಸ್ತೇ ಮೇಘಾಃ ಪರ್ಜನ್ಯಕಾರಕಾಃ ॥೨೧॥

ಮದಾಜ್ಞಯೈವ ಕಾಲೇಷು ವರ್ಷಂತಃ ಸರ್ವತೋ ದಿಶಂ ।
ತೇ ಸರ್ವೇ ತ್ವದಧೀನಾಃ ಸ್ಯುಃ ಅದ್ಯ ಪ್ರಭೃತಿ ದೇವಪ ॥೨೨॥

ಏವಂ ಪರ್ಜನ್ಯ ರಾಜಾಽಭೂದಿಂದ್ರಸ್ತೇನ ಚ ಹೇತುನಾ ।
ಜನಾಃ ಪರ್ಜನ್ಯ ಕಾಮಾ ಯೇ ತೇಷಾಂ ಯಾಜ್ಯ ಅಭೂದ್ವೃಷಾ ॥೨೩॥

ಏವಂ ದೇವಾನ್ ಯಜಂತಿ ಸ್ಮ ಕ್ವಚಿನ್ಮರ್ತ್ಯಾಃ ಕೃಷೀವಲಾಃ ।
ಏವಂ ತದಾ ಭೂಮಿಲೋಕೇ ಯಾಗಃ ಪ್ರಾವರ್ತತಾಗ್ರತಃ ॥೨೪॥

---

ಮನುಷ್ಯರು ಆಶೆಗಳನ್ನೇ ಹೊಂದದಿರುವುದರಿಂದ ನಿಮ್ಮನ್ನುದ್ದೇಶಿಸಿ ಯಾಗಗಳನ್ನು ಮಾಡಬೇಕಾಗಿರುವುದಿಲ್ಲ. ಆದಾಗ್ಯೂ ಒಂದು ಉಪಾಯವನ್ನು ಹೇಳುವೆನು, ಕೇಳು. ಎಲೈ ದೇವೇಂದ್ರನೇ, ನಿನ್ನನ್ನು ನಾನು ಮಳೆಗೆ ಅಧಿಪತಿಯನ್ನಾಗಿ ಮಾಡುವೆನು. ॥೨೦॥

ಭೂಮಿಯಲ್ಲಿ ಯಾರು ನಿನ್ನನ್ನುದ್ದೇಶಿಸಿ ಯಾಗಮಾಡುವರೋ ಅವರು ಇರುವ ಭೂಮಿಯ ಭಾಗದಲ್ಲಿ ಮಾತ್ರ ಮಳೆ ಬೀಳುವಂತೆ ಮಾಡು. ಇಲ್ಲಿಯವರೆಗೂ ಮಳೆಯನ್ನು ಸುರಿಸುತ್ತಿದ್ದ ಮೋಡಗಳು ಸ್ವತಂತ್ರಗಳಾಗಿದ್ದುವು. ಇನ್ನುಮುಂದೆ ಅವು ನನ್ನ ಅಪ್ಪಣೆಯಮೇರೆಗೆ ಎಲ್ಲಾ ದಿಕ್ಕುಗಳಲ್ಲೂ ಮಳೆಗರೆಯುವುದಿಲ್ಲವು. ಎಲೈ ದೇವೇಂದ್ರನೇ, ಇವತ್ತು ಮೊದಲುಮಾಡಿಕೊಂಡು ಆ ಮೋಡಗಳೆಲ್ಲವೂ ನಿನ್ನ ಅಧೀನಗಳಾಗುವುವು. ॥೨೧-೨೨॥

ಹೀಗೆ ಇಂದ್ರನು ಈ ಕಾರಣದಿಂದ ಮೇಘಾಧಿಪತಿಯಾದನು. ಮಳೆ ಬೀಳಬೇಕೆಂದು ಅಪೇಕ್ಷಿಸುವ ಜನರು ಇಂದ್ರನನ್ನು ಉದ್ದೇಶಿಸಿ ಯಾಗಗಳನ್ನು ಈ ರೀತಿಯಲ್ಲಿ ಮಾಡಬೇಕಾಗಿ ಬಂದಿತು ! ॥೨೩॥

ಹೀಗೆ ಭೂಮಿಯಲ್ಲಿ ವ್ಯವಸಾಯಗಾರರಾದ ಜನಗಳು ಅಲ್ಲಲ್ಲಿ ದೇವತೆಗಳನ್ನುದ್ದೇಶಿಸಿ ಯಾಗಮಾಡುವುದನ್ನು ಆದರದೊಡನೆ ಆರಂಭಿಸಿದರು. ॥೨೪॥

ಕಾಮೋ ಯಥಾ ಮಹಾದೇವ ಮಜಯತ್ತದ್ವದಾಮಿ ತೇ ।
ಏವಂ ಲಕ್ಷ್ಮ್ಯಾಂ ಭವಾನ್ಯೋಶ್ಚ ಸಮಾಧಾನೇ ತದುತ್ತರಂ ॥೨೫॥

ಕಾಮೋ ಮಾತರಮಾಚಷ್ಟ ಕೃತಾಂಜಲಿ ಪುಟಃ ಸ್ಥಿತಃ ।
ಮಾತರ್ಮೇ ಬ್ರೂಹಿ ಯೇನಾಽಹಂ ಶಿವಂ ಜೇತಾಽಸ್ಮಿಸಂಯುಗೇ ॥೨೬॥

ತಮುಪಾಯಂ ನ ಚೇದ್ದೇಹಂ ವಿನ್ಯಸೇ ತವ ಸಮ್ಮುಖೇ ।
ಮಾನಿನಾಂ ಮಾನಹಾನಿರ್ಮೇ ಮರಣಾದತಿರಿಚ್ಯತೇ ॥೨೭॥

ಅದ್ಯ ಯಾವದ್ವಿಜಾನಂತಿ ಲೋಕಾ ಯುದ್ಧೇ ಮೃತಂ ಹಿ ಮಾಂ ।
ಪ್ರಾಯಸ್ತಥೈವಾಽಸ್ತು ತಚ್ಚ ನ ಮೇ ಜೀವನಮುತ್ತಮಂ ॥೨೮॥

ನಿಶಮ್ಯೈವಂ ಕಾಮವಚೋ ಧ್ಯಾತ್ವಾ ಲಕ್ಷ್ಮೀಃ ಕ್ಷಣಂ ತತಃ ।
ತ್ರಿಪುರಾಯೈ ನಮಸ್ಕೃತ್ಯ ಕಾಮಂ ಪ್ರೇಕ್ಷ್ಯಾಽಬ್ರವೀತ್ತದಾ ॥೨೯॥

---

ಎಲೈ ದೇವೇಂದ್ರನೇ, ಕಾಮನು ಶಿವನನ್ನು ಜಯಿಸಿದ ಬಗೆಯನ್ನು ನಿನಗೆ ಹೇಳುವೆನು ಕೇಳು. ಹೀಗೆ ಲಕ್ಷ್ಮೀ ಮತ್ತು ಪಾರ್ವತೀಇವರಿಗೆ ಸಮಾಧಾನವುಂಟಾದ ಮೇಲೆ, ಮನ್ಮಥನು ಕೈಜೋಡಿಸಿಕೊಂಡು ತಾಯಿಯನ್ನು ಕುರಿತು, ಎಲೌ ತಾಯಿಯೇ, ನಾನು ಯುದ್ಧದಲ್ಲಿ ಶಿವನನ್ನು ಹೇಗೆ ಜಯಿಸಬಹುದು? ಎಂಬ ವಿಷಯವನ್ನು ತಿಳಿಸು. ಎಂದು ಕೇಳಿದನು. ॥೨೫-೨೬॥

ಎಲೌ ತಾಯಿಯೇ, ಶಿವನನ್ನು ಜಯಿಸುವ ವಿಧಾನವನ್ನು ನನಗೆ ಹೇಳಬೇಕು. ಇಲ್ಲದಿದ್ದರೆ ನನ್ನ ದೇಹವನ್ನು ನಿನ್ನ ಎದುರಿಗೆ ತ್ಯಜಿಸುವೆನು. ಮಾನಿಷ್ಠರಾದ ಜನರಿಗೆ ಮಾನಹಾನಿಯು ಪ್ರಾಣಹಾನಿಗಿಂತಲೂ ಹೆಚ್ಚು ದುಃಖವನ್ನುಂಟು ಮಾಡುವುದು. ॥೨೭॥

ಈಗ ಲೋಕದ ಜನರೆಲ್ಲರೂ ನಾನು ಯುದ್ಧದಲ್ಲಿ ಮೃತನಾಗಿಲ್ಲವೆಂದು ತಿಳಿದುಕೊಂಡಿದ್ದಾರೆ. ಅವರು ಹಾಗೆಯೇ ತಿಳಿದುಕೊಂಡಿರಲಿ. ಆದರೆ ನನಗೇನೋ ಹೀಗೆ ಬದುಕಿರುವುದು ಉತ್ತಮವಾಗಿ ತೋರುವುದಿಲ್ಲ. ॥೨೮॥

ಮನ್ಮಥನ ಈ ಮಾತನ್ನು ಕೇಳಿ, ಲಕ್ಷ್ಮಿಯು ಕ್ಷಣಕಾಲ ಧ್ಯಾನಮಾಡಿ, ಅನಂತರದಲ್ಲಿ ತ್ರಿಪುರಾದೇವಿಗೆ ನಮಸ್ಕರಿಸಿ, ಆಗ ಮನ್ಮಥನನ್ನು ನೋಡಿ ಹೀಗೆ ಮಾತನಾಡಿದಳು. ॥೨೯॥

ಕಾಮ ತೇಽಹಂ ಬ್ರವೀಮ್ಯದ್ಯ ರಹಸ್ಯಂ ಸರ್ವತೋಽಧಿಕಂ ।
ಯೇನ ಸಿದ್ಧಿಸ್ತವ ಭವೇದ್ಯುದ್ಧೇ ಸರ್ವಾಂಶ್ಚ ಜೇಷ್ಯಸಿ ॥೩೦॥

ನೈವ ತ್ವಯಾ ಕ್ವಚಿದ್ವಾಚ್ಯಂ ಪ್ರಮಾದೇನಾಽನ್ಯಥಾಽಪಿ ವಾ ।
ಶಿವಾದೀನಾಮಪಿ ನನು ಮಾಹಾತ್ಮ್ಯಂ ಯದ್ವಶಾದಭೂತ್ ॥೩೧॥

ತಸ್ಯಾಃ ಶ್ರೀತ್ರಿಪುರಾದೇವ್ಯಾಃ ಶೀಘ್ರಪ್ರೀತಿಕರಂ ಮಹತ್ ।
ಯನ್ಮಯಾಽಽಸಾದಿತಂ ಪೂರ್ವಂ ಕಾಮೇಶ್ವರ್ಯಾಃ ಸುಸೇವನಾತ್ ॥೩೨॥

ತತ್ತೇ ಬ್ರವೀಮಿ ಶ್ರೀದೇವ್ಯಾ ನಾಮಾಷ್ಟಶತಮುತ್ತಮಂ ।
ಸಂಸ್ಪೃಶ್ಯ ವಿರಜಾಂ ಶೀಘ್ರಮೇಹಿ ಮನ್ಮಥ ಮಾ ಚಿರಂ ॥೩೩॥

ಇತಿ ಶ್ರುತ್ವಾ ರಮಾವಾಕ್ಯಂ ಹರ್ಷಸಂಫುಲ್ಲಲೋಚನಃ ।
ಸಂಸ್ಪೃಶ್ಯ ವಿರಜಾತೋಯಂ ಶುಚಿರ್ಗತ್ವಾ ಹ್ಯುಪಸ್ಥಿತಃ ॥೩೪॥

---

ಎಲೈ ಮನ್ಮಥನೇ, ನಾನು ನಿನಗೆ ಈ ಎಲ್ಲಕ್ಕಿಂತಲೂ ಶ್ರೇಷ್ಠವಾದ ರಹಸ್ಯವನ್ನು ತಿಳಿಸುವೆನು. ಇದರ ಸಹಾಯದಿಂದ ನಿನಗೆ ಸಿದ್ಧಿಯುಂಟಾಗಿ ಯುದ್ಧದಲ್ಲಿ ಎಲ್ಲರನ್ನೂ ಜಯಿಸುವೆ. ॥೩೦॥

ನೀನು ಈ ರಹಸ್ಯವನ್ನು ಅಜಾಗರೂಕತೆಯಿಂದಲಾಗಲೀ ಅಥವಾ ಮತ್ತೆ ಯಾವ ಕಾರಣದಿಂದಲಾಗಲೀ ಯಾರಿಗೂ ಯಾವಾಗಲೂ ಹೇಳಬಾರದು. ಶಿವನೇ ಮೊದಲಾದವರಿಗೂ ಅವರ ಮಹಿಮೆಯೂ ಯಾರಿಂದ ಉಂಟಾಯಿತೋ ಅಂಥಾ ತಾಯಿಯೇ ಶ್ರೀ ತ್ರಿಪುರಾದೇವಿಯು. ಆಕೆಯ ಪ್ರೀತಿಯನ್ನು ಶೀಘ್ರವಾಗಿ ಸಂಪಾದಿಸುವ ಮಹತ್ವವುಳ್ಳ ರಹಸ್ಯವನ್ನು ನಾನು ಪಡೆದಿದ್ದೇನೆ. ಹಿಂದೆ ಕಾಮೇಶ್ವರಿಯಾದ ಆ ದೇವಿಯ ಸೇವೆಯನ್ನು ಮಾಡಿಯೇ ಇದನ್ನು ಸಂಪಾದಿಸಿದೆನು. ಶ್ರೀತ್ರಿಪುರಾದೇವಿಯ ಅಂಥಾ ನೂರೆಂಟು ನಾಮಗಳನ್ನು ನಿನಗೆ ಹೇಳುವೆನು. ಎಲೈ ಮನ್ಮಥನೇ, ಆದ್ದರಿಂದ ವಿರಜಾನದಿಯ ನೀರಿನಲ್ಲಿ ಸ್ನಾನಾಚಮನಾದಿಗಳನ್ನು ಮಾಡಿ, ಶೀಘ್ರವಾಗಿ ಹಿಂತಿರುಗಿ ಬರುವವನಾಗು. ॥೩೧-೩೨-೩೩॥

ಲಕ್ಷ್ಮಿಯು ಹೇಳಿದ ಮಾತನ್ನು ಕೇಳಿ ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ, ವಿರಜಾನದಿಯ ನೀರಿನಲ್ಲಿ ಸ್ನಾನಾಚಮನಾದಿಗಳನ್ನು ಮಾಡಿ ಪರಿಶುದ್ಧನಾಗಿ ಬಂದು ಮನ್ಮಥನು ಆಕೆಗೆ ನಮಸ್ಕರಿಸಿ ಸಮೀಪದಲ್ಲಿ ನಿಂತನು. ॥೩೪॥

ತಾವಲ್ಲಕ್ಷ್ಮೀರ್ಮಹಾದೇವೀಂ ಕ್ರಮೇಣಾಭ್ಯರ್ಚ್ಯ ಭಕ್ತಿತಃ ।
ಸಂಸ್ಥಾಪಿತೇ ರತ್ನಪೀಠೇ ಕಾಮದ್ರವ್ಯೋಪಚಾರಕೈಃ ॥೩೫॥

ಅಥ ಕಾಮಂ ಸಮಾಹೂಯ ದಾಪಯಿತ್ವಾಂಜಲಿಂ ಕ್ರಮಾತ್ ।
ತ್ರಿಪುರಾಯಾಃ ಪ್ರಸಾದಂ ಚ ಸಂಯೋಜ್ಯ ತದನಂತರಂ ॥೩೬॥

ನಾಮ್ನಾ ಮಷ್ಟೋತ್ತರಶತಂ ಪ್ರೋವಾಚಾಸ್ಮೈ ರಮಾ ತದಾ ।
ಶ್ರೀದೇವ್ಯಾಃ ಪ್ರಾಹ ಯತ್ಸ್ಥೂಲಂ ವಪುಸ್ತದಪಿ ಸುಂದರಂ ॥೩೭॥

ಏವಂ ಸಂಪ್ರಾಪ್ಯ ಕಾಮೋಽಪಿ ಮಾತರಂ ದಂಡವನ್ನತಃ ।
ಆಶೀರ್ಭಿ ರ್ಯೋಜಿತೋ ಮಾತ್ರಾ ಪ್ರಬದ್ಧಕರಸಂಪುಟಃ ॥೩೮॥

ಮಾತರಂ ಪ್ರಾಹ ಮದನಃ ಸ್ವಂ ಜಾನನ್ ಕೃತಕೃತ್ಯಕಂ ।
ಮಾತರ್ಮಮಾಜ್ಞಾಂ ವಿತರ ವ್ರಜೇಽಹಂ ತಾಂ ಪ್ರಸಾದಿತುಂ ॥೩೯॥

ತ್ರಿಪುರಾಂ ಪರಮೇಶಾನೀಂ ತ್ರಿಮೂರ್ತೀನಾಂ ಚ ಸಂಶ್ರಯಾಂ ।
ಇತಿ ಪ್ರಾರ್ಥ್ಯ ತಯಾಽಜ್ಞಪ್ತೋ ನಮಸ್ಕೃತ್ಯ ಚ ಮಾತರಂ ॥೪೦॥

---

ಅಷ್ಟರೊಳಗಾಗಿ ಲಕ್ಷ್ಮಿಯು ತ್ರಿಪುರಾದೇವಿಯನ್ನು ಭಕ್ತಿಭಾವದಿಂದ ಶಾಸ್ತ್ರೋಕ್ತಕ್ರಮದಲ್ಲಿ ಪೂಜಿಸಿ, ಮನ್ಮಥನಿಗೆ ಬೇಕಾದ ಪೂಜಾಸಾಮಗ್ರಿಗಳನ್ನೂ ಸಿದ್ಧಪಡಿಸಿ ದೇವಿಯನ್ನು ರತ್ನಮಯವಾದ ಪೀಠದಲ್ಲಿ ಕುಳ್ಳಿರಿಸಿದಳು. ॥೩೫॥

ಅನಂತರದಲ್ಲಿ ಲಕ್ಷ್ಮಿಯು ಮನ್ಮಥನನ್ನು ಕರೆದು, ಅವನು ಭಕ್ತಿಯಿಂದ ಬೊಗಸೆಯಂತೆ ಕೈಜೋಡಿಸುವಂತೆ ಮಾಡಿ, ತ್ರಿಪುರಾದೇವಿಯ ಪ್ರಸಾದವುಂಟಾಗುವಂತೆ ಧ್ಯಾನವನ್ನು ಮಾಡಲು ಬೋಧಿಸಿ, ತ್ರಿಪುರಾದೇವಿಯ ನೂರೆಂಟು ನಾಮಗಳನ್ನು ಮನ್ಮಥನಿಗೆ ಹೇಳಿಕೊಟ್ಟಳು. ಲಕ್ಷ್ಮಿಯು ವಿವರಿಸುತ್ತಾ ತ್ರಿಪುರಾದೇವಿಯ ಸುಂದರವಾದ ಸ್ಥೂಲಸ್ವರೂಪವನ್ನೂ ಮನ್ಮಥನಿಗೆ ತಿಳಿಯ ಹೇಳಿದಳು. ॥೩೬-೩೭॥

ಹೀಗೆ ಮನ್ಮಥನೂ ಕೂಡ ದೇವಿಯ ಅನುಗ್ರಹಕ್ಕೆ ಕಾರಣವಾದ ಅಷ್ಟೋತ್ತರನಾಮ ಜಪದ ರಹಸ್ಯತತ್ವವನ್ನೂ ಪಡೆದು, ತಾಯಿಯಾದ ಲಕ್ಷ್ಮೀದೇವಿಗೆ ದಂಡಾಕಾರವಾಗಿ ನಮಸ್ಕಾರಮಾಡಿದನು. ತಾಯಿಯು ಅವನಿಗೆ ಆಶೀರ್ವದಿಸಲಾಗಿ, ತನ್ನ ಕೈಗಳೆರಡನ್ನೂ ಜೋಡಿಸಿಕೊಂಡು ಮನ್ಮಥನು ತಾನು ಕೃತಾರ್ಥನಾದವನೆಂದು ಭಾವಿಸಿ, ಆಕೆಯನ್ನು ಕುರಿತು " ಓ ತಾಯಿಯೇ, ನನಗೆ ಅಪ್ಪಣೆಯನ್ನು ಕೊಡು.

ಧ್ಯಾಯನ್ ಶ್ರೀತ್ರಿಪುರಾಪಾದಪದ್ಮಂ ಹೃದಿ ಸುಭಕ್ತಿತಃ ।
ಜಗಾಮ ಮಂದರಗಿರಿಕಂದರೇ ಸುರಮಂದಿರೇ ॥೪೧॥

ತತ್ರ ನಿರ್ಮಲ ಸುಸ್ವಾದು ಸಲಿಲಾಽಽಸ್ರಾವಕೂಲಕೇ ।
ಕದಂಬತರುಮೂಲೇ ವೈ ನಿಷಸಾದ ಶುಭೇ ಸ್ಥಲೇ ॥೪೨॥

ಸ್ನಾತ್ವಾ ತತ್ರ ಸಮಾಸೀನೋ ಧ್ಯಾಯನ್ಮೂರ್ತಿಂ ಹೃದಂಬುಜೇ ।
ರಮಾಪ್ರೋಕ್ತಕ್ರಮೇಣೈವ ಮಾನಸೈರುಪಚಾರಕೈಃ ॥೪೩॥

ಅಭ್ಯರ್ಚ್ಯ ತ್ರಿಪುರಾಮಂಬಾಂ ಮಹಾವಿಭವವಿಸ್ತರೈಃ ।
ಅಷ್ಟೋತ್ತರಶತಂ ನಾಮ್ನಾಂ ಜಜಾಪ ಪರಭಕ್ತಿತಃ ॥೪೪॥

---

ತ್ರಿಮೂರ್ತಿಗಳಿಗೂ ಆಶ್ರಯದಾತಳಾದ ತ್ರಿಪುರಾದೇವಿಯನ್ನು ಮೆಚ್ಚಿಸಲು ನಾನಿನ್ನು ತೆರಳುವೆನು." ಎಂದು ಹೇಳಿ ಲಕ್ಷ್ಮಿಯನ್ನು ಪ್ರಾರ್ಥಿಸಿ, ಆಕೆಯ ಅಪ್ಪಣೆಯನ್ನು ಪಡೆದು, ಮನ್ಮಥನು ಹೊರಟನು. ॥೩೮-೩೯-೪೦॥

ಮನ್ಮಥನು ಮನಸ್ಸಿನಲ್ಲಿ ಬಹಳ ಭಕ್ತಿಭಾವದಿಂದ ಶ್ರೀ ತ್ರಿಪುರಾದೇವಿಯ ಪಾದಕಮಲವನ್ನು ಧ್ಯಾನಿಸುತ್ತಾ ಮಂದರಪರ್ವತದ ಗುಹೆಯಲ್ಲಿದ್ದ ದೇವಮಂದಿರಕ್ಕೆ ತೆರಳಿದನು. ॥೪೧॥

ಅಲ್ಲಿ ಅವನು ಶುದ್ಧವಾದ ಮತ್ತು ಬಹಳ ರುಚಿಕರವಾದ ನೀರಿನ ಪ್ರವಾಹದ ತೀರಪ್ರದೇಶದಲ್ಲಿದ್ದ ಕದಂಬವೃಕ್ಷದ ಬುಡದಲ್ಲಿ ಮಂಗಳಕರವಾದ ಸ್ಥಳದಲ್ಲಿ ಕುಳಿತುಕೊಂಡನು. ॥೪೨॥

ಎಲೈ ಪರಶುರಾಮನೇ, ಮನ್ಮಥನು ಸ್ನಾನಮಾಡಿ, ಅಲ್ಲಿ ಕುಳಿತುಕೊಂಡು, ತ್ರಿಪುರಾದೇವಿಯ ಮೂರ್ತಿಯನ್ನು ತನ್ನ ಕಮಲದಂತಿರುವ ಹೃದಯದಲ್ಲಿ ಧ್ಯಾನಿಸುತ್ತಾ, ಹಿಂದೆ ಲಕ್ಷ್ಮಿಯು ಹೇಳಿಕೊಟ್ಟ ಕ್ರಮದಲ್ಲಿಯೇ ಮಾನಸಿಕವಾದ ಉಪಚಾರಗಳಿಂದಲೂ, ಮಹಾವೈಭವಪೂರ್ಣವಾದ ರೀತಿಯಲ್ಲಿ ತ್ರಿಪುರಾದೇವಿಯನ್ನು ಪೂಜಿಸಿ ಬಹಳ ಭಕ್ತಿಭಾವದಿಂದ ಆಕೆಯ ನೂರೆಂಟು ನಾಮಗಳನ್ನು ಜಪಿಸಿದನು. ॥೪೩-೪೪॥

ನಾಮ್ನಾಂಷ್ಟ ಶತವೃತ್ತಿಂ ಪ್ರತ್ಯಹಂ ತಸ್ಯ ಕುರ್ವತಃ ।
ಧ್ಯಾನ ತತ್ಪರಚಿತ್ತಸ್ಯ ಪ್ರಸನ್ನಾ ಶ್ರೀಃ ಪರಾಂಬಿಕಾ ॥೪೫॥

ಅಥ ಸ್ವಪ್ನೇ ಮನ್ಮಥಸ್ಯ ರಮಾರೂಪೇಣ ಸಾ ಪರಾ ।
ಆಗತ್ಯ ಪ್ರಾಹ ಮದನಂ ಮಧುನಿಷ್ಯಂದಯಾ ಗಿರಾ ॥೪೬॥

ವತ್ಸ ಕಾಮ ಕಿಂ ಬಹುಧಾ ನಾಮಮಾತ್ರಪ್ರಪಾಠತಃ ।
ಅನವಾಪ್ಯೈವ ವಿದ್ಯಾಂ ಮೇ ಕಥಂ ತೇ ಸ್ಯಾತ್ಸಮೀಹಿತಂ ॥೪೭॥

ಇತಿ ಶ್ರುತ್ವಾ ಪ್ರಣಮ್ಯಾಽಥ ಕಾಮಃ ಪ್ರಾಹ ಕೃತಾಂಜಲಿಃ ।
ಮಾತರ್ವಿದ್ಯಾಂ ನ ಜಾನಾಮಿ ಭವತ್ಯಾ ನ ಪುರೋದಿತಾ ॥೪೮॥

ಕೃಪಯಾ ತಾಂ ಬ್ರೂಹಿ ಮಹ್ಯಂ ಪ್ರಪನ್ನಾಯ ಕೃಪಾಮಯಿ ।
ಅಥ ಸಾ ಪರಮೇಶಾನೀ ಪ್ರಾಹ ಕಾಮಂ ದಯಾಽನ್ವಿತಾ ॥೪೯॥

---

ಪ್ರತಿದಿನವೂ ಶ್ರೀ ತ್ರಿಪುರಾದೇವಿಯ ನೂರೆಂಟು ನಾಮಗಳನ್ನು ಆವೃತ್ತಿ ಮಾಡುತ್ತಿದ್ದ, ಧ್ಯಾನಒಂದರಲ್ಲೇ ನೆಟ್ಟ ಮನಸ್ಸುಳ್ಳ, ಮನ್ಮಥನಿಗೆ ಶ್ರೀತ್ರಿಪುರಾದೇವಿಯು ಪ್ರಸನ್ನಳಾದಳು. ॥೪೫॥

ಅನಂತರದಲ್ಲಿ ಶ್ರೀಪುರಾದೇವಿಯೇ ಲಕ್ಷ್ಮಿಯ ರೂಪದಲ್ಲಿ ಮನ್ಮಥನಿಗೆ ಸ್ವಪ್ನದಲ್ಲಿ ಬಂದು ಕಾಣಿಸಿಕೊಂಡು, ಅಮೃತವನ್ನು ಸುರಿಸುವಂಥಾ ಮಾತುಗಳಿಂದ ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೪೬॥

ಎಲೈ ಮಗನಾದ ಮನ್ಮಥನೇ, ನೀನು ಕೇವಲ ನನ್ನ ನಾಮಗಳನ್ನು ಅನೇಕಾವೃತ್ತಿ ಜಪಿಸಿದರೆ ಏನು ಫಲವಾದೀತು ? ನನ್ನ ವಿದ್ಯೆಯನ್ನು ಸಂಪಾದಿಸದೇ ನಿನ್ನ ಇಷ್ಟಾರ್ಥಸಿದ್ಧಿಯು ಹೇಗೆತಾನೇ ಆದೀತು ? ಎಂದು ಹೇಳಿದಳು. ॥೪೭॥

ಲಕ್ಷ್ಮೀದೇವಿಯ ಆ ಮಾತನ್ನು ಕೇಳಿ, ಮನ್ಮಥನು ಆಕೆಗೆ ನಮಸ್ಕರಿಸಿ ಕೈಜೋಡಿಸಿಕೊಂಡು, ಓ ತಾಯಿಯೇ, ನಿನ್ನ ವಿದ್ಯೆಯನ್ನು ನನಗೆ ನೀನು ಹೇಳಿಕೊಟ್ಟಿಲ್ಲವಾದುದರಿಂದ ಅದು ನನಗೆ ಗೊತ್ತಾಗಿಲ್ಲ ಎಂದನು. ॥೪೮॥

ಮನ್ಮಥನು ಮುಂದುವರಿಯುತ್ತಾ, ಓ ಕರುಣಾಪೂರ್ಣಳಾದ ತಾಯಿಯೇ, ನಿನಗೆ ಶರಣಾಗತನಾಗಿರುವ ನನಗೆ ದಯವಿಟ್ಟು ಆ ವಿದ್ಯೆಯನ್ನು ತಿಳಿಸು." ಎಂದು

ವತ್ಸ ನಾಽದ್ಯಾಽಪಿ ವಿದಿತಾ ಸಾ ತ್ವಯಾಽಂಧ ಇವೋಡುಪಂ ।
ನಾಮಸ್ತೋತ್ರೇ ಸು ನಿಹಿತಾ ಗುಪ್ತಾ ಪಂಚದಶಾತ್ಮಿಕಾ ॥೫೦॥

ನವಧಾ ಸಂಸ್ಥಿತಾ ತತ್ರ ದ್ವಿಷಣ್ನಾಮ ಸಮಾಶ್ರಯಾ ।
ಆದ್ಯಮಾದ್ಯೇವ ಸೌತ್ರ್ಯಕೇ ಪಂಚಮಂ ವೇದದಿಙ್ಗನೌ ॥೫೧॥

ಷಷ್ಠಂ ರಸಾಂಕಯೋರಂತ್ಯ ಮಶ್ವೇ ಸೂರ್ಯೇ ಚ ಸಂಸ್ಥಿತಂ ।
ದ್ವಿತೀಯ ಯುಕ್ತಮೇತಾವ ತ್ರೃತೀಯಂ ಚ ಚತುರ್ಥಕಂ ॥೫೨॥

ದ್ವಿತೀಯೇ ತತ್ಪರೇ ಸ್ಥಾನೇ ಭೂತರುದ್ರತಿಥೌ ಸ್ಥಿತಂ ।
ಷಷ್ಠ ಸಪ್ತಮ ತುರ್ಯಾನಾಂ(ಣಾಂ)ಯೋಗಮಷ್ಟಮಸಂಯುತಂ॥೫೩॥

ಏತನ್ಮಹಾಕಾರಣಂ ವೈ ತ್ರಿಪುರಾರೂಪಮುದ್ಭುತಂ ।
ಇತ್ಯುಕ್ತ್ವಾಽಂತರ್ಹಿತಾ ದೇವೀ ಕ್ಷಣೇನ ಪರಮೇಶ್ವರೀ ॥೫೪॥

---

ಕೇಳಿದನು. ಅನಂತರದಲ್ಲಿ ಪರಮೇಶ್ವರಿಯಾದ ಆಕೆಯು ಕರುಣೆಯಿಂದ ಕೂಡಿದವ ಳಾಗಿ ಮನ್ಮಥನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೪೯॥

ಎಲೈ ಮಗುವೇ, ಕುರುಡನು ದೋಣಿಯನ್ನು ಎದುಗಿರಿದ್ದರೂ ಹೇಗೆ ಕಂಡು ಹಿಡಿಯಲಾರನೋ ಹಾಗೆ ನೀನು ಜಪಿಸುವ ಆ ನಾಮಗಳಲ್ಲಿಯೇ ಆ ವಿದ್ಯೆಯು ಅಡಗಿದ್ದರೂ ಕಂಡುಹಿಡಿಯಲಾರದೇ ಹೋದೆ. ಹದಿನೈದು ಅಕ್ಷರದ ಸ್ವರೂಪವುಳ್ಳ ಆ ದೇವಿಯ ವಿದ್ಯೆಯು ಆಕೆಯ ನಾಮಸ್ತೋತ್ರದಲ್ಲಿಯೇ ಅಡಗಿದ್ದು ಶ್ರೇಷ್ಠ ವಾಗಿದೆ. ಅದರಲ್ಲಿ ಆಕೆಯ ಹನ್ನೆರಡು ನಾಮಗಳನ್ನು ಆಶ್ರಯಿಸಿ ವಿದ್ಯೆಯು ಒಂಬತ್ತು ವಿಧವಾಗಿದೆ. ಮೊದಲನೆಯ ಅಕ್ಷರವು ಮೊದಲನೆಯ ನಾಮವಾದ ಸೌತ್ರ್ಯಕದಲ್ಲಿಯೂ, ಐದನೆಯ ಅಕ್ಷರವು ದಿಂಗನದಲ್ಲಿಯೂ, ಆರನೆಯ ಅಕ್ಷರವು ಅಂಕಗಳ ಕೊನೆಯದಾಗಿಯೂ, ಕುದುರೆ ಮತ್ತು ಸೂರ್ಯರಲ್ಲಿಯೂ ಪ್ರಕಾಶಿಸುತ್ತದೆ. ಆ ವಿದ್ಯೆಯ ಎರಡನೆಯ, ಮೂರನೆಯ ಮತ್ತು ನಾಲ್ಕನೆಯ ಅಕ್ಷರಗಳು ಈ ಮುಂದೆ ಹೇಳುವಂತೆ ಇವೆ. ॥೫೦-೫೧-೫೨॥

ಹಿಂದೆ ಹೇಳಿದ ಆ ವಿದ್ಯೆಯ ಅಕ್ಷರಗಳು ಎರಡನೆಯ ಮತ್ತು ಅದರ ಮುಂದಿನ ಸ್ಥಾನಗಳಲ್ಲಿಯೂ, ಭೂತಗಳು ಮತ್ತು ರುದ್ರರು, ಪಂಚಮೀ, ಏಕಾದಶೀ ತಿಥಿ ಇವುಗಳಲ್ಲಿ ಇವೆ. ವಿದ್ಯೆಯ ಆರನೆಯ, ಏಳನೆಯ ಮತ್ತು ನಾಲ್ಕನೆಯ ಅಕ್ಷರ

ಅಥ ಕಾಮೋ ನೇತ್ರಯುಗ ಮುನ್ಮೀಲ್ಯ ಸಮಚೇಷ್ಟತ ।
ನ ತಾಂ ತತ್ರ ಬಹಿರ್ದೃಷ್ಟ್ವಾ ವಿಮನಾಃ ಸಮಪದ್ಯತ ॥೫೫॥

ನೂನಂ ಮಯಾ ಸ್ವಪ್ನ ಏಷ ದೃಷ್ಟಃ ಪರಮಶೋಭನಃ ।
ನ ಮೇ ನಿದ್ರಾ ಸಮಾಯಾತಿ ಧ್ಯಾಯತೋ ಜಗದಂಬಿಕಾಂ ॥೫೬॥

ಏಷ ಮೇ ಯಾತಿ ಷಷ್ಠೋ ವೈ ಮಾಸಃ ಸಾಧಯತೋಽನ್ವಹಂ ।
ನ ಕದಾಚಿದಗಾನ್ನಿದ್ರಾ ರಾತ್ರಾವಪಿ ಸಮಾಹಿತಃ ॥೫೭॥

ಇತಿ ಸಂಚಿಂತ್ಯ ಭೂಯೋಽಪಿ ಸ್ವಪ್ನದೃಷ್ಟಂ ವಿಭಾವಯತ್ ।
ವಿಭಾವ್ಯಮಾನಸ್ಯ ತದಾ ನಾಮಸ್ತೋತ್ರಾದುಪಸ್ಥಿತಾ ॥೫೮॥

---

ಗಳ ಸಂಬಂಧವು ಎಂಟನೆಯ ಅಕ್ಷರಕ್ಕೆ ಉಂಟಾಗಿದೆ. ಶ್ರೀ ತ್ರಿಪುರಾದೇವಿಯ ಅದ್ಭುತವಾದ ಸ್ವರೂಪವನ್ನು ತಿಳಿಸುವ ಮಹಾಮಹಿಮೆಯಿಂದ ಕೂಡಿದ ವಿದ್ಯೆಯ ಸ್ವರೂಪವಿಂಥಾದ್ದೆಂದು ತಿಳಿ. ಹೀಗೆ ಹೇಳಿ ಪರಮೇಶ್ವರಿಯಾದ ಲಕ್ಷ್ಮೀದೇವಿಯು ಕ್ಷಣಕಾಲದಲ್ಲಿಯೇ ಅಂತರ್ಧಾನವಾದಳು. (ಈ ಮೇಲಿನ ಮೂರು ಶ್ಲೋಕಗಳ ಅರ್ಥವು ವಿಶದವಾಗಿಲ್ಲ. ನಮಗೆ ಉಪದೇಶವಾಗಿರುವ ಮತ್ತು ಇತರ ಗ್ರಂಥಗಳಲ್ಲೂ ಪ್ರಸಿದ್ಧವಾಗಿರುವ ಶ್ರೀವಿದ್ಯೆಗೂ ಇದಕ್ಕೂ ಸಂಬಂಧವಿರುವಂತೆ ತೋರುತ್ತಿಲ್ಲವು. ತಿಳಿದವರಲ್ಲಿ ವಿಚಾರವನ್ನೂ ಮಾಡುತ್ತಿದ್ದೇನೆ. ತಿಳಿದಕೂಡಲೆ ಬರೆದು ಪ್ರಕಟಿಸುವೆನು.) ॥೫೩-೫೪॥

ಅನಂತರದಲ್ಲಿ ಮನ್ಮಥನು ತನ್ನ ಕಣ್ಣುಗಳೆರಡನ್ನೂ ತೆರೆದು ನೋಡಿದನು. ಆದರೆ ಹೊರಗೆ ತನ್ನ ತಾಯಿಯು ಕಣ್ಣಿಗೆ ಕಾಣಿಸದೇ ಇದ್ದುದರಿಂದ ಖೇದಗೊಂಡನು. ॥೫೫॥

ಮನ್ಮಥನು ತನ್ನ ಮನಸ್ಸಿನಲ್ಲಿಯೇ ಹೀಗೆಂದುಕೊಂಡನು—ನಾನು ಈಗ ಕಂಡುದು ಸ್ವಪ್ನವೇ ಸರಿ. ಆದರೂ ಬಹಳ ಮಂಗಳಕರವಾದ ಸ್ವರೂಪವನ್ನೇ ನಿಜವಾಗಿಯೂ ಈಗ ನಾನು ಕಂಡೆನು. ಆದರೆ ಜಗದಂಬಿಕೆಯಾದ ದೇವಿಯನ್ನು ಧ್ಯಾನಿಸುತ್ತಿರುವ ನನಗೆ ನಿದ್ರೆಯೇ ಬರುತ್ತಿಲ್ಲ. ॥೫೬॥

ಹೀಗೆ ನಾನು ಮನಸ್ಸಿನಲ್ಲಿಯೇ ದೇವಿಯನ್ನು ನಾಮರೂಪಗಳಿಂದ ಉಪಾಸನೆಯ ಮೂಲಕ ಸಾಧನಾನುಷ್ಠಾನವನ್ನು ಪ್ರತಿನಿತ್ಯವೂ ಮಾಡುತ್ತಿರುವ ನನಗೆ

ವಿದ್ಯಾ ಪಂಚದಶಾಣಾ ಯಾ ತಸ್ಯಾಂ ಸಂಶಯಿತೋಽಭವತ್ ।
ಸ್ವಪ್ನತ್ವೇನ ಭ್ರಮಂ ಮತ್ವಾ ತದಾ ಪ್ರಾಹಾಽಶರೀರಿಣೀ ॥೫೯॥

ಕಾಮ ನಾತ್ರ ಸಂಶಯಿತು ಮರ್ಹಸೀತಿ ಸ್ಫುಟಂ ವಚಃ ।
ನಾಭಸಂ ಕಾಮ ಆಕರ್ಣ್ಯ ವಿಮೃಶ್ಯಾಥ ಪುನಃ ಪುನಃ ॥೬೦॥

ನಾಂತಂ ಸಮಾಯಯೌ ತೇನ ಸಸ್ಮಾರ ಜನನೀಂ ರಮಾಂ ।
ಅಥ ಕಾಮಸ್ಮೃತಾ ಲಕ್ಷ್ಮೀಃ ಸನ್ನಿಧಾನಂ ಸಮೇತ್ಯ ಸಾ ॥೬೧॥

ಕಾಮ ಕಿಂ ತೇ ಸಂಸ್ಮೃತಾಽಸ್ಮೀ ತ್ಯೇವಮಾಹ ಪುರಃ ಸ್ಥಿತಾ ।
ದೃಷ್ಟ್ವಾ ಪ್ರಾಪ್ತಾಂ ರಮಾಂ ಕಾಮಃ ಪ್ರಣಮ್ಯಾಽರಚಿತಾಂಜಲಿಃ ॥೬೨॥

---

ಈ ತಿಂಗಳು ಆರನೆಯದು ನಡೆಯುತ್ತಿದೆ. ಆದರೆ ನನಗೆ ಇಲ್ಲಿಯ ವರೆಗೂ, ಯಾವಾಗಲೂ ನಿದ್ರೆಬಾರದೇ ಇದ್ದು ರಾತ್ರಿಯ ವೇಳೆಗಳಲ್ಲಿಯೂ ನಾನು ಸಮಾಧಿ ಯುಳ್ಳ ಚಿತ್ತದಿಂದಲೇ ಇರುತ್ತಿದ್ದೆನು. ಎಂದು ಯೋಚಿಸಿ ಪುನಃ ಪುನಃ ಸ್ವಪ್ನದಲ್ಲಿ ಕಂಡ ವಿಷಯವನ್ನು ಕುರಿತು ಯೋಚಿಸಿದನು. ಹೀಗೆ ಯೋಚಿಸುತ್ತಿರುವ ಮನ್ಮಥನಿಗೆ ಆಗ ನಾಮಸ್ತೋತ್ರದಿಂದ ಹದಿನೈದು ಅಕ್ಷರದ ಮಂತ್ರದ ಅಭಿಮಾನಿ ದೇವತೆಯೇ ಮನಸ್ಸಿಗೆ ಸ್ಫುರಿಸಿ ಗೋಚರವಾಯಿತು. ಆದರೆ ಅವನು ಅದರಲ್ಲಿ ಸಂಶಯಪಟ್ಟು ಅದು ಕೇವಲ ಸ್ವಪ್ನವಾದ್ದರಿಂದ ಭ್ರಾಂತಿಯೆಂದುಕೊಂಡನು. ಆಗ ಒಂದು ಅಶರೀರವಾಣಿಯು ಕೇಳಿಸಿತು. ॥೫೭-೫೮-೫೯॥

ಆ ಅಶರೀರವಾಣಿಯು, ಎಲೈ ಮನ್ಮಥನೇ, ಈ ವಿಷಯದಲ್ಲಿ ಸಂಶಯಪಡ ಬೇಡ. ಎಂದು ಸ್ಪಷ್ಟವಾಗಿ ಹೇಳಿತು. ಮನ್ಮಥನು ಆಕಾಶವಾಣಿಯನ್ನು ಕೇಳಿ ತಾನೂ ಪುನಃ ಪುನಃ ವಿಮರ್ಶಿಸಿ ಕೊನೆಗೆ ಆ ವಿಷಯವನ್ನು ನಿಶ್ಚಯಿಸಲಾರದೇ ಹೋದನು. ಆದ್ದರಿಂದ ಅವನು ತನ್ನ ತಾಯಿಯಾದ ಲಕ್ಷ್ಮಿಯನ್ನು ಸ್ಮರಿಸಿದನು. ಅನಂತರದಲ್ಲಿ ಮನ್ಮಥನಿಂದ ಸ್ಮರಿಸಲ್ಪಟ್ಟ ಲಕ್ಷ್ಮಿಯು ಅವನ ಹತ್ತಿರಕ್ಕೆ ಬಂದು ಮುಂದೆ ನಿಂತು ಕೊಂಡು, ಎಲೈ ಮನ್ಮಥನೇ, ನನ್ನನ್ನು ಏಕೆ ಜ್ಞಾಪಿಸಿಕೊಂಡೆ? ಎಂದು ಕೇಳಿದಳು. ಲಕ್ಷ್ಮಿಯು ಬಂದಿರುವುದನ್ನು ನೋಡಿ, ಮನ್ಮಥನು ಆಕೆಗೆ ನಮಸ್ಕರಿಸಿ ಆಕೆಯ ಮುಂದೆ ಕೈಜೋಡಿಸಿ ನಿಂತನು. ॥೬೦-೬೧-೬೨॥

ಸ್ವಪ್ನವೃತ್ತಂ ನಭೋವಾಣೀಂ ಪ್ರಾಹ ಮಾತುಃ ಯಥಾತಥಂ ।
ಶ್ರುತ್ವಾಽಥ ಸಾ ಚಿರಂ ಧ್ಯಾತ್ವಾ ಪ್ರಸನ್ನವದನಾಽಬ್ರವೀತ್ ॥೬೩॥

ವತ್ಸ ಕಾಮ ಧನ್ಯತಮಸ್ತ್ವಂ ತೇ ಸಿದ್ಧಮಭೀಪ್ಸಿತಂ ।
ತ್ರಿಪುರೈವ ಹಿ ತೇ ಸ್ವಪ್ನೇ ಪ್ರಸನ್ನಾ ಪ್ರಾಹ ಸಾ ಪರಾ ॥೬೪॥

ಸಂದೇಹಂ ಜಹಿ ತತ್ರ ತ್ವಂ ಯತ್ತಯೋಕ್ತಂ ಹಿ ತತ್ತಥಾ ।
ಭೂಯಸ್ತಾಂ ಸಾಧಯೇತ್ಯುಕ್ತ್ವಾ ಸಾಽಂತರ್ಧಾನಂ ಯಯೌ ಕ್ಷಣಾತ್ ॥

ಅಥ ಕಾಮಶ್ಚ ತಾಂ ವಿದ್ಯಾಂ ಜಜಾಪೈಕಾಗ್ರಮಾನಸಃ ।
ದಿವ್ಯಂ ವರ್ಷತ್ರಯಂ ಪಶ್ಚಾದಾವಿರ್ಭೂತಾ ಮಹೇಶ್ವರೀ ॥೬೭॥

---

ಮನ್ಮಥನು ಸ್ವಪ್ನವೃತ್ತಾಂತವನ್ನೂ ಮತ್ತು ಆಕಾಶವಾಣಿಯ ವೃತ್ತಾಂತವನ್ನೂ ಮತ್ತು ಅವುಗಳ ವಿವರಗಳನ್ನು ಎಲ್ಲವನ್ನೂ ಸ್ವಲ್ಪವೂ ತಪ್ಪದೇ ಹೇಗೆ ನೋಡಿ ಕೇಳಿದ್ದನೋ ಹಾಗೆಯೇ ತಾಯಿಯಾದ ಲಕ್ಷ್ಮೀದೇವಿಗೆ ಹೇಳಿದನು. ಲಕ್ಷ್ಮಿಯು ಬಹಳಕಾಲ ಧ್ಯಾನಮಾಡಿ, ಪ್ರಸನ್ನಳಾದ ಮುಖವುಳ್ಳವಳಾಗಿ ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೬೩॥

ಮಗುವಾದ ಮನ್ಮಥನೇ, ನೀನೇ ಅತ್ಯಂತ ಧನ್ಯನು. ನಿನ್ನ ಇಷ್ಟಾರ್ಥವು ಸಿದ್ಧಿಸಿತೆಂದು ತಿಳಿ. ನಿನ್ನ ತಪಸ್ಸನ್ನು ಮೆಚ್ಚಿ ಶ್ರೇಷ್ಠಳಾದ ತ್ರಿಪುರಾದೇವಿಯೇ, ನಿನ್ನನ್ನು ಕುರಿತು ಸ್ವಪ್ನದಲ್ಲಿ ಆ ರೀತಿಯಲ್ಲಿ ಹೇಳಿದ್ದಾಳೆ! ॥೬೪॥

ಎಲೈ ಮನ್ಮಥನೇ, ಈ ವಿಷಯದಲ್ಲಿ ಸಂದೇಹವನ್ನು ಬಿಡು. ಆಕೆಯು ಹೇಳಿದ್ದೇ ಸರಿ, ಎಂದು ತಿಳಿ. ಪುನಃ ಆ ವಿದ್ಯೆಯನ್ನು ಸಾಧಿಸು. ಎಂದು ಲಕ್ಷ್ಮಿಯು ಹೇಳಿ, ಕ್ಷಣಕಾಲದಲ್ಲಿಯೇ ಅಂತರ್ಧಾನವಾದಳು. ॥೬೫॥

ಅನಂತರದಲ್ಲಿ ಮನ್ಮಥನೂ ಕೂಡ ಏಕಾಗ್ರಚಿತ್ತದಿಂದ ಆ ವಿದ್ಯೆಯನ್ನು ಪುನಃ ಜಪಿಸಿದನು. ಹೀಗೆ ಮೂರು ವರ್ಷಕಾಲವು ಕಳೆಯಿತು. ತರುವಾಯ ಮನ್ಮಥನ ಮುಂದೆ ಮಹೇಶ್ವರಿಯಾದ ತ್ರಿಪುರಾದೇವಿಯೇ ಕಾಣಿಸಿಕೊಂಡಳು. ॥೬೬॥

ಅಪಶ್ಯನ್ಮನ್ಮಥಂ ತತ್ರ ಸಂಹೃತಾಽಕ್ಷಗಣಂ ದೃಢಂ ।
ನಿಶ್ಚೇಷ್ಟಂ ನಿರ್ವಿಕಾರಂ ಚ ಸಮಾನಪ್ರಾಣನಿರ್ಗಮಂ ॥೬೭॥

ತೇಜೋರಾಶಿಂ ಸಮಾಲೋಕ್ಯ ಕೃಪಯಾಽಽಸಾದ್ಯ ವೈ ತನುಂ ।
ರಮೋಪದಿಷ್ಟಧ್ಯಾನಾನುರೂಪ ಮೂರ್ತಿಸಮುಜ್ಜ್ವಲಾ ॥೬೮॥

ಪ್ರಾಹ ವತ್ಸ ಕಾಮ ಕಿಂ ತೇ ವಾಂಛಿತಂ ತತ್ಪ್ರತೀಚ್ಛ ಮೇ ।
ಇತಿ ವಾಕ್ಯಂ ಸಮಾಕರ್ಣ್ಯ ಚಕ್ಷುರುನ್ಮೀಲ್ಯ ಚಾಗ್ರತಃ ॥೬೯॥

ದದರ್ಶ ದೇವೀಂ ತ್ರಿಪುರಾಂ ಧ್ಯಾತರೂಪಾಂ ಮನೋಹರಾಂ ।
ಮಹಾತೇಜೋಮಯೀಂ ಚಾಽಥ ಹರ್ಷಾಬ್ಧೌ ಸ ನ್ಯಮಜ್ಜತ ॥೭೦॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಚತುರ್ವಿಂಶೋಽಧ್ಯಾಯಃ

---

ಆಗ ತ್ರಿಪುರಾಪರಮೇಶ್ವರೀದೇವಿಯು ಇಂದ್ರಿಯ ಸಮೂಹಗಳನ್ನು ಜಯಿಸಿ ದೃಢಮನಸ್ಸಿನಿಂದ ಸ್ವಲ್ಪವೂ ಚಲಿಸದೇ, ಸ್ವಲ್ಪವೂ ಮನೋವಿಕಾರಕ್ಕೊಳಗಾಗದೆ, ಒಂದೇ ರೀತಿಯಲ್ಲಿ ದೇಹದಲ್ಲಿ ಪ್ರಾಣವಾಯುಗಳು ಸಂಚರಿಸುವಂತೆ ಮಾಡಿಕೊಂಡು, ಎಂದರೆ ಪ್ರಾಣಾಯಾಮದ ಅಭ್ಯಾಸದಿಂದ ಉಸಿರನ್ನೂ ಅದರ ಮೂಲಕ ಮನಸ್ಸನ್ನೂ ಹತೋಟಿಗೆ ತಂದುಕೊಂಡು, ತಪಸ್ಸಿನಲ್ಲಿದ್ದ ಮನ್ಮಥನನ್ನು ಕಂಡಳು. ॥೬೭॥

ಶರೀರವನ್ನು ಧರಿಸಿರುವಂತೆ ಇರುವ ತೇಜೋರೂಪಳಾದ, ತ್ರಿಪುರಾದೇವಿಯು ಆ ಮನ್ಮಥನ ಮೇಲಿನ ಕೃಪೆಯಿಂದ, ಲಕ್ಷ್ಮೀಪ್ರಿಯು ಮನ್ಮಥನಿಗೆ ಉಪದೇಶಿಸಿದ್ದ ಮಂತ್ರದ ಧ್ಯೇಯಮೂರ್ತಿಗೆ ಅನುಗುಣವಾದ ಸ್ವರೂಪ ಮತ್ತು ಆಕಾರಗಳಿಂದ ಪ್ರಕಾಶಿಸುವವಳಾಗಿ, ಮನ್ಮಥನನ್ನು ಕುರಿತು, ಎಲೈ ಮಗುವೇ, ಮನ್ಮಥನೇ, ನಿನಗೆ ಇಷ್ಟವಾದ ವರವನ್ನು ನನ್ನಲ್ಲಿ ಕೇಳಿಕೋ. ಎಂದು ಹೇಳಿದಳು. ತ್ರಿಪುರಾದೇವಿಯ ಈ ಮಾತನ್ನು ಕೇಳಿ ಮನ್ಮಥನು ತನ್ನ ಕಣ್ಣುಗಳೆರಡನ್ನೂ ತೆರದು ಮುಂದುಗಡೆ ಆ ದೇವಿಯ ಸ್ವರೂಪವನ್ನು ನೋಡಿದನು. ॥೬೮-೬೯॥

ಆಗ ಮನ್ಮಥನು ತಾನು ಧ್ಯಾನಮಾಡುತ್ತಿದ್ದ ರೂಪವನ್ನೇ ಧರಿಸಿರುವ ಮನೋಹರಳಾದ ಮತ್ತು ಮಹಾತೇಜಸ್ಸಿನಿಂದ ಪ್ರಕಾಶಿಸುತ್ತಿರುವ ತ್ರಿಪುರಾಪರಮೇ

ಶ್ವರೀದೇವಿಯನ್ನು ದರ್ಶನಮಾಡಿದನು. ಅನಂತರದಲ್ಲಿ ಅವನು ಆಕೆಯ ದರ್ಶನದಿಂದ ಉಂಟಾದ ಸಂತೋಷವೆಂಬ ಸಾಗರದಲ್ಲಿ ಮುಳುಗಿದನು. ||೭೦||

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಮನ್ಮಥನ ಉಪಾಖ್ಯಾನದಲ್ಲಿ ಇಪ್ಪತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಪಂಚವಿಂಶತಿತಮೋಽಧ್ಯಾಯಃ ॥

### ಇಪ್ಪತ್ತೈದನೆಯ ಅಧ್ಯಾಯವು

ದೃಷ್ಟ್ವೈವಂ ತ್ರಿಪುರಾಂ ದೇವೀಂ ಕುರುವಿಂದಸಮುಪ್ರಭಾಮ್ ।
ಮಣಿಪ್ರವೇಶಪ್ರತ್ಯುಪ್ತಚಾರುಕೋಟೀರಶೋಭಿತಾಮ್ ॥೧॥

ಕೋಟೀರಪ್ರಾಂತವಿಲಸದ್ಬಾಲಪೀಯೂಷದೀಧಿತಿಮ್ ।
ಲಲಂತಿಕಾರತ್ನಕಾಂತಿಸಿಂಧೂರ ದ್ವಿಗುಣಾರುಣಾಮ್ ॥೨॥

ವಿಕಸನ್ನೀಲಕುಮುದ ಸುಹೃನ್ನೇತ್ರತ್ರಯೋಜ್ಜ್ವಲಾಮ್ ।
ಮಣಿತಾಟಂಕಯುಗಲ ಸಂಕ್ರಾಂತಾಪಾಂಗ ಸಂಪದಮ್ ॥೩॥

ನಾಸಾಮುಕ್ತಾಫಲೋಷ್ಠಾಭಾ ಪಾಟಲೀಭೂತದಿಕ್ತಟಾಮ್ ।
ದಂತಪಂಕ್ತಿಪರಾಭೂತ ಕುಂದಕೋರಕಡಂಬರಾಮ್ ॥೪॥

---

ಮನ್ಮಥನು ಕುರುವಿಂದ ಪುಷ್ಪಕ್ಕೆ ಸಮಾನವಾದ ಕಾಂತಿಯುಳ್ಳ, ಶ್ರೇಷ್ಠ ಮಣಿಗಳನ್ನು ಕೆತ್ತಿದ್ದುದರಿಂದ ಮನೋಹರವಾದ ಕೊನೆಯುಳ್ಳ ಕಿರೀಟ ಎಂಬ ಆಭರಣದಿಂದ ಶೋಭಿಸುತ್ತಿದ್ದ ತ್ರಿಪುರಾದೇವಿಯನ್ನು ದರ್ಶನಮಾಡಿದನು. ॥೧॥

ಮನ್ಮಥನು, ಕಿರೀಟದ ಕೊನೆಯಲ್ಲಿ ಪ್ರಕಾಶಮಾನವಾಗಿದ್ದ ಬಾಲಚಂದ್ರನುಳ್ಳ, ಲಲಂತಿಕಾ ಎಂಬ ರತ್ನದ ಮತ್ತು ಚಂದ್ರದ ಕಾಂತಿಯ ಹರಡುವಿಕೆಯಿಂದ ಇಮ್ಮಡಿಯಾದ ಕೆಂಪುಬಣ್ಣವುಳ್ಳ, ಅರಳಿದ ಕಪ್ಪಾದ ನೈದಿಲೆಯ ಹೂವಿಗೆ ಸಮಾನವಾದ ಮೂರು ಕಣ್ಣುಗಳಿಂದ ಪ್ರಕಾಶಿಸುತ್ತಿದ್ದ, ಮಣಿಮಯವಾದ ಎರಡು ಓಲೆಗಳಲ್ಲಿ ಪ್ರಸರಿಸಿದ್ದ ಕಟಾಕ್ಷದ ಕಾಂತಿಯುಳ್ಳ, ಮೂಗುತಿಯ ಮುತ್ತುಗಳ ಮತ್ತು ತುಟಿಗಳ ಕಾಂತಿಯಿಂದ ಬಿಳುಪು ಕೆಂಪು ಮಿಶ್ರವಾದ ಕಾಂತಿಯನ್ನು ದಿಕ್ಕುಗಳ ಅಂಚಿಗೂ ಹರಡುತ್ತಿದ್ದ, ತನ್ನ ಹಲ್ಲುಗಳ ಸಾಲಿನಿಂದ ಕುಂದ ಎಂಬ ಮುಗ್ಗುಗಳ

ಗ್ರೀವಾಬ್ಜಶಿಖರೋದ್ಭೂತಮುಖಾಂಬುಜ ವಿಚಿತ್ರಿತಾಮ್ ।
ಮೃದುಬಾಹುಲತಾಪ್ರಾಂತಕೋರಕಾಭಾಂಗುಲಾವಲಿಮ್ ॥೫॥

ನಖೇಂದುಕಾಂತಿಶಬಲಕಂಕಣೋರ್ಮಿಮಣೀಗಣಾಮ್ ।
ಮುಕ್ತಾಹಾರ ಮೃಣಾಲೋದ್ಯತ್ಕುಚಕುಂಭ ಸುಕುಟ್ಮಲಾಮ್ ॥೬॥

ನಾಭೀಹ್ರದಕೂಲಕ್ಲೃಪ್ತಸೋಪಾನಾಭವಲಿತ್ರಯಾಮ್ ।
ಹೀರಹಾರ ಬಿಸಾಸಕ್ತ ಲೋಮಪಂಕ್ತ್ಯಾತ್ಮಶೈವಲಾಮ್ ॥೭॥

ಕೌಸುಂಭಾಂಶುಕಕೂರ್ಪಾಸಾಂತರ ಸಂಶೋಭಿ ಭೂಷಣಾಮ್ ।
ಕಟಿವ್ಯೋಮ ಮಧ್ಯಮಾಸದ್ರಶನಾಮಣಿ ತಾರಕಾಮ್ ॥೮॥

ಪಾಶಾಂಕುಶ ಪುಷ್ಪಬಾಣ ಪುಂಡ್ರಚಾಪಾಯುಧಾನ್ವಿತಾಮ್ ।
ಗುಲ್ಫಾಸಕ್ತಾಂಶುಕಪ್ರಾಂತ ಪ್ರೋತರತ್ನಗಣೋಜ್ವಲಾಮ್ ॥೯॥

---

ಸ್ವರೂಪವನ್ನು ಹೀಯ್ಯಾಳಿಸುತ್ತಿರುವ, ಮನೋಹರವಾದ ವಿಲಾಸವುಳ್ಳ ತ್ರಿಪುರಾ ಪರಮೇಶ್ವರೀದೇವಿಯನ್ನು ನೋಡಿದನು. ॥೨-೩-೪॥

ಇವನು ಆ ದೇವಿಯ ಕತ್ತಿನಲ್ಲಿ ಧರಿಸಿರುವ ಕಮಲದ ತುದಿಯಲ್ಲಿ ಕಾಣಿಸುವ ಮುಖವೆಂಬ ಕಮಲದಿಂದ ಆಶ್ಚರ್ಯಕರಳಾದ, ಮೃದುವಾದ ತೋಳುಗಳೆಂಬ ಬಳ್ಳಿಗಳ ಅಂಚಿನಲ್ಲಿ ಮೊಗ್ಗುಗಳಂತೆ ಕಾಣುತ್ತಿರುವ ಬೆರಳುಗಳ ಸಾಲುಗಳುಳ್ಳ, ಚಂದ್ರನಂತಿರುವ ಉಗುರುಗಳ, ಕಾಂತಿಯಿಂದ ಮಿಶ್ರವಾಗಿರುವ ಬಳೆಗಳಲ್ಲಿರುವ ಮಣಿಗಳಿಂದ ಹೊರಡುತ್ತಿರುವ, ಕಾಂತಿಗಳೆಂಬ ಅಲೆಗಳ ಸಾಲನ್ನು ಹೊಂದಿರುವ, ಮುತ್ತಿನ ಹಾರವೆಂಬ ತಾವರೆದಂಟಿನ ತುದಿಯಲ್ಲಿರುವ ಕಮಲದ ಮೊಗ್ಗುಗಳುಳ್ಳ, ಹೊಕ್ಕುಳೆಂಬ ಕೊಳದ ದಡದಲ್ಲಿ ನಿರ್ಮಿಸಿರುವ ಸೋಪಾನಕ್ಕೆ ಸಮಾನವಾದ ತ್ರಿವಳಿಗಳ ಗೆರೆಗಳುಳ್ಳ, ವಜ್ರಮಯವಾದ ಹಾರದಲ್ಲಿರುವ ಕಮಲಕ್ಕೆ ಸೇರಿಕೊಂಡಿರುವ ರೋಮಕೂಪಗಳ ಸಾಲುಗಳೆಂಬ ಪಾಚಿಗಳುಳ್ಳ ತ್ರಿಪುರಾಪರಮೇಶ್ವರೀದೇವಿಯನ್ನು ದರ್ಶನಮಾಡಿದನು. ॥೫-೬-೭॥

ಮನ್ಮಥನು ಗೋಸುಂಬೆಯ ಕೆಂಪುಬಣ್ಣದ ರೇಷ್ಮೆ ಸೀರೆ ಮತ್ತು ಕುಪ್ಪಸ ಇವುಗಳ ಒಳಗಡೆ ಶೋಭಿಸುತ್ತಿರುವ ರತ್ನಮಯವಾದ ಆಭರಣಗಳುಳ್ಳ, ಆಕಾಶದಂತೆ ಸೂಕ್ಷ್ಮವಾಗಿರುವ ಸೊಂಟದ ಮಧ್ಯಭಾಗದಲ್ಲಿರುವ ಡಾಬಿನಲ್ಲಿ ನಕ್ಷತ್ರಗಳಂತಿರುವ

ರತ್ನನೂಪುರಹಂಸಾಽದಿ ಪಾದಭೂಷಣ ಭೂಷಿತಾಮ್ ।
ಕಾಶ್ಮೀರ ಶಶಿಕಸ್ತೂರೀ ಸಮಾಲೇಪ ಸುವಾಸಿತಾಮ್ ॥೧೦॥

ಕರ್ಣೋತ್ತಂಸಿತಕಾದಂಬಪ್ರಸೂನಾಽಮೋದ ಮಿಶ್ರಿತಾಮ್ ।
ವಿಕಸತ್ಪದ್ಮವಕುಲ ಮಾಲತೀಹಾರಧಾರಿಣೀಮ್ ॥೧೧॥

ರಮಾವಾಣೀ ವೀಜ್ಯಮಾನ ಚಾಲವ್ಯಜನ ಶೋಭಿನೀಮ್ ।
ಆನಂದಸಾಂದ್ರಾಂತರಂಗಹರ್ಷಾಽಶ್ರುಭರಿತೇಕ್ಷಣಾಂ ॥೧೨॥

ರೋಮಾಂಚಪೀವರತನುಃ ದಂಡವತ್ಪ್ರಣತೋ ಭುವಿ ।
ಆನಂದಸಿಂಧು ನಿರ್ಮಗ್ನೋ ನೇಕ್ಷಿತುಂ ನ ಚ ಭಾಷಿತುಮ್ ॥೧೩॥

ಉತ್ಥಾತುಂ ನಾಽಸಮರ್ಥೋಽಭೂತ್ತದಾ ವೀಕ್ಷ್ಯ ಪರಾಂಬಿಕಾಮ್ ।
ಏವಂ ವಿಧಂ ಮನ್ಮಥಂ ತಂ ದೃಷ್ಟ್ವಾ ಶ್ರೀ ತ್ರಿಪುರಾಂಬಿಕಾ ॥೧೪॥

---

ಮಣಿಗಳಿಂದ ಕೂಡಿರುವ, ಪಾಶ, ಅಂಕುಶ, ಪುಷ್ಪದ ಬಾಣ, ಪುಂಡ್ರೇಕ್ಷುವಿನ ಬಿಲ್ಲು ಈ ಆಯುಧಗಳಿಂದ ಕೂಡಿರುವ, ಗುಲ್ಫಕ್ಕೆ ಹೆಜ್ಜೆಗಳಿಗೆ ತಗುಲುತ್ತಿರುವ ರೇಷ್ಮೆಯ ಸೀರೆಯ ಅಂಚಿನಲ್ಲಿ ಕೆತ್ತಲ್ಪಟ್ಟಿರುವ ರತ್ನದ ಸಾಲುಗಳಿಂದ ಪ್ರಕಾಶಮಾನಳಾದ, ರತ್ನ ಮಯವಾದ ಕಾಲ್ಗಡಗದ ಹಂಸಾಕಾರದ ಕಾಲಂದಿಗೆಗಳುಳ್ಳ, ಚಂದ್ರ, ಕರ್ಪೂರ, ಕಸ್ತೂರಿ, ಮುಂತಾದ ಸುಗಂಧದ್ರವ್ಯಗಳನ್ನು ಚೆನ್ನಾಗಿ ಹಚ್ಚಿಕೊಂಡಿರುವ ತ್ರಿಪುರಾ ಪರಮೇಶ್ವರೀದೇವಿಯನ್ನು ದರ್ಶನಮಾಡಿದನು. ॥೮-೯-೧೦॥

ಮನ್ಮಥನು ದೇವಿಯು ತನ್ನ ಕಿವಿಗಳಿಗೆ ಆಭರಣವಾಗಿ ಮಾಡಿಕೊಂಡಿರುವ ಕದಂಬಪುಷ್ಪದ ಸುವಾಸನೆಯಿಂದ ಕೂಡಿರುವ, ಅರಳಿರುವ ಕಮಲದ ಮಗ್ಗು ಮತ್ತು ಮಾಲತೀ ಪುಷ್ಪಗಳಿಂದ ಕೂಡಿರುವ ಹಾರವನ್ನು ಧರಿಸಿರುವ, ಲಕ್ಷ್ಮೀ ಮತ್ತು ಸರಸ್ವತೀ ದೇವಿಯರಿಂದ ಬೀಸಲ್ಪಡುತ್ತಿರುವ, ಸಣ್ಣ ಬೀಸಣಿಗೆಗಳಿಂದ ಶೋಭಿಸುತ್ತಿರುವ, ತ್ರಿಪುರಾದೇವಿಯನ್ನು ದರ್ಶನ ಮಾಡಿದನು. ಇವನು ಇಂಥಾ ಸೌಂದರ್ಯವಿಶೇಷದಿಂದ ಬೆಳಗುತ್ತಿರುವ ದೇವಿಯನ್ನು ದರ್ಶನಮಾಡಿ, ಆನಂದದಿಂದ ತುಂಬಿದ ಮನಸ್ಸುಳ್ಳವನಾಗಿ ಮತ್ತು ಆನಂದಬಾಷ್ಪದಿಂದ ತುಂಬಿದ ಕಣ್ಣುಗಳುಳ್ಳವ ನಾಗಿ, ರೋಮಾಂಚದಿಂದ ಉಬ್ಬಿದಂತೆ ಇರುವ ಶರೀರವುಳ್ಳವನಾಗಿ ಆಕೆಗೆ ದಂಡಾಕಾರವಾಗಿ ಭೂಮಿಯಲ್ಲಿ ಪ್ರಣಾಮಮಾಡಿದನು. ಆಗ ಅವನು ಆನಂದ

ಉತ್ತಿಷ್ಠ ಕಾಮ ಸಂಪಶ್ಯ ಪ್ರಾಪ್ತಾಂ ಮಾಂ ತವ ಭಾವತಃ ।
ಪ್ರಸನ್ನಾಂ ವರದಾಂ ಬ್ರೂಹಿ ವಾಂಛಿತಂ ಕಿಂ ದದಾಮಿ ತೇ ॥೧೫॥

ಶ್ರುತ್ವಾ ತತ್‌ತ್ರಿಪುರಾ ವಾಕ್ಯ ಮುತ್ಥಾಯ ಪ್ರಾಂಜಲಿಃ ಸ್ಥಿತಃ ।
ಹರ್ಷಗದ್ಗದಯಾ ವಾಚಾ ಸ್ತೋತುಂ ಸಮುಪಚಕ್ರಮೇ ॥೧೬॥

ಕಲಯೇ ಕರುಣಾಽಪಾಂಗೀಂ ಕಾರಣಮೂರ್ತ್ಯೇಕಕಾರಣೀಭೂತಾಮ್ ।
ಕಾಮೇಶ್ವರೀಂ ನ ಹೀತರ ದೇವಂ ಕಿಂಚಿತ್ಕದಾಚಿತ್ ಅಭಿಯಾಚೇ ॥೧೭॥

ಅಭಿಯಾಚೇ ಪರಮಾಂ ತಾ ಮಂಕುಶಪಾಶಪ್ರಸೂನಚಾಪಕರಾಮ್ ।
ಅಲಮಲಮನುತ್ತರಾಂಬಾ ಚರಣಾದನ್ಯೇನ ದೇವತಾಽಽಖ್ಯೇನ ॥೧೮॥

---

ಸಾಗರದಲ್ಲಿ ಮುಳುಗಿದ್ದುದರಿಂದ ಏನನ್ನು ನೋಡುವುದಕ್ಕೂ ಮಾತನಾಡುವುದಕ್ಕೂ ಸಮರ್ಥನಾಗಲಿಲ್ಲ. ॥೧೧-೧೨-೧೩॥

ಮನ್ಮಥನು ಶ್ರೇಷ್ಠಳಾದ ದೇವಿಯನ್ನು ದರ್ಶನಮಾಡಿದ ಅನಂತರದಲ್ಲಿ ಆನಂದಮಗ್ನನಾಗಿ ಏಳಲೂ ಅಸಮರ್ಥನಾದನು. ಹೀಗಿದ್ದ ಮನ್ಮಥನನ್ನು ಶ್ರೀ ತ್ರಿಪುರಾಂಬಿಕೆಯು ನೋಡಿ ಅವನನ್ನು ಕುರಿತು, "ಎಲೈ ಮನ್ಮಥನೇ, ಮೇಲೇಳು. ನೀನು ಧ್ಯಾನಮಾಡುತ್ತಿದ್ದ ಸ್ವರೂಪದಲ್ಲಿಯೇ ನಿನ್ನೆದುರಿಗೆ ನಿಂತಿರುವ ನನ್ನನ್ನು ನೋಡು. ನಿನ್ನ ಭಕ್ತಿಯನ್ನು ಮೆಚ್ಚಿರುವವಳೂ ಮತ್ತು ವರವನ್ನು ನೀಡಲು ಬಂದಿರುವವಳೂ ಆದ ನನ್ನಲ್ಲಿ ನಿನ್ನ ಇಷ್ಟಾರ್ಥವನ್ನೇನನ್ನು ಕೊಡಬೇಕೆಂಬುದನ್ನು ಪ್ರಾರ್ಥಿಸಿಕೋ." ಎಂಬ ದೇವಿಯ ಮಾತನ್ನು ಕೇಳಿ, ಮನ್ಮಥನು ಎದ್ದು ಕೈಜೋಡಿಸಿ ನಿಂತು, ಸಂತೋಷದಿಂದುಂಟಾದ ತೊದಲ್ನುಡಿಗಳಿಂದ ಆಕೆಯನ್ನು ಸ್ತುತಿಸಲು ಪ್ರಾರಂಭಿಸಿದನು. ॥೧೪-೧೫-೧೬॥

ಓ ದೇವಿಯೇ, ಭಕ್ತರಲ್ಲಿ ಕರುಣಾಕಟಾಕ್ಷಗಳನ್ನು ಬೀರುವ, ಎಲ್ಲಕ್ಕೂ ಮೂಲಕಾರಣಸ್ವರೂಪದಲ್ಲಿ ಒಬ್ಬಳೇ ಜಗತ್ಕಾರಣಳಾದ, ಕಾಮೇಶ್ವರಿಯಾದ ನಿನ್ನನ್ನೇ ನಾನು ಬೇಡುವೆನು. ನಾನಿನ್ನಾವದೇವತೆಯನ್ನೂ ಬೇಡುವುದೇ ಇಲ್ಲವು. ॥೧೭॥

ಅಂಕುಶ, ಪಾಶ, ಪುಷ್ಪಬಾಣ, ಬಿಲ್ಲುಗಳನ್ನೇ ಕೈಯಲ್ಲಿ ಹಿಡಿದಿರುವ, ಅತ್ಯಂತ ಶ್ರೇಷ್ಠಳೂ ಮತ್ತು ಪ್ರಸಿದ್ಧಳೂ ಆದ ತ್ರಿಪುರಾದೇವಿಯನ್ನೇ ಬೇಡುವೆನು. ಅತ್ಯಂತ ಶ್ರೇಷ್ಠಳಾದ ದೇವಿಯ ಚರಣಸೇವೆಯನ್ನು ಬಿಟ್ಟು ಇತರ ಸಾಮಾನ್ಯದೇವತೆಗಳ ಸೇವೆಯು ನನಗೆ ಬೇಡವೇ ಬೇಡ. ॥೧೮॥

ಗೃಹ್ಯಂತೇ ತ್ರಿಪುರಾಯಾಃ ಕರುಣಾಕಲ್ಲೋಲವಾಸಿತಕಟಾಕ್ಷಾಃ ।
ಸರ್ವೋಽಪರಿ ಲೋಕೇಽಸ್ಮಿನ್ ಪಶ್ಯಾಮ್ಯಂಬಾಮಿಹೈಕರೂಪಾಂ ತಾಂ ॥೧೯॥

ಈಪ್ಸಿತಮನೀಽಪ್ಸಿತಂ ವಾ ಮಮಾಸ್ತು ಸತತಂ ತ್ರಿಮೂರ್ತಿಜನಯಿತ್ರ್ಯಾಃ ।
ಈಹಾಶೂನ್ಯಾಯಾ ನೋ ಕರೋಮಿ ಶರಣಂ ತತೋಽನ್ಯದೇವಗಣಂ ॥೨೦॥

ಲಲತು ಹೃದಿ ಸೈವ ದೇವೀ ಮಮ ನಿತ್ಯಂ ಯಾ ಮಹೇಶಸಂಸೇವ್ಯಾ ।
ಲಲಿತಾ ರಾಜ್ಞೀ ಮಾನ್ಯಾ ಕದಾಽಪಿ ಸೇವ್ಯಾಽಸ್ತು ದೇವತಾ ಮಾಽನ್ಯಾ ॥೨೧॥

ಹರ್ಷಯತು ಮಾಮಜಸ್ರಂ ಹರಿಹರಮುಖ್ಯೈಃ ಸಮಾಶ್ರಿತಾಂಘ್ರಿಯುಗಾ ।
ಯಾ ಚ ಹಯಾರೂಢಾಽಖ್ಯಾ ಸೇನಾನೇತ್ರೀ ನಮಾಮಿ ತಾಂ ಬ್ರೂಯಾಮ್ ॥೨೨॥

---

ಶ್ರೀತ್ರಿಪುರಾದೇವಿಯ ಕರುಣಾಪ್ರವಾಹದಿಂದ ತೋಯಿಸಲ್ಪಟ್ಟಿರುವ ಕಟಾಕ್ಷಗಳೇ, ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಅತ್ಯಂತ ಶ್ರೇಷ್ಠಗಳೆಂದು ಹೇಳಲ್ಪಟ್ಟಿವೆ. ದೇವಿಯು ಒಂದೇ ಸ್ವರೂಪವುಳ್ಳವಳೆಂದು ತಿಳಿಯುತ್ತೇನೆ. ॥೧೯॥

ತ್ರಿಮೂರ್ತಿಗಳನ್ನೂ ತಾಯಿಯಾಗಿ ಸೃಜಿಸಿದ, ಆಪ್ತಕಾಮಳಾದುದರಿಂದ ಎಲ್ಲಾ ವಿಧವಾದ (ಬೇಕಾದ ಮತ್ತು ಬೇಡವಾದ) ವಿಷಯಗಳ ಆಶೆಗಳಿಂದಲೂ ಮುಕ್ತಳಾದ, ತ್ರಿಪುರಾದೇವಿಯ ಸೇವೆಯನ್ನು ಮಾಡುವುದರಿಂದ ನನಗೆ ಇಷ್ಟ ಅಥವಾ ಅನಿಷ್ಟವಾದ ವಿಷಯಗಳು ಸಂಭವಿಸಿದರೂ ನನಗೇನೂ ದುಃಖವಿಲ್ಲ. ಆದರೆ ನಾನು ಏನೇ ಸಂಭವಿಸಿದರೂ ಆಕೆಯನ್ನು ಬಿಟ್ಟು ಬೇರೊಬ್ಬ ದೇವತೆಗೂ ಶರಣಾಗತನಾಗುವುದಿಲ್ಲ. ॥೨೦॥

ಮಹೇಶ್ವರನಿಂದಲೂ ಸೇವಿಸಲ್ಪಡುತ್ತಿರುವ, ಆ ತ್ರಿಪುರಾದೇವಿಯೇ, ನನ್ನ ಹೃದಯದಲ್ಲಿ ಯಾವಾಗಲೂ ವಿರಾಜಿಸುತ್ತಿರಲಿ. ಆಕೆಯು ಲಲಿತಾದೇವಿಯೂ ಕಾಮೇಶ್ವರನ ಶ್ರೇಷ್ಠರಾಣಿಯೂ ಅತ್ಯಂತ ಮಾನ್ಯಳೂ ಆಗಿದ್ದಾಳೆ. ಆದ್ದರಿಂದ ನಾನು ಆಕೆಯನ್ನು ಬಿಟ್ಟು ಬೇರೊಬ್ಬ ದೇವತೆಯನ್ನೆಂದಿಗೂ ಸೇವಿಸಲಾರೆ. ॥೨೧॥

ವಿಷ್ಣು, ಶಿವ, ಮುಂತಾದವರಿಂದಲೂ ಸೇವಿಸಲ್ಪಡುತ್ತಿರುವ ತ್ರಿಪುರಾದೇವಿಯು ನನ್ನನ್ನು ಯಾವಾಗಲೂ ಸಂತೋಷಪಡಿಸಲಿ. ಕುದುರೆಯ ವಾಹನವುಳ್ಳವಳೂ, ಸೇನಾನಾಯಕಿಯೂ ಆದ ಆಕೆಗೆ ನಮಸ್ಕರಿಸಿ ಈರೀತಿಯಲ್ಲಿ ವಿಜ್ಞಾಪನೆಮಾಡಿ

ರಕ್ಷತು ಮಾ ಮಿಕ್ಷುಧನುಃ ಪುಷ್ಪಶರಾಢ್ಯಕೃಪೇಕ್ಷಯಾ ಸತತಮ್ ।
ಕಾಮೇಶ್ವರಾಽಭಿರಾಮಾ ನಾಽನ್ಯಾ(ಮಮ) ಮಹೇಶ್ವರೀ ಭವತಿ ॥೨೩॥

ಅಂಕುರಯತು ಹೃದಿ ಭಕ್ತಿಂ ನಿಜಪದಯುಗಲೇ ಸದಾಮಹೇಶಾನೀ ।
ಅಂಬಾಕಾಮಾಕ್ಷೀ ನೈವಾಽನ್ಯಸ್ಯಾಂ ಮಮಾಸ್ತು ತಲ್ಲೇಶಃ ॥೨೪॥

ಸಮ್ಮನುತೇ ಮಮ ಹೃದಯಂ ವಸ್ತುಂ ತಸ್ಯಾಃ ಪದಾಬ್ಜಯೋಃ ಸತತಮ್।
ಸರ್ವಜ್ಞಾಯಾ ದೇವ್ಯಾ ಘಟಯತು ತನ್ಮೇ ಮಹೇಶ್ವರೀ ಮನಸಃ ॥೨೫॥

ಇತಿ ಸಂಸ್ತುತ್ಯ ಮದನೋ ದೇವೀಂ ತಾಂ ತ್ರಿಪುರಾಽಂಬಿಕಾಮ್ ।
ನನಾಮ ದಂಡವದ್ಭೂಯೋ ಭಕ್ತಿನಿರ್ಭರಮಾನಸಃ ॥೨೬॥

---

ಕೊಳ್ಳುವೆನು. ಕಬ್ಬಿನ ಧನುಸ್ಸು ಮತ್ತು ಪುಷ್ಪಬಾಣಗಳಿಂದ ಶೋಭಿತಳಾದ ತ್ರಿಪುರಾಂಬಿಕೆಯು ನನ್ನನ್ನು ಯಾವಾಗಲೂ ಆಕೆಯ ಕರುಣಾಕಟಾಕ್ಷದಿಂದ ಕಾಪಾಡಲಿ. ಕಾಮೇಶ್ವರೀ ಎಂಬ ಹೆಸರಿನಿಂದ ಮನೋಹರಳಾದ ಆಕೆಯನ್ನು ಬಿಟ್ಟು ಇನ್ನಾವದೇವತೆಯೂ ನನಗೆ ರಕ್ಷಕ ಅಧಿದೇವತೆಯಾಗಲಾರಳು. ॥೨೨-೨೩॥

ಮಹೇಶ್ವರಿಯಾದ ತ್ರಿಪುರಾದೇವಿಯು ಆಕೆಯ ಎರಡು ಪಾದಗಳಲ್ಲಿಯೂ ಭಕ್ತಿಯೆಂಬ ಮೊಳಕೆಯು ನನ್ನ ಮನಸ್ಸಿನಲ್ಲಿ ಉಂಟಾಗುವಂತೆ ಮಾಡಲಿ. ಆಕೆಯು ಲೋಕಮಾತೆಯೂ ಕಾಮಾಕ್ಷಿಯೂ ಆಗಿದ್ದಾಳೆ. ನನಗೆ ಆಕೆಯನ್ನು ಬಿಟ್ಟು ಇನ್ನಾವ ದೇವತೆಯಲ್ಲಿಯೂ ಭಕ್ತಿಯ ಲೇಶವೂ ಉಂಟಾಗದಿರಲಿ. ॥೨೪॥

ಆಕೆಯ ಪಾದಕಮಲಗಳಲ್ಲಿಯೇ ಯಾವಾಗಲೂ ನನ್ನ ಮನಸ್ಸು ತವಕ ಪಡುತ್ತದೆ. ಮಹೇಶ್ವರಿಯಾದ ದೇವಿಯು ಸರ್ವಜ್ಞಳಾದ ತನ್ನ ಪಾದಕಮಲದಲ್ಲಿ ನಿರಂತರವೂ ನನಗೆ ಭಕ್ತಿಯು ಒಂದೇಸಮನಾಗಿರುವಂತೆ ಮಾಡಲಿ. ॥೨೫॥

ಮನ್ಮಥನು ಹೀಗೆ ತ್ರಿಪುರಾಂಬಿಕಾದೇವಿಯನ್ನು ಚೆನ್ನಾಗಿ ಸ್ತೋತ್ರಮಾಡಿ ಭಕ್ತಿಯಿಂದ ತುಂಬಿದ ಮನಸ್ಸುಳ್ಳವನಾಗಿ ಪುನಃ ಪುನಃ ದಂಡಾಕಾರವಾಗಿ ಆಕೆಗೆ ನಮಸ್ಕರಿಸಿದನು. ॥೨೬॥

ಅಥ ಸಾ ತ್ರಿಪುರೇಶಾನೀ ಪ್ರಾಹ ಮಂಜುಲಯಾ ಗಿರಾ।
ವತ್ಸೋಽತ್ರಿಷ್ಟ ಪ್ರಸನ್ನಾಽಸ್ಮಿ ವರಂ ಬ್ರೂಹ್ಯಭಿವಾಂಛಿತಮ್ ॥೨೭॥

ದದಾಮಿ ದುರ್ಲಭಮಪಿ ನಾಽಲಭ್ಯಂ ತವ ವಿದ್ಯತೇ।
ಶ್ರುತ್ವೈವಂ ಲೋಕಜನನೀ ವಾಕ್ಯಮುತ್ಥಾಯ ಮನ್ಮಥಃ ॥೨೮॥

ಶ್ರೀದೇವೀ ದರ್ಶನಾದೇವ ನಷ್ಟಾಽವಿದ್ಯಾ ತಮೋಗುಣಃ।
ಉಪಲಭ್ಯ ಸ್ವಾಽತ್ಮಶಕ್ತಿಮಯೀಂ ತ್ರಿಪುರಸುಂದರೀಮ್ ॥೨೯॥

ಆಪ್ತಕಾಮಃ ಪ್ರಸನ್ನಾತ್ಮಾ ಪ್ರಾಹ ದೇವೀಂ ಕೃತಾಂಜಲಿಃ।
ತ್ರಿಪುರಾಂಬ ತ್ವತ್ಪಾದಾಬ್ಜದರ್ಶನಾಽಮೃತ ಸೇವನಾತ್ ॥೩೦॥

ಶಾಂತ ತೃಷ್ಣೋಽಸ್ಮೀ ಕಿಂ ಯಾಚೇ ನಾಽಲಬ್ಧಮಿಹ ಕಿಂಚನ।
ಪೀತಾಽಮೃತಸ್ಯ ಕ್ಷಾರೋದಪಾನವನ್ನರಯಾಚನಮ್ ॥೩೧॥

---

ಅನಂತರದಲ್ಲಿ ತ್ರಿಪುರಾದೇವಿಯು ಮನೋಹರವಾದ ಮಾತುಗಳಿಂದ ಮನ್ಮಥನನ್ನು ಕುರಿತು "ಎಲೈ ಮಗುವೇ, ಮೇಲೇಳು. ನಿನಗೆ ನಾನು ಪ್ರಸನ್ನಳಾಗಿದ್ದೇನೆ. ನಿನಗೆ ಇಷ್ಟವಾದ ವರವನ್ನು ಕೇಳಿಕೋ." ಎಂದಳು. ॥೨೭॥

"ನಿನಗೆ ದುರ್ಲಭವಾದ ಇಷ್ಟಾರ್ಥವನ್ನಾದರೂ ಬೇಡು. ಕೊಡುವೆನು. ನಾನು ನೀಡಿದಮೇಲೆ ನಿನಗೆ ದುರ್ಲಭವಾದ ವಸ್ತುವು ಏನುತಾನೆ ಇದೆ.?" ಲೋಕಮಾತೆಯ ಈ ಮಾತನ್ನು ಕೇಳಿ ಮನ್ಮಥನು ಮೇಲಕ್ಕೆದ್ದು ಶ್ರೀತ್ರಿಪುರಾದೇವಿಯ ದರ್ಶನಮಾತ್ರದಿಂದಲೇ ತನ್ನ ಸಮಸ್ತ ಅಜ್ಞಾನಾಂಧಕಾರವೂ ನಾಶವಾಗಿರಲು, ತನ್ನ ಆತ್ಮಶಕ್ತಿಯ ಸ್ವರೂಪಳೇ ಆದ ಸುಂದರಿಯನ್ನು ಮತ್ತೊಮ್ಮೆ ನೋಡಿ, ಸಕಲ ಇಷ್ಟಾರ್ಥಗಳನ್ನೂ ಕೂಡಲೇ ಹೊಂದಿದವನಂತೆ ತಿಳಿದು ನಿರ್ಮಲವಾದ ಮನಸ್ಸುಳ್ಳವನಾಗಿ ಕೈಜೋಡಿಸಿಕೊಂಡು ದೇವಿಯನ್ನು ಕುರಿತು, "ಓ ತ್ರಿಪುರಾಂಬಿಕೆಯೇ, ನಿನ್ನ ಪಾದಕಮಲಗಳ ದರ್ಶನವೆಂಬ ಅಮೃತಮಯವಾದ ಸೇವೆಯಿಂದಲೇ ನನ್ನ ಆಶೆಗಳೆಲ್ಲವೂ ನಿವಾರಣೆಯಾಗಿವೆ. ಈಗ ನಾನು ಹೊಂದದೆ ಇರುವುದು ಯಾವುದೂ ಇಲ್ಲವೆಂದು ತೋರುತ್ತದೆ. ಆದುದರಿಂದ ಈಗ ನಾನು ನಿನ್ನನ್ನು ಏನನ್ನು ಬೇಡಲಿ? ಈಗ ನಾನು ವರವನ್ನು ಬೇಡಿದರೆ ಅಮೃತಪಾನ ಮಾಡಿದವನು ಉಪ್ಪುನೀರನ್ನು ಬೇಡಿದಹಾಗಾಗುತ್ತದೆ! ॥೨೮-೨೯-೩೦-೩೧॥

ಪಶ್ಯತಸ್ತ್ವಾಂ ಮಮ ಭವೇದುಪಹಾಸಾಯ ಕೇವಲಮ್ ।
ಮಾತರ್ಯದಾ ಜ್ಞಾಪಯಸಿ ತನ್ಮೂರ್ಧ್ನಾಽಭಿವಹಾಮ್ಯಹಮ್ ॥೩೨॥

ಇತಿ ಶ್ರುತ್ವಾ ಪರಾ ಪ್ರೋಚೇ ದಯಮಾನಾ ಸ್ಮಿತಾಽಽನನಾ ।
ವತ್ಸ ಕಾಮ ನ ತೇ ಕಿಂಚಿತ್ಪ್ರಾಪ್ತವ್ಯಮವಶಿಷ್ಯತೇ ॥೩೩॥

ವಿಜ್ಞಾತಾಽಽತ್ಮಸ್ವರೂಪಸ್ಯ ಬ್ರಹ್ಮತ್ವಮಪಿ ವೈ ತೃಣಮ್ ।
ತಥಾಽಪಿ ಸಾಽಭಿಪ್ರಾಯೇಣ ಯತಸ್ತ್ವಂ ಮಾಮುಪಸ್ಥಿತಃ ॥೩೪॥

ನ ತನ್ಮೋಘಂ ಭವೇಜ್ಜಾತು ನ ಕೃತಂ ಹೀಯತೇ ಯತಃ ।
ತವಾಜೇಯೋ ನ ಭೂಮ್ಯಾಂ ವಾ ಪಾತಾಲೇ ದಿವಿ ವಾ ಭವೇತ್ ॥೩೫॥

ಗೃಹಾಣ ಚಾಪಂ ಬಾಣಾಂಶ್ಚೇತ್ಯುಕ್ತ್ವಾ ಸಾ ಜಗದಂಬಿಕಾ ।
ಸ್ವೀಯಾಚ್ಚಾಪಾಚ್ಛರೇಭ್ಯಶ್ಚ ಚಾಪಂ ಬಾಣಾಂಶ್ಚ ತತ್ಸಮಾನ್ ॥೩೬॥

---

ನಿನ್ನನ್ನೇ ಸಾಕ್ಷಾದ್ದರ್ಶನ ಮಾಡುತ್ತಿರುವ ನಾನು ವರವನ್ನು ಬೇಡಿದರೆ ಅದು ಹಾಸ್ಯಾಸ್ಪದವಾಗುವುದು. " ಓ ತಾಯಿಯೇ, ಆದ್ದರಿಂದ ನೀನೇನನ್ನು ಅಪ್ಪಣೆಮಾಡುವೆಯೋ ಅದನ್ನು ಶಿರಸಾವಹಿಸಲು ಸಿದ್ಧನಾಗಿದ್ದೇನೆ. ಮನ್ಮಥನಾಡಿದ ಮಾತುಗಳನ್ನು ಕೇಳಿ, ಶ್ರೇಷ್ಠಳಾದ ತ್ರಿಪುರಾದೇವಿಯು ಅವನ ವಿಷಯದಲ್ಲಿ ಕರುಣಾ ಪೂರ್ಣಳಾಗಿ ಮುಗುಳು ನಗೆ ನಗುತ್ತಾ ಅವನನ್ನು ಕುರಿತು, " ಎಲೈ ಮಗುವೇ, ಮನ್ಮಥನೇ, ನೀನು ಹೊಂದಬೇಕಾದ್ದು ಯಾವುದು ಉಳಿದಿದೆ? ಎಂಬುದನ್ನು ನಾನು ಬಲ್ಲೆ. ಏಕೆಂದರೆ ಯಾವನು ತನ್ನ ಆತ್ಮಸ್ವರೂಪವನ್ನೇ ಚೆನ್ನಾಗಿ ಅರಿತಿರುವನೋ ಅವನಿಗೆ ಬ್ರಹ್ಮನ ಪಟ್ಟವೂ ಹುಲ್ಲಿಗೆ ಸಮಾನವಾದುದು. ಆದರೂ ನೀನು ಯಾವುದೋ ಒಂದು ಉದ್ದೇಶದಿಂದ ನನ್ನ ಸಮೀಪಕ್ಕೆ ಬಂದೆಯಲ್ಲವೇ ? ಆ ನಿನ್ನ ಉದ್ದೇಶವು ವ್ಯರ್ಥವಾಗಬಾರದೆಂಬುದೇ ನನ್ನ ಇಷ್ಟವು ಏಕೆಂದರೆ ಪ್ರಾಣಿಯ ಕರ್ಮವು ಎಂದಿಗೂ ವ್ಯರ್ಥವಾಗಲಾರದು. ನಿನ್ನಿಂದ ಜಯಿಸಲು ಅಸಾಧ್ಯವಾದ ವನು ಭೂಮಿಯಲ್ಲಾಗಲೀ ಪಾತಾಲದಲ್ಲಾಗಲೀ ಸ್ವರ್ಗದಲ್ಲಿಯಾಗಲೀ ಯಾರೂ ಇರಬಾರದೆಂದು ಆಶಿಸಿ ತಪಸ್ಸನ್ನು ಮಾಡಿದೆಯಲ್ಲವೇ ? ॥೩೨-೩೩-೩೪-೩೫॥

ಜಗನ್ಮಾತೆಯಾದ ತ್ರಿಪುರಾದೇವಿಯು, ಮನ್ಮಥನಿಗೆ " ಈ ಧನುಸ್ಸು ಮತ್ತು ಬಾಣಗಳನ್ನು ತೆಗೆದುಕೋ." ಎಂದು ಹೇಳಿ, ತನ್ನ ಧನುಸ್ಸು ಮತ್ತು ಬಾಣಗಳಿಂದ ಅವಕ್ಕೆ ಸಮವಾದ ಧನುಸ್ಸು ಮತ್ತು ಬಾಣಗಳನ್ನು ತೆಗೆದು ಅವನಿಗೆ ಕೊಟ್ಟಳು.

ದದೌ ಕಾಮಾಯ ಭೂಯಸ್ತಂ ಪ್ರಾಹ ತುಷ್ಟಾ ಮಹೇಶ್ವರೀ ।
ಸೌಭಾಗ್ಯಮುತ್ತಮಂ ಲೋಕೇ ಸರ್ವತೋಽಸ್ತು ರಮಾತ್ಮಜ ॥೩೭॥

ತ್ವಯಾ ದೃಷ್ಟಾ ಜನಾಸ್ಸರ್ವೇ ಧೈರ್ಯಮಭ್ಯುತ್ಸೃಜಂತು ವೈ ।
ಲೋಕೇಷು ಸುಭಗಾ ಯೇ ಸ್ಯುಃ ಸರ್ವಸೌಭಾಗ್ಯಸಂಪದಃ ॥೩೮॥

ದೃಷ್ಟಾಂತಭೂತಸ್ತ್ವಂ ಭೂಯಾ ಮದ್ಭಕ್ತೇಷ್ವಗ್ರಗಸ್ತಥಾ ।
ಸ್ವಪ್ನೇ ಮಯಾ ಸಮಾದಿಷ್ಟಾ ಯಾ ವಿದ್ಯಾ ಸಾಽಪಿ ಮನ್ಮಥ ॥೩೯॥

ತ್ವನ್ನಾಮ್ನೈವಾಽಸ್ತು ವಿಖ್ಯಾತಾ ಸರ್ವವಿದ್ಯೋತ್ತಮೋತ್ತಮಾ ।
ಯತಸ್ತ್ವಮಾದ್ಯಃ ಸರ್ವೇಷಾ ಮಸ್ಯಾ ಭೂತ ಉಪಾಸಕಃ ॥೪೦॥

ಯತ್ತುಭ್ಯಂ ರಮಯಾ ಪ್ರೋಕ್ತಂ ನಾಮ್ನಾಮಷ್ಟೋತ್ತರಂ ಶತಮ್ ।
ಯಚ್ಚ ತ್ವಯಾ ಸಂಸ್ತುತಾಽಹಂ ಶ್ಲೋಕೈರ್ನವಭಿರುತ್ತಮೈಃ ॥೪೧॥

ವಿದ್ಯಾವರ್ಣ ನಾಮಯುತೈರ್ಭಕ್ತ್ಯುದ್ಗಾರ ಸಮನ್ವಿತೈಃ ।
ತದೇತತ್ ಸ್ತೋತ್ರಯುಗಲಂ ವಿದ್ಯಾ ಸಾಽಪಿ ಚ ಮನ್ಮಥ ॥೪೨॥

---

ಅಲ್ಲದೆ ಮಹೇಶ್ವರಿಯಾದ ಆಕೆಯು ಸಂತೋಷಗೊಂಡು ಅವನನ್ನು ಕುರಿತು, " ಎಲೈ ಲಕ್ಷ್ಮಿಯ ಪುತ್ರನಾದ ಮನ್ಮಥನೇ, ನಿನಗೆ ಲೋಕದಲ್ಲೆಲ್ಲಾಕಡೆಗಳಲ್ಲಿಯೂ ಎಲ್ಲಾವಿಧವಾಗಿಯೂ ಮಂಗಳವೇ ಉಂಟಾಗಲಿ." ಎಂದು ಪುನಃ ಹೇಳಿದಳು. ಅಲ್ಲದೆ, ॥೩೬-೩೭॥

ನಿನ್ನನ್ನು ನೋಡಿದ ಜನರೆಲ್ಲರೂ ಧೈರ್ಯಗೆಟ್ಟವರಾಗಲಿ! ಲೋಕದಲ್ಲಿ ಪ್ರಸಿದ್ಧವಾದ ಎಲ್ಲಾ ಸೌಭಾಗ್ಯ ಸಂಪತ್ತುಗಳಿಗೂ ಮಾದರಿಯ ಉದಾಹರಣೆಯಾಗಿ ಭಾಗ್ಯವಂತನಾಗಿರು. ಅಲ್ಲದೆ, ನನ್ನ ಭಕ್ತರೆಲ್ಲರಿಗೂ ನೀನು ಮೊದಲನೆಯ ಭಕ್ತನಾಗಿರು. ಎಲೈ ಮನ್ಮಥನೇ, ನಾನು ನಿನ್ನ ಸ್ವಪ್ನದಲ್ಲಿ ಯಾವ ನನ್ನ ವಿದ್ಯೆಯನ್ನು ನಿನಗೆ ಹೇಳಿದೆನೋ, ಎಲ್ಲಾ ವಿದ್ಯೆಗಳಿಗೂ ಅತ್ಯಂತ ಶ್ರೇಷ್ಠವಾದ ಆ ವಿದ್ಯೆಯು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗಲಿ. ಏಕೆಂದರೆ, ನೀನೇ ಎಲ್ಲರಿಗಿಂತಲೂ ಮುಂಚೆ ಈ ವಿದ್ಯೆಯನ್ನು ಉಪಾಸನೆ ಮಾಡಿದ್ದೀಯೆ. ॥೩೮-೩೯-೪೦॥

ಲಕ್ಷ್ಮಿಯು ಯಾವ ನೂರೆಂಟು ನನ್ನ ನಾಮಗಳನ್ನು ಉಪದೇಶಿಸಿದಳೋ, ಮತ್ತು ನೀನು ನನ್ನನ್ನು ಯಾವ ಉತ್ತಮವಾದ ನನಗೆ ಸಂಬಂಧಪಟ್ಟ ಅಕ್ಷರ

ತವ ಸೌಭಾಗ್ಯ ಜನನಾತ್ಸೌಭಾಗ್ಯಪ್ರದಮಸ್ತು ವೈ ।
ಸೌಭಾಗ್ಯವಿದ್ಯಾಽಸೌ ಖ್ಯಾತಾ ಸೌಭಾಗ್ಯಾಷ್ಟೋತ್ತರಂ ಚ ತತ್ ॥೪೩॥

ಸೌಭಾಗ್ಯನವರತ್ನಾಖ್ಯಂ ಸ್ತೋತ್ರಂ ಸ್ಯಾದಪ್ಯವಿ ವಿಶ್ರುತಮ್ ।
ಏತತ್ ಸ್ತೋತ್ರಂ ಪ್ರಪಠತಾಂ ಪ್ರೀತಾ ಶೀಘ್ರಂ ಭವಾಮ್ಯಹಂ ॥೪೪॥

ವಿದ್ಯಾರ್ಥಿನಾಂ ಭವೇದ್ವಿದ್ಯಾ ಧನಂ ಸ್ಯಾಚ್ಚ ಧನಾರ್ಥಿನಾಮ್ ।
ಪುತ್ರಾರ್ಥಿನಾಂ ಪುತ್ರಲಾಭಃ ಪತ್ನೀ ಭಾರ್ಯಾರ್ಥಿನಾಂ ನೃಣಾಮ್ ॥೪೫॥

ಏತತ್ ಸ್ತೋತ್ರಂ ಪಠದ್ಭಿಸ್ತು ಯದ್ಯತ್ಸ್ಯಾತ್ಚಿಂತಿತಂ ಭುವಿ ।
ತತ್ಸರ್ವಂ ಪ್ರಾಪ್ಯತೇ ಸತ್ಯಂ ನ ತೇಷಾಂ ಹೀಯತೇ ಕ್ವಚಿತ್ ॥೪೬॥

ಏತತ್ ಸ್ತೋತ್ರಂ ಸರ್ವಪೂರ್ತಿಕರಂ ಪ್ರಪಠತಾಂ ನೃಣಾಮ್ ।
ಪ್ರಸನ್ನಾಽಹಂ ಶೀಘ್ರತರಂ ಭವಾಮಿ ಶೃಣು ಮನ್ಮಥ ॥೪೭॥

---

ಗಳಿಂದ ಕೂಡಿದ ಮತ್ತು ಬಹಳ ಭಕ್ತಿಯಿಂದ ಹೊರಟ ಒಂಬತ್ತು ಶ್ಲೋಕಗಳಿಂದ ಧ್ಯಾನಿಸಿದೆಯೋ, ಹೀಗೆ ಈ ಎರಡು ವಿಧವಾದ ಸ್ತೋತ್ರಗಳೂ ಮತ್ತು ಆ ನನ್ನ ವಿದ್ಯೆಯೂ ನಿನಗೆ ಮಂಗಳವನ್ನುಂಟುಮಾಡಲು ಸಮರ್ಥವಾದುದರಿಂದ ಹೆಚ್ಚು ಮಂಗಳಪ್ರದವಾಗಲಿ ; ಆದ್ದರಿಂದಲೇ ಈ ವಿದ್ಯೆಯು ಸೌಭಾಗ್ಯವಿದ್ಯೆಯೆಂದೂ ನೂರೆಂಟು ನಾಮಗಳು ಸೌಭಾಗ್ಯಾಷ್ಟೋತ್ತರವೆಂದೂ ಪ್ರಸಿದ್ಧವಾಗಲಿ. ॥೪೧-೪೨-೪೩॥

ಇದೇ ಸೌಭಾಗ್ಯ ನವರತ್ನಸ್ತೋತ್ರ ಎಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಈ ಸ್ತೋತ್ರವನ್ನು ಪಠಿಸುವವರನ್ನು ನಾನು ಬಹಳ ಶೀಘ್ರದಲ್ಲಿಯೇ ಮೆಚ್ಚುವೆನು. ॥೪೪॥

ಈ ಸ್ತೋತ್ರವನ್ನು ಪಠಿಸುವ ವಿದ್ಯಾರ್ಥಿಗಳಿಗೆ ವಿದ್ಯಾಲಾಭವೂ, ಧನಾಭಿಲಾಷೆಯುಳ್ಳವರಿಗೆ ಧನಲಾಭವೂ, ಮಕ್ಕಳನ್ನು ಅಪೇಕ್ಷಿಸುವವರಿಗೆ ಸಂತಾನಪ್ರಾಪ್ತಿಯೂ, ಪತ್ನಿಯನ್ನು ಅಪೇಕ್ಷಿಸುವವರಿಗೆ ಪತ್ನೀಲಾಭವೂ, ಉಂಟಾಗುವುದು. ॥೪೫॥

ಲೋಕದಲ್ಲಿ ಈ ಸ್ತೋತ್ರಪಾಠವನ್ನು ಮಾಡುವವರಿಗೆ ಅವರು ಚಿಂತಿಸುವ ವಸ್ತುಗಳೆಲ್ಲವೂ ದೊರಕುವುವು. ಅವರಿಗೆ ಯಾವ ವಿಧವಾದ ಹಾನಿಯೂ ಆಗುವುದಿಲ್ಲ. ॥೪೬॥

ಎಲೈ ಮನ್ಮಥನೇ, ಕೇಳು, " ಎಲ್ಲರ ಇಷ್ಟಾರ್ಥಗಳನ್ನೂ ಪೂರ್ಣಮಾಡುವ

ಇತ್ಯುಕ್ತ್ವಾ ತ್ರಿಪುರಾದೇವೀ ನಾಮ್ನೋಽಷ್ಟಶತಕಸ್ಯ ಚ ।
ವಿದ್ಯಾಯಾಶ್ಚಾಽಪಿ ಮಾಹಾತ್ಮ್ಯಂ ತತ್ರಾಂತರ್ಧಾನಮಾಗತಾ ॥೪೮॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಪಂಚವಿಂಶತಿತಮೋಽಧ್ಯಾಯಃ

---

ಈ ಸ್ತೋತ್ರವನ್ನು ಪಠಿಸುವ ಜನರಿಗೆ ನಾನು ಅತ್ಯಂತ ಶೀಘ್ರದಲ್ಲಿಯೇ ಪ್ರಸನ್ನಳಾಗುವೆನು. ॥೪೭॥

ಹೀಗೆ ತ್ರಿಪುರಾದೇವಿಯು ಮನ್ಮಥನಿಗೆ ತನ್ನ ವಿದ್ಯೆಯ ಮತ್ತು ನೂರೆಂಟು ನಾಮಗಳ ಮಾಹಾತ್ಮ್ಯವನ್ನು ಹೇಳಿ, ಅಲ್ಲಿಯೇ ಅಂತರ್ಧಾನಳಾದಳು. ॥೪೮॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಷಡ್ವಿಂಶತಿತಮೋಽಧ್ಯಾಯಃ ||

### ಇಪ್ಪತ್ತಾರನೆಯ ಅಧ್ಯಾಯವು

ನಿಶಮ್ಯೈತಜ್ಜಾಮದಗ್ನ್ಯೋ ಮಾಹಾತ್ಮ್ಯಂ ಸರ್ವತೋಽಧಿಕಮ್ ।
ಸ್ತೋತ್ರಸ್ಯ ಭೂಯಃ ಪಪ್ರಚ್ಛ ದತ್ತಾತ್ರೇಯಗುರೂತ್ತಮಮ್ ॥೧॥

ಭಗವನ್ ತ್ವನ್ಮುಖಾಂಭೋಜ ನಿರ್ಗಮದ್ವಾಕ್ಸುಧಾರಸಮ್ ।
ಪಿಬತಃ ಶ್ರೋತ್ರಮುಖತೋ ವರ್ಧತೇಽನುಕ್ಷಣಂ ತೃಷಾ ॥೨॥

ಅಷ್ಟೋತ್ತರಂ ಶತಂ ನಾಮ್ನಾಂ ಶ್ರೀದೇವ್ಯಾ ಯತ್ಪ್ರಸಾದತಃ ।
ಕಾಮಃ ಸಂಪ್ರಾಪ್ತವಾನ್ ಲೋಕೇ ಸೌಭಾಗ್ಯಂ ಸರ್ವಮೋಹನಮ್॥೩॥

ಸೌಭಾಗ್ಯವಿದ್ಯಾವರ್ಣಾನಾಮುದ್ಧಾರೋ ಯತ್ರ ಸಂಸ್ಥಿತಃ ।
ತತ್ಸಮಾಚಕ್ಷ್ವ ಭಗವನ್ ಕೃಪಯಾ ಮಯಿ ಸೇವಕೇ ॥೪॥

---

ಪರಶುರಾಮನು ಎಲ್ಲಕ್ಕಿಂತಲೂ ಅತ್ಯಂತ ಶ್ರೇಷ್ಠವಾದ ದೇವಿಯ ಸ್ತೋತ್ರದ ಮಾಹಾತ್ಮ್ಯೆಯನ್ನು ಕೇಳಿ, ಉತ್ತಮ ಗುರುವಾದ ದತ್ತಾತ್ರೇಯನನ್ನು ಕುರಿತು ಪುನಃ ಈರೀತಿಯಲ್ಲಿ ಕೇಳಿದನು. ||೧||

ಓ ಪೂಜ್ಯಗುರುಗಳೇ, ನಿಮ್ಮ ಮುಖಕಮಲದಿಂದ ಹೊರಗೆ ಹೊರಡುವ ಮಾತೆಂಬ ಅಮೃತರಸವನ್ನು ಕಿವಿಯೆಂಬ ಮುಖದಿಂದ ಪಾನಮಾಡುತ್ತಿರುವ ನನಗೆ ಕೇಳಬೇಕೆಂಬ ದಾಹವು ಪ್ರತಿಕ್ಷಣದಲ್ಲಿ ಇನ್ನು ಹೆಚ್ಚುತ್ತಲೇ ಇದೆ. ||೨||

ಪೂಜ್ಯರೇ, ಶ್ರೀ ತ್ರಿಪುರಾದೇವಿಯ ಅನುಗ್ರಹದಿಂದ ಎಲ್ಲರಿಗೂ ಮೋಹವನ್ನುಂಟುಮಾಡುವಂಥಾದ್ದೂ ಮತ್ತು ಸೌಭಾಗ್ಯ ಎಂಬ ಹೆಸರಿನಿಂದ ಪ್ರಸಿದ್ಧವಾದದ್ದೂ ಆದ ಆಕೆಯ ನೂರೆಂಟು ನಾಮಾವಳಿಯನ್ನು ಮನ್ಮಥನು ಲೋಕದಲ್ಲಿ ಆಕೆಯನ್ನು ಮೆಚ್ಚಿಸಿ ಪಡೆದನಷ್ಟೆ? ಸೌಭಾಗ್ಯ ಎಂಬ ಆ ವಿದ್ಯೆಯ ವರ್ಣಗಳ ಉದ್ಧಾರವು

ನಿಶಮ್ಯೈವಂ ಭಾರ್ಗವೋಕ್ತಿಂ ದತ್ತಾತ್ರೇಯೋ ದಯಾನಿಧಿಃ ।
ಪ್ರೋವಾಚ ಭಾರ್ಗವಂ ರಾಮಂ ಮಧುರಾಕ್ಷರ ಪೂರ್ವಕಮ್ ॥೫॥

ಶೃಣು ಭಾರ್ಗವ ಯತ್ಪೃಷ್ಟಂ ನಾಮ್ನಾಮಷ್ಟೋತ್ತರಂ ಶತಮ್ ।
ಶ್ರೀವಿದ್ಯಾವರ್ಣರತ್ನಾನಾಂ ನಿಧಾನಮಿವ ಸಂಸ್ಥಿತಮ್ ॥೬॥

ಶ್ರೀದೇವ್ಯಾ ಬಹುಧಾ ಸಂತಿ ನಾಮಾನಿ ಶೃಣು ಭಾರ್ಗವ ।
ಸಹಸ್ರಶತಸಂಖ್ಯಾನಿ ಪುರಾಣೇಷ್ವಾಗಮೇಷು ಚ ॥೭॥

ತೇಷು ಸಾರತಮಂ ಹ್ಯೇತತ್ಸೌಭಾಗ್ಯಾಷ್ಟೋತ್ತರಾಷ್ಟಕಮ್ ।
ಯದುವಾಚ ಶಿವಃ ಪೂರ್ವಂ ಭವಾನ್ಯೈ ಬಹುಧಾರ್ಥಿತಃ ॥೮॥

ಸೌಭಾಗ್ಯಾಷ್ಟೋತ್ತರಶತನಾಮಸ್ತೋತ್ರಸ್ಯ ಭಾರ್ಗವ ।
ಋಷಿರುಕ್ತಶ್ಶಿವಶ್ಛಂದೋಽನುಷ್ಟುಪ್ ಶ್ರೀಲಲಿತಾಂಬಿಕಾ ॥೯॥

---

ಎಲ್ಲಿದೆ ? ಎಂಬ ವಿಷಯವನ್ನು ಸೇವಕನಾದ ನನ್ನಲ್ಲಿ ಕೃಪೆಯಿಟ್ಟು ತಿಳಿಸಬೇಕು. ॥೩-೪॥

ಕರುಣಾನಿಧಿಯಾದ ದತ್ತಾತ್ರೇಯನು ಪರಶುರಾಮನ ಪ್ರಶ್ನೆಯನ್ನು ಲಾಲಿಸಿ ಅವನನ್ನು ಕುರಿತು ಮಧುರವಾದ ಮಾತುಗಳಿಂದ ಈ ರೀತಿಯಲ್ಲಿ ಹೇಳಿದನು. ॥೫॥

ದತ್ತಾತ್ರೇಯ ಗುರುವು ಎಲೈ ಪರಶುರಾಮನೇ, ಕೇಳು. ನೀನು ಕೇಳಿದ ಶ್ರೀತ್ರಿಪುರಾದೇವಿಗೆ ಸಂಬಂಧಪಟ್ಟ ವರ್ಣಗಳೆಂಬ ರತ್ನಗಳಿಗೆ ನಿಧಿಯೋಪಾದಿಯಲ್ಲಿರುವ ಆಕೆಯ ನೂರೆಂಟು ನಾಮಗಳ ವಿಷಯವನ್ನು ಹೇಳುವೆನು, ಕೇಳು. ॥೬॥

ಎಲೈ ಪರುಶುರಾಮನೇ, ಕೇಳು, ಶ್ರೀ ತ್ರಿಪುರಾದೇವಿಗೆ ಸಂಬಂಧಪಟ್ಟ, ಪುರಾಣಗಳಲ್ಲಿಯೂ ಮತ್ತು ಆಗಮಗಳಲ್ಲಿಯೂ ಪ್ರಸಿದ್ಧವಾದ ನೂರುಸಾವಿರಕ್ಕಿಂತಲೂ ಹೆಚ್ಚಾದ ಸಂಖ್ಯೆಗಳುಳ್ಳ ನಾಮಗಳಿವೆ. ॥೭॥

ಆ ನಾಮಗಳಲ್ಲಿ ಸಾರಭೂತವಾದ ಭಾಗವು ಈ ಸೌಭಾಗ್ಯಾಷ್ಟೋತ್ತರಶತ ನಾಮಸ್ತೋತ್ರವೆಂದು ತಿಳಿ. ಹಿಂದೆ ಪಾರ್ವತಿಯು ಅನೇಕಸಲ ಪ್ರಾರ್ಥಿಸಲಾಗಿ ಶಿವನು ಈ ಸ್ತೋತ್ರವನ್ನು ಆಕೆಗೆ ಹೇಳಿದನು. ॥೮॥

ಎಲೈ ಪರಶುರಾಮನೇ, ಸೌಭಾಗ್ಯಾಷ್ಟೋತ್ತರಶತನಾಮಸ್ತೋತ್ರಕ್ಕೆ ಶಿವನೇ ಋಷಿಯೆಂದೂ, ಅನುಷ್ಟುಪ್ ಛಂದಸ್ಸೆಂದೂ, ಶ್ರೀ ಲಲಿತಾತ್ರಿಪುರಾಸುಂದರೀದೇವ

ದೇವತಾ ವಿನ್ಯಸೇತ್ಕೂಟತ್ರಯೇಽಽವರ್ತ್ಯ ಸರ್ವತಃ ।
ಧ್ಯಾತ್ವಾ ಸಂಪೂಜ್ಯ ಮನಸಾ ಸ್ತೋತ್ರಮೇತದುದೀರಯೇತ್ ॥೧೦॥

ಕಾಮೇಶ್ವರೀ ಕಾಮಶಕ್ತಿಃ ಕಾಮಸೌಭಾಗ್ಯದಾಯಿನೀ ।
ಕಾಮರೂಪಾ ಕಾಮಕಲಾಕಾಮಿನೀ ಕಮಲಾಽಽಸನಾ ॥೧೧॥

ಕಮಲಾ ಕಲ್ಪನಾಹೀನಾ ಕಮನೀಯಾ ಕಲಾವತೀ ।
ಕಮಲಾ ಭಾರತೀ ಸೇವ್ಯಾ ಕಲ್ಪಿತಾಽಶೇಷ ಸಂಸೃತಿಃ ॥೧೨॥

ಅನುತ್ತರಾಽನಘಾಽನಂತಾಽದ್ಭುತರೂಪಾಽನಲೋದ್ಭವಾ ।
ಅತಿಲೋಕಚರಿತ್ರಾಽತಿಸುಂದರ್ಯತಿ ಶುಭಪ್ರದಾ ॥೧೩॥

ಅಘಹಂತ್ರ್ಯತಿ ವಿಸ್ತಾರಾಽರ್ಚನ ತುಷ್ಟಾಽಮಿತಪ್ರಭಾ ।
ಏಕರೂಪೈಕವೀರೈಕನಾಥೈಕಾಂತಾಽರ್ಚನಪ್ರಿಯಾ ॥೧೪॥

ಏಕೈಕಭಾವತುಷ್ಟೈಕರಸೈಕಾಂತಜನಪ್ರಿಯಾ ।
ಏಧಮಾನ ಪ್ರಭಾವೈಧ ದ್ಭಕ್ತಪಾತಕನಾಶಿನೀ ॥೧೫॥

---

ತೆಯೇ ಅಧಿದೇವತೆಯೆಂದೂ ಹೇಳಲ್ಪಟ್ಟಿದೆ. ಇದನ್ನು ಎಲ್ಲಾ ಕಡೆಯಲ್ಲಿ ಮೂರು ಕೂಟಗಳಲ್ಲಿ ಆವೃತ್ತಿಮಾಡಿ ವಿನ್ಯಾಸಮಾಡಬೇಕು. ಅನಂತರ ದೇವಿಯ ಆರಾಧಕನು ಧ್ಯಾನಮಾಡಿ ಮಾನಸಿಕ ಪೂಜೆಯನ್ನೂ ಮಾಡಿ ಈ ರೀತಿಯಲ್ಲಿ ಆಕೆಯ ಸ್ತೋತ್ರವನ್ನು ಮಾಡಬೇಕು. ॥೯-೧೦॥

ಕಾಮೇಶ್ವರಿಯೂ, ಕಾಮಶಕ್ತಿಯೂ, ಕಾಮಸೌಭಾಗ್ಯದಾಯಿನಿಯೂ ಇಷ್ಟಾರ್ಥ ಸೌಭಾಗ್ಯದಾಯಿನಿಯೂ ಕಾಮರೂಪಳೂ, ಕಾಮಕಲೆಯೂ, ಕಾಮಿನಿಯೂ, ಕಮಲ ಲೋಚನೆಯೂ, ಕಮಲೆಯೂ, ಕಲ್ಪನಾಹೀನೆಯೂ, ಕಮನೀಯಳೂ,ಕಲಾವತಿಯೂ ಭಾರತೀಸೇವ್ಯಳೂ ತನ್ನ ಇಚ್ಛೆಯಿಂದಲೇ ಕಲ್ಪಿಸಲ್ಪಟ್ಟ ಸಮಸ್ತಸಂಸಾರವುಳ್ಳವಳೂ ಆದ ತ್ರಿಪುರಾದೇವಿಗೆ ನಮಸ್ಕಾರಗಳು. ॥೧೧-೧೨॥

ತ್ರಿಪುರಾದೇವಿಯು ತನಗಿಂತಲೂ ಶ್ರೇಷ್ಠವಾದ ಮತ್ತೊಂದು ವಸ್ತುವಿಲ್ಲದವಳೂ, ಪಾಪರಹಿತಳೂ, ನಾಶವಿಲ್ಲದವಳೂ, ಆಶ್ಚರ್ಯಕರವಾದ ಸ್ವರೂಪವುಳ್ಳವಳೂ, ಅಗ್ನಿಯಲ್ಲಿ ಉತ್ಪನ್ನಳಾದವಳೂ, ಲೋಕವಿಲಕ್ಷಣವಾದ ನಡವಳಿಕೆಯುಳ್ಳವಳೂ, ಬಹಳ ಸುಂದರಿಯೂ, ಅತ್ಯಂತ ಮಂಗಳವನ್ನುಂಟುಮಾಡುವಳೂ, ಪಾಪ

ಏಲಾಃಸುಗಂಧಿಮುಖ್ಯೈನೋದ್ರಿಶಕ್ರಾಯುಧ ಸಮುಸ್ಥಿತಿಃ ।
ಈಹಾಶೂನ್ಯೇಪ್ಸಿತೇಶಾದಿಸೇವ್ಯೇಶಾನವರಾಂಗನಾ ॥೧೬॥

ಈಶ್ವರಾಜ್ಞಾಪಿಕೇಕಾರ ಭಾವ್ಯೇಪ್ಸಿತಫಲಪ್ರದಾ ।
ಈಶಾನೇತಿಹರೇಕ್ಷೇಷದರುಣಾಕ್ಷೀಶ್ವರೇಶ್ವರೀ ॥೧೭॥

ಲಲಿತಾ ಲಲನಾರೂಪಾ ಲಯಹೀನಾ ಲಸತ್ತನುಃ ।
ಲಯಸರ್ವಾ ಲಯಕ್ಷೋಣಿಃ ಲಯಕರ್ಣೀ ಲಯಾತ್ಮಿಕಾ ॥೧೮॥

ಲಘಿಮಾ ಲಘುಮಧ್ಯಾಢ್ಯಾಲಲಮಾನಾ ಲಘುದ್ರುತಾ ।
ಹಯಾರೂಢಾ ಹತಾಮಿತ್ರಾ ಹರಕಾಂತಾ ಹರಿಸ್ತುತಾ ॥೧೯॥

---

ಗಳನ್ನು ನಾಶಮಾಡುವವಳೂ, ಅತಿವಿಸ್ತಾರವಾದ ಆಕಾರವುಳ್ಳವಳೂ, ಪೂಜೆಯಿಂದ ಸಂತೋಷಗೊಳ್ಳುವವಳೂ, ಅಪರಿಮಿತವಾದ ಕಾಂತಿಯುಳ್ಳವಳೂ, ಒಂದೇ ಸ್ವರೂಪವುಳ್ಳವಳೂ, ಒಬ್ಬಳೇ ಆದ ವೀರಳೂ, ಸಾಟಿಯಿಲ್ಲದಿರುವ ಅಧಿದೇವತೆಯೂ, ರಹಸ್ಯವಾದ ಪೂಜೆಯಲ್ಲಿ ಪ್ರೀತಿಯುಳ್ಳವಳೂ, ವೃದ್ಧಿಹೊಂದುತ್ತಿರುವ ಮಹಿಮೆಯುಳ್ಳವಳೂ, ಹೆಚ್ಚಾಗುತ್ತಿರುವ ಭಕ್ತರ ಪಾಪಗಳೆಲ್ಲವನ್ನೂ ನಾಶಮಾಡುವವಳೂ ಆಗಿದ್ದಾಳೆ. ॥೧೩-೧೪-೧೫॥

ತ್ರಿಪುರಾದೇವಿಯು ಏಲಕ್ಕಿಯಂತೆ ಸುವಾಸನೆಯಾದ ಬಾಯುಳ್ಳವಳೂ, ಪಾಪಗಳೆಂಬ ಪರ್ವತಗಳಿಗೆ ಇಂದ್ರಾಯುಧಸಮಾನವಾದ ನಡತೆಯುಳ್ಳವಳೂ, ಸಕಲವಿಧವಾದ ಆಶೆಗಳಿಂದಲೂ ಮುಕ್ತರಾದ ಜನರಿಗೂ ಇಷ್ಟಳಾದವಳೂ, ಈಶನೇ ಮೊದಲಾದವರಿಂದಲೂ ಸೇವಿಸಲ್ಪಡುವವಳೂ, ಈಶ್ವರನ ಶ್ರೇಷ್ಠಪತ್ನಿಯೂ, ಈಶ್ವರನಿಗೂ ಆಜ್ಞೆಯನ್ನು ಮಾಡುವವಳೂ, ಈಕಾರದಿಂದ ಭಾವಿಸಲ್ಪಡುವವಳೂ, ಸಕಲ ಇಷ್ಟಾರ್ಥಗಳನ್ನೂ ಕೊಡುವವಳೂ, ಈಶ್ವರನಿಗೂ ಪ್ರಾಪ್ತವಾದ ದುಃಖಗಳನ್ನು ನಿವಾರಣೆಮಾಡುವ ಕಟಾಕ್ಷವುಳ್ಳವಳೂ ಸ್ವಲ್ಪ ಕೆಂಪಾದ ಕಣ್ಣುಗಳುಳ್ಳವಳೂ, ಈಶ್ವರನಿಗೂ ಈಶ್ವರಿಯೂ, ಲಲಿತೆಯೂ, ಮೋಹಕವಾದ ಸ್ವರೂಪವುಳ್ಳವಳೂ, ನಾಶವಿಲ್ಲದವಳೂ, ಪ್ರಕಾಶಮಾನವಾದ ಶರೀರವುಳ್ಳವಳೂ, ಲಯವೇ ಸರ್ವಸ್ವವಾಗುಳ್ಳವಳೂ, ಲಯಕ್ಕೆ ಆಧಾರವಾಗುವವಳೂ, ಲಯಸ್ವರೂಪಳೂ ಆಗಿದ್ದಾಳೆ. ॥೧೬-೧೮॥

ತ್ರಿಪುರಾದೇವಿಯು, ಲಘಿಮಾ ಎಂಬ ಸಿದ್ಧಿಯ ಸ್ವರೂಪಳೂ, ಹಗುರವಾದ ಮಧ್ಯಭಾಗದಿಂದ ಮನೋಹರವಾದ ವಿಲಾಸವುಳ್ಳವಳೂ, ಸ್ವಲ್ಪ ಶೀಘ್ರವಾಗಿ ಚಲಿಸು

ಹಯಗ್ರೀವೇಷ್ಟದಾ ಹಾಲಾ ಪ್ರಿಯಾ ಹರ್ಷಸಮುದ್ಧತಾ ।
ಹರ್ಷಣಾ ಹಲ್ಲಿಕಾಭಾಂಗೀ ಹಸ್ತ್ಯಂತೈಶ್ವರ್ಯದಾಯಿನೀ ॥೨೦॥

ಹಲಹಸ್ತಾರ್ಚಿತಪದಾ ಹವಿರ್ಧಾನಪ್ರಸಾದಿನೀ ।
ರಾಮರಾಮಾರ್ಚಿತಾ ರಾಜ್ಞೀ ರಮ್ಯಾ ರವಮಯೀ ರತಿಃ ॥೨೧॥

ರಕ್ಷಿಣೀ ರಮಣೀ ರಾಕಾ ರಮಣೀಮಂಡಲಪ್ರಿಯಾ ।
ರಕ್ಷಿತಾಖಿಲಾಲೋಕೇಶಾ ರಕ್ಷೋಗಣನಿಷೂದಿನೀ ॥೨೨॥

ಅಂಬಾಂತಕಾರಿಣ್ಯಂಭೋಜಪ್ರಿಯಾಂತಕ ಭಯಂಕರೀ ।
ಅಂಬುರೂಪಾಂಬುಜಕರಾಂಬುಜಜಾತವರಪ್ರದಾ ॥೨೩॥

ಅಂತಃಪೂಜಾ ಪ್ರಿಯಾಂತಸ್ಸ್ವರೂಪಿಣ್ಯಂತರ್ವಚೋಮಯೀ ।
ಅಂತಕಾರಾತಿವಾಮಾಂಕಸ್ಥಿತಾಂತಃ ಸುಖರೂಪಿಣೀ ॥೨೪॥

---

ವವಳೂ, ಕುದುರೆಯಮೇಲೆ ಹತ್ತಿರುವವಳೂ, ಶತ್ರುಗಳೆಲ್ಲರನ್ನೂ ನಾಶಮಾಡಿರುವವಳೂ, ಶಿವನ ಪತ್ನಿಯೂ, ವಿಷ್ಣುವಿನಿಂದ ಸ್ತೋತ್ರಮಾಡಲ್ಪಟ್ಟಿರುವವಳೂ, ಹಯಗ್ರೀವನ ಇಷ್ಟವನ್ನು ನೀಡಿದವಳೂ, ಹಾಲಾಹಲವಿಷಯದಲ್ಲಿಯೂ ಪ್ರೀತಿಯನ್ನು ತೋರಿಸಿದವಳೂ, ಸಂತೋಷದಿಂದ ಉಬ್ಬಿರುವವಳೂ, ಸಂತೋಷವನ್ನುಂಟುಮಾಡುವವಳೂ ಸಣ್ಣನೇಗಿಲಿನ ಪಟ್ಟಿಗೆ ಸಮಾನವಾದ ಅವಯವವುಳ್ಳವಳೂ, ಆನೆಯಷ್ಟು ಎತ್ತರದ ಐಶ್ವರ್ಯವನ್ನಾದರೂ ನೀಡಲು ಸಮರ್ಥಳೂ, ನೇಗಿಲನ್ನೇ ಕೈಲಿ ಹಿಡಿದಿರುವವಳೂ, ಭಕ್ತರಿಂದ ಪೂಜಿಸಲ್ಪಟ್ಟ ಪಾದಗಳುಳ್ಳವಳೂ, ಹವಿಸ್ಸನ್ನು ಅರ್ಪಿಸುವುದರಿಂದ ಮೆಚ್ಚುವವಳೂ, ರಾಮ, ಬಲರಾಮ ಇವರೆಲ್ಲರಿಂದಲೂ ಪೂಜಿಸಲ್ಪಟ್ಟವಳೂ ಶ್ರೀಷ್ಠರಾಣಿಯೂ ಮನೋಹರಳೂ ಧ್ವನಿಸ್ವರೂಪಳೂ ಶಿವನಿಗೆ ಸುಖಕರಳೂ ಆಗಿದ್ದಾಳೆ. ॥೧೯-೨೦-೨೧॥

ತ್ರಿಪುರಾದೇವಿಯು ರಕ್ಷಕಳೂ, ರಮಣಿಯೂ, ಪೂರ್ಣಿಮೆಯ ಚಂದ್ರನಂತೆ ಪ್ರಕಾಶಿಸುವವಳೂ ಸ್ತ್ರೀಸಮೂಹಕ್ಕೆ ಪ್ರಿಯಳಾದವಳೂ ಸಮಸ್ತ ಲೋಕಾಧಿಪತಿಗಳನ್ನೂ ಕಾಪಾಡುವವಳೂ, ರಾಕ್ಷಸನಾಶಕಳೂ, ಲೋಕಮಾತೆಯೂ ಪ್ರಳಯಕಾಲದಲ್ಲಿ ಲೋಕನಾಶಕಳೂ, ಕಮಲದಲ್ಲಿ ಪ್ರೀತಿಯುಳ್ಳವಳೂ ಯಮನಿಗೂ ಭಯವನ್ನುಂಟುಮಾಡುವವಳೂ ಜಲಸ್ವರೂಪಳೂ ಕಮಲವನ್ನು ಕೈಯಲ್ಲಿ ಹಿಡಿದಿರುವವಳೂ

ಸರ್ವಜ್ಞಾ ಸರ್ವಗಾ ಸಾರಾ ಸಮಾ ಸಮಸುಖಾ ಸತೀ ।
ಸಂತತಿಃ ಸಂತತಾ ಸೋಮಾ ಸರ್ವಾ ಸಾಂಖ್ಯಾ ಸನಾತನೀ ॥೨೫॥

ಏತತ್ತೇ ಕಥಿತಂ ರಾಮ ನಾಮ್ನಾಮಷ್ಟೋತ್ತರಂ ಶತಮ್ ।
ಅತಿಗೋಪ್ಯಮಿದಂ ನಾಮ್ನಃ ಸರ್ವತಃ ಸಾರಮುದ್ಧೃತಮ್ ॥೨೬॥

ಏತಸ್ಯ ಸದೃಶಂ ಸ್ತೋತ್ರಂ ತ್ರಿಷು ಲೋಕೇಷು ದುರ್ಲಭಮ್ ।
ಅಪ್ರಕಾಶ್ಯಮಭಕ್ತಾನಾಂ ಪುರತೋ ದೇವತಾದ್ವಿಷಾಮ್ ॥೨೭॥

ಏತತ್ಸದಾಶಿವೋ ನಿತ್ಯಂ ಪಠಂತ್ಯನ್ಯೇ ಹರಾದಯಃ ।
ಏತತ್ಪ್ರಭಾವಾತ್ಕಂದರ್ಪಸ್ತ್ರೈಲೋಕ್ಯಂ ಜಯತಿ ಕ್ಷಣಾತ್ ॥೨೮॥

---

ಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೆ ವರವನ್ನು ಕೊಟ್ಟವಳೂ, ಅಂತರಂಗದ ಪೂಜೆಯನ್ನು ಮೆಚ್ಚುವವಳೂ ರಹಸ್ಯವಾದ ಸ್ವರೂಪವುಳ್ಳವಳೂ ಅಂತರ್ವಾಣೀ ಸ್ವರೂಪಳೂ ಯಮನಿಗೆ ಶತ್ರುವಾದ ಶಿವನ ಎಡತೊಡೆಯ ಮೇಲೆ ಕುಳಿತಿರುವವಳೂ ಅಂತರಂಗದ ಸುಖ ಸ್ವರೂಪಳೂ ಆಗಿದ್ದಾಳೆ. ॥೨೨-೨೩-೨೪॥

ತ್ರಿಪುರಾದೇವಿಯು ಎಲ್ಲವನ್ನು ಅರಿತವಳೂ, ಎಲ್ಲಾ ಕಡೆಯಲ್ಲಿಯೂ ಚಲಿಸುವವಳೂ, ಎಲ್ಲಾ ವಸ್ತುಗಳಿಗಿಂತಲೂ ಸಾರಭೂತಳಾದವಳೂ, ಎಲ್ಲರನ್ನೂ ಸಮನಾಗಿ ಕಾಣುವವಳೂ, ಸಮನಾಗಿ ಸೌಖ್ಯವನ್ನುಂಟು ಮಾಡುವವಳೂ, ಪತಿವ್ರತೆಯೂ, ಸಂತಾನಸ್ವರೂಪಳೂ ನಿತ್ಯಳೂ, ಚಂದ್ರಸ್ವರೂಪಳೂ ಸರ್ವಸ್ವರೂಪಳೂ ಜ್ಞಾನಸ್ವರೂಪಳೂ ಶಾಶ್ವತವಾದ ಮೂಲತತ್ವಸ್ವರೂಪಳೂ ಆಗಿದ್ದಾಳೆ. ॥೨೫॥

ಎಲೈ ಪರಶುರಾಮನೇ, ತ್ರಿಪುರಾದೇವಿಯ ನೂರೆಂಟು ನಾಮಗಳನ್ನೂ ಈರೀತಿಯಲ್ಲಿ ನಿನಗೆ ಹೇಳಿದ್ದೇನೆ. ಆಕೆಯ ನಾಮಗಳ ಪೈಕಿ ಅತ್ಯಂತ ಸಾರಭೂತವಾದ ಅತ್ಯಂತ ರಹಸ್ಯವಾದ ಈ ನೂರೆಂಟು ನಾಮಗಳನ್ನು ನಿನಗೆ ತಿಳಿಸಿದ್ದೇನೆ. ಮೂರುಲೋಕಗಳಲ್ಲಿ ಇದಕ್ಕೆ ಸಮಾನವಾದ ಸ್ತೋತ್ರವು ಸಿಕ್ಕಲಾರದೆಂದು ತಿಳಿ. ಈ ಶ್ರೇಷ್ಠ ಸ್ತೋತ್ರವನ್ನು ಶ್ರೀ ತ್ರಿಪುರಾದೇವಿಯನ್ನು ದ್ವೇಷಿಸುವ ಆಕೆಯ ಭಕ್ತರಲ್ಲದ ಜನರ ಮುಂದೆ ಎಂದಿಗೂ ಹೇಳಬಾರದು. ॥೨೬-೨೭॥

ಸದಾಶಿವನೂ, ಹರನೂ, ವಿಷ್ಣುವೇ ಮೊದಲಾದ ಇತರರೂ, ಈ ಸ್ತೋತ್ರವನ್ನು ಪ್ರತಿ ದಿನಗಳಲ್ಲಿಯೂ ಪಠಿಸುತ್ತಾರೆ. ಈ ಸ್ತೋತ್ರ ಪಾಠದ ಮಹಿಮೆಯಿಂದಲೇ ಮನ್ಮಥನು ಮೂರುಲೋಕಗಳನ್ನೂ ಕ್ಷಣ ಕಾಲದಲ್ಲಿಯೇ ಜಯಿಸುವನು. ॥೨೮॥

ಸೌಭಾಗ್ಯಾಷ್ಟೋತ್ತರಶತನಾಮಸ್ತೋತ್ರಂ ಮನೋಹರಮ್ ।
ಯಸ್ತ್ರಿಸಂಧ್ಯಂ ಪಠೇನ್ನಿತ್ಯಂ ನ ತಸ್ಯ ಭುವಿ ದುರ್ಲಭಮ್ ॥೨೯॥

ಶ್ರೀವಿದ್ಯೋಪಾಸನವತಾ ಮೇತದಾವಶ್ಯಕಂ ಮತಮ್ ।
ಸಕೃದೇತತ್ಪ್ರಪಠತಾಂ ನಾನ್ಯತ್ಕರ್ಮ ವಿಲುಪ್ಯತೇ ॥೩೦॥

ಅಪಠಿತ್ವಾ ಸ್ತೋತ್ರಮಿದಂ ನಿತ್ಯಂ ನೈಮಿತ್ತಿಕಂ ಕೃತಮ್ ।
ವ್ಯರ್ಥೀಭವತಿ ನಗ್ನೇನ ಕೃತಂ ಕರ್ಮ ಯಥಾ ತಥಾ ॥೩೧॥

ಸಹಸ್ರನಾಮಪಾಠಾದೌ ಅಶಕ್ತಸ್ತ್ವೇತದುದೀರಯೇತ್ ।
ಸಹಸ್ರನಾಮಪಾಠಸ್ಯ ಫಲಂ ಶತಗುಣಂ ಭವೇತ್ ॥೩೨॥

ಸಹಸ್ರಧಾ ಪಠಿತ್ವಾ ತು ವೀಕ್ಷಣಾನ್ನಾಶಯೇದ್ರಿಪೂನ್ ।
ಮರೀಚೈರ್ವಿದ್ವೇಷಣಾಯ ಲವಂಗೈರ್ವ್ಯಾಧಿನಾಶನೇ ॥೩೪॥

---

ಈ ಮನೋಹರವಾದ ಸೌಭಾಗ್ಯಾಷ್ಟೋತ್ತರಶತನಾಮಸ್ತೋತ್ರವನ್ನು ಯಾರು ಮೂರು ಸಂಧ್ಯಾಕಾಲಗಳಲ್ಲಿಯೂ ಪ್ರತಿದಿನವೂ ಪಠಿಸುತ್ತಾರೆಯೋ, ಅವರಿಗೆ ಭೂಮಿಯಲ್ಲಿ ದುರ್ಲಭವಾದದ್ದೇನೂ ಇರುವುದಿಲ್ಲ. ॥೨೯॥

ಶ್ರೀ ತ್ರಿಪುರಾದೇವಿಯ ಉಪಾಸನೆಯನ್ನು ಮಾಡುವ ಜನರಿಗೆ ಈ ಸೌಭಾಗ್ಯ ಸ್ತೋತ್ರಪಾಠವು ಅತ್ಯಾವಶ್ಯಕವಾಗಿರುತ್ತದೆ. ಯಾರು ಇದನ್ನು ಒಂದಾವೃತ್ತಿ ಪಠಿಸಿದರೂ, ಅವರು ಮಾಡಬೇಕಾದ ಬೇರೆ ಕರ್ಮಗಳ ಲೋಪವೊಂದೂ ಸಂಭವಿಸು ವುದೇ ಇಲ್ಲವು. ॥೩೦॥

ಈ ಸ್ತೋತ್ರವನ್ನು ಪಠಿಸದೇ ಇರುವ ಅವರು ನಿತ್ಯನೈಮಿತ್ತಿಕಕರ್ಮಗಳನ್ನು ಮಾಡಿದರೂ, ಬರಿಯ ಬೆತ್ತಲೆಯಲ್ಲಿ ಕರ್ಮಮಾಡುವ ಮನುಷ್ಯನ ಕರ್ಮಾಚರಣೆ ಯಂತೆ, ಅದು ವ್ಯರ್ಥವೇ ಆಗುತ್ತದೆ. ॥೩೧॥

ತ್ರಿಪುರಾದೇವಿಯ ಸಹಸ್ರನಾಮಪಾಠವೇ ಮುಂತಾದುದನ್ನು ಮಾಡುವುದರಲ್ಲಿ ಅಶಕ್ತನಾದ ಮನುಷ್ಯನು ಈ ನೂರೆಂಟು ನಾಮಗಳನ್ನು ಪಠಿಸಬೇಕು. ಆಕೆಯ ಸಹಸ್ರನಾಮವನ್ನು ಪಠಿಸಿದುದರ ನೂರರಷ್ಟು ಫಲವು ಇದರಿಂದ ಸಿಕ್ಕುತ್ತದೆ. ॥೩೨॥

ಈ ದೇವಿಯ ಅಷ್ಟೋತ್ತರ ನಾಮವನ್ನು ಸಾವಿರ ಸಲ ಪಠಿಸಿದವನು ಕೇವಲ ನೋಡೋಣ ಮಾತ್ರದಿಂದಲೇ ಶತ್ರುಗಳನ್ನು ನಾಶಮಾಡಬಲ್ಲವನಾಗುವನು. ಮರೀಚ

ಸುವಾಸಿನೀ ಬ್ರಾಹ್ಮಣಾನ್ ವಾ ಭೋಜಂಯೇದ್ಯಸ್ತು ನಾಮಭಿಃ ।
ಯಶ್ಚ ಪುಷ್ಪೈಃ ಫಲೈರ್ವಾಽಪಿ ಪೂಜಯೇತ್ಪ್ರತಿನಾಮಭಿಃ ॥೩೫॥

ಚಕ್ರರಾಜೇಽಥವಾಽನ್ಯತ್ರ ಸ ವಸೇಚ್ಛ್ರೀಪುರೇ ಚಿರಮ್ ।
ಯಃ ಸದಾಽಽವರ್ತಯನ್ನಾಸ್ತೇ ನಾಮಾಽಷ್ಟಶತಮುತ್ತಮಮ್ ॥೩೬॥

ತಸ್ಯ ಶ್ರೀಲಲಿತಾ ರಾಜ್ಞೀ ಪ್ರಸನ್ನಾ ವಾಂಛಿತಪ್ರದಾ ।
ಏತತ್ತೇ ಕಥಿತಂ ರಾಮ ಶೃಣು ತ್ವಂ ಪ್ರಕೃತಂ ಬ್ರುವೇ ॥೩೭॥

ಅಥೈವಂ ಮದನಃ ಪ್ರಾಪ್ಯ ವರಂ ದೇವ್ಯಾ ಮಹತ್ತರಮ್ ।
ಮರ್ತ್ಯಾನಮರ್ತ್ಯಾನಸುರಾನ್ ಯತುಧಾನಾಂಶ್ಚ ಕಿನ್ನರಾನ್ ॥೩೮॥

---

ರೆಂಬುವರು ಶತ್ರುನಾಶ ಸಂದರ್ಭದಲ್ಲಿಯೂ, ಲವಂಗರು ವ್ಯಾಧಿಯನ್ನು ಹಾಳು ಮಾಡುವ ಸಂದರ್ಭದಲ್ಲಿಯೂ, ಈ ಸ್ತೋತ್ರವನ್ನೇ ಜಪಿಸಿ ಸಾಫಲ್ಯವನ್ನು ಹೊಂದಿದರು. ॥೩೪॥

ಯಾವನು ಮುತ್ತೈದೆಯರನ್ನಾಗಲಿ ಅಥವಾ ಬ್ರಾಹ್ಮಣರನ್ನಾಗಲೀ, ಈ ದೇವೀ ನಾಮಸ್ತೋತ್ರ ಪಾರಾಯಣಮಾಡಿದ ಅನಂತರದಲ್ಲಿ ಭೋಜನಮಾಡಿಸು ವನೋ, ಅಥವಾ ಆಕೆಯ ನಾಮಗಳನ್ನು ಉಚ್ಚರಿಸುತ್ತಾ ಹೂವು ಹಣ್ಣುಗಳಿಂದ ದೇವಿಯನ್ನು ಪೂಜಿಸುವನೋ, ಅಂಥವನಿಗೆ ಮುಂದೆ ಹೇಳುವ ಫಲವು ಲಭಿಸು ವುದು. ॥೩೫॥

ಶ್ರಿದೇವಿಯ ಶ್ರೇಷ್ಠಚಕ್ರದಲ್ಲಾಗಲೀ, ಯಾವನು ಬೇರೆ ಶ್ರೇಷ್ಠ ಪ್ರದೇಶದಲ್ಲಾ ಗಲೀ, ಆಕೆಯ ನಾಮಗಳಿಂದ ಪೂಜೆಯನ್ನು ನೆರವೇರಿಸುವನೋ ಅಂಥವನು ಶ್ರೀ ತ್ರಿಪುರಾದೇವಿಯ ಪಟ್ಟಣವನ್ನೇ ಹೊಂದಿ, ಅಲ್ಲಿ ಬಹಳ ಕಾಲ ಆನಂದದಿಂದಿರು ವನು. ಯಾವನು ಶ್ರೀ ತ್ರಿಪುರಾದೇವಿಯ ಉತ್ತಮವಾದ ನೂರೆಂಟು ನಾಮಗಳನ್ನು ಆವೃತ್ತಿ ಮಾಡುತ್ತಿರುವನೋ ಶ್ರೇಷ್ಠ ರಾಣಿಯಾದ ತ್ರಿಪುರಸುಂದರೀ ದೇವಿಯು ಅವನ ಭಕ್ತಿಯನ್ನು ಮೆಚ್ಚಿ, ಅವನಿಗೆ ಸಕಲ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡು ವಳು. ಎಲೈ ಪರಶುರಾಮನೇ, ಹೀಗೆ ದೇವಿಯ ಸ್ತೋತ್ರ ವಿಚಾರವನ್ನು ನಿನಗೆ ತಿಳಿಸಿ ದ್ದೇನೆ. ಇನ್ನು ಮುಂದೆ ಪ್ರಕೃತವಾಗಿದ್ದ ಕಥೆಯನ್ನು ಹೇಳುವೆನು, ಕೇಳು. ॥೩೬-೩೭॥

ಅನಂತರದಲ್ಲಿ ಮನ್ಮಥನು ತ್ರಿಪುರಾದೇವಿಯ ಅನುಗ್ರಹದಿಂದ ಅತ್ಯಂತ ಮಹತ್ವವುಳ್ಳ ಈ ವರವನ್ನು ಪಡೆದು, ಮನುಷ್ಯರು, ದೇವತೆಗಳು, ರಾಕ್ಷಸರು,

ಯಕ್ಷಾನ್ ಕಿಂಪುರುಷಾದೀಂಶ್ಚ ಚಕಾರ ಸ್ವವಶೇ ದ್ರುತಮ್ ।
ಅಥ ಕಾಲಾಂತರೇ ಕಾಮೋ ಮಹಾದೇವಜಿಗೀಷಯಾ ॥೩೯॥

ಗತ್ವಾ ಕ್ರೋಧಾಗ್ನಿಮಾಸಾದ್ಯ ಭಸ್ಮೀಭೂತಃ ಪತಂಗವತ್ ।
ತತ್ಕಥಾಂ ತೇಽಭಿಧಾಸ್ಯಾಮಿ ಶೃಣು ರಾಮ ಸಮಾಹಿತಃ ॥೪೦॥

ಗೌರೀ ದಾಕ್ಷಾಯಣೀ ಭೂತ್ವಾ ಪಿತುರ್ದಕ್ಷಸ್ಯ ಬರ್ಹಿಷಿ ।
ಶ್ರುತ್ವಾ ನಿಂದಾಂ ಮಹೇಶಸ್ಯ ಪತ್ಯುರ್ಭಸ್ಮತ್ವಮಾಗತಾ ॥೪೧॥

ಆಕಾಶಮಾತ್ರರೂಪಾ ಸಾ ಗೌರೀ ಜಗತಿ ಸಂಸ್ಥಿತಾ ।
ಅಥ ಕಾಲೇ ಚಿರತರೇ ಸಮತೀತೇ ನಗೇಶ್ವರಃ ॥೪೨॥

ಹಿಮವಾನ್ ಬ್ರಹ್ಮಪುತ್ರೇಣ ನಾರದೇನಾಽಭಿಸಂಗತಃ ।
ಪ್ರತ್ಯುತ್ಥಾಯ ದೇವಮುನಿಂ ಸಭಾಜಯತ ಭಕ್ತಿತಃ ॥೪೩॥

---

ದಾನವರು, ಕಿನ್ನರರು, ಯಕ್ಷರು, ಕಿಂಪುರುಷರೇ ಮೊದಲಾದ ಇವರನ್ನೆಲ್ಲರನ್ನೂ ಶೀಘ್ರವಾಗಿ ತನ್ನ ಅಧೀನರನ್ನಾಗಿ ಮಾಡಿಕೊಂಡನು. ಅನಂತರದಲ್ಲಿ ಮನ್ಮಥನು ಬೇರೊಂದು ಕಾಲದಲ್ಲಿ ಶಿವನನ್ನು ಜಯಿಸುವ ಇಚ್ಛೆಯಿಂದ ಹೋಗಿ ಅವನ ಕೋಪಾಗ್ನಿಗೆ ತುತ್ತಾಗಿ, ಪತಂಗದ ಹುಳುವಿನಂತೆ, ಬೂದಿಯಾದನು. ಎಲೈ ಪರಶು ರಾಮನೇ, ಈ ಕಥೆಯನ್ನು ಸಾವಧಾನ ಚಿತ್ತದಿಂದ ಕೇಳು. ॥೩೮-೩೯-೪೦॥

ಗೌರಿಯು ದಾಕ್ಷಾಯಣಿಯಾಗಿ ಜನಿಸಿ, ತನ್ನ ತಂದೆಯಾದ ದಕ್ಷನು ಮಾಡಿದ ಯಾಗದಲ್ಲಿ ಪತಿಯಾದ ಶಿವನ ನಿಂದೆಯನ್ನು ಕೇಳಿ, ಆ ಯಾಗಾಗ್ನಿಯುಲ್ಲಿ ಪ್ರವೇಶಿಸಿ ಬೂದಿಯಾದಳು. ॥೪೧॥

ಆಮೇಲೆ ಜಗತ್ತಿನಲ್ಲಿ ಗೌರಿಯು ಆಕಾಶಸ್ವರೂಪವನ್ನು ಮಾತ್ರ ಹೊಂದಿದ್ದಳು. ಹೀಗೆ ಬಹಳ ಕಾಲವು ಕಳೆಯಲು, ಪರ್ವತಗಳಿಗೆ ಅಧಿಪತಿಯಾದ ಹಿಮವಂತನು ಒಂದು ದಿನ, ಬ್ರಹ್ಮ ಪುತ್ರನಾದ ನಾರದನು ತನ್ನೆಡೆಗೆ ಬಂದದ್ದನ್ನು ಕಂಡು, ಮೇಲಕ್ಕೆದ್ದು ದೇವರ್ಷಿಯಾದ ಆತನಿಗೆ ಭಕ್ತಿಭಾವದಿಂದ ಸತ್ಕಾರವನ್ನು ಮಾಡಿದನು. ॥೪೨-೪೩॥

ಪಾದ್ಯಾರ್ಘ್ಯವಮಾಲ್ಯಹಾರಾದ್ಯೈರಾಲೇಪೈರ್ವಸ್ತ್ರಭೂಷಣೈಃ ।
ಪೂಜಯಿತ್ವಾ ಸ್ವಾದುತರೈ ರಭೋಜಯತ ಭೋಜನೈಃ ॥೪೪॥

ಏವಂ ಸಂಪೂಜಿತಂ ದೇವಮುನಿಂ ಪರಮಶೋಭನಮ್ ।
ಸಮಾಸೀನಂ ಸಭಾಮಧ್ಯೇ ಪ್ರಾಹ ಪರ್ವತಭೂಪತಿಃ ॥೪೫॥

ದೇವರ್ಷೇ ತ್ವತ್ಸಮಾಲೋಕಾದ್ಧನ್ಯೋಽಹಂ ಸಂಪ್ರತಿ ಕ್ಷಿತೌ ।
ಯತ್ತ್ವಯಾ ಬ್ರಹ್ಮಪುತ್ರೇಣ ದೀನೋಽಹಂ ಸೇವಕೀಕೃತಃ ॥೪೬॥

ಭಗವನ್ ಬ್ರೂಹಿ ಭುವನಾತ್ ಕಸ್ಮಾತ್ತ್ವಂ ಸಮುಪಾಗತಃ ।
ದುರ್ಲಭಂ ದರ್ಶನಂ ತೇಽದ್ಯ ಗಮನೇಚ್ಛಾಽಪಿ ಕುತ್ರ ತೇ ॥೪೭॥

ಏವಂ ಪೃಷ್ಟೋ ನಾರದೋಽಥ ಮುದುಪ್ರಸ್ಯಂದನಂ ವಚಃ ।
ಬಭಾಷೇ ಪರ್ವತಶ್ರೇಷ್ಠಂ ಸ್ವವೃತ್ತಾಂತವಿವಕ್ಷಯಾ ॥೪೮॥

---

ಹಿಮವಂತನು ನಾರದನಿಗೆ ಪಾದ್ಯ, ಅರ್ಘ್ಯ, ಮಾಲ್ಯಹಾರ, ಲೇಪನ ಈ ದ್ರವ್ಯಗಳು, ವಸ್ತ್ರಗಳು, ಅಲಂಕಾರಗಳು, ಇವೆಲ್ಲವನ್ನೂ ಅರ್ಪಿಸಿ ಪೂಜೆಮಾಡಿ ಬಹಳ ರುಚಿಕರವಾದ ಭಕ್ಷ್ಯಭೋಜ್ಯಗಳಿಂದ ಭೋಜನ ಮಾಡಿಸಿದನು. ॥೪೪॥

ಪರ್ವತಗಳಿಗೆ ಅಧಿಪತಿಯಾದ ಹಿಮವಂತನು ದೇವಮುನಿಯೂ ಪರಮ ಮಂಗಳಕರನೂ ಆದ ನಾರದನಿಗೆ ಹೀಗೆ ಸತ್ಕಾರ ಪೂಜೆಯನ್ನು ಮಾಡಿ, ತನ್ನ ಸಭಾಮಧ್ಯದಲ್ಲಿರುವ ಪೀಠದಲ್ಲಿ ಕುಳ್ಳಿರಿಸಿ ಈರೀತಿಯಲ್ಲಿ ಹೇಳಿದನು. ॥೪೫॥

ಓ ದೇವರ್ಷಿಯೇ, ನಿಮ್ಮ ದರ್ಶನದಿಂದ ಭೂಮಿಯಲ್ಲಿ ನಾನು ಈಗ ಧನ್ಯನಾದೆನು. ಏಕೆಂದರೆ ಬ್ರಹ್ಮನ ಮಗನಾದ ನೀವು ದೀನನಾದ ನನ್ನನ್ನು ಸೇವಕನನ್ನಾಗಿ ಮಾಡಿಕೊಂಡಿರಷ್ಟೆ. ॥೪೬॥

ಓ ಪೂಜ್ಯರೇ, ತಾವು ಯಾವ ಲೋಕದಿಂದ ನನ್ನೆಡೆಗೆ ಏತಕ್ಕಾಗಿ ಬಂದಿರುವಿರಿ ? ದುರ್ಲಭವಾದ ತಮ್ಮ ದರ್ಶನವು ನನಗೆ ಉಂಟಾಗಿದೆ. ಇನ್ನು ಮುಂದಕ್ಕೆ ಎಲ್ಲಿಗೆ ಪ್ರಯಾಣಮಾಡಬೇಕೆಂದು ಇಷ್ಟಪಟ್ಟಿರುವಿರಿ ? ॥೪೭॥

ಹೀಗೆ ಪರ್ವತರಾಜನಾದ ಹಿಮವಂತನು ಪ್ರಶ್ನಿಸಲಾಗಿ ನಾರದನು, ತನ್ನ ಸಮಾಚಾರವನ್ನು ತಿಳಿಸಬೇಕೆಂಬ ಅಭಿಲಾಷೆಯಿಂದ ಪರ್ವತಶ್ರೇಷ್ಠನಾದ ಅವನನ್ನು

ಪರ್ವತೇಶ ಸಮಾಯಾತಃ ಸತ್ಯಲೋಕಾದಹಂ ನನು ।
ತ್ವಾಂ ದಿದೃಕ್ಷುರ್ಧನ್ಯತಮಂ ವ್ರಜಾಮಿ ಶಿವಸನ್ನಿಧಿಮ್ ॥೪೯॥

ಶ್ರುತ್ವೈವಂ ನಾರದವಚೋ ಹಿಮವಾನ್ ಪ್ರಾಹ ಸನ್ನತಃ ।
ಭಗವನ್ ವದ ಕಸ್ಮಾತ್ತ್ವೇ ಧನ್ಯ ಇತ್ಯಹಮೀರಿತಃ ॥೫೦॥

ಅನಪತ್ಯತ್ವಶೋಕೇನ ವರಾಕಃ ಕೃಪಣೋ ಭೃಶಮ್ ।
ಇತಿ ಶ್ರುತ್ವಾ ಗಿರಿವಚೋ ನಾರದಃ ಪ್ರಾಹ ಸಾಂತ್ವಯನ್ ॥೫೧॥

ಶೃಣು ಭೂಭೃದ್ರಾಜ ಯತೋ ಧನ್ಯಸ್ತತ್ತ್ವೇ ವದಾಮ್ಯಹಮ್ ।
ತ್ವಂ ಸಂಪ್ರತಿ ಪರಾಶಕ್ತಿಪದಭಕ್ತಿಯುತೋ ಯತಃ ॥೫೨॥

ಅತಃ ಪ್ರೋಕ್ತೋ ಮಯಾ ಧನ್ಯ ಇತಿ ತ್ವಂ ಪ್ರೀತಿಹೇತುತಃ ।
ನ ಹ್ಯಲ್ಪಪುಣ್ಯೈಃ ಲೋಕೇಽಸ್ಮಿನ್ ಪರಾಭಕ್ತಿಃ ಪ್ರಜಾಯತೇ ॥೫೩॥

---

ಕುರಿತು, ಅಮೃತವನ್ನು ಸುರಿಸುವಂಥಾ ಮನೋಹರವಾದ ಮಾತುಗಳಿಂದ ಈ ರೀತಿಯಲ್ಲಿ ಹೇಳಿದನು. ॥೪೮॥

"ಎಲೈ ಪರ್ವತೇಶ್ವರನೇ, ಅತ್ಯಂತ ಧನ್ಯನಾದ ನಿನ್ನನ್ನು ನೋಡಲು ಇಚ್ಛಿಸಿ ನಾನು ಸತ್ಯಲೋಕದಿಂದ ಇಲ್ಲಿಗೆ ಬಂದೆನು. ಇನ್ನುಮುಂದೆ ಶಿವನ ಸಮೀಪಕ್ಕೆ ತೆರಳುವೆನು." ॥೪೯॥

ನಾರದನು ಹೇಳಿದ ಮಾತನ್ನು ಕೇಳಿ, ಹಿಮವಂತನು ಅವನಿಗೆ ಮಣಿದು, "ಓ ಪೂಜ್ಯರೇ, ನಾನು ಧನ್ಯನೆಂದು ಹೇಳಿದಿರಲ್ಲವೇ? ಅದು ಹೇಗೆ?" ಎಂದು ಕೇಳಿದನು. ॥೫೦॥

"ನಾನಾದರೋ ಮಕ್ಕಳಿಲ್ಲದಿರುವ ದುಃಖದಿಂದ ಅಧಮನೂ ಅತ್ಯಂತ ದೀನನೂ ಆಗಿದ್ದೇನೆ!" ಎಂದು ಹಿಮವಂತನು ಹೇಳಿದ ಮಾತನ್ನು ಕೇಳಿ, ನಾರದನು ಅವನನ್ನು ಸಮಾಧಾನಪಡಿಸುತ್ತಾ ಈ ರೀತಿಯಲ್ಲಿ ಹೇಳಿದನು. ॥೫೧॥

ಎಲೈ ಹಿಮವಂತನೇ, ಈಗ ನೀನು ಪರಾಶಕ್ತಿಸ್ವರೂಪಳಾದ ತ್ರಿಪುರಾದೇವಿಯ ಪಾದದಲ್ಲಿ ಭಕ್ತಿಯನ್ನಿಟ್ಟಿರುವುದರಿಂದ, ಆಕೆಯಲ್ಲಿ ನಿರತಿಶಯವಾದ ಭಕ್ತಿಯನ್ನಿಟ್ಟಿರುವ ನೀನೇ ಧನ್ಯನೆಂದು ಹೇಳಿದೆನು. ಈ ಲೋಕದಲ್ಲಿ ಸ್ವಲ್ಪ ಪುಣ್ಯಶಾಲಿಗಳಾದ ಜನರಿಗೆ ಅಂತಹ ಭಕ್ತಿಯು ಉಂಟಾಗುವುದಿಲ್ಲ. ॥೫೨-೫೩॥

ಯಾಂ ಬ್ರಹ್ಮವಿಷ್ಣುರುದ್ರಾದ್ಯಾಃ ಪೂಜಯಂತಿ ದಿವಾನಿಶಮ್ ।
ಸಾ ಶಕ್ತಿಃ ಪರಮಾ ಲೋಕೇ ಯಸ್ಯಾಂ ಸರ್ವಂ ಪ್ರತಿಷ್ಠಿತಮ್ ॥೫೪॥

ಯತ್ತೇ ಪ್ರಪೂರ್ವದಿವಸೇ ವಾಮದೇವೋ ಮುನೀಶ್ವರಃ ।
ಅನುಜಗ್ರಾಹ ತದಹಂ ವೇದ್ಮಿ ವೈ ಯೋಗಚಕ್ಷುಷಾ ॥೫೫॥

ಸ ಮುನಿಃ ಶಾಕ್ತಮೂರ್ಧನ್ಯ ಸ್ತೇನ ತ್ವಮನುದೇಶಿತಃ ।
ಅತಸ್ತ್ವತ್ತೋ ಧನ್ಯತಮೋ ಭವೇತ್ಕ ಇಹ ತದ್ವದ ॥೫೬॥

ಶ್ರುತ್ವೈವಂ ನಾರದೋಕ್ತಂ ಹಿ ಹಿಮವಾನ್ ಪುನರಬ್ರವೀತ್ ।
ಬ್ರಹ್ಮಂಸ್ತ್ವಂ ಯೋಗನೇತ್ರೇಣ ಭೂತಂ ಭವ್ಯಂ ಚ ಪಶ್ಯಸಿ ॥೫೭॥

ನ ತೇಽಸ್ತ್ಯವಿದಿತಂ ಕಿಂಚಿತ್ಕಾಲತ್ರಿತಯಗರ್ಭಕೇ ।
ಪೃಚ್ಛಾಮಿ ಕಿಂಚಿದಾಚಕ್ಷ್ವ ಕೃಪಯಾ ಮಯಿ ಸೇವಕೇ ॥೫೮॥

---

ಆ ಶ್ರೇಷ್ಠಳಾದ ದೇವಿಯನ್ನು ಬ್ರಹ್ಮಾ, ವಿಷ್ಣು, ರುದ್ರ, ಮೊದಲಾದವರೂ ಹಗಲಿರುಳೂ, ಪೂಜಿಸುತ್ತಾರೆ. ಯಾವಾಕೆಯಲ್ಲಿ ಜಗತ್ತೆಲ್ಲವೂ ಸ್ಥಿತಿಯನ್ನು ಪಡೆದಿದೆಯೋ, ಅಂಥಾ ಅತ್ಯಂತ ಶ್ರೇಷ್ಠಳಾದ ಶಕ್ತಿಯೇ ಆ ದೇವಿಯೆಂದು ತಿಳಿ. ॥೫೪॥

ಮುನೀಶ್ವರನಾದ ವಾಮದೇವನು ಮೊನ್ನೆಯದಿನ ನಿನ್ನನ್ನು ಮಂತ್ರೋಪದೇಶದಿಂದ ಅನುಗ್ರಹಿಸಿದ ವಿಷಯವನ್ನು ನಾನು ಯೋಗದೃಷ್ಟಿಯಿಂದಲೇ ಅರಿತೆನು. ॥೫೫॥

ಆ ಋಷಿಯು ಶಕ್ತಿಪೂಜಕರಲ್ಲಿ ಅಗ್ರಗಣ್ಯನು. ಅಂಥಾವನೇ ನಿನಗೆ ಅನುಜ್ಞೆಯನ್ನಿತ್ತಿದಾನೆ. ಆದ್ದರಿಂದ ನಿನಗಿಂತಲೂ ಅತ್ಯಂತ ಧನ್ಯನು ಮತ್ತಾರುಂಟೆಂಬುದನ್ನು ನೀನೇ ಹೇಳು. ॥೫೬॥

ಓ ಬ್ರಹ್ಮಸ್ವರೂಪರಾದ ಋಷಿಗಳೇ, ತಾವು ತಮ್ಮ ಯೋಗದೃಷ್ಟಿಯಿಂದ ಭೂತ, ವರ್ತಮಾನ ಮತ್ತು ಭವಿಷ್ಯ ದ್ವಿಷಯಗಳನ್ನೂ ತಿಳಿಯಲು ಸಮರ್ಥರಾಗಿರುವಿರಿ! ಎಂದು ಹೇಳಿ ಹಿಮವಂತನು ನಾರದನನ್ನು ಕುರಿತು ಮತ್ತೂ ಹೇಳಿದನು. ಅಲ್ಲದೆ, ತಮಗೆ ಈ ಮೂರುಬಗೆಯ ಕಾಲಗರ್ಭದಲ್ಲಿಯೂ ಅಡಗಿರುವ ವಿಷಯಗಳಲ್ಲಿ ಯಾವುದೂ ಗೊತ್ತಿಲ್ಲದೇ ಇಲ್ಲ. ಆದ್ದರಿಂದ ಸೇವಕನಾದ ನನ್ನಮೇಲಿನ ಕರುಣೆಯಿಂದ ನಾನು ಪ್ರಶ್ನಿಸುವ ಒಂದು ವಿಚಾರವನ್ನು ದಯವಿಟ್ಟು ತಿಳಿಸಿ. ॥೫೭-೫೮॥

ಅಪತ್ಯೇನ ವಿನಾ ಬ್ರಹ್ಮನ್ ನ ಸುಖಂ ವಿದ್ಯತೇ ಕ್ವಚಿತ್ ।
ತನ್ಮೇಽಪತ್ಯಂ ಯಥಾ ಭೂಯಾತ್ತಮುಪಾಯಂ ವಿಚಾರಯ ॥೫೯॥

ಶ್ರುತ್ವೈವಂ ಹಿಮವದ್ವಾಕ್ಯಂ ಕ್ಷಣಂ ಧ್ಯಾತ್ವಾಽಥ ನಾರದಃ ।
ಪ್ರೋವಾಚ ಗೋತ್ರಪತಯೇ ನಾರದೋ ದಿವ್ಯದರ್ಶನಃ ॥೬೦॥

ಶೃಣು ಪರ್ವತರಾಜನ್ಯ ತವಾಽಪತ್ಯಂ ನ ವಿದ್ಯತೇ ।
ನಾಽತ್ರೋಪಾಯೋಽಪಿ ಸಂದೃಷ್ಟಃ ಕನ್ಯೈಕಾ ತೇ ಭವಿಷ್ಯತಿ ॥೬೧॥

ಶೃಣು ತಚ್ಚಾಽಪಿ ತೇ ವಕ್ಷ್ಯೇ ದುಃಖಾಯೈವ ಹಿ ಸಂತತಿಃ ।
ನ ಹಿ ಲೋಕೇಽಪತ್ಯಯುತಾಃ ಸಂದೃಷ್ಟಾಃ ಸುಖಿನಃ ಕ್ವಚಿತ್ ॥೬೨॥

ತತ್ರಾಽಪಿ ಕನ್ಯಾ ದುಃಖಾನಾಂ ನಿದಾನಮವಧಾರಯ ।
ಯದಿ ಸಾ ಪರಮಾ ಶಕ್ತಿಃ ಅನುಗೃಹ್ಣಾತಿ ತೇ ನಗ ॥೬೩॥

---

ಓ ಬ್ರಹ್ಮಸ್ವರೂಪರಾದ ನಾರದರೇ, ಮಕ್ಕಳಿಲ್ಲದೆ ಮಾನವನಿಗೆ ಸುಖವು ಇರಲಾರದಷ್ಟೆ ? ಆದ್ದರಿಂದ ನನಗೆ ಸಂತಾನವಾಗುವ ಮಾರ್ಗವನ್ನು ತಿಳಿಸಿರಿ. ॥೫೯॥

ಹಿಮವಂತನ ಈ ಮಾತನ್ನು ಕೇಳಿ ದಿವ್ಯಜ್ಞಾನವುಳ್ಳ ನಾರದನು ಒಂದು ಕ್ಷಣಕಾಲ ಯೋಚಿಸಿ, ಪರ್ವತರಾಜನಾದ ಅವನನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೬೦॥

ಎಲೈ ಪರ್ವತ ರಾಜನಾದ ಹಿಮವಂತನೇ, ಕೇಳು. ನಿನಗೆ ಮಕ್ಕಳಿಲ್ಲವೆಂಬುದು ನನಗೆ ಗೊತ್ತು. ಇದಕ್ಕೆ ಬೇಕಾದ ಬೇರೆ ಉಪಾಯವೂ ನನಗೆ ಹೊಳೆಯುತ್ತಿಲ್ಲ. ಆದರೆ ನಿನಗೊಬ್ಬಳು ಮಗಳು ಮಾತ್ರ ಹುಟ್ಟುವಳು. ಆದರೆ ಹುಟ್ಟುವ ಸಂತಾನವೂ ದುಃಖಕಾರಕವೇ ಆಗುವುದು. ಏಕೆಂದರೆ ಲೋಕದಲ್ಲಿ ಮಕ್ಕಳನ್ನು ಪಡೆದವರು ಯಾರೂ ಶುದ್ಧ ಸುಖಿಗಳಾಗಿರುವಂತೆ ಎಲ್ಲಿಯೂ ಕಾಣಿಸುವುದಿಲ್ಲ. ಅದರಲ್ಲಿಯೂ ಕನ್ಯೆಯು ಹುಟ್ಟಿದರಂತೂ ಅವಳು ದುಃಖಕ್ಕೇ ಮೂಲ ಕಾರಣವೆಂದು ತಿಳಿ. ಆದರೂ, ಪರಾಶಕ್ತಿಯು ಅನುಗ್ರಹಿಸಿದರೆ ನಿನಗೆ ಒಳ್ಳೆಯದಾಗುವುದರಲ್ಲಿ ಸಂದೇಹವಿಲ್ಲವು. ॥೬೧-೬೨-೬೩॥

ತದಾ ಸುಖಾಯ ಕನ್ಯಾಽಪಿ ಭವಿಷ್ಯತಿ ನ ಸಂಶಯಃ ।
ಶ್ರುತ್ವೇತ್ಥಂ ನಾರದವಚಃ ಪ್ರಾಹ ಪರ್ವತರಾಟ್ಪುನಃ ॥೩೪॥

ಭಗವನ್ ಸಾ ಪರಾಶಕ್ತಿರ್ವಾಮದೇವಮುಖಾಚ್ಛ್ರುತಾ ।
ವರ್ಣರೂಪಾ ಹ್ಯವಗತಾ ನ ಸಾ ಚಿಂತಯಿತುಂ ಕ್ಷಮಾ ॥೩೫॥

ಅತಸ್ತದ್ರೂಪಮತ್ಯಂತನಿಗೂಢಂ ವಾಗಗೋಚರಮ್ ।
ತತಃ ಕಥಂ ಮೇ ಭವತಿ ತಸ್ಯಾಶ್ಚಾಽನುಗ್ರಹೋ ವದ ॥೩೬॥

ಇತಿ ಶ್ರುತ್ವಾ ನಾರದೋಽಥ ಸಮಾಚಷ್ಟೇ ವಿಚಕ್ಷಣಃ ।
ಶೃಣು ಶೈಲಕುಲಾಽಧೀಶ ಸಾ ಹಿ ಸೂಕ್ಷ್ಮಾ ಪರಾತ್ಪರಾ ॥೩೭॥

ವಾಗಾದ್ಯಗಮ್ಯಾ ಮಹತೀ ತ್ರಿಪುರಾ ಸರ್ವಕಾರಣಮ್ ।
ತಸ್ಯಾ ಯತ್ಪರಮಂ ರೂಪಂ ಸರ್ವಾಂತರತಯಾ ಸ್ಥಿತಮ್ ॥೩೮॥

ಯೋಗಿಶ್ರೇಷ್ಠಾ ವಿಜಾನಂತಿ ಸ್ವಾಽಬಹಿಷ್ಟ್ವೇನ ನೇತರೇ ।
ತಸ್ಯಾ ಯದಪರಂ ರೂಪಂ ಸ್ಥೂಲಂ ತತ್ಸರ್ವಗೋಚರಮ್ ॥೩೯॥

---

ಆದರೂ ತ್ರಿಪುರಾದೇವಿಯ ಅನುಗ್ರಹವುಂಟಾದ ಪಕ್ಷದಲ್ಲಿ ನಿನಗೆ ಕನ್ಯೆಯಿಂದಲೂ ಸುಖವುಂಟಾಗುವುದರಲ್ಲಿ ಸಂಶಯವಿಲ್ಲವು! ಹೀಗೆ ನಾರದನಾಡಿದ ಮಾತುಗಳನ್ನು ಕೇಳಿ ಪರ್ವತರಾಜನಾದ ಹಿಮವಂತನು ಪುನಃ ಈ ರೀತಿಯಲ್ಲಿ ಹೇಳಿದನು. " ಓ ಪೂಜ್ಯರೇ, ವಾಮದೇವ ಋಷಿಗಳ ಮುಖದಿಂದ ಆ ಪರಾಶಕ್ತಿಯು ವರ್ಣಸ್ವರೂಪಳೆಂದು ಕೇಳಿದೆನು. ಅದರಂತೆ ಆಕೆಯನ್ನು ಚಿಂತಿಸುವುದು ಕಷ್ಟವಲ್ಲವೆ? ॥೩೪-೩೫॥

ಆ ರೀತಿಯಲ್ಲಿ ಆಕೆಯ ರೂಪವು ಅತ್ಯಂತ ರಹಸ್ಯವೂ, ಶಬ್ದಗೋಚರವಲ್ಲದುದೂ ಆಗಿದೆ. ಆದ್ದರಿಂದ ಆಕೆಯ ಅನುಗ್ರಹವು ನನಗೆ ಉಂಟಾಗುವ ಬಗೆ ಹೇಗೆಂಬುದನ್ನು ತಿಳಿಸಿ. ॥೩೬॥

ಹೀಗೆ ಹಿಮವಂತನು ಆಡಿದ ಮಾತನ್ನು ಕೇಳಿ ಪ್ರಜ್ಞಾಶಾಲಿಯಾದ ನಾರದನು ಅವನನ್ನು ಕುರಿತು ಈರೀತಿಯಲ್ಲಿ ಹೇಳಿದನು. " ಎಲೈ ಹಿಮವಂತನೇ, ಕೇಳು. ತ್ರಿಪುರಾಪರಮೇಶ್ವರೀದೇವಿಯು ಪರಾತ್ಪರಸ್ವರೂಪಳೂ ಮತ್ತು ಅತ್ಯಂತ

ತದುಪಾಸ್ಯಾಽಭಿಲಷಿತಂ ಪ್ರಾಪ್ನುಹ್ಯಚಿರಮದ್ರಿಪ ।
ತದಪ್ಯನಂತಂ ಭಕ್ತಾನಾಂ ಭಾವನಾಪಥಿ ಸಂಸ್ಥಿತಮ್ ॥೭೦॥

ತತ್ರ ಗೌರೀ ಮೃಡಾನೀ ಯಾ ವಿದ್ಯಾರೂಪಾ ಪರಾತ್ಪರಾ ।
ತಾಂ ಭಜಾಽಶು ಮಹಾದೇವೀಂ ವಾಂಛಿತಪ್ರಾಪ್ತಯೇ ನಗ ॥೭೧॥

ಶ್ರುತ್ವೇತ್ಥಂನಾರದಪ್ರೋಕ್ತಂ ಪುನಃ ಪಪ್ರಚ್ಛ ಪರ್ವತಃ ।
ಭಗವನ್ ಸಾ ಹಿ ಕಾ ದೇವೀ ಯಾ ಗೌರೀತಿ ಸಮೀರಿತಾ ॥೭೨॥

ಕಿಂ ರೂಪಾ ಕಿಂ ಸಮಾಚಾರಾ ಕಿಂವೀರ್ಯಾ ಶಂಸ ಮೇ ಮುನೇ ।
ನಿಶಮ್ಯಪರ್ವತವಚೋ ನಿಜಗಾದ ತತೊ ಮುನಿಃ ॥೭೩॥

---

ಸೂಕ್ಷ್ಮಳೂ ಆಗಿದ್ದಾಳೆ. ಆಕೆಯು ಶಬ್ದವೇ ಮುಂತಾದ ಪ್ರಮಾಣಕ್ಕೆ ಅಗೋಚರಳೂ, ಮಹಾಮಹಿಮಾನ್ವಿತಳೂ ಎಲ್ಲಕ್ಕೂ ಕಾರಣಭೂತಳೂ ಆಗಿದ್ದಾಳೆ. ಯೋಗಿಶ್ರೇಷ್ಠರು ಮಾತ್ರ ತಮ್ಮ ಅಂತರಂಗದಲ್ಲಿ ಆಕೆಯ ಗಹನವಾದ ಸೂಕ್ಷ್ಮಸ್ವರೂಪವನ್ನು ತಿಳಿಯ ಬಲ್ಲರು. ಇತರರಿಗೆ ಅದು ಸಾಧ್ಯವಿಲ್ಲ. ಆಕೆಯ ಹೊರಗಡೆ ತೋರುವ ಸಗುಣ ಸ್ವರೂಪವು ಸ್ಥೂಲವಾದುದರಿಂದ ಎಲ್ಲರಿಗೂ ಗೋಚರವಾಗುತ್ತದೆ. ॥೬೭-೬೮-೬೯॥

ಎಲೈ ಪರ್ವತ ಶ್ರೇಷ್ಠನಾದ ಹಿಮವಂತನೇ, ಆದುದರಿಂದ ಆಕೆಯ ಸ್ಥೂಲ ರೂಪವನ್ನೇ ಉಪಾಸನೆ ಮಾಡಿ ನಿನ್ನ ಇಷ್ಟಾರ್ಥ ಸಿದ್ಧಿಯನ್ನು ಪಡೆ. ಆಕೆಯ ಈ ಸ್ಥೂಲರೂಪವೂ ಅನಂತವಾಗಿದ್ದು ಭಕ್ತರಿಂದ ಯಾವಾಗಲೂ ಭಾವಿಸಲ್ಪಡುತ್ತದೆ. ॥೭೦॥

ಈ ರೂಪಗಳ ಪೈಕಿ, ಗೌರೀ, ಮೃಡಾಣೀ, ಎಂಬ ಸ್ವರೂಪಗಳೂ ವಿದ್ಯಾ ರೂಪ ಮತ್ತು ಪರಾತ್ಪರ ರೂಪಗಳೂ, ಆ ಅನಂತರೂಪಗಳಲ್ಲಿ ಕೆಲವೆಂದು ತಿಳಿ. ಎಲೈ ಪರ್ವತರಾಜನೇ, ಆದ್ದರಿಂದ ನಿನ್ನ ಇಷ್ಟಸಿದ್ಧಿಗಾಗಿ ಮಹಾದೇವಿಯಾದ ಆಕೆಯನ್ನೇ ಶೀಘ್ರವಾಗಿ ಭಜಿಸು. ॥೭೧॥

ನಾರದನಾಡಿದ ಈ ಮಾತನ್ನು ಕೇಳಿ, ಪುನಃ ಹಿಮವಂತನು ಅವನನ್ನು ಕುರಿತು ಈರೀತಿಯಲ್ಲಿ ಪ್ರಶ್ನಿಸಿದನು. “ ಓ ಪೂಜ್ಯರೇ, ಗೌರೀ ಎಂದು ತಾವು ಹೇಳಿದ ದೇವಿಯ ಸ್ವರೂಪವಾವುದು ? ಆ ಸ್ವರೂಪವು ಹೇಗಿದೆ. ? ಯಾವ ವಿಧವಾದ ಆಚರಣೆಯುಳ್ಳದುದಾಗಿದೆ ? ಅದರ ಶಕ್ತಿಯು ಎಂಥಾದ್ದು ? ಆಕೆಯ ಅನುಗ್ರಹವು

ಶೃಣು ಪರ್ವತ ರಾಜನ್ಯ ಗೌರ್ಯಾ ರೂಪಾದಿಕಂ ಶುಭಮ್ ।
ಸಾ ಸಂಭೂತಾ ಪರಾಶಕ್ತೇರ್ವಿಷ್ಣ್ವಂಶೇನ ಮಹೇಶ್ವರೀ ॥೭೪॥

ನೀಲಾಭಾ ಸಿಂಹ ಸಂಸ್ಥಾನಾ ತ್ರಿನೇತ್ರಾ ಚಂದ್ರಶೇಖರೀ(ರಾ) ।
ಖಡ್ಗಂ ಚ ಖೇಟಕಂ ಶೂಲಂ ಮುದ್ಗರಂ ಪಾಣಿಪಂಕಜೈಃ ॥೭೫॥

ದಧಾನಾ ಶಂಕರಸತೀ ಯಸ್ಯಾಃ ಸಂಶ್ರಯಣಾದ್ಭವಃ ।
ಸಂಹೃತಿಂ ರಚಯನ್ ಕಲ್ಪಸ್ಯಾಂತೇ ನ ಗ್ಲಾಯತಿ ಕ್ವಚಿತ್ ॥೭೬॥

ಏವಂ ವಿಧಸಮಾಚಾರಾ ಕಾರಣಾದ್ದೇಹ ನಾಶತಃ ।
ದಕ್ಷಾತ್ತನುಂ ಸಮಾಸಾದ್ಯ ಪತಿನಿಂದನ ಸಂಶ್ರುತೇಃ ॥೭೭॥

---

ನನಗೆ ಉಂಟಾಗುವ ಬಗೆ ಹೇಗೆಂಬುದನ್ನು ತಿಳಿಸಿ. ಹಿಮವಂತನ ಈ ಮಾತನ್ನು ಕೇಳಿ ನಾರದಮುನಿಯು ಹೇಳಿದನು. ॥೭೩॥

ಎಲೈ ಪರ್ವತಶ್ರೇಷ್ಠನೇ, ಕೇಳು. ಮಂಗಳಕರವಾದ ಗೌರಿಯ ರೂಪಾದಿ ವಿಷಯಗಳನ್ನು ಹೇಳುವೆನು. ಪರಾಶಕ್ತಿಯಾದ ತ್ರಿಪುರಾದೇವಿಯು ವಿಷ್ಣುವನ್ನು ಸೃಷ್ಟಿಸಿದ ಅಂಶದಿಂದಲೇ ಮಹೇಶ್ವರಿಯಾದ ಗೌರಿಯ ಸೃಷ್ಟಿಯೂ ಆಯಿತು. ॥೭೪॥

ಗೌರಿಯು ನೀಲಕಾಂತಿಯುಳ್ಳವಳಾಗಿಯೂ ಸಿಂಹದ ಮೇಲೆ ಕುಳಿತಿರುವವಳಾಗಿಯೂ, ಮುಕ್ಕಣ್ಣಳಾಗಿಯೂ ಚಂದ್ರನನ್ನೇ ಶಿರಸ್ಸಿಗೆ ಆಭರಣವಾಗಿ ಧರಿಸಿರುವಳಾಗಿಯೂ, ಕತ್ತಿ, ಖೇಟಕ ಎಂಬ ಆಯುಧ, ಶೂಲ, ಮುದ್ಗರ ಮುಂತಾದ ಆಯುಧಗಳನ್ನು ತನ್ನ ಕಮಲಗಳಂತಿರುವ ಕೈಯಲ್ಲಿ ಧರಿಸಿರುವವಳಾಗಿಯೂ, ಶಂಕರನ ಪತ್ನಿಯಾಗಿಯೂ ಇದ್ದಾಳೆ. ಶಿವನೂ ಕೂಡ ಮನ್ವಂತರದ ಕೊನೆಯಲ್ಲಿ ಜಗತ್ಸಂಹಾರವನ್ನು ಮಾಡಿದರೂ ಈಕೆಯನ್ನೇ ಆಶ್ರಯಿಸಿರುವುದರಿಂದ ಸ್ವಲ್ಪವೂ ಬಳಲುವುದಿಲ್ಲ. ॥೭೫-೭೬॥

ಇಂಥಾ ಆಚರಣೆಯುಳ್ಳ ಗೌರಿಯು ತನ್ನ ಕಾರಣರೂಪವಾದ ದೇಹವು ನಾಶವಾದನಂತರ ದಕ್ಷನಿಗೆ ಮಗಳಾಗಿ ಜನಿಸಿ, ತನ್ನ ಪತಿಯಾದ ಶಿವನ ನಿಂದೆಯನ್ನು

ಸ್ವಂ ದೇಹಂ ಭಸ್ಮಸಾತ್ ಕೃತ್ವಾ ವ್ಯೋಮರೂಪತಯಾ ಸ್ಥಿತಾ ।
ಸಂಪ್ರಾರ್ಥ್ಯಮಾನಾ ವಿಬುಧೈರ್ನ ದೇಹಮಭಿವಾಂಛತಿ ॥೨೮॥

ತಾಂ ವಿನಾ ತ್ರ್ಯಂಬಕೋऽತ್ಯಂತ ದುಃಖಿತೋ ನಗಭೂಪತೇ ।
ತಾಂ ಸಮಾರಾಧ್ಯ ಪರಮಾಂ ಯಾಚಸ್ವ ಪ್ರಿಯಮಾತ್ಮನಃ ॥೨೯॥

ಕನ್ಯಾ ಭವ ಮಮೇತ್ಯೇವಂ ತತಸ್ತ್ವಂ ಪರ್ವತಾಧಿಪ ।
ತಥಾ ಕನ್ಯಾರೂಪಯಾ ತ್ವಂ ಯತಃ ಪರಮಃ ಶೋಭನಃ ॥೩೦॥

ಲೋಕೇ ಪೂಜ್ಯತಮಶ್ಚಾಪಿ ದೇವೈಃಸ್ತುತ್ಯಃ ಭವಿಷ್ಯಸಿ ।
ಮಹಾದೇವಸ್ಯ ಶ್ವಶುರಸ್ತತಃ ಖ್ಯಾತಿಂ ಗಮಿಷ್ಯಸಿ ॥೩೧॥

ತನಯಾಂ ಚ ಪರಾಶಕ್ತಿಂ ಗೌರೀಂ ಪ್ರಾಪ್ಯ ನಗೋತ್ತಮ ।
ಸೌಖ್ಯಂ ಯಶೋಮಹತ್ವಂ ಚ ಲೋಕೇ ತವ ಭವಿಷ್ಯತಿ ॥೩೨॥

---

ಕೇಳಿದ್ದರಿಂದ, ತನ್ನ ದೇಹವನ್ನು ಬೂದಿಮಾಡಿಬಿಟ್ಟು, ಈಗ ಆಕಾಶಸ್ವರೂಪದಲ್ಲಿದ್ದಾಳೆ. ದೇವತೆಗಳು ಈಕೆಯನ್ನು ಎಷ್ಟು ವಿಧವಾಗಿ ಪ್ರಾರ್ಥಿಸಿದರೂ ಶರೀರವನ್ನು ತೆಗೆದುಕೊಳ್ಳಲು ಇಷ್ಟಪಡುತ್ತಿಲ್ಲ. ॥೨೭-೨೮॥

ಎಲೈ ಪರ್ವತರಾಜನೇ. ಗೌರಿಯು ಇಲ್ಲದೆ ಶಿವನು ಬಹಳ ದುಃಖಗೊಂಡಿದ್ದಾನೆ. ಆದ್ದರಿಂದ ಶ್ರೇಷ್ಠಳಾದ ಆಕೆಯನ್ನೇ ಪೂಜಿಸಿ ನಿನ್ನ ಇಷ್ಟವನ್ನು ಪ್ರಾರ್ಥಿಸಿಕೋ. ಆ ದೇವಿಯನ್ನು ಕುರಿತು, "ಓ ಗೌರಿಯೇ, ನೀನೇ ನನಗೆ ಮಗಳಾಗಿ ಹುಟ್ಟು. ಎಂದು ಅವಳನ್ನು ಬೇಡಿಕೋ. ಹಾಗೆ ನಿನಗೆ ಮಗಳಾಗಿ ಆಕೆಯು ಹುಟ್ಟಿದರೆ ಆಕೆಯಿಂದ ಕೂಡಿದ ನೀನು ಬಹಳ ಪ್ರಕಾಶಮಾನನಾಗುವೆ. ಅಲ್ಲದೇ ನೀನು ಲೋಕದಲ್ಲಿ ಅತ್ಯಂತ ಪೂಜ್ಯನೂ, ದೇವತೆಗಳಿಂದಲೂ ಸ್ತೋತ್ರಮಾಡಲ್ಪಡುವವನೂ ಆಗುವೆ. ಮತ್ತು ಮಹಾದೇವನಾದ ಶಿವನಿಗೆ ಮಾವನಾಗುವೆ! ಆದುದರಿಂದ ನಿನಗೆ ವಿಶೇಷವಾಗಿ ಖ್ಯಾತಿಯೂ ಬರುವುದು. ॥೩೦-೩೧॥

ಎಲೈ ಪರ್ವತಶ್ರೇಷ್ಠನಾದ ಹಿಮವಂತನೇ, ಪರಾಶಕ್ತಿಯ ಅಂಶಭೂತಳೂ ಗೌರಿಯೂ ಆದ ಮಗಳನ್ನು ನೀನು ಪಡೆದರೆ ನಿನ್ನ ಸೌಖ್ಯ, ಕೀರ್ತಿ ಮಾಹಾತ್ಮ್ಯ, ಎಲ್ಲವೂ ಲೋಕದಲ್ಲಿ ವಿಶೇಷವಾಗಿ ವೃದ್ಧಿಯಾಗುವುವು. ॥೩೨॥

**ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ**
**ಷಡ್ವಿಂಶತಿತಮೋಽಧ್ಯಾಯಃ**

---

ಇಲ್ಲಿಗೆ ಶ್ರೀ ತ್ರಿಪುರಾರಹಸ್ಯದಲ್ಲಿ ಮಹಾತ್ಮ್ಯಖಂಡದಲ್ಲಿ ಹಿಮವಂತನಿಗೆ ನಾರದನ ಉಪದೇಶವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಸಪ್ತವಿಂಶತಿತಮೋಽಧ್ಯಾಯಃ ||

### ಇಪ್ಪತ್ತೇಳನೆಯ ಅಧ್ಯಾಯವು

ನಗರಾಜ ಶೃಣು ಕಥಾಂ ಗೌರೀಚರಿತ್ರ ಸಂಯುತಾಮ್ ।
ಪುರಾ ರಥಂತರೇ ಕಲ್ಪೇ ತಾರಕೇಯೋ ಮಹಾಸುರಃ ||೧||

ತಪಸಾ ತೋಷಯಾಮಾಸ ಮಹಾದೇವಂ ತ್ರಿಲೋಚನಮ್ ।
ವರಂ ಬಹುವಿಧಂ ಲಬ್ಧ್ವಾಬಬಾಧಾತಿತರಾಂ ಜಗತ್ ||೨||

ಸೃಷ್ಟೌ ಸ್ಥಿತೌ ಸಂಹರಣೇ ತಸ್ಮೈ ಶಕ್ತಿಮದಾತ್ ಭವಃ ।
ಸಂಮುಖಸ್ಥಸ್ಯ ಸಾಮರ್ಥ್ಯಮವಕರ್ಷತಿ ಚ ಕ್ಷಣಾತ್ ||೩||

ಏವಂ ವರೇಣ ಸಹಿತೋ ದರ್ಪಿತಃ ಸ ಮಹಾಸುರಃ ।
ಸಸರ್ಜಾಂಡಾನ್ಯನೇಕಾನಿ ಬ್ರಹ್ಮವಿಷ್ಣು ಶಿವಾನಪಿ ||೪||

---

ಎಲೈ ನಗಶ್ರೇಷ್ಠನೇ, ಗೌರಿಯ ಚರಿತ್ರೆಯಿಂದ ಕೂಡಿರುವ ಕಥೆಯನ್ನು ಕೇಳು. ಹೇಳುವೆನು. ಹಿಂದೆ ರಥಂತರವೆಂಬ ಕಲ್ಪದಲ್ಲಿ ಮಹಾರಾಕ್ಷಸನಾದ ತಾರಕೇಯನೆಂಬುವನು ಮುಕ್ಕಣ್ಣನಾದ ಶಿವನನ್ನು ತಪಸ್ಸಿನಿಂದ ಪೂಜಿಸಿ ಸಂತೋಷ ಪಡಿಸಿದನು. ಅವನಿಂದ ಅನೇಕ ವಿಧವಾದ ವರಗಳನ್ನೂ ಪಡೆದು ಆ ಅಸುರನು ಜಗತ್ತನ್ನು ಅತ್ಯಂತವಾಗಿ ಕಾಡಿಸಿದನು. ಏಕೆಂದರೆ, ||೧-೨||

ಶಿವನು ಆ ಅಸುರನಿಗೆ, ಸೃಷ್ಟಿ, ಸ್ಥಿತಿ, ಸಂಹಾರಶಕ್ತಿಗಳನ್ನೂ ಕೊಟ್ಟನು! ಇವನು ವರಪ್ರಭಾವದಿಂದ ತನ್ನೆದುರಿಗೆ ಇರುವವನ ಸಾಮರ್ಥ್ಯವನ್ನು ಕ್ಷಣಕಾಲ ದಲ್ಲಿಯೇ ಎಳೆದುಬಿಡುತ್ತಿದ್ದನು! ||೩||

ಈ ಮಹಾಸುರನು ಹೀಗೆ ವರವನ್ನು ಪಡೆದುದರಿಂದ ಕೊಬ್ಬಿದವನಾಗಿ ಅನೇಕ ಬ್ರಹ್ಮಾಂಡಗಳನ್ನೂ ಬ್ರಹ್ಮ, ವಿಷ್ಣು, ಶಿವ, ಇವರನ್ನೂ ಇಂದ್ರನೇ

ಇಂದ್ರಾದೀನ್ ಅಖಿಲಾನ್ ದೇವಾನ್ ಸ್ವಯಂ ಸರ್ವಾಧಿಪೋಽಭವತ್।
ತೇನ ಸೃಷ್ಟಾ ಬ್ರಹ್ಮಮುಖಾಃ ಪೂಜಯಂತಿ ಮಹಾಸುರಮ್ ॥೫॥

ಸ್ವಯಂ ಯಜ್ಞಾಧಿಪೋ ಜಾತಃ ಸ್ವಸೃಷ್ಟಾಂಡೇಷು ಸರ್ವತಃ ।
ವೇದಾ ವಿನಿರ್ಮಿತಾಸ್ತೇನ ವಿದ್ಯಾಶ್ಚ ವಿವಿಧಾಸ್ತಥಾ ॥೬॥

ಅಥಾಽಗತ್ಯ ತಾರಕೇಯೋ ಬ್ರಹ್ಮಾಽದೀನಾಹ ಸೋಽಸುರಃ ।
ಮಾಂ ಯಜಂತು ಸುರಾಃ ಸರ್ವೇ ಮಮ ವೇದಾನ್ ಪಠಂತು ಚ॥೭॥

ಅಹಂ ಸರ್ವೇಶ್ವರೋ ದೇವಃ ಪ್ರಣಮಂತು ಚ ಮಾಂ ಸದಾ ।
ಇತಿ ತದ್ವಚನಂ ಶ್ರುತ್ವಾ ನ ಸ್ವೀಚಕ್ರುರ್ಯದಾ ಸುರಾಃ ॥೮॥

ತದಾ ದೇವಾನ್ವಿನಿರ್ಜಿತ್ಯ ಬಧ್ವಾ ಸ್ವಾಂಡೇ ವಿನಿಕ್ಷಿಪತ್ ।
ಆದಿತ್ಯಾಂಶ್ಚ ವಸೂನ್ ರುದ್ರಾ ನಶ್ವಿನೌ ಮರುತಸ್ತದಾ ॥೯॥

---

ಮೊದಲಾದ ಸಮಸ್ತ ದೇವತೆಗಳನ್ನೂ ತಾನೇ ಸೃಷ್ಟಿಸಿ, ಅವರೆಲ್ಲರಿಗೂ ಅಧಿಪತಿಯಾದನು. ಇವನಿಂದಲೇ ಸೃಷ್ಟಿಸಲ್ಪಟ್ಟ ಬ್ರಹ್ಮನೇ ಮೊದಲಾದವರೂ ಇವನನ್ನು ಪೂಜಿಸುತ್ತಿದ್ದರು. ॥೪-೫॥

ಈ ಅಸುರನು ತಾನೇ ಯಾಗಗಳಿಗೆ ಅಧಿಪತಿಯಾದನು. ತಾನೇ ಸೃಷ್ಟಿ ಮಾಡಿದ ಬ್ರಹ್ಮಾಂಡಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ವೇದಗಳನ್ನೂ ನಾನಾ ವಿಧವಾದ ವಿದ್ಯೆಗಳನ್ನು ಸೃಷ್ಟಿಸಿದನು. ॥೬॥

ಅನಂತರದಲ್ಲಿ ತಾರಕೇಯಾಸುರನು ಬಂದು ಬ್ರಹ್ಮನೇ ಮೊದಲಾದವರನ್ನು ಕುರಿತು "ಎಲೈ ಬ್ರಹ್ಮನೇ ಮೊದಲಾದ ದೇವತೆಗಳೇ, ನೀವೆಲ್ಲರೂ ನನ್ನ ವೇದ ಗಳನ್ನೇ ಮುಂದೆ ಪಠಿಸಬೇಕು. ನನಗಾಗಿಯೇ ಯಾಗಗಳನ್ನೂ ಮಾಡಬೇಕು." ಎಂದನು. ॥೭॥

ನಾನು ಎಲ್ಲರಿಗೂ ಅಧಿಪತಿಯಾದ ದೇವನಾಗಿದ್ದೇನೆ. ನೀವೆಲ್ಲರೂ ನನ್ನನ್ನೇ ಯಾವಾಗಲೂ ನಮಸ್ಕರಿಸಬೇಕು." ಎಂದು ಅಸುರನು ಹೇಳಿದ ಮಾತನ್ನು ಕೇಳಿ ದೇವತೆಗಳು ಅದನ್ನು ಅಂಗೀಕರಿಸದಿರಲು, ಇವನು ಆ ದೇವತೆಗಳೆಲ್ಲರನ್ನೂ ಜಯಿಸಿ ತನ್ನ ಅಂಡದಲ್ಲಿ ಬಂಧಿಸಿದನು. ಇವನು ಆದಿತ್ಯರು, ವಸುಗಳು, ರುದ್ರರು, ಅಶ್ವಿನೀ ದೇವತೆಗಳು ಇವರೆಲ್ಲರನ್ನೂ ಅಂಡದಲ್ಲಿ ಬಂಧಿಸಿದನು. ॥೮-೯॥

7

ಬದ್ಧ್ವಾ ನಿಜಾಂಡೇ ನಿಕ್ಷಿಪ್ಯ ಬ್ರಹ್ಮಾದೀನ್ ಭೇತ್ತುಮಾಯಯೌ ।
ದೃಷ್ಟ್ವಾಽಸುರಂ ಸಮಾಯಾಂತಂ ಸ್ವಾನ್ನೇತುಂ ವಿಧಿಮುಖ್ಯಕಾಃ॥೧೦॥

ಯೋದ್ಧುಮಭ್ಯುದ್ಯತಾಸ್ತೇ ವೈ ಸ್ವಪರೀವಾರ ಸಂಯುತಾಃ ॥೧೧॥

ಯುದ್ಧ್ವಾ ಚಿರಂ ತೇನ ವಿಧಿಮುಖಾ ದೃಷ್ಟ್ವಾ ಮಹಾಽಸುರಮ್ ।
ಅಜೇಯಂ ವರದಾನೇನ ತಿರೋ ಭೂತಾಸ್ತದೇಶ್ವರಾಃ ॥೧೨॥

ಅಂತರ್ಧಾನಂ ಪ್ರಯಾತೇಷು ತೇಷು ಪಶ್ಚಾನ್ಮಹೇಶ್ವರಃ ।
ವಿಧಿಂ ಹರಿಂ ಶಿವಂ ಚಾಽನ್ಯಂ ಸೃಷ್ಟ್ವಾ ಲೋಕೇ ನ್ಯವೇಶಯತ್॥೧೩॥

ಸೃಷ್ಟ್ವೇಂದ್ರಾದೀನಪಿ ಸುರಾನ್ ಸ್ವರ್ಗಾದಿಷು ನಿವೇಶ್ಯ ಚ ।
ಸರ್ವೈಃ ಪೂಜಾಂ ಸಮಾಸಾದ್ಯ ಬಭೌ ಸರ್ವೇಶ್ವರೋಽಸುರಃ ॥೧೪॥

---

ಅಸುರನು, ಈ ರೀತಿಯಾದ ತನ್ನ ಒಂದು ಅಂಡದಲ್ಲಿ ಅವರನ್ನೆಲ್ಲರನ್ನು ಬಂಧಿಸಿ, ಬ್ರಹ್ಮನೇ ಮೊದಲಾದವರನ್ನೆಲ್ಲರನ್ನೂ ಸೀಳಲು ಬಂದನು. ಹೀಗೆ ಅಸುರನು ತಮ್ಮನ್ನು ತೆಗೆದುಕೊಂಡು ಹೋಗಿ ನಾಶಮಾಡಲು ಬರುತ್ತಿರುವುದನ್ನು ನೋಡಿ. ಬ್ರಹ್ಮನೇ ಮೊದಲಾದವರು ಅವನಿಗೆ ಪ್ರತಿಯಾಗಿ ಯುದ್ಧಮಾಡಲು ತಮ್ಮ ಪರಿವಾರಗಳೊಂದಿಗೆ ಸಿದ್ಧರಾದರು. ॥೧೦-೧೧॥

ಬ್ರಹ್ಮನೇ ಮೊದಲಾದವರು ಅವನೆದುರಿಗೆ ಬಹಳಕಾಲ ಯುದ್ಧಮಾಡಿ ಈ ಮಹಾಸುರನು ವರವನ್ನು ಹೊಂದಿರುವುದರಿಂದ ಜಯಿಸಲು ಅಸಾಧ್ಯನೆಂದು ಬಗೆದು ಕೂಡಲೇ ಲೋಕೇಶ್ವರರೆಲ್ಲರೂ ಅಂತರ್ಧಾನವನ್ನೈದಿದರು. ॥೧೨॥

ಹೀಗೆ ಆ ಲೋಕೇಶ್ವರರೆಲ್ಲರೂ ಅಂತರ್ಧಾನವಾಗಲು, ಮಹಾಸುರನು ಬೇರೆ ಬ್ರಹ್ಮ, ವಿಷ್ಣು, ಶಿವ ಇವರನ್ನು ಸೃಜಿಸಿ ಲೋಕಗಳಲ್ಲಿ ಸ್ಥಾಪಿಸಿದನು.॥೧೩॥

ಆ ಮಹಾಸುರನು ಇಂದ್ರಾದಿದೇವತೆಗಳನ್ನೂ ಸೃಷ್ಟಿಸಿ ಸ್ವರ್ಗವೇ ಮುಂತಾದ ಸ್ಥಳಗಳಲ್ಲಿ ಅವರನ್ನು ಸ್ಥಾಪಿಸಿ ಎಲ್ಲರಿಂದಲೂ ಪೂಜೆಯನ್ನು ಸ್ವೀಕರಿಸುತ್ತಾ ಎಲ್ಲಾ ಈಶ್ವರರಿಗೂ ಈಶ್ವರನಾಗಿ ಈ ಅಸುರನು ಪ್ರಕಾಶಿಸಿದನು. ॥೧೪॥

ಅಥ ಕಾಲಾಂತರೇ ಭೂಯೋಽಪಶ್ಯನ್ನಂಡಾನ್ಯನೇಕಶಃ ।
ಸ್ವರ್ಗೇ ಶಚೀಂ ಸಮಾಲೋಕ್ಯ ತತ್ಸೌಂದರ್ಯೇಣ ಮೋಹಿತಃ॥೧೫॥

ದೂತಂ ನಿಶಠನಾಮಾನಮಾನೇತುಂ ತಾಂ ಸಮಾದಿಶತ್ ।
ಗತ್ವಾ ದೂತಃ ಶಚೀಂ ಪ್ರಾಹ ನತ್ವಾ ಸ್ವಸ್ವಾಮಿನೇರಿತಮ್ ॥೧೬॥

ಇಂದ್ರಾಣಿ ತಾರಕಯೇನ ಪ್ರೇಷಿತೋಽಹಂ ಸಮಾಗತಃ ।
ಪ್ರಾಹ ತ್ವಾಮಸುರೇಶಾನಃ ಸರ್ವಲೋಕೇಶ್ವರೋ ವಿಭುಃ ॥೧೭॥

ಮಮ ಪಾರ್ಶ್ವಂ ಪ್ರಯಾಹ್ಯಾಶು ಪ್ರಣಯೇನ ಶುಚಿಸ್ಮಿತೇ ।
ಅಖಿಲಾಂಡಮಹಾರಾಜ್ಯಂ ಭುಂಕ್ಷ್ವ ತ್ವಂ ಮತ್ಪರಿಗ್ರಹಾತ್ ॥೧೮॥

ಏವಂ ಸಮ್ಮಾನಿತಶ್ಚಾಽಹಂ ಭವಾಮಿ ವಶಗಸ್ತವ ।
ಅನ್ಯಥಾ ತ್ವಂ ಬಲಾತ್ಕೃಷ್ಟಾ ಮಾನಹೀನಾ ಭವಿಷ್ಯಸಿ ॥೧೯॥

---

ಅನಂತರದಲ್ಲಿ ಈ ಮಹಾಸುರನು ಬೇರೊಂದು ಕಾಲದಲ್ಲಿ ತಾನು ಸೃಷ್ಟಿಸಿದ್ದ ಬ್ರಹ್ಮಾಂಡಗಳನ್ನೆಲ್ಲವನ್ನೂ ಅನೇಕಾವೃತ್ತಿಪರೀಕ್ಷಿಸಿದನು. ಈ ಸಂದರ್ಭದಲ್ಲಿ ಸ್ವರ್ಗದಲ್ಲಿ ಶಚೀದೇವಿಯನ್ನು ನೋಡಿ ಅವಳ ಸೌಂದರ್ಯದಿಂದ ಮೋಹಗೊಂಡು, ಅವಳನ್ನು ಕರೆತರಲು "ನಿಶಠ" ಎಂಬ ತನ್ನ ದೂತನಿಗೆ ಅಪ್ಪಣೆಮಾಡಿದನು. ತನ್ನ ಸ್ವಾಮಿಯಾದ ಅಸುರನು ಹೇಳಿದ ಸಂದೇಶವನ್ನು ದೂತನು ಶಚಿಯ ಸಮಿಾಪಕ್ಕೆ ಹೋಗಿ ಆಕೆಗೆ ನಮಸ್ಕರಿಸಿ ಹೇಳಿದನು. ॥೧೫-೧೬॥

ಎಲೈ ಇಂದ್ರನ ಪತ್ನಿಯಾದ ಶಚೀದೇವಿಯೇ, ತಾರಕೇಯನೆಂಬ ನಮ್ಮ ಸ್ವಾಮಿಯಾದ ಮಹಾಸುರನಿಂದ ಕಳುಹಿಸಲ್ಪಟ್ಟು ನಾನು ಇಲ್ಲಿಗೆ ಬಂದಿದ್ದೇನೆ. ಅಸುರಾಧಿಪನೂ ಎಲ್ಲಾಲೋಕಗಳಿಗೂ ಒಡೆಯನೂ ಸಮರ್ಥನೂ ಆದ ನನ್ನ ಸ್ವಾಮಿಯು ನಿನ್ನನ್ನು ಕುರಿತು ಈ ರೀತಿಯಲ್ಲಿ ಹೇಳಿದ್ದಾನೆ. ಎಂದನು. ॥೧೭॥

"ಶುಭ್ರವಾದ ಮುಗುಳ್ನಗೆಯುಳ್ಳ ಶಚಿದೇವಿಯೇ, ನನ್ನ ಪಕ್ಕಕ್ಕೆ ಪ್ರೀತಿಯಿಂದ ಜಾಗ್ರತೆಯಾಗಿ ಬಾ. ಅನಂತರದಲ್ಲಿ ನನ್ನ ಸಮಸ್ತವಾದ ಬ್ರಹ್ಮಾಂಡದ ಮಹಾರಾಜ್ಯವೆಲ್ಲವನ್ನೂ ನನ್ನ ಸಂಬಂಧವನ್ನು ಹೊಂದುವುದರಿಂದ ಅನುಭವಿಸುವೆ. ॥೧೮॥

ಹೀಗೆ ನೀನು ಮಾಡಿದರೆ ನನಗೆ ನೀನು ಗೌರವವನ್ನು ಕೊಟ್ಟೆಯೆಂದು

ಇತಿ ಶ್ರುತ್ವಾ ದೂತವಚಃ ಶಚೀ ಚಿಂತಾ ಸಮಾಕುಲಾ ।
ಕಿಂ ಕರೋಮಿ ನ ಚಾಽನ್ಯೋ ಮೇ ರಕ್ಷಕೋ ವಿದ್ಯತೇಽಧುನಾ ॥೨೦॥

ಇಂದ್ರೋ ಜಯಂತೋ ದೇವಾಶ್ಚ ಬದ್ಧ್ವಾ ನೀತಾಃ ಸುದೂರತಃ ।
ತೇಷಾಂ ವೃತ್ತಂ ನ ಜಾನಾಮಿ ನ ಕಶ್ಚಿದ್ರಕ್ಷಿತಾ ಮಮ ॥೨೧॥

ಉಪಾಯೇನಾಽಸುರಪತಿಂ ವಾರಯಾಮಿ ಚ ಸಂಪ್ರತಿ ।
ಆಪದಿ ಪ್ರೌಢಧಿಷಣೈಃ ಅಶಕ್ತೈಃ ಸರ್ವಯತ್ನತಃ ॥೨೨॥

ಕ್ಷಣಂ ತದರ್ಧಂ ವಾಽಪೋಹ್ಯ ಪ್ರಾಪ್ಯತೇ ಸುಖಮುತ್ತಮಮ್ ।
ಬಲವದ್ವ್ಯವಧಾನೇನ ಸ್ವಾತ್ಮಾನಂ ಮೋಚಯಾಮ್ಯಹಮ್ ॥೨೩॥

ಇತಿ ನಿಶ್ಚಿತ್ಯ ಮನಸಾ ಶಚೀ ದೂತಮುಚಕ್ಷತ ।
ಶೃಣು ದೂತ ತಾರಕೇಯೇ ಮತ್ಸಂದೇಶಂ ಚ ಪ್ರಾಪಯ ॥೨೪॥

---

ತಿಳಿದು, ನಾನೂ ನಿನ್ನ ಅಧೀನನಾಗುವೆನು. ಹಾಗಿಲ್ಲದಿದ್ದರೆ. ನೀನು ನನ್ನಿಂದ ಬಲಾತ್ಕಾರವಾಗಿ ಎಳೆಯಲ್ಪಟ್ಟು ಮಾನಹಾನಿಯನ್ನು ಹೊಂದುವೆ. ||೧೯||

ದೂತನ ಈ ಮಾತನ್ನು ಕೇಳಿ, ಶಚಿಯು ಚಿಂತಾಕ್ರಾಂತಳಾಗಿ "ಈಗ ನಾನೇನನ್ನು ಮಾಡಲಿ? ನನಗೆ ಇನ್ನಾರೂ ರಕ್ಷಕರೂ ಇಲ್ಲವಲ್ಲಾ!" ಎಂದು ಯೋಚಿಸ ತೊಡಗಿದಳು. ||೨೦||

ಶಚಿಯು ಇಂದ್ರ, ಜಯಂತ ಮತ್ತು ದೇವತೆಗಳು ಈ ರಾಕ್ಷಸನಿಂದ ಬಂಧಿಸಲ್ಪಟ್ಟು, ಬಹುದೂರ ಒಯ್ಯಲ್ಪಟ್ಟಿದ್ದಾರೆ. ಅವರ ಸಮಾಚಾರವೂ ನನಗೆ ಗೊತ್ತಿಲ್ಲ. ಆದ್ದರಿಂದ ನನ್ನ ರಕ್ಷಕರಾರೂ ಇಲ್ಲವಲ್ಲಾ!" ಎಂದು ಯೋಚಿಸತೊಡಗಿದಳು. ||೨೧||

ಶಚಿಯು ಆದ್ದರಿಂದ ಉಪಾಯವಾಗಿ ರಾಕ್ಷಸ ಪತಿಯಾದ ತಾರಕೇಯನ ಬಾಧೆಯನ್ನು ನಿವಾರಣೆಮಾಡಿಕೊಳ್ಳುವೆನು. ಆಪತ್ಕಾಲಗಳಲ್ಲಿ ಅಶಕ್ತರಾದರೂ ಬುದ್ಧಿವಂತರಾದ ಜನರು ಸರ್ವಪ್ರಯತ್ನದಿಂದಲೂ ಕ್ಷಣ ಅಥವಾ ಅದರ ಅರ್ಧಭಾಗ ಕಾಲವನ್ನು ಮುಂದೆ ಹಾಕಿದರೂ ಉತ್ತಮವಾದ ಸುಖವನ್ನು ಪಡೆಯುತ್ತಾರೆ. ಆದ್ದರಿಂದ ಈಗ ಹೆಚ್ಚಾದ ಕಾಲದ ಅವಕಾಶ ಸಿಕ್ಕುವಂತೆ ಮಾಡಿ ನನ್ನನ್ನು ಈ ಕಷ್ಟದಿಂದ ಬಿಡುಗಡೆಮಾಡಿಕೊಳ್ಳುವೆನು. ||೨೨-೨೩||

ಹೀಗೆ ಮನೋನಿಶ್ಚಯಮಾಡಿ ಶಚಿಯು ದೂತನನ್ನು ಕುರಿತು "ಎಲೈ

ವಿಷ್ಣುರ್ದೇವೇಷು ಪರಮಃ ಶ್ರೀಸ್ತತ್ಪತ್ನೀ ಮನೋಹರಾ ।
ವಯಂ ತಸ್ಯಾಃಸುಚರ್ಯಸ್ತಾಂ ತ್ವಂ ಸಮಾನೇತುಮರ್ಹಸಿ ॥೨೫॥

ತತೋ ವಯಮನಾಹೂತಾಃ ಭವಾಮಃ ಪರಿಚಾರಿಕಾಃ ।
ಏವಂ ಶಚ್ಯಾ ಸಮಾದಿಷ್ಟೋ ದೂತಃ ಪ್ರೋವಾಚ ಸನ್ನತಃ ॥೨೬॥

ತಚ್ಛ್ರುತ್ವಾ ತಾರಕೇಯೋಽಪಿ ತಥ್ಯಮಿತ್ಯನುಮನ್ಯತ ।
ಅಥ ದೂತಂ ವಿಷ್ಣುಪತ್ನ್ಯೈ ಪ್ರೇಷಯಾಮಾಸ ಸೋಽಸುರಃ ॥೨೭॥

ವೈಕುಂಠೇ ದೂತ ಆಗತ್ಯ ಲಕ್ಷ್ಮ್ಯೈ ಚಾಽಸುರಭಾಷಿತಮ್ ।
ನ್ಯವೇದಯದಥ ರಮಾ ಶ್ರುತ್ವಾ ದೂತಸ್ಯ ಭಾಷಿತಮ್ ॥೨೮॥

ಸಾಽವಹೇಲಂ ದೂತಮಾಹ ಹೇದೂತ ಶೃಣು ಮದ್ವಚಃ ।
ನಾಽಹಂ ಕಾಮಯಿತುಯೋಗ್ಯಾ ತಾರಕೇಯಸ್ಯ ದುರ್ಮತೇ ॥೨೯॥

---

ದೂತನೇ, ಕೇಳು. ನಾನು ಈಗ ಹೇಳುವ ಸಂದೇಶವನ್ನು ನಿಮ್ಮ ರಾಜನಿಗೆ ತಲುಪಿಸು." ಎಂದು ಹೇಳಿದಳು. ॥೨೪॥

ವಿಷ್ಣುವು ದೇವತೆಗಳಲ್ಲೆಲ್ಲಾ ಶ್ರೇಷ್ಠನು. ಅವನ ಪತ್ನಿಯಾದ ಲಕ್ಷ್ಮಿಯು ಮನೋಹರಳಾಗಿದ್ದಾಳೆ. ನಾವೆಲ್ಲರೂ ಅವರ ಸಖಿಯರು. ಆದ್ದರಿಂದ ನೀನು ಆಕೆಯನ್ನು ಕರೆಸಿಕೊಳ್ಳುವುದು ಯೋಗ್ಯವಾಗಿದೆ. ॥೨೫॥

ಆಮೇಲೆ ನಾವು ರಾಕ್ಷಸರಾಜನಿಂದ ಕರೆಯಲ್ಪಡದಿದ್ದರೂ ಪರಿಚಾರಿಕೆಯರಾಗಿ ಇರುತ್ತೇವೆ! ಹೀಗೆ ಶಚಿಯಿಂದ ಹೇಳಿಕಳುಹಿಸಲ್ಪಟ್ಟ ದೂತನು ರಾಕ್ಷಸ ರಾಜನಿಗೆ ಮಣಿದು ವಿಷಯವನ್ನು ವಿಜ್ಞಾಪಿಸಿದನು. ಇದನ್ನು ಕೇಳಿ ತಾರಕೇಯಾಸುರನು ಇದನ್ನು ನಿಜವೆಂದೇ ಭಾವಿಸಿದನು. ತರುವಾಯ ಆ ಅಸುರನು ದೂತನನ್ನು ವಿಷ್ಣು ಪತ್ನಿಯಾದ ಲಕ್ಷ್ಮಿಯ ಹತ್ತಿರಕ್ಕೆ ಕಳುಹಿಸಿದನು. ॥೨೬-೨೭॥

ದೂತನು ವೈಕುಂಠಲೋಕಕ್ಕೆ ಬಂದು ಲಕ್ಷ್ಮೀದೇವಿಗೆ ಅಸುರನು ಹೇಳಿದ್ದ ಮಾತನ್ನು ತಿಳಿಸಿದನು. ಅನಂತರದಲ್ಲಿ ಲಕ್ಷ್ಮಿಯು ದೂತನ ಮಾತನ್ನು ಕೇಳಿ ತಿರಸ್ಕಾರಪೂರ್ವಕವಾಗಿ ದೂತನನ್ನು ಕುರಿತು, ಎಲೈ ದೂತನೇ, ಕೇಳು. ದುರ್ಬುದ್ಧಿಯುಳ್ಳ ತಾರಕೇಯನು ನನ್ನನ್ನು ಮೋಹಿಸುವುದು ಅತ್ಯಂತ ಅಯೋಗ್ಯವಾದುದು. ಏಕೆಂದರೆ, ॥೨೮-೨೯॥

ಪ್ರಾರ್ಥಯತ್ಯಾತ್ಮನಾಶಂ ಸಃ ಗಚ್ಛ ಶೀಘ್ರಮಿತೋ ಬಹಿಃ ।
ಇತ್ಥಂ ನಿರಸ್ತೋ ದೂತೋಽಥ ಗತ್ವೋವಾಚಾಽಸುರಾಧಿಪಮ್॥೩೦॥

ಪ್ರತಿಷೇಧಂ ಶ್ರಿಯಃ ಶ್ರುತ್ವಾ ಸಮನ್ಯುಸ್ತಾರಕೇಯಕಃ ।
ಆಗತ್ಯೈಸೇನಯಾ ಸಾರ್ಧಂ ರುರೋಧ ಶ್ರೀನಿಕೇತನಮ್ ॥೩೧॥

ಅಥ ಲಕ್ಷ್ಮೀರ್ಯುತಾ ಸ್ವೀಯಶಕ್ತಿಭಿಃ ಶತಕೋಟಿಭಿಃ ।
ನಿರ್ಗತ್ಯಾಽಸುರಸೇನಾಂ ತಾಂ ನಾಶಯಾಮಾಸ ಸತ್ವರಮ್ ॥೩೨॥

ತಾರಕೇಯಃ ಸಮಾಲೋಕ್ಯ ಲಕ್ಷ್ಮ್ಯಾ ವೀರ್ಯಂ ಮಹತ್ತರಮ್ ।
ಸ್ವಯಂ ಯುಯೋಧ ಬಲವಾನ್ ತಯಾ ಶಸ್ತ್ರಾಸ್ತ್ರಕೋವಿದಃ॥೩೩॥

ತಯೋಃ ಸಮಭವದ್ಯುದ್ಧಂ ತಾರಕೇಯಶ್ರಿಯೋಸ್ತದಾ ।
ಭಯದಂ ಸರ್ವಲೋಕಾನಾಂ ವಿಷ್ಣುಶಂಕರಯೋರಿವ ॥೩೪॥

---

ಹೀಗೆ ನನ್ನನ್ನು ಅವನು ಕಾಮಿಸುವುದನ್ನು ನೋಡಿದರೆ ಅವನು ತನ್ನ ನಾಶವನ್ನೇ ಈರೀತಿಯಲ್ಲಿ ಅಪೇಕ್ಷಿಸುತ್ತಿದಾನೆಂದು ಹೇಳಬೇಕಾಗುವುದು! ಇಲ್ಲಿಂದ ಕೂಡಲೇ ಹೊರಗೆ ಹೊರಡು. ಎಂದು ಹೇಳಿದಳು. ಈರೀತಿಯಲ್ಲಿ ಆಚೆಗೆ ಕಳುಹಿಸಲ್ಪಟ್ಟ ದೂತನು ರಾಕ್ಷಸಾಧಿಪನ ಬಳಿಗೆ ಹೋಗಿ ಎಲ್ಲವನ್ನೂ ಹೇಳಿದನು. ॥೩೦॥

ಲಕ್ಷ್ಮಿಯ ತಿರಸ್ಕಾರವಾಕ್ಯವನ್ನು ಕೇಳಿ, ತಾರಕೇಯಾಸುರನು ಕೋಪಗೊಂಡವನಾಗಿ ತನ್ನ ಸೇನೆಯೊಡನೆ ಹೋಗಿ ಲಕ್ಷ್ಮಿಯ ಮನೆಯನ್ನು ಮುತ್ತಿ ತಡೆಗಟ್ಟಿದನು. ॥೩೧॥

ಅನಂತರದಲ್ಲಿ ಲಕ್ಷ್ಮೀದೇವಿಯೂ ಸಹ ತನ್ನ ನೂರುಕೋಟಿ ಶಕ್ತಿಗಳಿಂದ ಕೂಡಿದವಳಾಗಿ ಹೊರಗೆ ಬಂದು ಆ ರಾಕ್ಷಸನ ಸೈನ್ಯವನ್ನು ಜಾಗ್ರತೆಯಾಗಿ ನಾಶ ಮಾಡಿದಳು. ॥೩೨॥

ತಾರಕೇಯಾಸುರನು ಲಕ್ಷ್ಮಿಯ ಮಹತ್ತರವಾದ ಆ ಶಕ್ತಿಯನ್ನು ನೋಡಿ ಬಲಿಷ್ಠನೂ ಶಸ್ತ್ರಾಸ್ತ್ರಕೋವಿದನೂ ಆದ ಅವನೇ ಆಕೆಯೊಂದಿಗೆ ಯುದ್ಧಮಾಡಲು ಪ್ರಾರಂಭಿಸಿದನು. ॥೩೩॥

ತಾರಕೇಯ ಮತ್ತು ಲಕ್ಷ್ಮೀದೇವೀ ಇವರಿಬ್ಬರಿಗೂ ಯುದ್ಧವು ಎಲ್ಲಾ ಲೋಕಗಳಿಗೂ ಭಯವನ್ನುಂಟುಮಾಡುತ್ತಾ, ವಿಷ್ಣು ಮತ್ತು ಶಿವರಿಗೆ ನಡೆದ ಯುದ್ಧದಂತೆ, ಪ್ರಚಂಡವಾಗಿ ನಡೆಯಿತು. ॥೩೪॥

ಯುಧ್ಯತೋಶ್ಚ ತಯೋರೇವ ಮತ್ಯಗಾದ್ವರ್ಷಪಂಚಕಮ್ ।
ನಾಶಿತಂ ರಮಯಾ ಸೈನ್ಯಂ ದೈತ್ಯಃ ಸಂಸೃಜತಿ ಕ್ಷಣಾತ್ ॥೩೫॥

ಏವಂ ಪುನಃಪುನರ್ನಷ್ಟಸೈನ್ಯಂ ಸೃಷ್ಟ್ವಾ ಯುಯೋಧ ಸಃ ।
ಅಥ ಲಕ್ಷ್ಮೀಃ ಸಮಾಲಕ್ಷ್ಯ ಚಾಜಯ್ಯಂ ದೈತ್ಯಪುಂಗವಮ್ ॥೩೬॥

ಸಸ್ಮಾರ ವಿಷ್ಣುಂ ಮನಸಾ ಭರ್ತಾರಂ ಪುರುಷಂ ಪರಮ್ ।
ಅಥ ನಾರಾಯಣಃ ಶ್ರೀಮಾನ್ ವೈನತೇಯಂ ಸಮಾಸ್ಥಿತಃ ॥೩೭॥

ಆವಿರ್ಬಭೂವ ಸಮರೇ ಪಾರ್ಷದೈಃ ಪರಿವಾರಿತಃ ।
ಏವಂ ಕಾಲೋದಿತಾನೇಕಚಂಡಾಂಶು ಸಮಭಾಸ್ವರಃ ॥೩೮॥

ಲಕ್ಷ್ಮೀಂ ದದರ್ಶ ಸಮರೇ ಶ್ರಾಂತಾಂ ತ್ರಸ್ಯನ್ಮುಖಾಂಬುಜಾಂ ।
ಕ್ರುದ್ಧೋಽತ್ಯಂತಂ ಯುಯೋಧಾಜೌ ದೈತ್ಯರಾಜೇನ ಯತ್ನತಃ ॥೩೯॥

---

ಹೀಗೆ ಇವರಿಬ್ಬರಿಗೂ ಯುದ್ಧವು ನಡೆಯುತ್ತಿರಲು ಐದು ವರ್ಷಗಳು ಕಳೆದವು. ಲಕ್ಷ್ಮಿಯು ಸೈನ್ಯವನ್ನು ನಾಶಮಾಡುತ್ತಿರಲು, ರಾಕ್ಷಸನು ಕ್ಷಣಕಾಲದಲ್ಲಿಯೇ ಪುನಃ ಬೇರೆ ಸೈನ್ಯವನ್ನು ಸೃಷ್ಟಿಮಾಡುತ್ತಿದ್ದನು. ॥೩೫॥

ಹೀಗೆ ರಾಕ್ಷಸನು ತನ್ನ ನಷ್ಟವಾದ ಸೈನ್ಯವನ್ನು ಪುನಃ ಪುನಃ ಸೃಜಿಸಿ ಲಕ್ಷ್ಮಿಯೊಂದಿಗೆ ಯುದ್ಧಮಾಡುತ್ತಿದ್ದನು. ಅನಂತರದಲ್ಲಿ ಲಕ್ಷ್ಮಿಯು ದೈತ್ಯಶ್ರೇಷ್ಠನಾದ ತಾರಕೇಯನನ್ನು ಜಯಿಸಲು ಅಸಾಧ್ಯವೆಂದು ಬಗೆದು, ಪರಮ ಪುರುಷನೂ, ತನ್ನ ಪತಿಯೂ ಆದ ಶ್ರೀ ಮಹಾವಿಷ್ಣುವನ್ನು ತನ್ನ ಮನಸ್ಸಿನಲ್ಲಿ ಸ್ಮರಿಸಿದಳು. ತರುವಾಯ ಪೂಜ್ಯನಾದ ವಿಷ್ಣುವು ತನ್ನ ಪರಿವಾರದೊಂದಿಗೆ ಗರುಡನ ಮೇಲೇರಿ ಬಂದು ಅಲ್ಲಿ ಆವಿರ್ಭವಿಸಿದನು. ಹೀಗೆ ನಾರಾಯಣನು, ಪ್ರಳಯ ಕಾಲದಲ್ಲಿ ಉದಯಿಸುವ ಅನೇಕ ಸೂರ್ಯರಿಗೆ ಸಮನಾಗಿ, ಬಹಳವಾಗಿ ಬೆಳಗುತ್ತಿರುವ ತೇಜಸ್ಸುಳ್ಳವನಾಗಿ ಅಲ್ಲಿ ಕಾಣಿಸಿಕೊಂಡನು. ॥೩೬-೩೭-೩೮॥

ವಿಷ್ಣುವು ಯುದ್ಧದ ಆಯಾಸದಿಂದ ಬಳಲಿದ್ದ, ಬಾಡುತ್ತಿರುವ ಕಮಲದಂತೆ ಇರುವ ಮುಖವುಳ್ಳ, ಲಕ್ಷ್ಮಿಯನ್ನು ನೋಡಿದನು. ಆಗ ಅವನು ಅತ್ಯಂತ ಕೋಪಗೊಂಡವನಾಗಿ ಬಹಳ ಶೌರ್ಯವನ್ನು ತೋರಿಸುತ್ತಾ ಆ ರಾಕ್ಷಸನೊಂದಿಗೆ ಯುದ್ಧಮಾಡಿದನು. ॥೩೯॥

ತದಾ ಸ ದೈತ್ಯಃ ಸ್ವಂ ರೂಪಂ ದ್ವಿಧಾ ಕೃತ್ವಾ ಕ್ಷಣೇನ ತು ।
ಪ್ರತ್ಯೇಕಂ ಯುಯುಧೇ ಲಕ್ಷ್ಮ್ಯಾ ವಿಷ್ಣುನಾ ಯುಗಪತ್ ಬಲೀ ॥೪೦॥

ಅಥ ವಿಷ್ಣುಃ ಪ್ರಕುಪಿತಃ ಚಕ್ರಂ ಯದ್ವೈ ಸುದರ್ಶನಂ ।
ಅಮೋಘಂ ತತ್ಪ್ರಚಿಕ್ಷೇಪ ದೈತ್ಯನಾಶಾಯ ತತ್ಕ್ಷಣೇ ॥೪೧॥

ಚಕ್ರಂ ತದ್ದೈತ್ಯಮಾಸಾದ್ಯ ದದಾಹಾಽಗ್ನಿರಿವಾಽಽಲಯಂ ।
ತದಾ ಲಕ್ಷ್ಮ್ಯಾ ಯುಧ್ಯಮಾನಃ ಸಸರ್ಜಾಽನ್ಯಂ ಮಹಾಸುರಂ ॥೪೨॥

ಪುನಃ ಸ ವಿಷ್ಣುನಾ ಯುದ್ಧಂ ಚಕ್ರೇ ಘೋರಂ ಮಹತ್ತಮಂ ।
ಏವಂ ಭೂಯೋ ಹತೋ ದೈತ್ಯಃ ಸಸರ್ಜಾಽತ್ಮಾನಮಾತ್ಮನಾ ॥೪೩॥

ದೃಷ್ಟ್ವಾ ದೈತ್ಯಮಜೇಯಂ ತಂ ವರದಾನಾನ್ಮಹೇಶಿತುಃ ।
ರಮಯಾ ಸಹ ದೇವೇಶಸ್ತಿರೋಭೂತೋ ರಣಾಽಜಿರೇ ॥೪೪॥

---

ಆಗ ಆ ಬಲಿಷ್ಠನಾದ ರಾಕ್ಷಸನು ತನ್ನ ಸ್ವರೂಪವನ್ನು ಕ್ಷಣಕಾಲದಲ್ಲಿಯೇ ಎರಡು ಭಾಗವಾಗಿ ಮಾಡಿಕೊಂಡು ಲಕ್ಷ್ಮೀ ಮತ್ತು ವಿಷ್ಣು ಇವರಿಬ್ಬರೊಂದಿಗೆ ಪ್ರತ್ಯೇಕವಾಗಿ ಏಕಕಾಲದಲ್ಲಿ ಯುದ್ಧಮಾಡಲು ಪ್ರಾರಂಭಿಸಿದನು. ॥೪೦॥

ಅನಂತರ ವಿಷ್ಣುವು ಬಹಳ ಕೋಪಗೊಂಡು ತನ್ನ ಅಮೋಘವಾದ ಸುದರ್ಶನಚಕ್ರವನ್ನು ಆ ರಾಕ್ಷಸನನ್ನು ನಾಶಮಾಡಲು ಅವನ ಮೇಲೆ ಪ್ರಯೋಗಿಸಿ ಬಿಟ್ಟನು. ॥೪೧॥

ಆ ಚಕ್ರವು ಆ ರಾಕ್ಷಸನ ಮೇಲೆ ಬಿದ್ದು, ಅಗ್ನಿಯು ಮನೆಯನ್ನು ಸುಡು ವಂತೆ, ಅವನನ್ನು ಸುಟ್ಟುಹಾಕಿತು. ಆಗ ಲಕ್ಷ್ಮಿಯೊಂದಿಗೆ ಯುದ್ಧಮಾಡುತ್ತಾ ಇದ್ದ ಅಸುರನು ಇನ್ನೊಬ್ಬ ಮಹಾಸುರನನ್ನು ಸೃಜಿಸಿದನು. ॥೪೨॥

ಆ ಮಹಾಸುರನು ವಿಷ್ಣುವಿನೊಂದಿಗೆ ಪುನಃ ಮಹತ್ತರವಾದ ಘೋರ ಯುದ್ಧವನ್ನು ಮಾಡಿದನು. ಹೀಗೆ ಆ ಅಸುರನು ವಿಷ್ಣುವಿನಿಂದ ಹತನಾದರೂ ಪುನಃ ಪುನಃ ತನ್ನನ್ನು ತಾನೇ ಸೃಷ್ಟಿಮಾಡಿಕೊಂಡು ಯುದ್ಧಮಾಡುತ್ತಾ ಬಂದನು. ॥೪೩॥

ಮಹೇಶ್ವರನು ವರವನ್ನು ಕೊಟ್ಟಿದ್ದುದರಿಂದ ಆ ರಾಕ್ಷಸನನ್ನು ಜಯಿಸಲು ಅಸಾಧ್ಯವೆಂದು ತಿಳಿದು, ದೇವೇಶನಾದ ವಿಷ್ಣುವು ಲಕ್ಷ್ಮಿಯೊಂದಿಗೆ ಯುದ್ಧ ಭೂಮಿಯಲ್ಲಿ ಅಂತರ್ಧಾನನಾದನು. ॥೪೪॥

ಅಥ ಮತ್ವಾ ದೈತ್ಯಪತಿಃ ಪರಾಸ್ತಂ ರಮಯಾ ಹರಿಂ ।
ಜಗಾಮ ಸ್ಥಾನಮಾತ್ಮೀಯಮಸುರೈಃ ಪರಿವಾರಿತಃ ॥೪೫॥

ತದಂತರೇ ತು ಗಂಧರ್ವಮುಖಾಚ್ಛ್ರುತ್ವಾ ಪರಾಭವಂ ।
ವಿಷ್ಣೋರ್ಲಕ್ಷ್ಮೀಸಮೇತಸ್ಯ ಶಚೀ ಸಸ್ಮಾರ ವೈ ಗುರುಂ ॥೪೬॥

ಸ್ಮೃತಮಾತ್ರೇ ಗುರುಸ್ತತ್ರ ಶಚೀಸವಿಧ ಆಗತಃ ।
ತಂ ದೃಷ್ಟ್ವಾಽಂಗಿರಸಂ ಚಾಗ್ರೇ ಶಚೀ ಪ್ರತ್ಯುತ್ಥಿತಾಽಭವತ್ ॥೪೭॥

ಅಥ ತಂ ಸಾ ಪೂಜಯಿತ್ವಾ ಪ್ರಣಮ್ಯ ಭಕ್ತಿಯೋಗತಃ ।
ಗುರೋಽಹಮತಿಖಿನ್ನಾಽಸ್ಮಿ ದೈತ್ಯರಾಜೇನ ಪೀಡಿತಾ ।
ಮಹಾಬಲೇನ ಬದ್ಧೋ ಮೇ ಪತಿರಿಂದ್ರಃ ಸಹಾಽಮರೈಃ ॥೪೯॥

---

ಅನಂತರದಲ್ಲಿ ದೈತ್ಯರಾಜನು, ಲಕ್ಷ್ಮಿಯೊಂದಿಗೆ ನಾರಾಯಣನು ಪರಾಜಿತನಾಗಿ ಕಣ್ಮರೆಯಾದನೆಂದು ತಿಳಿದು, ಅಸುರರಿಂದ ಸುತ್ತುವರಿಯಲ್ಪಟ್ಟವನಾಗಿ ತನ್ನ ಸ್ಥಾನವನ್ನು ಕುರಿತು ತೆರಳಿದನು. ॥೪೫॥

ಈ ಸಂದರ್ಭದಲ್ಲಿ ಲಕ್ಷ್ಮೀಸಮೇತನಾದ ನಾರಾಯಣನ ಸೋಲನ್ನು ಗಂಧರ್ವರ ಮುಖದಿಂದ ತಿಳಿದು ಶಚೀದೇವಿಯು ಬೃಹಸ್ಪತಿಯನ್ನು ಸ್ಮರಿಸಿದಳು. ॥೪೬॥

ಶಚೀದೇವಿಯು ಸ್ಮರಿಸಿದ ಕೂಡಲೇ ಬೃಹಸ್ಪತಿಯು ಆಕೆಯ ಸಮೀಪಕ್ಕೆ ಬಂದನು. ಅವನು ಬಂದುದನ್ನು ಕಂಡು, ಶಚಿಯು ಎದ್ದುನಿಂತಳು. ॥೪೭॥

ಅನಂತರದಲ್ಲಿ ಶಚೀದೇವಿಯು ಅವನಿಗೆ ಭಕ್ತಿಭಾವದಿಂದ ಪೂಜೆಯನ್ನು ಮಾಡಿ ಕಣ್ಣುಗಳಲ್ಲಿ ನೀರನ್ನು ಬಿಡುತ್ತಾ ದೀನಳಾಗಿ ಅವನನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೪೮॥

ಓ ಗುರುವೇ, ದೈತ್ಯರಾಜನ ಕಾಟಕ್ಕೊಳಗಾಗಿ ನಾನು ಬಹಳ ದುಃಖಗೊಂಡಿದ್ದೇನೆ. ನನ್ನ ಪತಿಯಾದ ಇಂದ್ರನು ಇತರ ದೇವತೆಗಳೊಂದಿಗೆ ಮಹಾಬಲಿಷ್ಠನಾದ ಆ ರಾಕ್ಷಸನಿಂದ ಬಂಧಿಸಲ್ಪಟ್ಟಿದ್ದಾನೆ. ॥೪೯॥

ಪರಾಮುಷ್ಟುರ್ಂ ಮಾ ಮಧುನಾ ಸನ್ನಿಹತ್ಯಸುರೇಶ್ವರಃ ।
ದೂತಂ ಮೇ ಪ್ರೇಷಯಾಮಾಸ ಯುಕ್ತ್ಯಾ ಸ ಚ ನಿವಾರಿತಃ ॥೫೦॥

ಲಕ್ಷ್ಮೀನಾರಾಯಣೌ ಯುದ್ಧೇ ನಿರ್ಜಿತೌ ತೇನ ಸಂಪ್ರತಿ ।
ಆಯಾಸ್ಯತ್ಯಭಿನೇತುಂ ಮಾಮದ್ಯ ಶ್ವೋ ವಾ ಮಹಾಸುರಃ ॥೫೧॥

ಕಿಂ ಕರೋಮಿ ಕ್ವ ಗಚ್ಛಾಮಿ ನಾಽಸ್ತಿ ಮೇ ಶರಣಂ ಕ್ವಚಿತ್ ।
ಪ್ರಪನ್ನಾಂ ರಕ್ಷ ದೀನಾಂ ಮಾಮಾಂಗಿರಸ ಗುರೋಽಧುನಾ ॥೫೨॥

ಸಂಶ್ರುತ್ಯೈವಂ ವಿಲಪಿತಮಿಂದ್ರಾಣ್ಯಾ ಧಿಷಣಸ್ತದಾ ।
ಸಮಾಲೋಕ್ಯ ಜ್ಞಾನದೃಶಾ ಶಚೀಂ ಪ್ರಾಹ ದಯಾಽನ್ವಿತಃ ॥೫೩॥

ಪುಲೋಮಜೇ ಶೃಣು ಮಮ ವಚನಂ ಕಾಲಸಂಮಿತಂ ।
ಏಷ ದೈತ್ಯೋ ಮಹಾದೇವವರಾತ್ಸರ್ವಜಯೀ ಭವೇತ್ ॥೫೪॥

---

ಅಸುರರಾಜನು ಈಗ ನನ್ನನ್ನು ಮುಟ್ಟಲು ಇಷ್ಟಪಡುತ್ತಿದ್ದಾನೆ. ಇದಕ್ಕಾಗಿ ಅವನು ನನ್ನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದ್ದನು. ನಾನು ಉಪಾಯದಿಂದ ಅವನನ್ನು ಹಿಂತಿರುಗಿಸಿದೆನು. ॥೫೦॥

ಅವನು ಲಕ್ಷ್ಮೀನಾರಾಯಣರನ್ನೂ ಯುದ್ಧದಲ್ಲಿ ಈಗ ಜಯಿಸಿದ್ದಾನೆ. ಆ ಮಹಾಸುರನು ಇವತ್ತೋ ನಾಳೆಯೋ ನನ್ನನ್ನು ಕರೆದುಕೊಂಡು ಹೋಗಲು ಬರುವನು. ॥೫೧॥

ನಾನು ಈಗೇನನ್ನು ಮಾಡಲಿ? ಎಲ್ಲಿಗೆ ಹೋಗಲಿ? ನನಗೆ ರಕ್ಷಕರಾರೂ ಇಲ್ಲವಲ್ಲ. ಓ ಗುರುವಾದ ಬೃಹಸ್ಪತಿಯೇ, ಶರಣಾಗತಳೂ ಮತ್ತು ದೀನಳೂ ಆದ ನನ್ನನ್ನು ದಯವಿಟ್ಟು ಕಾಪಾಡು. ॥೫೨॥

ಆಗ ಶಚೀದೇವಿಯು ದುಃಖಪಟ್ಟದ್ದನ್ನು ಕಂಡು, ಬೃಹಸ್ಪತಿಯು ಕರುಣಾಪೂರ್ಣನಾಗಿ ಜ್ಞಾನದೃಷ್ಟಿಯಿಂದ ಯೋಚಿಸಿ ಆಕೆಯನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೫೩॥

ಎಲೌ ಶಚೀದೇವಿಯೇ, ಕೇಳು. ಈ ಅಸುರನು ಮಹಾದೇವನಾದ ಶಿವನ ವರದ ಪ್ರಭಾವದಿಂದ ಎಲ್ಲರನ್ನೂ ಜಯಿಸುತ್ತಿದ್ದಾನೆ. ಇವನನ್ನು ಜಯಿಸುವವನು

ನಾಽಸ್ತ್ಯಸ್ಯ ಜೇತಾ ಲೋಕೇಽಸ್ಮಿನ್ ಪರಲೋಕೇ ಚ ವಿದ್ಯತೇ ।
ಸ್ತ್ರೀಭಿರ್ವಾ ನ ಪರಾಜೇಯಃ ಸಾಕ್ಷಾದ್ಗೌರೀಮೃತೇಽಸುರಃ ॥೫೫॥

ಆಗಮಿಷ್ಯತಿ ದೂತಸ್ತೇ ನೇತುಂ ಶೀಘ್ರಂ ಮಹಾಸುರಃ ।
ತ್ವಂ ಮಾಸಂ ವ್ಯವಧಿಂ ಕೃತ್ವಾ ಗೌರೀಮಾರಾಧಯ ದ್ರುತಮ್ ॥೫೬॥

ಇತ್ಯುಕ್ತ್ವಾ ನಿರ್ಗತೋ ಜೀವಃ ಶಚೀ ಚ ಪರಮೇಶ್ವರೀಮ್ ।
ಗೌರೀಂ ಸಮಾರಾಧಯಿತುಂ ತದೈವ ಸಮುಪಾಕ್ರಮತ್ ॥೫೭॥

ಮೂರ್ತಿಂ ಪೃಥ್ವೀಮಯೀಂ ಕೃತ್ವಾ ಸಿಂಹಸಂಸ್ಥಾಂ ಚತುರ್ಭುಜಾಮ್ ।
ಖಡ್ಗಂ ಚ ಖೇಟಕಂ ಶೂಲಂ ಮುದ್ಗರಂ ದಧತೀಂ ಶುಭಾಮ್ ॥೫೮॥

ತ್ರಿನೇತ್ರಾಂ ಚಂದ್ರಚೂಡಾಲಾಂ ಮೇಚಕಾಭಾಂ ಸುಭೂಷಿತಾಂ ।
ನಾನೋಪಹಾರೈರಾರಾಧ್ಯ ಧ್ಯಾತ್ವಾಽಽವಾಹ್ಯ ಯಥಾವಿಧಿ ॥೫೯॥

---

ಈ ಲೋಕದಲ್ಲಿ ಆಗಲೀ, ಪರಲೋಕದಲ್ಲಾಗಲೀ ಯಾರೂ ಇಲ್ಲ. ಸ್ತ್ರೀಯರೂ ಇವನನ್ನು ಜಯಿಸಲಾರರು. ಗೌರಿಯನ್ನು ಬಿಟ್ಟರೆ ಈ ಮಹಾಸುರನನ್ನು ಜಯಿಸುವವರು ಯಾರೂ ಇಲ್ಲವೆಂದು ತಿಳಿ. ॥೫೪-೫೫॥

ಆ ಮಹಾಸುರನ ದೂತನು ಶೀಘ್ರದಲ್ಲಿಯೇ ನಿನ್ನನ್ನು ಕರೆದುಕೊಂಡು ಹೋಗಲು ಬರುವನು. ಆದ್ದರಿಂದ ನೀನು ಅವನಿಂದ ಈ ತಿಂಗಳವರೆಗೆ ಅವಧಿಯನ್ನು ಪಡೆದು ಗೌರಿಯ ಆರಾಧನೆಯನ್ನು ಮಾಡಲು ಶೀಘ್ರವಾಗಿ ಪ್ರಾರಂಭಿಸು. ॥೫೬॥

ಹೀಗೆ ಹೇಳಿ ಬೃಹಸ್ಪತಿಯು ಹೊರಟುಹೋದನು. ಶಚೀದೇವಿಯೂ ಕೂಡ ಪರಮೇಶ್ವರನ ಪತ್ನಿಯಾದ ಗೌರಿಯನ್ನು ಆರಾಧಿಸಲು ಕೂಡಲೇ ಪ್ರಾರಂಭಿಸಿದಳು. ॥೫೭॥

ಶಚೀದೇವಿಯು ಸಿಂಹದಮೇಲೆ ಕುಳಿತಿರುವ ನಾಲ್ಕು ತೋಳುಗಳುಳ್ಳ, ಖೇಟಕ, ಶೂಲ, ಮುದ್ಗರ, ಮುಂತಾದ ಆಯುಧಗಳನ್ನು ಧರಿಸಿರುವ, ಮಂಗಳಕರಳಾದ, ಮೂರು ಕಣ್ಣುಗಳುಳ್ಳ, ಚಂದ್ರನನ್ನೇ ಶಿರಸ್ಸಿನಲ್ಲಿ ಆಭರಣವಾಗಿ ಧರಿಸಿರುವ, ಮೇಚಕ ಪುಷ್ಪದಂತೆ ಕಾಂತಿಯನ್ನು ಹೊಂದಿರುವ, ಅಲಂಕಾರಭೂಷಿತಳಾದ, ಗೌರಿಯ ಮೂರ್ತಿಯನ್ನು ಮಣ್ಣಿನಲ್ಲಿ ರಚಿಸಿ ಆಕೆಯನ್ನು ಅನೇಕ ಉಪಚಾರಗಳಿಂದ

ಗುರೂಪದಿಷ್ಟಸ್ತೋತ್ರೇಣ ನಾಮಾಽಷ್ಟಶತಕಾತ್ಮನಾ ।
ಸ್ತುತ್ವಾ ತದೇಕಚಿತ್ತಾಽಭೂತ್ತನ್ಮಂತ್ರಜಪತತ್ಪರಾ ॥೬೦॥

ಅಥಾಽಸುರೋಽಪಿ ಸ್ಮೃತ್ವಾ ತಾಂ ಶಚೀಂ ಕಾಮಶರಾಽಹತಃ ।
ದೂತೇನ ಸಹ ನಿರ್ಗತ್ಯ ದೇವಲೋಕಂ ಸಮಾಯಯೌ ॥೬೧॥

ಸಂಸ್ಥಿತೋ ನಂದನವನೇ ದೂತಂ ತಂ ಪ್ರೇಷಯದ್ದ್ರುತಮ್ ।
ಅಥ ದೂತಃ ಸಮಾಗತ್ಯ ಶಚೀಂ ಪ್ರೋವಾಚ ಸನ್ನತಃ ॥೬೨॥

ದೇವಿ ದೈತ್ಯೇಶ್ವರಃ ಪ್ರಾಪ್ತಃ ಸಂಸ್ಥಿತೋ ನಂದನೇ ವನೇ ।
ವಸಂತಕುಸುಮೈಶ್ಛನ್ನೋ ವಸಂತ ಇವ ರೂಪವಾನ್ ॥೬೩॥

ತ್ವದ್ದರ್ಶನಂ ಸಮಾಕಾಂಕ್ಷನ್ ತವ ಧ್ಯಾನೈಕತತ್ಪರಃ ।
ತ್ವಾಂ ಸಮಾನಯಿತುಂ ಚಾಽಹಂ ಪ್ರೇಷಿತೋಽಸ್ಮಿ ವರಾನನೇ ॥೬೪॥

---

ಪೂಜಿಸುತ್ತಾ, ಧ್ಯಾನಾಽವಾಹನಾದಿಗಳನ್ನು ಮಾಡಿ, ಶಾಸ್ತ್ರೋಕ್ತ ಕ್ರಮದಲ್ಲಿ ಆರಾಧನೆಯನ್ನು ನೆರವೇರಿಸಿದಳು. ॥೫೮-೫೯॥

ಶಚೀದೇವಿಯು, ಗುರುವು ಉಪದೇಶಿಸಿದ್ದ ಅಷ್ಟೋತ್ತರ ಶತನಾಮ ಸ್ತೋತ್ರದಿಂದ ಗೌರೀದೇವಿಯನ್ನು ಸ್ತೋತ್ರಮಾಡಿ, ಆ ದೇವಿಯಲ್ಲೇ ನೆಟ್ಟ ಮನಸ್ಸುಳ್ಳವಳಾಗಿ, ಆಕೆಯ ಮಂತ್ರಜಪದಲ್ಲಿಯೇ ಅತ್ಯಾಸಕ್ತಿಯನ್ನು ತೋರಿಸಿದಳು. ॥೬೦॥

ಅನಂತರದಲ್ಲಿ ಆ ಅಸುರನೂ ಕೂಡ ಶಚೀದೇವಿಯನ್ನು ಸ್ಮರಿಸಿ ಕಾಮಾಂಧನಾಗಿ ತನ್ನ ದೂತನೊಂದಿಗೆ ಸ್ವರ್ಗಲೋಕಕ್ಕೆ ಬಂದನು. ॥೬೧॥

ಮಹಾಸುರನು ನಂದನ ವನದಲ್ಲಿ ನಿಂತು, ತನ್ನ ದೂತನನ್ನು ಶಚೀದೇವಿಯ ಬಳಿಗೆ ಶೀಘ್ರವಾಗಿ ಕಳುಹಿಸಿದನು. ತರುವಾಯ, ದೂತನು ಶಚೀದೇವಿಯ ಬಳಿಗೆ ಬಂದು "ಎಲೌ ದೇವಿಯೇ, ರಾಕ್ಷಸರಾಜನಾದ ತಾರಕೇಯನು ಬಂದು ನಂದನವನದಲ್ಲಿ ಇದ್ದಾನೆ. ವಸಂತಮಾಸದ ಹೂವ್ವಗಳ ಮಧ್ಯೆ ಮರೆಯಾಗಿರುವ ವಸಂತನೋ ಎಂಬಂತೆ ಅವನು ರೂಪವಂತನಾಗಿದ್ದಾನೆ. ॥೬೨-೬೩॥

"ಎಲೌ ಶಚೀದೇವಿಯೇ, ರಾಕ್ಷಸರಾಜನು ನಿನ್ನ ದರ್ಶನವನ್ನು ಬಯಸುತ್ತಾ ನಿನ್ನ ಧ್ಯಾನದಲ್ಲಿಯೇ ಆಸಕ್ತನಾಗಿದ್ದಾನೆ. ಎಲೌ ಮಂಗಳಾಂಗಿಯೇ, ನಿನ್ನನ್ನು ಕರೆತರುವುದಕ್ಕಾಗಿಯೇ ಆತನು ನನ್ನನ್ನು ನಿನ್ನಲ್ಲಿಗೆ ಕಳುಹಿಸಿದ್ದಾನೆ. ॥೬೪॥

ಏಹಿ ತ್ವಂ ಚಪಲಾಽಪಾಂಗಿ ದೈತ್ಯರಾಜಂ ಭಜ ದ್ರುತಮ್ ।
ಬ್ರಹ್ಮಾಂಡಾನಾಂ ಶತಂ ಯಸ್ಯ ವಶೇ ತನ್ಮಹಿಷೀ ಭವ ॥೬೫॥

ಅನೇಕೇ ಧಾತೃವಿಷ್ಣ್ವಾದ್ಯಾ ಸ್ತ್ವಾಂ ಸೇವಿತುಂ ಸ್ತ್ರಿಯಾ ಸಹ ।
ಯಾ ತ್ವಯೋಕ್ತಾ ಪರಾ ಲಕ್ಷ್ಮೀ ಸ್ತಯಾ ಯುಕ್ತೋ ಜನಾರ್ದನಃ ॥೬೬॥

ನಿರ್ಜಿತೋ ಯುಧಿ ಸ್ವಂ ಲೋಕಂ ತ್ಯಕ್ತ್ವಾ ಭೀತ್ಯಾ ಪಲಾಯಿತಃ ।
ಪ್ರಬುದ್ಧಂ ತೇ ಮಹಾಭಾಗ್ಯಂ ಯತ್ತ್ವಾಂ ಕಾಂಕ್ಷತಿ ದೈತ್ಯರಾಟ್ ॥೬೭॥

ಇತಿ ಸಂಶ್ರುತ್ಯ ದೂತಸ್ಯ ವಚನಂ ಸುರರಾಟ್ಪ್ರಿಯಾ ।
ಮನಸಾ ಗರ್ಹಯಂತೀ ತಂ ಪ್ರಾಹ ವಾಕ್ಯವಿಶಾರದಾ ॥೬೮॥

ಶೃಣು ಮೇ ವಚನಂ ದೂತ ಯನ್ಮಾಮಿಚ್ಛತಿ ದೈತ್ಯರಾಟ್ ।
ಚಿರಾದೇತದ್ವಾಂಛಿತಂ ಮೇ ಘಟಿತಂ ಕಾಲಪಾಕತಃ ॥೬೯॥

---

ಎಲೌ ಚಂಚಲಕಟಾಕ್ಷವುಳ್ಳ ದೇವಿಯೇ, ಶೀಘ್ರವಾಗಿ ರಾಕ್ಷಸ ರಾಜನನ್ನು ಹೊಂದು. ಯಾರ ಅಧೀನದಲ್ಲಿ ನೂರಾರು ಬ್ರಹ್ಮಾಂಡಗಳೇ ಇವೆಯೋ, ಅಂಥಾ ರಾಕ್ಷಸರಾಜನನ್ನು ಹೊಂದು, ಅವನ ಪಟ್ಟದರಾಣಿಯಾಗು. ॥೬೫॥

ಆಗ ಬ್ರಹ್ಮಾ, ವಿಷ್ಣು ಮುಂತಾದವರೂ ತಮ್ಮ ಸ್ತ್ರೀಯರೊಂದಿಗೆ ನಿನ್ನನ್ನು ಸೇವಿಸುವರು. ನೀನು ಹಿಂದೆ ಹೇಳಿದ ಲಕ್ಷ್ಮಿಯೂ ಅವಳ ಗಂಡನಾದ ನಾರಾಯಣನೂ ಯುದ್ಧದಲ್ಲಿ ನಮ್ಮ ರಾಕ್ಷಸರಾಜನಿಂದ ಜಯಿಸಲ್ಪಟ್ಟು ಹೆದರಿಕೆಯಿಂದ ಓಡಿ ಹೋದರು! ದೈತ್ಯರಾಜನೇ ನಿನ್ನನ್ನು ಅಪೇಕ್ಷಿಸುತ್ತಿರುವುದನ್ನು ನೋಡಿದರೆ, ನಿನ್ನ ವಿಶೇಷ ಅದೃಷ್ಟವೇ ಫಲಿಸುವಕಾಲ ಬಂದಿದೆಯೆಂದು ತಿಳಿ. ॥೬೬-೬೭॥

ರಾಕ್ಷಸರಾಜನ ದೂತನ ಈ ಮಾತನ್ನು ಕೇಳಿ ದೇವೇಂದ್ರನ ಪತ್ನಿಯೂ ಒಳ್ಳೆಯ ವಕ್ತೃವೂ ಆದ ಶಚೀದೇವಿಯು ಮನಸ್ಸಿನಲ್ಲಿ ರಾಕ್ಷಸನನ್ನು ನಿಂದಿಸುತ್ತಾ ದೂತನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೬೮॥

ಎಲೈ ದೂತನೇ, ಕೇಳು. ದೈತ್ಯರಾಜನು ನನ್ನನ್ನು ಅಪೇಕ್ಷಿಸುವುದು ನನಗೂ ಇಷ್ಟವಾಗಿದೆ. ನಾನು ಇದನ್ನೇ ಬಹಳ ಕಾಲದಿಂದ ಅಪೇಕ್ಷಿಸುತ್ತಿದ್ದೆನು. ಅದು ಫಲಿಸುವಕಾಲವು ಬಂದದ್ದರಿಂದ ಈಗ ಅದು ಸಿದ್ಧಿಸಿದಂತಿದೆ. ॥೬೯॥

ಭವಿತಾ ನೂತನತಯಾ ಪತಿ ರ್ಮೇ ಸುರರಾಟ್ ಖಲು ।
ತತ್ರ ಮಾಸವ್ರತಪರಾ ಸ್ಥಿತ್ವಾ ಪತಿಸುಖಾಯ ವೈ ॥೨೦॥

ಸಮಾಪ್ತವ್ರತಚರ್ಯಾಽಹಂ ಭಜಾಮ್ಯಸುರಭೂಪತಿಮ್ ।
ವ್ರತೇ ಪೂರ್ಣೇ ವಿಯೋಗೋ ನ ಭರ್ತ್ರಾ ಜಾತು ಭವಿಷ್ಯತಿ ॥೨೧॥

ವಿಹತೇ ತು ವ್ರತೇ ಪತ್ಯು ರ್ವಿಯೋಗಃ ಸ್ಯಾದ್ದ್ರುತಂ ಮಮ ।
ನಾಽಹಂ ಪತಿವಿಯೋಗಾರ್ತಿಂ ಭಜಾಮಿ ವ್ರತಯೋಗತಃ ॥೨೨॥

ತದ್ಗತ್ವಾ ಬ್ರೂಹಿ ದೈತ್ಯೇಂದ್ರ ಕ್ಷಮ್ಯತಾಂ ಮಾಸಮಾತ್ರಕಮ್ ।
ಏವಂ ಶಚೀವಚಃ ಶ್ರುತ್ವಾ ದೈತ್ಯರಾಜೇ ನ್ಯವೇದಯತ್ ॥೨೩॥

ಶ್ರುತ್ವಾ ಸೋಽಪಿ ಪ್ರಸನ್ನಸ್ತಂ ಪ್ರತೀಕ್ಷನ್ ಸಮಯಂ ಸ್ಥಿತಃ ।
ಇಂದ್ರಾಣೀ ಚ ಪ್ರತಿದಿನಂ ವಾಯುಮಾತ್ರಾಶನಾ ಸತೀ ॥೨೪॥

---

ರಾಕ್ಷಸರಾಜನು ನನ್ನ ಹೊಸಪತಿಯಾಗಬೇಕಾಗಿದೆಯಷ್ಟೆ? ಆದ್ದರಿಂದ ನನ್ನ ಹೊಸಪತಿಯ ಸುಖಕ್ಕಾಗಿ ಒಂದು ತಿಂಗಳು ಕಾಲ ನೆರವೇರಿಸಬೇಕಾಗಿರುವ ವ್ರತವನ್ನೊಂದನ್ನು ಕೈಗೊಂಡಿದ್ದೇನೆ. ಆ ವ್ರತವು ಮುಗಿದ ಕೂಡಲೇ ರಾಕ್ಷಸ ರಾಜನನ್ನು ಹೊಂದುವೆನು. ಈ ವ್ರತವು ಪೂರ್ಣವಾದರೇ ನನಗೆ ಹೊಸಪತಿಯ ವಿಯೋಗವು ಎಂದಿಗೂ ಸಂಭವಿಸುವುದಿಲ್ಲ. ॥೨೦-೨೧॥

ಈ ವ್ರತವು ಮಧ್ಯದಲ್ಲಿ ನಿಂತುಹೋದರೆ, ನನಗೆ ಪತಿವಿಯೋಗವು ಶೀಘ್ರ ದಲ್ಲಿಯೇ ಉಂಟಾಗುವುದು. ಆದ್ದರಿಂದ ನಾನು ಈ ವ್ರತವನ್ನು ಮುಗಿಸಿದರೆ ಪತಿಯ ವಿಯೋಗದ ದುಃಖವನ್ನು ಹೊಂದುವುದೇ ಇಲ್ಲ. ॥೨೨॥

ಎಲೈ ದೂತನೇ, ಆದ್ದರಿಂದ ಈ ವಿಷಯವನ್ನು ನಿಮ್ಮ ರಾಕ್ಷಸರಾಜನಿಗೆ ತಿಳಿಸಿ ಒಂದು ತಿಂಗಳು ಕಾಲ ದಯವಿಟ್ಟು ಕ್ಷಮಿಸಬೇಕೆಂದು ಹೇಳು. ಶಚಿಯು ಹೇಳಿದ ಮಾತನ್ನು ಕೇಳಿ ದೂತನು ಹಿಂತಿರುಗಿಹೋಗಿ ಈ ವಿಚಾರವನ್ನು ರಾಕ್ಷಸ ರಾಜನಿಗೆ ವಿಜ್ಞಾಪನೆ ಮಾಡಿದನು. ॥೨೩॥

ಶಚೀದೇವಿಯ ಸಂದೇಶವನ್ನು ಕೇಳಿ ಪ್ರಸನ್ನನಾಗಿ ರಾಕ್ಷಸರಾಜನೂ ಆ ಕಾಲವನ್ನು ನಿರೀಕ್ಷಿಸುತ್ತಾ ಕಳೆಯುತ್ತಿದ್ದನು. ಶಚೀದೇವಿಯು ನಿತ್ಯವೂ

ಯತಸ್ವಾಂತೇಂದ್ರಿಯಾಽಹಾರವಿಹಾರವಚನಕ್ರಿಯಾ ।
ಧ್ಯಾಯನ್ನ(ತ್ಯ)ಜಸ್ರಂ ಶ್ರೀಗೌರೀಪಾದಾಽಬ್ಜಂ ಮನಸಿ ಸ್ಥಿರಮ್॥೨೫॥

ದಿನಾನಾಮತಿಯಾಯ್ಯೈವಂ ಚತುರ್ಗುಣಿತಸಪ್ತಕಮ್ ।
ಊನತ್ರಿಂಶದ್ದಿನೇ ರಾತ್ರೌ ಚಿಂತಯಾಮಾಸ ವೈ ಶಚೀ ॥೨೬॥

ನಾಽದ್ಯಾಪಿ ದೇವೀ ಸಂಪ್ರೀತಾ ದಿನಮೇಕಮಿಹಾಂತರಮ್ ।
ತತೋಽಹಂ ದೈತ್ಯರಾಜಸ್ಯ ಭವಿಷ್ಯಾಮಿ ನಿಯಂತ್ರಣೇ ॥೨೭॥

ಏತನ್ಮೇ ವಿಷಮಂ ಭಾತಿ ಕಿಂ ಕೃತ್ವಾ ಸ್ಯಾಚ್ಛುಭಂ ಮಮ ।
ನಾನ್ಯೋ ಹ್ಯುಪಾಯಃ ಪ್ರಕೃತೇ ಮಹದ್ಭಯಮುಪಸ್ಥಿತಮ್ ॥೨೮॥

ಆತ್ಮದಾನಂ ನೋಚಿತಂ ವೈ ದೈತ್ಯರಾಜಾಯ ಸರ್ವಥಾ ।
ತಸ್ಮಾದೇಕಂ ಪ್ರತೀಕ್ಷಿಷ್ಯೇ ದಿನಂ ಗೌರೀಂ ಸಮಾಹಿತಾ ॥೨೯॥

---

ಗಾಳಿಯನ್ನು ಮಾತ್ರ ಆಹಾರವಾಗಿ ಸೇವಿಸುತ್ತಾ ನಿಗ್ರಹಿಸಿದ ಮನಸ್ಸು ಇಂದ್ರಿಯಗಳು ಆಹಾರ, ವಿಹಾರ, ಇನ್ನಿತರ ಕೆಲಸಗಳುಳ್ಳವಳಾಗಿ, ಯಾವಾಗಲೂ ಮನಸ್ಸಿನಲ್ಲಿ ದೃಢವಾಗಿ ಶ್ರೀಗೌರಿಯ ಪಾದಕಮಲವನ್ನು ಧ್ಯಾನಿಸುತ್ತಾ, ಇಪ್ಪತ್ತೆಂಟು ದಿನಗಳನ್ನು ಈರೀತಿಯಲ್ಲಿ ಕಳೆದಳು. ಅನಂತರದಲ್ಲಿ ಇಪ್ಪತ್ತೊಂಬತ್ತನೆಯ ದಿನ ರಾತ್ರಿಯಲ್ಲಿ ಇವಳು ಈರೀತಿಯಲ್ಲಿ ಯೋಚಿಸತೊಡಗಿದಳು. ॥೨೪-೨೫-೨೬॥

ಗೌರಿಯು ಇಂದಿನವರೆವಿಗೂ ನನ್ನ ಮೇಲೆ ಪ್ರಸನ್ನಳಾಗಲಿಲ್ಲ. ಒಂದು ದಿವಸ ಮಾತ್ರದ ಅವಧಿಯು ಇದೆ. ಅನಂತರದಲ್ಲಿ ನಾನು ರಾಕ್ಷಸರಾಜನ ಬಂಧನಕ್ಕೆ ಒಳಗಾಗಬೇಕಾಗುವುದು. ॥೨೭॥

ಇದು ನನಗೆ ವಿರುದ್ಧವಾಗಿ ಕಾಣುತ್ತದೆ. ನಾನೀಗೇನನ್ನು ಮಾಡಿದರೆ ಶುಭವಾಗುವುದು ? ಈಗ ನನಗೇನೂ ಉಪಾಯವು ಹೊಳೆಯುತ್ತಿಲ್ಲ. ಆದ್ದರಿಂದ ನನಗೆ ಬಹಳ ಭಯವುಂಟಾಗುತ್ತಿದೆ. ॥೨೮॥

ಹೇಗೂ ರಾಕ್ಷಸರಾಜನಿಗೆ ನನ್ನನ್ನು ಅರ್ಪಿಸಿಕೊಳ್ಳುವುದು ಸರಿಯಲ್ಲ. ಸರ್ವಥಾ ಯುಕ್ತವಲ್ಲ. ಆದ್ದರಿಂದ ಸಮಾಧಾನಚಿತ್ತದಿಂದ ಇನ್ನೂ ಒಂದು ದಿವಸ

ತತಃ ಪ್ರಭಾತೇಽಮುಂ ದೇಹಂ ದೇವ್ಯೈ ವಹ್ನೌ ಸಮರ್ಪಯೇ ।
ಇತಿ ನಿಶ್ಚಿತ್ಯ ದೇವೇಶಪತ್ನೀ ಕುಂಡಂ ಮಹತ್ತರಮ್ ॥೮೦॥

ಚಕಾರ ಯತ್ರ ಭವನೇ ತತ್ರ ಗೌರೀ ನಿವೇಶಿತಾ ।
ಕಶ್ಚಿದ್ದೈತ್ಯಪತೇರ್ದೂತಃ ಶಚೀಂ ಪಪ್ರಚ್ಛ ತಂ ವಿಧಿಮ್ ॥೮೧॥

ಸಾ ಪ್ರಾಹ ಮಾಸನಿರ್ವರ್ತ್ಯಂ ವ್ರತಂ ಪೂರ್ಣಂ ಭವಿಷ್ಯತಿ ।
ಅಹಂ ಶ್ವಃ ಕಲ್ಪಸಮಯೇ ದೈತ್ಯೇಶಂ ತಮನುವ್ರಜೇ ॥೮೨॥

ಗಚ್ಛ ದೂತ ದೈತ್ಯಪತಿಃ ಸೂರ್ಯಸ್ಯೋದಯನಂ ಪ್ರತಿ ।
ಆಗಚ್ಛತ್ವಿಹ ಮಾಂ ನೇತುಂ ಸನ್ನದ್ಧಃ ಸಮಲಂಕೃತಃ ॥೮೩॥

ಶ್ರುತ್ವಾ ದೂತಃ ಶಚೀವಾಕ್ಯಂ ತಥ್ಯಂ ಮತ್ವಾ ಸುರೇಶ್ವರೇ ।
ನಿವೇದಯತ್ಸೋಽಪಿ ಹೃಷ್ಟಃ ಕಾಲಂ ತಂ ಪ್ರಸಮೀಕ್ಷತ ॥೮೪॥

---

ಗೌರಿಯನ್ನು ಧ್ಯಾನಿಸುತ್ತಾ ರಕ್ಷಣೆಗಾಗಿ ಕಾಯುವೆನು. 'ಅನಂತರದಲ್ಲಿ ಆಕೆಯು ಪ್ರಸನ್ನಳಾಗದೇ ಹೋದರೆ ಈ ನನ್ನ ದೇಹವನ್ನು ಅಗ್ನಿಯಲ್ಲಿ ದೇವಿಗೆ ಸಮರ್ಪಿಸುವೆನು. ಹೀಗೆ ಶಚೀದೇವಿಯು ನಿಶ್ಚಯಿಸಿ ಗೌರೀದೇವಿಯ ಮೂರ್ತಿಯು ಸ್ಥಾಪಿಸಲ್ಪಟ್ಟಿದ್ದ ಮಂದಿರದಲ್ಲಿ ಒಂದು ದೊಡ್ಡದಾದ ಅಗ್ನಿಕುಂಡವನ್ನು ರಚಿಸಿದಳು. ರಾಕ್ಷಸರಾಜನ ದೂತರಲ್ಲಿ ಒಬ್ಬನು, ಇದೇಕೆ ಹೀಗೆ ಕುಂಡದ ರಚನೆಯಾಗಿದೆ ? ಎಂದು ಶಚಿಯನ್ನು ಕೇಳಿದನು. ॥೭೯-೮೦-೮೧॥

ಅದಕ್ಕೆ ಶಚೀದೇವಿಯು ದೂತನನ್ನು ಕುರಿತು ಎಲೈ ದೂತನೇ, ಒಂದು ತಿಂಗಳಲ್ಲಿ ಮುಗಿಯಬೇಕಾದ ನನ್ನ ವ್ರತವು ನಾಳೆಗೆ ಮುಗಿಯುತ್ತಾದ್ದರಿಂದ ಹೀಗೆ ಅಗ್ನಿಕುಂಡವನ್ನು ರಚಿಸಿದ್ದೇನೆ. ಇದು ಮುಗಿದ ಕೂಡಲೇ ನಾಳೆ ಮುಂಜಾನೆಯ ಸಮಯದಲ್ಲಿಯೇ ರಾಕ್ಷಸರಾಜನನ್ನು ಅನುಸರಿಸುವೆನು. ಎಲೈ ದೂತನೇ, ನೀನು ಹೋಗಿ ರಾಕ್ಷಸರಾಜನಿಗೆ ಈ ವಿಷಯವನ್ನು ವಿಜ್ಞಾಪಿಸು. ನಾಳೆ ಸೂರ್ಯೋದಯವಾಗುವಷ್ಟರಲ್ಲೇ ರಾಕ್ಷಸರಾಜನು ಅಲಂಕರಿಸಿಕೊಂಡು ನನ್ನನ್ನು ಕರೆದುಕೊಂಡುಹೋಗಲು ಸಿದ್ಧನಾಗಿ ಇಲ್ಲಿಗೆ ಬರಲಿ. ಎಂದು ಹೇಳಿದಳು. ॥೮೨-೮೩॥

ಶಚಿಯ ಈ ಮಾತನ್ನು ದೂತನು ನಿಜವೆಂದು ತಿಳಿದು, ಈ ವಿಚಾರವನ್ನು ರಾಕ್ಷಸರಾಜನಿಗೆ ವಿಜ್ಞಾಪಿಸಿದನು. ರಾಕ್ಷಸಾಧಿಪತಿಯು ಸಂತೋಷಪಟ್ಟು ಆ ಸಮಯವನ್ನು ಕಾಯುತ್ತಿದ್ದನು. ॥೮೪॥

ಅಥೇಂದ್ರಾಣೀ ಮಹಾಪೂಜಾಂ ಕೃತ್ವಾ ದೇವ್ಯೈ ಸಮರ್ಹಣೈಃ ।
ಏಧಾಂಸಿ ಕುಂಡೇ ನಿಕ್ಷಿಪ್ಯ ಪ್ರಜ್ವಾಲ್ಯ ಜ್ವಲಿತಾನಲೇ ॥೮೫॥

ಧ್ಯಾತ್ವಾ ಗೌರೀಂ ಭಕ್ತಿಯುತಾ ಸ್ವದೇಹಂ ಹೋತುಮಿಚ್ಛಯಾ ।
ಸೂರ್ಯೋದಯಂ ಸಮಾಲಕ್ಷ್ಯ ಪರಿಕ್ರಮ್ಯ ಚ ಪಾವಕಮ್ ॥೮೬॥

ಬದ್ಧ್ವಾಽಂಜಲಿಂ ಪ್ರಣಮ್ಯಾಥ ಪ್ರಾರ್ಥಯಮಾಸ ಶಂಕರೀಮ್ ।
ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ತೇ ಸಮರ್ಪಯೇ ॥೮೭॥

ಇಮಂ ದೇಹಂ ತೇನ ದೇವೀ ಪ್ರೀತಾಽಸ್ತು ಪರದೇವತಾ ।
ಇತಿ ಪ್ರಾರ್ಥ್ಯ ಶಚೀ ಯಾವತ್ಪಾವಕೇ ದೇಹಪಾತನಮ್ ॥೮೮॥

ನಾಂಭಂತೀ ತಾವದಾಕಾಶೇ ವಜ್ರನಿಷ್ಪೇಷನಿಷ್ಠುರಮ್ ।
ಅಕಸ್ಮಾದಭವದ್ಘೋರನಿಸ್ವನೋಽತಿಭಯಂಕರಃ ॥೮೯॥

ತಂ ಶ್ರುತ್ವಾ ಚ ಮಹಾಶಬ್ದಂ ಅಪಶ್ಯದ್ಗಗನಾಂಗಣೇ ।
ಸಿಂಹಂ ಸುವರ್ಣಸಂಕಾಶಂ ಶೈಲರಾಜಮಿವೋನ್ನತಮ್ ॥೯೦॥

---

ಅನಂತರದಲ್ಲಿ ಶಚೀದೇವಿಯೂ ಕೂಡ, ಶ್ರೇಷ್ಠವಾದ ಪೂಜಾದ್ರವ್ಯಗಳಿಂದ ಗೌರೀದೇವಿಗೆ ಮಹಾಪೂಜೆಯನ್ನೂ ಮಾಡಿ, ಸಮಿತ್ತು ಕಟ್ಟಿಗೆಗಳನ್ನು ಅಗ್ನಿ ಕುಂಡಕ್ಕೆ ಹಾಕಿ ಉರಿಯುತ್ತಿರುವ ಬೆಂಕಿಯನ್ನು ಇನ್ನೂ ಹೆಚ್ಚಾಗಿ ಜ್ವಲಿಸುವಂತೆ ಮಾಡಿ, ಬಹಳ ಭಕ್ತಿಯಿಂದ ಗೌರೀದೇವಿಯನ್ನು ಧ್ಯಾನಮಾಡಿ ತನ್ನ ದೇಹವನ್ನು ಅಗ್ನಿಯಲ್ಲಿ ಹೋಮಮಾಡಲು ಇಚ್ಛೆಯಿಂದ ಸೂರ್ಯೋದಯವಾದುದನ್ನು ನೋಡಿ ಅಗ್ನಿಯನ್ನು ಸುತ್ತುಕಟ್ಟಿ, ಕೈಜೋಡಿಸಿ ನಮಸ್ಕರಿಸಿ, ಶಂಕರಪತ್ನಿಯಾದ ಗೌರಿ ಯನ್ನು ಕುರಿತು "ಓ ಮಹಾದೇವಿಯೇ, ಶಿವನ ಪತ್ನಿಯೇ, ನಿನಗೆ ನಮಸ್ಕಾರ ಗಳು. ಈ ನನ್ನ ದೇಹವನ್ನು ನಿನಗೆ ಸಮರ್ಪಿಸಿರುವೆನು ! ಎಂದಳು.॥೮೫-೮೬-೮೭॥

ನನ್ನ ದೇಹವನ್ನು ದೇವಿಗೆ ಅರ್ಪಿಸುವೆನು. ಇದರಿಂದ ಪರದೇವತೆಯಾದ ಗೌರೀದೇವಿಯು ಸಂತುಷ್ಟಳಾಗಲಿ." ಎಂದು ಶಚಿಯು ಪ್ರಾರ್ಥಿಸಿ, ತನ್ನ ದೇಹ ವನ್ನು ಅಗ್ನಿಯಲ್ಲಿ ಬೀಳಿಸುವಷ್ಟರಲ್ಲೇ ಆಕಾಶದಲ್ಲಿ ಶಿಡಿಲಿಗೆ ಸಮನಾಗಿ ಅತ್ಯಂತ ಭಯಂಕರವಾದ ಶಬ್ದವು ಅಕಸ್ಮಾತ್ತಾಗಿ ಕೇಳಿಸಿತು ! ಶಚಿಯು ಈ ಮಹಾಶಬ್ದ ವನ್ನು ಕೇಳಿ ಆಕಾಶಪ್ರದೇಶದಲ್ಲಿ ಕತ್ತೆತ್ತಿ ನೋಡಲು ಆಕೆಯು ಚಿನ್ನಕ್ಕೆ ಸಮಾನ

ತಸ್ಯೋಪರಿ ಮಹಾದೇವೀಂ ಪೂಜ್ಯಮೂರ್ತಿಸಮಾಕೃತಿಮ್ ।
ದೃಷ್ಟ್ವಾ ನಮಸ್ಕೃತ್ಯ ಶಚೀ ಹರ್ಷವ್ಯಾಕುಲಿತಾಂತರಾ ॥೯೧॥

ಅಥ ತಂ ಶಬ್ದಮಾಕರ್ಣ್ಯ ತಾರಕೇಯೋಽಸುರೇಶ್ವರಃ ।
ಖಡ್ಗಹಸ್ತಸ್ತಂ ನಿನದಮನುಸುಪ್ರಾದ್ರವದಂಬರೇ ॥೯೨॥

ದೃಷ್ಟ್ವಾ ಜಘಾನ ಖಡ್ಗೇನ ತಂ ಸಿಂಹಂ ಮೂರ್ಧ್ನಿ ಕೋಪಿತಃ ।
ಪತಿತಃ ಸಿಂಹಮೂರ್ಧ್ನ್ಯಾಶು ಪಫಾಲ ಶತಧಾಽಽಯುಧಮ್ ॥೯೩॥

ಅಥ ಗೌರೀ ಸಮಾಲೋಕ್ಯ ದೈತ್ಯಂ ರೋಷಾರುಣೇಕ್ಷಣಾ ।
ಜಘಾನ ಹೃದಿ ಶೂಲೇನ ಭಿನ್ನವಕ್ಷಾಃ ಪಪಾತ ಹ ॥೯೪॥

---

ವಾದ ಬಣ್ಣವುಳ್ಳ ಪರ್ವತರಾಜನಂತೆ ಉನ್ನತವಾದ ಸಿಂಹವನ್ನು ಕಂಡಳು. ॥೮೮-೮೯-೯೦॥

ಆ ಸಿಂಹದ ಮೇಲೆ ಮಂಡಿಸಿದ್ದ, ಶಿವನ ಪತ್ನಿಯಾದ, ಭಕ್ತಿಯಿಂದ ತಾನು ಪೂಜಿಸುತ್ತಿದ್ದ ಮೂರ್ತಿಗೆ ಸಮಾನವಾದ ಸ್ವರೂಪವುಳ್ಳ, ಗೌರೀದೇವಿಯನ್ನು ನೋಡಿ, ಆಕೆಗೆ ನಮಸ್ಕರಿಸಿ ಶಚೀದೇವಿಯು ಅನಿರೀಕ್ಷಿತವೂ, ಅಪರಿಮಿತವೂ ಆದ ಸಂತೋಷದಿಂದ ವ್ಯಾಕುಲವಾದ ಮನಸುಳ್ಳವಳಾದಳು. ॥೯೧॥

ಅನಂತರದಲ್ಲಿ ಈ ಶಬ್ದವನ್ನು ಕೇಳಿ ರಾಕ್ಷಸರಾಜನಾದ ತಾರಕಾಸುರನು ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು ಆ ಶಬ್ದವು ಕೇಳಿಸಿದ ಮಾರ್ಗವನ್ನನುಸರಿಸಿ ಆಕಾಶದಲ್ಲಿ ಓಡಿದನು. ॥೯೨॥

ರಾಕ್ಷಸರಾಜನು ಅಲ್ಲಿ ಸಿಂಹವನ್ನು ನೋಡಿ ಅತ್ಯಂತ ಕೋಪದಿಂದ, ತನ್ನ ಖಡ್ಗಶಕ್ತಿಯಿಂದ ಅದರ ತಲೆಗೆ ಹೊಡೆದನು. ಆ ಕತ್ತಿಯು ಅದರಮೇಲೆ ಬಿದ್ದು ಆ ಶಕ್ತಿಯೇ ನೂರು ಚೂರಾಯಿತು. ॥೯೩॥

ಆ ಮೇಲೆ ಗೌರೀದೇವಿಯು ರಾಕ್ಷಸನನ್ನು ನೋಡಿ ಕೋಪದಿಂದ ಕೆಂಪೇರಿದ ಕಣ್ಣುಳ್ಳವಳಾಗಿ ಶೂಲದಿಂದ ಅವನ ಹೃದಯಕ್ಕೆ ಹೊಡೆದಳು. ವಕ್ಷಃಸ್ಥಳವು ಸೀಳಿ ಅವನು ಬಿದ್ದುಬಿಟ್ಟನು. ॥೯೪॥

ಅಥ ಶೀಘ್ರಂ ಸಮುತ್ಥಾಯ ದೈತ್ಯೋಽಂತರ್ಧಿಂ ಸಮಾಗತಃ ।
ಕ್ಷಣೇನೈವ ಮಹಾಸೈನ್ಯಂ ಸಸರ್ಜಾಽಕಾಶಮಂಡಲೇ ॥೯೫॥

ಅಥಾಽಭವನ್ ಮಹಾಯುದ್ಧಂ ಭವಾನೀದೈತ್ಯಸೇನಯೋಃ ।
ಗೌರೀನಿಶ್ವಾಸಸಂಭೂತಾ ಮಾತೃಕಾ ಮನ್ಯುದೀಪಿತಾಃ ॥೯೬॥

ಕೋಟಿಕೋಟಿಗಣೈರ್ಯುಕ್ತಾ ಯುಯುಧುರ್ದೈತ್ಯಸೇನಯಾ ।
ಮಾತೃಕಾಭಿಃ ಸ್ವೀಯಸೇನಾಂ ಪ್ರನಷ್ಟಾಂ ಪ್ರೇಕ್ಷ್ಯ ದೈತ್ಯರಾಟ್ ॥೯೭॥

ಭೂಯಃ ಸಸರ್ಜ ಪರಮಂ ದೈತ್ಯಸೈನ್ಯಂ ಮಹತ್ತರಮ್ ।
ನಿಮಿಷೇಣೈವ ತದಪಿ ಮಾತೃಕಾಭಿರ್ವಿನಾಶಿತಮ್ ॥೯೮॥

ಅಥ ದೈತ್ಯಪತಿರ್ಮತ್ವಾ ಮಾತೃಕಾ ಬಲವತ್ತರಾಃ ।
ಸಸರ್ಜ ತ್ರ್ಯಂಬಕಂ ದೇವಂ ಶಿವಂ ಚಂದ್ರಾವತಂಸಕಮ್ ॥೯೯॥

---

ಅನಂತರದಲ್ಲಿ ಆ ರಾಕ್ಷಸನು ಶೀಘ್ರವಾಗಿ ಮೇಲಕ್ಕೆದ್ದು ಅಂತರ್ಧಾನವನ್ನು ಹೊಂದಿ ಒಂದು ಕ್ಷಣಕಾಲದಲ್ಲಿಯೇ ಆಕಾಶಮಂಡಲದಲ್ಲಿ ತನ್ನ ಮಹಾಸೈನ್ಯವನ್ನು ಸೃಷ್ಟಿಸಿ ಕಳುಹಿಸಿದನು. ॥೯೫॥

ತರುವಾಯ ಗೌರಿಗೆ ಮತ್ತು ರಾಕ್ಷಸನ ಸೈನ್ಯಗಳಿಗೆ ಮಹಾಯುದ್ಧವು ನಡೆಯಿತು. ಗೌರಿಯು ನಿಟ್ಟುಸಿರನ್ನು ಬಿಟ್ಟಕೂಡಲೇ ಅನೇಕ ತಾಯಿಯರು ಹುಟ್ಟಿ ರಾಕ್ಷಸನ ಸೈನ್ಯದ ಮೇಲೆ ನುಗ್ಗಿ ಕೋಪದಿಂದ ಉರಿಯುತ್ತಿದ್ದರು. ॥೯೬॥

ಅನೇಕಕೋಟಿ ಸಂಖ್ಯೆಯಲ್ಲಿದ್ದ ಗಣಗಳಿಂದ ಕೂಡಿದವರಾಗಿ ಈ ತಾಯಿಯರು ರಾಕ್ಷಸಸೈನ್ಯದೊಡನೆ ಕಾದಾಡಿದರು. ರಾಕ್ಷಸರಾಜನು ತಾಯಿಯರೊಂದಿಗೆ ಯುದ್ಧಮಾಡಿ ತನ್ನ ಸೈನ್ಯವು ನಾಶವಾಗುತ್ತಿರುವುದನ್ನು ಕಂಡನು. ॥೯೭॥

ರಾಕ್ಷಸನು ಮಹತ್ತರವಾದ ತನ್ನ ಮತ್ತೊಂದು ಸೈನ್ಯವನ್ನು ಕೂಡಲೇ ಹುಟ್ಟಿಸಿದನು. ತಾಯಿಯವರು ಆ ಸೈನ್ಯವನ್ನೂ ನಿಮಿಷಮಾತ್ರದಲ್ಲಿಯೇ ನಾಶ ಮಾಡಿದರು. ॥೯೮॥

ಆ ಬಳಿಕ ರಾಕ್ಷಸರಾಜನು, ಆ ತಾಯಿಯರು ಬಹಳ ಬಲಿಷ್ಠರೆಂದು ತಿಳಿದು ಚಂದ್ರಶೇಖರನಾದ, ಮುಕ್ಕಣ್ಣನಾದ ಶಿವನನ್ನೇ ಸೃಷ್ಟಿಮಾಡಿದನು. ಆ ಶಿವನು

ಸ ಶಿವಃ ಶೂಲಮುದ್ಯಮ್ಯ ಗೌರ್ಯಾ ಯೋದ್ಧುಂ ಸಮಾಯಯೌ ।
ತಂ ದೃಷ್ಟ್ವಾ ಮಾತೃಕಾಃ ಸರ್ವಾ ಬಭೂವುರ್ನ್ಯಸ್ತಹೇತಿಕಾಃ ॥೧೦೦॥

ಮತ್ವಾ ಗೌರೀ ಪತಿಂ ಶಂಭುಮಥ ಸಾ ಶಂಕರೀ ಜಗೌ ।
ನಾಽಯಂ ಶಿವೋ ಮಮ ಪತಿರೇಷ ದೈತ್ಯವಿನಿರ್ಮಿತಃ ॥೧೦೧॥

ಅಸಾಂಪ್ರತಂ ಹಿ ಶಸ್ತ್ರಸ್ಯ ಹಾನಂ ಮಾಯಾವಿನಾಂ ರಣೇ ।
ಇತ್ಯುಕ್ತ್ವಾ ಮಾತೃಕಾ ಮೋಹ ನಾಶನಾಯ ಮಹೇಶ್ವರೀ ॥೧೦೨॥

ಸಸ್ಮಾರ ಶಂಕರಂ ದೇವಂ ಸೋಽಪಿ ಸ್ಮರಣಮಾತ್ರತಃ ।
ಆವಿರಾಸೀಚ್ಛೂಲಪಾಣಿಃ ಪಾರ್ಷದೈಃ ಪರಿವಾರಿತಃ ॥೧೦೩॥

ದೃಷ್ಟ್ವಾ ಪಿನಾಕಿನಂ ತಾ ವೈ ಯುಯುಧು ರ್ಧೃತಹೇತಿಕಾಃ ।
ಅಥ ಬ್ರಹ್ಮಾದಯೋ ದೇವಾ ಯಕ್ಷಾಃ ಗಂಧರ್ವಕಿನ್ನರಾಃ ॥೧೦೪॥

---

ಶೂಲವನ್ನೆತ್ತಿಕೊಂಡು ಗೌರಿಯೊಂದಿಗೆ ಯುದ್ಧಮಾಡಲು ಬಂದನು. ಇವನನ್ನು ನೋಡಿ, ಎಲ್ಲಾ ತಾಯಿಯರೂ ತಮ್ಮ ಕತ್ತಿಗಳನ್ನು ಕೆಳಗಿಟ್ಟುಬಿಟ್ಟರು.॥೯೯-೧೦೦॥

ಅನಂತರದಲ್ಲಿ ಗೌರಿಯು ತನ್ನ ಪತಿಯಾದ ಶಿವನೇ ಇವನಿರಬಹುದೇ ಎಂದು ಯೋಚಿಸಿ, ಕೊನೆಗೆ ಆಕೆಯು ತಾಯಿಯರಿಗೆ " ಈ ಶಿವನು ನನ್ನ ಪತಿಯಲ್ಲ! ಇವನು ರಾಕ್ಷಸನಿಂದ ಸೃಷ್ಟಿಸಲ್ಪಟ್ಟಿರುವ ಕೃತಕಶಿವನಾಗಿದ್ದಾನೆ! ಎಂದು ಹೇಳಿದಳು. ॥೧೦೧॥

ಯುದ್ಧದಲ್ಲಿ ಮಾಯಾವಿಗಳಾದ ಜನರ ಮುಂದೆ ಶಸ್ತ್ರಗಳನ್ನು ಹೀಗೆ ಕೆಳಗಿಳಿಸುವುದು ಯುಕ್ತವಲ್ಲ." ಎಂದು ಗೌರಿಯು ಹೇಳಿ, ಶಂಕರನ ಪತ್ನಿಯಾದ ಗೌರಿಯು ತಾಯಿಯರ ಅಜ್ಞಾನವನ್ನು ನಾಶಮಾಡಲು ಈ ರೀತಿಯಲ್ಲಿ ಮಾಡಿದಳು. ॥೧೦೨॥

ಗೌರಿಯು ಕೂಡಲೇ ತನ್ನ ಪತಿಯಾದ ಶಿವನನ್ನು ಸ್ಮರಿಸಿದಳು. ಅವನೂ ಕೂಡ ಗೌರಿಯು ಸ್ಮರಿಸಿದ ಕೂಡಲೇ, ಶೂಲವನ್ನು ಕೈಯಲ್ಲಿ ಹಿಡಿದುಕೊಂಡು ತನ್ನ ಪರಿವಾರದೊಂದಿಗೆ ಕೂಡಿದವನಾಗಿ ಅಲ್ಲಿ ಕಾಣಿಸಿಕೊಂಡನು. ॥೧೦೩॥

ಆ ತಾಯಿಯರು, ನಿಜವಾದ ಶಿವನು ಬಂದದ್ದನ್ನು ಕಂಡು ತಂತಮ್ಮ ಆಯುಧಗಳನ್ನು ತೆಗೆದುಕೊಂಡು ರಾಕ್ಷಸನ ಸೈನ್ಯದೊಂದಿಗೆ ಯುದ್ಧಮಾಡಲು ಪ್ರಾರಂಭಿಸಿದರು. ಅನಂತರದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳೂ, ಯಕ್ಷರೂ, ಗಂಧರ್ವರೂ, ಕಿನ್ನರರೂ ಅಲ್ಲಿಗೆ ಬಂದರು. ॥೧೦೪॥

ನಾಗಾ ಗಣಾಶ್ಚಾಪ್ಸರಸಃ ಸಿದ್ಧಾಃ ಕಿಂಪುರುಷಾ ಅಪಿ ।
ಅಭ್ಯಾಗಮನ್ ದೈತ್ಯರಾಜಗೌರ್ಯೋರ್ಯುದ್ಧದಿದೃಕ್ಷವಃ ॥೧೦೫॥

ಅಥಾಽಭವದ್ದೈತ್ಯಪತಿಗೌರ್ಯೋಃ ಪರಮದಾರುಣಂ ।
ಯುದ್ಧಂ ತತ್ರಾಽಸುರಪತಿಃ ಸೇನಾಂ ಚ ಬಹುಧಾಽಸೃಜತ್ ॥೧೦೬॥

ಸೃಷ್ಟಮಾತ್ರಂ ಕ್ಷಣೇನೈವ ಮಾತೃಕಾಭಿರ್ವಿನಾಶ್ಯತೇ ।
ಅಥ ಸ್ವಸೃಷ್ಟಾಽಂಡಗಣೇ ಪ್ರವಿಲೀಯತ ಚಾಽಸುರಃ ॥೧೦೭॥

ವಿದಿತ್ವಾಽಂಡೇ ವಿಲೀನಂ ತಂ ಸಂಕ್ರುದ್ಧಾ ಶಂಕರೀ ತದಾ ।
ಅಥ ಕ್ರೋಧಾತ್ಸಮುತ್ಪನ್ನಾ ಮಹಾಕಾಲೀ ವಿಭೀಷಣಾ ॥೧೦೮॥

ದಿಗಂಬರಾ ಮುಕ್ತಕೇಶೀ ಮುಂಡಮಾಲಾ ವಿಭೂಷಿತಾ ।
ಕರವಾಲಕರಾ ತಾಂ ಚ ದೃಷ್ಟ್ವಾ ಪ್ರೋವಾಚ ಶಂಕರೀ ॥೧೦೯॥

---

ಆಗ ನಾಗಲೋಕದವರೂ, ಪ್ರಮಥಗಣಗಳೂ, ಅಪ್ಸರಸ್ಸುಗಳೂ, ಸಿದ್ಧರೂ, ಕಿಂಪುರುಷರೂ, ರಾಕ್ಷಸರಾಜ ಮತ್ತು ಗೌರೀದೇವಿಯರ ಯುದ್ಧವನ್ನು ನೋಡಲು ಬಯಸಿ ಅಲ್ಲಿಗೆ ಬಂದರು. ॥೧೦೫॥

ಅನಂತರದಲ್ಲಿ ರಾಕ್ಷಸರಾಜ ಮತ್ತು ಗೌರೀದೇವಿಯರಿಗೆ ಬಹಳ ಭಯಂಕರವಾದ ಯುದ್ಧವು ನಡೆಯಿತು! ಈ ಸಂದರ್ಭದಲ್ಲಿ ರಾಕ್ಷಸರಾಜನು ತನ್ನ ಸೈನ್ಯವನ್ನು ಬೇಕಾದಷ್ಟು ಸೃಷ್ಟಿಸುತ್ತಲೇ ಇದ್ದನು. ॥೧೦೬॥

ಹೀಗೆ ರಾಕ್ಷಸನು ಸೈನ್ಯಗಳನ್ನು ಸೃಷ್ಟಿಸಿದ ಕೂಡಲೇ ಗೌರಿಯು ಅವುಗಳೆಲ್ಲವನ್ನೂ ನಾಶಮಾಡುತ್ತಿದ್ದಳು. ತರುವಾಯ ರಾಕ್ಷಸನು ತಾನೇ ಸೃಷ್ಟಿಮಾಡಿದ ಬ್ರಹ್ಮಾಂಡವೊಂದರಲ್ಲಿ ತಾನೂ ಗುಂಪಿನಲ್ಲಿ ಅಡಗಿಕೊಂಡನು. ॥೧೦೭॥

ಆಗ ಶಂಕರನ ಪತ್ನಿಯಾದ ಗೌರಿಯು ರಾಕ್ಷಸನು ಬ್ರಹ್ಮಾಂಡವೊಂದರಲ್ಲಿ ಅಡಗಿಕೊಂಡದ್ದನ್ನು ನೋಡಿ ಬಹಳ ಕೋಪಗೊಂಡಳು. ಆಗ ಭಯಂಕರವಾದ ಕಾಳಿಕಾದೇವಿಯು ಹುಟ್ಟಿದಳು. ॥೧೦೮॥

ಆ ಕಾಳಿಯು ದಿಗಂಬರಳಾಗಿ ಕೂದಲುಗಳನ್ನು ಕೆದರಿಕೊಂಡು ಮುಂಡಗಳ ಮಾಲೆಯನ್ನು ಅಲಂಕಾರಕ್ಕಾಗಿ ಧರಿಸಿ, ಕತ್ತಿಯನ್ನು ಕೈಯ್ಯಲ್ಲಿ ಹಿಡಿದಿದ್ದಳು. ಗೌರಿಯು ಆ ಮಹಾಕಾಳಿಯನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೧೦೯॥

ಕಾಲಿ ಶೀಘ್ರಂ ದೈತ್ಯಸೃಷ್ಟಾನ್ಯಂಡಾನಿ ಧ್ವಂಸಯೇತಿ ವೈ ।
ಶ್ರುತ್ವಾ ನಿರ್ಗತ್ಯ ಸಾ ಕಾಲೀ ಬ್ರಹ್ಮಾಂಡಾನಿ ಶತಂ ಕ್ಷಣಾತ್ ॥೧೧೦॥

ಬಿಭೇದ ಕರವಾಲೇನ ಭಕ್ಷಯಾಮಾಸ ತಾಃ ಪ್ರಜಾಃ ।
ಏವಂ ವಿನಷ್ಟೇಽಂಡಗಣೇ ದೈತ್ಯೋ ಧೃತಮಹಾಯುಧಃ ॥೧೧೧॥

ಆಜಗಾಮ ನಿಯುದ್ಧಾಯ ಸೇನಾಂ ಸ್ರಷ್ಟುಂ ಮನೋ ದಧೇ ।
ತಾವದ್ಗೌರೀ ಮಹಾದೈತ್ಯಂ ಪಾತಯಿತ್ವಾ ಮಹೀತಲೇ ॥೧೧೨॥

ಪಾದೇನಾಕ್ರಮ್ಯ ಹೃದಯೇ ಶೂಲೇನ ಶಿರ ಆಚ್ಛಿನತ್ ।
ಸ ಛಿನ್ನಮೂರ್ಧಾ ಶೂಲೇನ ವಿಗತಾಸುರಭೂತ್ತದಾ ॥೧೧೩॥

ಏವಂ ದೈತ್ಯೇಶ್ವರವಧಂ ನಿಶಮ್ಯ ವಿಧಿಮುಖ್ಯಕಾಃ ।
ಜಯೇತಿ ಶಬ್ದಂ ವ್ಯಾಜಹ್ರು ರ್ವವರ್ಷು ಕುಸುಮೈ ರ್ವೃಷಾ ॥೧೧೪॥

---

ಎಲೌ ಕಾಳಿಯೇ, ನೀನು ಶೀಘ್ರವಾಗಿ ಹೋಗಿ ಆ ರಾಕ್ಷಸನು ಸೃಷ್ಟಿಸಿರುವ ಬ್ರಹ್ಮಾಂಡಗಳನ್ನು ನಾಶಮಾಡು. ಎಂದು ಹೇಳಿದ ಗೌರಿಯ ಮಾತನ್ನು ಕೇಳಿ ಕಾಳಿಯು ರಾಕ್ಷಸನಿಂದ ಸೃಷ್ಟಿಮಾಡಲ್ಪಟ್ಟಿದ್ದ ನೂರಾರು ಅಂಡಗಳೆಲ್ಲವನ್ನೂ ಶೀಘ್ರವಾಗಿ ನಾಶಮಾಡಿದಳು. ॥೧೧೦॥

ಆ ಮಹಾಕಾಳಿಯು ತನ್ನ ಶಕ್ತಿಯಿಂದ ಆ ಬ್ರಹ್ಮಾಂಡವೆಲ್ಲವನ್ನೂ ಒಡೆದು ಹಾಕಿದಳು. ಮತ್ತು ಅಲ್ಲಿರುವ ಜನರೆಲ್ಲರನ್ನೂ ತಿಂದುಹಾಕಿದಳು. ಹೀಗೆ ರಾಕ್ಷಸನ ಬ್ರಹ್ಮಾಂಡವೆಲ್ಲವೂ ನಾಶವಾಗಲಾಗಿ, ರಾಕ್ಷಸನು ತನ್ನ ಮಹತ್ತಾದ ಆಯುಧವನ್ನು ತೆಗೆದುಕೊಂಡು ಗೌರಿಯೊಂದಿಗೆ ಯುದ್ಧಮಾಡಲು ಬಂದನು. ಮತ್ತು ಇನ್ನೂ ಹೆಚ್ಚಾಗಿ ಸೈನ್ಯವನ್ನು ಹುಟ್ಟಿಸಲು ಮನೋನಿಶ್ಚಯಮಾಡಿದನು. ಅಷ್ಟರೊಳಗಾಗಿಯೇ ಗೌರಿಯು ಆ ದೊಡ್ಡ ರಾಕ್ಷಸನನ್ನು ಕೆಳಗೆ ಬೀಳಿಸಿ, ತನ್ನ ಕಾಲುಗಳಿಂದ ಅವನನ್ನು ತುಳಿದುಕೊಂಡು ಅವನ ಹೃದಯಕ್ಕೆ ಶೂಲವನ್ನು ಪ್ರಯೋಗಿಸಿ ತಿವಿದು, ಅವನ ತಲೆಯನ್ನು ಕತ್ತರಿಸಿದಳು. ರಾಕ್ಷಸನು ಶೂಲದಿಂದ ಕತ್ತರಿಸಲ್ಪಟ್ಟ ಶರೀರವುಳ್ಳವನಾಗಿ ಪ್ರಾಣವನ್ನು ಕಳೆದುಕೊಂಡನು. ॥೧೧೧-೧೧೨-೧೧೩॥

ಹೀಗೆ ರಾಕ್ಷಸರಾಜನಾದ ತಾರಕೇಯಾಸುರನ ವಧೆಯಾದದ್ದನ್ನು ಕೇಳಿ, ಬ್ರಹ್ಮನೇ ಮೊದಲಾದವರು ಎಲೌ ದೇವಿಯೇ, ನೀನು ಹೀಗೆ ಜಯಶಾಲಿನಿಯಾಗಿ

ಸಂಸ್ತುತ್ಯ ವಿವಿಧೈಃ ಸ್ತೋತ್ರೈ ರ್ಬ್ರಹ್ಮವಿಷ್ಣುಪುರೋಗಮಾಃ ।
ಬದ್ಧಾಂಜಲಿಪುಟಾಃ ಪ್ರಾಹು ರ್ದೇವಾಸ್ತಾಂ ಸಿಂಹವಾಹಿನೀಮ್॥೧೧೫॥

ಧನ್ಯಾನಿ ದೈತ್ಯರಾಜೋಽಯಂ ಭವತ್ಯಾ ವಿನಿಪಾತಿತಃ ।
ದೇವಶತ್ರುಃ ಸರ್ವಲೋಕಕಂಟಕೋ ಬಲವತ್ತರಃ ॥೧೧೬॥

ನೇಮಂ ಹಂತುಂ ಹರಿರ್ವಾಽಪಿ ಹರೋ ವಾ ಪ್ರಭವೇತ್ ಕ್ವಚಿತ್ ।
ಕುತ ಇಂದ್ರಾದಯೋ ದೇವಾಃ ಪ್ರಭವಃ ಸ್ಯುರ್ಮಹೇಶ್ವರಿ ॥೧೧೭॥

ಅಸ್ಯ ದುಷ್ಟಸ್ಯ ಸಂಹೃತ್ಯಾ ಪಾಲಿತಂ ಪುತ್ರವಜ್ಜಗತ್ ।
ತಸ್ಮಾತ್ತ್ವಂ ಜಗದಂಬೇತಿ ಸ್ಥಾನೇ ಪ್ರತ್ಯಕ್ಪಯೋನಿಧೇಃ ॥೧೧೮॥

ತೀರೇ ಖ್ಯಾತಾ ಮಹಾದೇವಿ ಭವಿಷ್ಯಸಿ ಮಹೀತಲೇ ।
ಪೂಜಿತಾ ವಾಂಛಿತಾನರ್ಥಾನ್ಮರ್ತ್ಯಾನಾಂ ತ್ವಂ ಪ್ರಯಚ್ಛಸಿ ॥೧೧೯॥

---

ಸರ್ವೋತ್ಕೃಷ್ಟಳಾಗಿರು" ಎಂದು ಘೋಷಿಸುತ್ತಾ ಜಯಜಯಕಾರವನ್ನು ಮಾಡಿದರು. ಇಂದ್ರನು ಹೂಮಳೆಗರೆದನು. ಬ್ರಹ್ಮ, ವಿಷ್ಣು ಮೊದಲಾದವರು ಕೈಮುಗಿದುಕೊಂಡು ಸಿಂಹವಾಹನವುಳ್ಳ ಗೌರೀದೇವಿಯನ್ನು ಅನೇಕವಿಧವಾಗಿ ಸ್ತೋತ್ರಮಾಡಿದರು. ॥೧೧೪-೧೧೫॥

ಓ ಪಾರ್ವತೀದೇವಿಯೇ, ನೀನು ದೇವತೆಗಳಿಗೆ ಶತ್ರುವೂ, ಎಲ್ಲಾ ಲೋಕಕ್ಕೂ ಶತ್ರುವೂ, ಬಲಿಷ್ಠನೂ ಆದ ಈ ರಾಕ್ಷಸರಾಜನನ್ನೂ ನಾಶಮಾಡಿದ್ದೀಯೆ!" ಎಂದು ಬ್ರಹ್ಮಾದಿಗಳು ಹೇಳಿದರು. ॥೧೧೬॥

ಓ ದೇವಿಯೇ, ಈ ರಾಕ್ಷಸರಾಜನನ್ನು ಕೊಲ್ಲಲು ವಿಷ್ಣು, ಅಥವಾ ಶಿವನೂ ಸಮರ್ಥರಾಗಲಿಲ್ಲ! ಓ ಮಹೇಶ್ವರಿಯೇ, ಹೀಗಿರುವಾಗ ಇಂದ್ರಾದಿದೇವತೆಗಳೂ ಇವನನ್ನು ಕೊಲ್ಲಲು ಹೇಗೆ ಸಮರ್ಥರಾದಾರು? ॥೧೧೭॥

ಓ ಜಗನ್ಮಾತೆಯೇ, ನೀನು ಈ ದುಷ್ಟರಾಕ್ಷಸನನ್ನು ಸಂಹಾರಮಾಡಿದ್ದರಿಂದ ಈ ಪ್ರಪಂಚವನ್ನೆಲ್ಲವನ್ನೂ ಮಕ್ಕಳಂತೆ ಕಾಪಾಡಿದ ಹಾಗಾಯಿತು. ಆದುದರಿಂದ ಓ ದೇವಿಯೇ, ಈ ಪಶ್ಚಿಮಸಮುದ್ರತೀರದಲ್ಲಿಯೂ ಮತ್ತು ಎಲ್ಲ ಭೂಮಂಡಲದಲ್ಲಿಯೂ, ಜಗನ್ಮಾತೆಯೆಂದು ಪ್ರಸಿದ್ಧಳಾಗಿರುವುದು ಯುಕ್ತವೇ ಆಗಿದೆ. ಮತ್ತು ಇನ್ನುಮೇಲೆಯೂ ನೀನು ಎಲ್ಲೆಲ್ಲಿಯೂ ಪ್ರಸಿದ್ಧಳಾಗಿರುವೆ ಮತ್ತು ಭಕ್ತರಿಂದ

ಇತಿ ಸಂಸ್ತುತ್ಯ ನತ್ವಾ ತೇ ಪ್ರಯಯು ರ್ನಿಜಮಂದಿರಮ್ ।
ಅಥೇಂದ್ರಾಣ್ಯಪಿ ತತ್ರೈವ ಯತ್ರ ದೈತ್ಯೋ ನಿಪಾತಿತಃ ॥೧೨೦॥

ಅಭ್ಯಾಗತ್ಯ ಪ್ರಣಮ್ಯಾಂಬಾ ಮಾಹ ವಾಕ್ಯಂ ಕೃತಾಂಜಲಿಃ ।
ಗೌರ್ಯಹಂ ದುಃಖಜಲಧಿನಿಮಗ್ನಾಽಭ್ಯುದ್ಧೃತಾ ತ್ವಯಾ ॥೧೨೧॥

ಪ್ರಣತಾಽಸ್ಮಿ ಜಗದ್ಧಾತ್ರಿ ಗೌರಿ ದೀನಾಽಽರ್ತಿಹಾರಿಣಿ ।
ಇತ್ಯುಕ್ತ್ವಾ ಪಾದಯೋರಗ್ರೇ ಪ್ರಣತಾ ದೇವರಾಟ್ಪ್ರಿಯಾ ॥೧೨೨॥

ಅಥ ಗೌರೀ ಶಚೀಂ ಪ್ರಾಹ ಸಂತುಷ್ಟಾ ಸ್ಮಿತಪೂರ್ವಕಂ ।
ಇಂದ್ರಾಣ್ಯಹಂ ಪ್ರಸನ್ನಾಽಸ್ಮಿ ವರಂ ಬ್ರೂಹ್ಯಭಿವಾಂಛಿತಂ ॥೧೨೩॥

---

ಪೂಜಿಸಲ್ಪಟ್ಟವಳಾಗಿ ಅವರಿಗೆಲ್ಲರಿಗೂ ಇಷ್ಟಾರ್ಥಗಳನ್ನು ನೀನು ಕರುಣೆಯಿಂದ ನೀಡುವೆ. ॥೧೧೮-೧೧೯॥

ಹೀಗೆ ಬ್ರಹ್ಮಾದಿದೇವತೆಗಳು ಗೌರೀದೇವಿಯನ್ನು ಸ್ತೋತ್ರಮಾಡಿ ತಂತಮ್ಮ ಮನೆಗಳನ್ನು ಕುರಿತು ತೆರಳಿದರು. ತರುವಾಯ ಶಚೀದೇವಿಯೂ ಕೂಡ, ರಾಕ್ಷಸನು ನಾಶವಾಗಿ ಬಿದ್ದಿದ್ದ ಕಡೆಗೆ ಬಂದು ಕೈಜೋಡಿಸಿಕೊಂಡು ಲೋಕಮಾತೆಯಾದ ದೇವಿಯನ್ನು ಕುರಿತು, ಈ ರೀತಿಯಲ್ಲಿ ಹೇಳಿದಳು. ಓ ಮಾತೆಯೇ, ನೀನು ದುಃಖಸಾಗರದಲ್ಲಿ ಮುಳುಗಿದ್ದ ನನ್ನನ್ನು ಅಲ್ಲಿಂದ ಉದ್ಧರಿಸಿ ಕಾಪಾಡಿದ್ದೀಯೆ. ॥೧೨೦-೧೨೧॥

ಓ ಗೌರೀದೇವಿಯೇ, ನೀನು ಲೋಕಸಂರಕ್ಷಕಳೂ ದೀನರಾದ ಜನರ ಸಂಕಟಗಳನ್ನು ನಿವಾರಿಸುವವಳೂ ಆಗಿದ್ದೀಯೆ! ಇಂಥಾ ನಿನಗೆ ನಮಸ್ಕಾರ ಮಾಡುವೆನು" ಎಂದು ಶಚೀದೇವಿಯು ಹೇಳಿ ಗೌರಿಯ ಚರಣಗಳಿಗೆ ನಮಸ್ಕಾರ ಮಾಡಿದಳು. ॥೧೨೨॥

ಬಳಿಕ ಗೌರಿಯೂ ಸಂತೋಷಪಟ್ಟು ಮುಗುಳುನಗೆಯೊಡನೆ ಶಚೀದೇವಿಯನ್ನು ಕುರಿತು "ಎಲೌ ಶಚೀದೇವಿಯೇ, ನಿನಗೆ ನಾನು ಪ್ರಸನ್ನಳಾಗಿದ್ದೇನೆ, ನಿನಗೆ ಇಷ್ಟವಾದ ವರವನ್ನು ಬೇಡಿಕೋ." ಎಂದಳು. ॥೧೨೩॥

ತಚ್ಛ್ರುತ್ವಾ ವಚನಂ ದೇವ್ಯಾಃ ಶಚೀ ಪ್ರೋವಾಚ ಸನ್ನತಾ ।
ದೇವಿ ತುಷ್ಟಾ ಯದಿ ಮಮ ವರಂ ದೇಹಿ ಮಮೇಪ್ಸಿತಂ ॥೧೨೪॥

ಮಹಾಽಪತ್ಸು ಸ್ತುತಾ ಯೇನ ನಾಮ್ನಾಽಷ್ಟಶತಕಾಽತ್ಮನಾ ।
ಸ್ತ್ವಮೇನ ತಂ ಮಹಾಽಪದ್ಭ್ಯಃ ಸಮುಭ್ಯುದ್ಧರ ಮಾಮಿವ ॥೧೨೫॥

ತ್ವತ್ಪಾದ ಪದ್ಮಯೋರ್ಭಕ್ತಿರ್ಭೂಯಾನ್ಮಮ ಸುನಿಶ್ಚಲಾ ।
ಅಥ ಗೌರೀ ಪ್ರಾಹ ಶಚೀಂ ಪ್ರಸನ್ನಾ ವಚನಂ ಶುಭಂ ॥೧೨೬॥

ಇಂದ್ರಾಣಿ ಯತ್ತ್ವಯಾ ಪ್ರೋಕ್ತಂ ತತ್ತಥೈವಾಽಸ್ತು ಸರ್ವದಾ ।
ವ್ರಜ ಸ್ವಂ ಸ್ಥಾನಮಿತ್ಯುಕ್ತ್ವಾ ಚಾಽಂತರ್ಧಾನಂ ಜಗಾಮ ಸಾ ॥೧೨೭॥

ಇತಿ ತೇ ವೀರ್ಯಮಾಖ್ಯಾತಂ ಗೌರ್ಯಾಃ ಸರ್ವೋತ್ತಮೋತ್ತಮಂ।
ಶೃಣ್ವತಾಂ ಪಾಪಶಮನಂ ಗೌರೀಂ ತಾಂ ನಗ ಪೂಜಯ ॥೧೨೮॥

---

ಗೌರೀದೇವಿಯು ಹೇಳಿದ ಮಾತನ್ನು ಶಚೀದೇವಿಯು ಕೇಳಿ, ಆಕೆಗೆ ಮಣಿದು, ಅವಳನ್ನು ಕುರಿತು, "ಓ ದೇವಿಯೇ, ನೀನು ನನ್ನನ್ನು ಮೆಚ್ಚಿದ್ದರೆ ನನಗೆ ಇಷ್ಟವಾದ ಈ ವರವನ್ನು ನನಗೆ ಕೊಡು." ಎಂದು ಹೇಳಿದಳು. ॥೧೨೪॥

ಓ ಗೌರೀದೇವಿಯೇ, ನನಗೆ ಪ್ರಾಪ್ತವಾಗಿದ್ದ ಮಹತ್ತಾದ ಕಷ್ಟಸಮಯದಲ್ಲಿ ನಿನ್ನನ್ನು ನಿನ್ನ ನೂರೆಂಟು ನಾಮಗಳನ್ನು ಜಪಿಸುವುದರ ಮೂಲಕ ಸ್ತೋತ್ರಮಾಡಿ ಈ ಸಂಕಟದಿಂದ ಪಾರಾಗಿದ್ದೇನೆ. ಓ ದೇವಿಯೇ, ಈಗ ನಾನು ಯಾರಿಗೋಸ್ಕರ ನಿನ್ನನ್ನು ಪೂಜಿಸಿದೆನೋ ಅಂಥಾ ನನ್ನ ಪತಿಯನ್ನೂ, ನನ್ನನ್ನು ಉದ್ಧಾರಮಾಡಿ ದಂತೆಯೇ, ದಯವಿಟ್ಟು ಉದ್ಧರಿಸು. ಮತ್ತು ನಿನ್ನ ಪಾದಕಮಲಗಳಲ್ಲಿ ನನಗೆ ಭಕ್ತಿಯು ಸ್ಥಿರವಾಗಿರಲಿ. ಎಂದು ಶಚೀದೇವಿಯು ಪ್ರಾರ್ಥಿಸಿದಳು. ಅನಂತರ ಪ್ರಸನ್ನಳಾಗಿ ಗೌರೀದೇವಿಯು ಮಂಗಳಕರವಾದ ಮಾತನ್ನು ಶಚೀದೇವಿಯನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೧೨೫-೧೨೬॥

ಎಲೌ ಶಚೀದೇವಿಯೇ, ನೀನು ಹೇಗೆ ನನ್ನನ್ನು ಬೇಡಿದೆಯೋ, ಅವೆಲ್ಲವೂ ಹಾಗೆಯೇ ಆಗಲಿ. ಇನ್ನು ನೀನು ನಿನ್ನ ಸ್ಥಾನವನ್ನು ಕುರಿತು ತೆರಳು. ಎಂದು ಹೇಳಿ ಗೌರೀದೇವಿಯು ಅಂತರ್ಧಾನವಾದಳು. ॥೧೨೭॥

ಎಲೈ ಹಿಮವಂತನೇ, ಗೌರೀದೇವಿಯ ಅತ್ಯಂತ ಶ್ರೇಷ್ಠವೂ, ಕೇಳುವವರ

**ಇತ್ಯುಕ್ತ್ವಾ ಹಿಮಶೈಲಾಯ ಗೌರ್ಯಾ ವೀರ್ಯಕಥಾಂ ಶುಭಾಮ್ ।**
**ಯಯೌ ಶೈಲಾಽಭ್ಯನುಜ್ಞಾತೋ ನಾರದೋಽಂಬರಮಾರ್ಗತಃ ॥೧೨೯॥**

**ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ**
**ಸಪ್ತವಿಂಶೋಽಧ್ಯಾಯಃ**

---

ಪಾಪಗಳನ್ನು ಹೋಗಲಾಡಿಸುವ ಶೌರ್ಯದ ಕಥೆಯನ್ನು ಹೇಳಿದ್ದೇನೆ. ಇಂಥಾ ಗೌರಿಯನ್ನು ನೀನೂ ಪೂಜಿಸು. ॥೧೨೮॥

ಗೌರಿಯ ಮಂಗಳಕರವಾದ ಈ ಶೌರ್ಯದ ಕಥೆಯನ್ನು ಹಿಮವಂತನಿಗೆ ಹೇಳಿ, ಹಿಮವಂತನ ಅಪ್ಪಣೆಯನ್ನು ಪಡೆದು, ನಾರದನು ಆಕಾಶಮಾರ್ಗದಿಂದ ಹೊರಟುಹೋದನು. ॥೧೨೯॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಗೌರಿಯ ಉಪಾಖ್ಯಾನದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಅಷ್ಟವಿಂಶತಿತಮೋಽಧ್ಯಾಯಃ ॥

### ಇಪ್ಪತ್ತೆಂಟನೆಯ ಅಧ್ಯಾಯವು

ಇತಿ ಶ್ರುತ್ವಾ ಕಥಾಂ ಪುಣ್ಯಾಂ ಗೌರೀವೀರ್ಯ ವಿಚಿತ್ರಿತಾಂ ।
ಅಪೃಚ್ಛದ್ಭಾರ್ಗವೋ ಭೂಯೋ ದತ್ತಾತ್ರೇಯಂ ಮಹಾಮುನಿಂ॥೧॥

ಭಗವನ್ನದ್ಭುತತಮಂ ಗೌರ್ಯಾ ವೀರ್ಯಮುದಾಹೃತಂ ।
ಶೃಣ್ವತೋ ನ ಹಿ ಮೇ ತೃಪ್ತಿಃ ಕಥಾಂ ತೇ ಮುಖ ನಿಸ್ಸೃತಾಂ ॥೨॥

ಗೌರ್ಯಾ ನಾಮಾಷ್ಟಶತಕಂ ಯಚ್ಚಪೃಚ್ಛೈಧಿಷಣೋ ಜಗೌ ।
ತನ್ಮೇ ಕಥಯ ಯಚ್ಛ್ರೋತುಂ ಮನೋ ಮೇಽತ್ಯಂತಮುತ್ಸುಕಂ॥೩॥

---

ಗೌರಿಯು ಪರಾಕ್ರಮವನ್ನು ತೋರಿಸಿದ ಅತ್ಯಂತ ಪುಣ್ಯಕರವಾದ ಈ ಕಥೆಯನ್ನು ಕೇಳಿ ಪರಶುರಾಮನು ಮಹಾಮುನಿಯಾದ ದತ್ತಾತ್ರೇಯನನ್ನು ಪುನಃ ಪ್ರಶ್ನಿಸಿದನು. ॥೧॥

ಓ ಪೂಜ್ಯರೇ, ತಾವು ಗೌರಿಯ ಅತ್ಯಂತ ಅದ್ಭುತವಾದ ಶೌರ್ಯವನ್ನು ತೋರಿಸುವ ಕಥೆಯನ್ನು ನನಗೆ ಈಗ ತಿಳಿಸಿದ್ದೀರಿ. ತಮ್ಮ ಮುಖದಿಂದ ಮಧುರವಾಗಿ ಹೊರಡುವ ಕಥೆಗಳನ್ನು ಕೇಳುವ ನನಗೆ ತೃಪ್ತಿಯೇ ಇಲ್ಲದೆ ಇನ್ನೂ ಕೇಳಬೇಕೆಂದೆನಿಸುತ್ತದೆ. ॥೨॥

ಬೃಹಸ್ಪತಿಯು ಶಚೀದೇವಿಗೆ ಶ್ರೀಗೌರೀದೇವಿಯ ನೂರೆಂಟು ನಾಮಗಳನ್ನು ಹೇಳಿದನಷ್ಟೆ. ಅದನ್ನು ಕೇಳಬೇಕೆಂದು ನನ್ನ ಮನಸ್ಸು ಬಹಳ ತವಕಪಡುತ್ತಿದೆ. ಆದ್ದರಿಂದ ದಯವಿಟ್ಟು ನನಗೆ ಅದನ್ನು ತಿಳಿಸಬೇಕು. ॥೩॥

ಭಾರ್ಗವೇಣೇತ್ಥಮಾಪೃಷ್ಟೋ ಯೋಗಿರಾಡತ್ರಿನಂದನಃ ।
ಅಷ್ಟೋತ್ತರಶತಂ ನಾಮ್ನಾಂ ಪ್ರಾಹ ಗೌರ್ಯಾ ದಯಾನಿಧಿಃ ॥೪॥

ಜಾಮದಗ್ನ್ಯ ಶೃಣು ಸ್ತೋತ್ರಂ ಗೌರೀನಾಮಭಿರಂಕಿತಂ ।
ಮನೋಹರಂ ವಾಂಛಿತದಂ ಮಹಾಽಽಪದ್ವಿನಿವಾರಣಂ ॥೫॥

ಸ್ತೋತ್ರಸ್ಯಾಽಸ್ಯ ಋಷಿಃ ಪ್ರೋಕ್ತಃ ಅಂಗಿರಾಶ್ಛಂದ ಈರಿತಃ ।
ಅನುಷ್ಟುಬ್ದೇವತಾ ಗೌರೀ ಆಪನ್ನಾಶಾಯ ಯೋ ಜಪೇತ್ ॥೬॥

ಹ್ರಾಂ ಹ್ರೀಂ ಇತ್ಯಾದಿ ವಿನ್ಯಸ್ಯ ಧ್ಯಾತ್ವಾ ಸ್ತೋತ್ರಮುದೀರಯೇತ್ ।
ಸಿಂಹಸಂಸ್ಥಾಂ ಮೇಚಕಾಽಽಭಾಂ ಕೌಸುಂಭಾಂಶುಕ ಶೋಭಿತಾಂ॥೭॥

ಖಡ್ಗಂ ಖೇಟಂ ತ್ರಿಶೂಲಂ ಚ ಮುದ್ಗರಂ ಬಿಭ್ರತೀ ಕರೈಃ ।
ಚಂದ್ರಚೂಡಾಂ ತ್ರಿಣಯನಾಂ ಧ್ಯಾಯೇದ್ಗೌರೀ ಮಭೀಷ್ಟದಾಂ॥೮॥

---

ಕರುಣಾನಿಧಿಯೂ, ಯೋಗಿರಾಜನೂ, ಅತ್ರಿಯಮಗನೂ ಆದ ದತ್ತಾತ್ರೇಯನು, ಪರಶುರಾಮನು ಹೀಗೆ ತನ್ನನ್ನು ಪ್ರಶ್ನಿಸಲಾಗಿ, ಅವನನ್ನು ಕುರಿತು ದೇವಿಯ ನೂರೆಂಟು ನಾಮಗಳನ್ನೂ ಹೇಳಲು ಪ್ರಾರಂಭಿಸಿದನು. ॥೪॥

ಎಲೈ ಪರಶುರಾಮನೇ, ಗೌರೀದೇವಿಯ ನಾಮಗಳಿಂದ ಕೂಡಿರುವ, ಮನೋಹರವಾದ, ಇಷ್ಟಾರ್ಥಸಿದ್ಧಿಯನ್ನುಂಟುಮಾಡುವ ಮತ್ತು ದೊಡ್ಡ ದೊಡ್ಡ ವಿಪತ್ತುಗಳಿಂದಲೂ ರಕ್ಷಿಸುವ ದೇವಿಯ ನೂರೆಂಟು ನಾಮಗಳ ಸ್ತೋತ್ರವನ್ನು ಕೇಳು. ॥೫॥

ಈ ಸ್ತೋತ್ರಕ್ಕೆ ಅಂಗಿರಸ್ ಋಷಿಯೆಂದು ಹೇಳಿದೆ. ಅನುಷ್ಟುಪ್‌ಛಂದಸ್ಸು ಮತ್ತು ಗೌರಿಯೇ ದೇವತೆಯು ಎಂದೂ ಹೇಳಲ್ಪಟ್ಟಿದೆ. ಸಂಕಟನಿವಾರಣೆಗಾಗಿ ಈ ಸ್ತೋತ್ರವನ್ನು ಜಪಿಸಬೇಕು. ॥೬॥

ಹ್ರಾಂ, ಹ್ರೀಂ ಎಂದು ಮುಂತಾಗಿ ವಿನ್ಯಾಸಮಾಡಿ ಧ್ಯಾನಮಾಡಿದನಂತರ ಈ ಸ್ತೋತ್ರವನ್ನು ಪಠಿಸಬೇಕು. ಅನಂತರದಲ್ಲಿ ಸಿಂಹದ ಮೇಲೆ ಕುಳಿತಿರುವವಳೂ ಗೋಸುಂಬಿ ಬಣ್ಣದ ರೇಷ್ಮೆ ವಸ್ತ್ರವನ್ನು ಧರಿಸಿರುವವಳೂ, ತನ್ನ ಕೈಗಳಲ್ಲಿ ಕತ್ತಿ, ಖೇಟಕ, ತ್ರಿಶೂಲ ಮತ್ತು ಹಾರೆ ಎಂಬ ಆಯುಧಗಳನ್ನು ಹಿಡಿದಿರುವವಳೂ

ಗೌರೀ ಗೋಜನನೀ ವಿದ್ಯಾ ಶಿವಾ ದೇವೀ ಮಹೇಶ್ವರೀ ।
ನಾರಾಯಣಾನುಜಾ ಸಮ್ರಭೂಷಣಾ ಸುತನ್ಮಭವಾ ॥೯॥

ತ್ರಿನೇತ್ರಾ ತ್ರಿಶಿಖಾ ಶಂಭು ಸಂಶ್ರಯಾ ಶಶಿಭೂಷಣಾ ।
ಶೂಲಹಸ್ತಾ ಶ್ರುತಧರಾ ಶುಭದಾ ಶುಭರೂಪಿಣೀ ॥೧೦॥

ಉಮಾ ಭಗವತೀ ರಾತ್ರಿಃ ಸೋಮಸೂರ್ಯಾಗ್ನಿಲೋಚನಾ ।
ಸೋಮಸೂರ್ಯಾತ್ಮತಾಟಂಕಾ ಸೋಮಸೂರ್ಯಕುಚದ್ವಯೀ ॥೧೧॥

ಅಂಬಾಂಬಿಕಾಂಬುಜಧರಾಂಬುರೂಪಾಸ್ಯಾಯಿನೀ ಸ್ಥಿರಾ ।
ಶಿವಪ್ರಿಯಾ ಶಿವಾಂಕಸ್ಥಾ ಶೋಭನಾ ಶುಂಭನಾಶಿನೀ ॥೧೨॥

ಖಡ್ಗಹಸ್ತಾ ಖಗಾ ಖೇಟಧರಾ ಖಾಚ್ಛನಿಭಾಕೃತಿಃ ।
ಕೌಸುಂಭಚೇಲಾ ಕೌಸುಂಭಪ್ರಿಯಾ ಕುಂದನಿಭದ್ವಿಜಾ ॥೧೩॥

---

ಚಂದ್ರನನ್ನೇ ಶಿರಸ್ಸಿನಲ್ಲಿ ಧರಿಸಿರುವವಳೂ, ಮುಕ್ಕಣ್ಣಳೂ, ಇಷ್ಟಾರ್ಥಗಳನ್ನು ನೀಡುವವಳೂ ಆದ ಗೌರೀದೇವಿಯನ್ನು ಧ್ಯಾನಮಾಡಬೇಕು. ॥೭-೮॥

ಗೌರೀದೇವಿಯು ಕಾಮಧೇನುವನ್ನು ಸೃಷ್ಟಿಸಿದವಳೂ, ವಿದ್ಯಾಸ್ವರೂಪಳೂ, ಶಿವನ ಪತ್ನಿಯೂ, ದೇವಿಯೂ, ಮಹೇಶ್ವರಿಯೂ, ನಾರಾಯಣನ ತಂಗಿಯೂ, ಸೌಮ್ಯವಾದ ಅಲಂಕಾರಗಳುಳ್ಳವಳೂ, ಇತರರಿಂದ ಪೂಜಿಸಲ್ಪಟ್ಟ ತನ್ನ ಮಹಿಮೆಯುಳ್ಳವಳೂ, ಮೂರು ಕಣ್ಣುಗಳುಳ್ಳವಳೂ, ಮೂರು ಜುಟ್ಟುಗಳುಳ್ಳವಳೂ, ಶಿವನನ್ನು ಆಶ್ರಯಿಸಿದವಳೂ, ಚಂದ್ರಾಲಂಕಾರಗಳೂ, ಶೂಲವನ್ನು ಕೈಲಿ ಹಿಡಿದಿರುವವಳೂ, ಮಂಗಳಕರಳೂ, ಮಂಗಳಸ್ವರೂಪಳೂ, ಉಮೆಯೂ, ಪೂಜ್ಯಳೂ, ರಾತ್ರಿಸ್ವರೂಪಳೂ, ಚಂದ್ರಸೂರ್ಯ ಅಗ್ನಿಗಳನ್ನು ಕಣ್ಣುಗಳಾಗಿ ಉಳ್ಳವಳೂ, ಚಂದ್ರಸೂರ್ಯರ ಸ್ವರೂಪವಾದ ಓಲೆಗಳನ್ನು ಧರಿಸಿರುವವಳೂ, ಚಂದ್ರಸೂರ್ಯಸ್ವರೂಪಗಳಾದ ಎರಡು ಸ್ತನಗಳನ್ನು ಧರಿಸಿರುವವಳೂ ಆಗಿದ್ದಾಳೆ. ॥೯-೧೦-೧೧॥

ಗೌರೀದೇವಿಯು, ಲೋಕಮಾತೆಯೂ, ಅಂಬಿಕೆಯೂ, ಕಮಲಗಳನ್ನು ಧರಿಸಿರುವವಳೂ, ಜಲಸ್ವರೂಪಳೂ ಲೋಕಸಂತೋಷವನ್ನುಂಟುಮಾಡುವವಳೂ, ಸ್ಥಿರಳೂ, ಶಿವನ ಪತ್ನಿಯೂ, ಶಿವನ ತೊಡೆಯ ಮೇಲೆ ಕುಳಿತಿರುವವಳೂ, ಮಂಗಳಸ್ವರೂಪಳೂ, ಶುಂಭನೆಂಬ ರಾಕ್ಷಸನನ್ನು ನಾಶಮಾಡಿದವಳೂ, ಕತ್ತಿಯನ್ನು ಕೈಯಲ್ಲಿ

ಕಾಲೀ ಕಪಾಲಿನೀ ಕ್ರೂರಾ ಕರವಾಲಕರಾ ಪ್ರಿ(ಕ್ರಿ)ಯಾ ।
ಕಾಮ್ಯಾ ಕುಮಾರೀ ಕುಟಿಲಾ ಕುಮಾರಾಂಬಾ ಕುಲೇಶ್ವರೀ ॥೧೪॥

ಮೃಡಾಣೀ ಮೃಗಶಾವಾಕ್ಷೀ ಮೃದುದೇಹಾ ಮೃಗಪ್ರಿಯಾ ।
ಮೃಕಂಡುಪೂಜಿತಾ ಮಾಧ್ವೀಪ್ರಿಯಾ ಮಾತೃಗಣೇಡಿತಾ ॥೧೫॥

ಮಾತೃಕಾ ಮಾಧವೀ ಮಾದ್ಯನ್ಮಾನಸಾ ಮದಿರೇಕ್ಷಣಾ ।
ಮೋದರೂಪಾ ಮೋದಕರೀ ಮುನಿಧ್ಯೇಯಾ ಮನೋನ್ಮನೀ ॥೧೬॥

ಪರ್ವತಸ್ಥಾ ಪರ್ವಪೂಜ್ಯಾ ಪರಮಾ ಪರಮಾರ್ಥದಾ ।
ಪರಾತ್ಪರಾ ಪರಾಮರ್ಶಮಯೀ ಪರಿಣತಾಽಖಿಲಾ ॥೧೭॥

---

ಹಿಡಿದಿರುವವಳೂ, ಆಕಾಶದಲ್ಲಿ ಸಂಚರಿಸುವವಳೂ, ಖೇಟಾಯುಧವನ್ನು ಧರಿಸಿರುವವಳೂ, ಆಕಾಶಕ್ಕೆ ಸಮವಾದ ಸ್ವಚ್ಛಕಾಂತಿಯುಳ್ಳವಳೂ, ಗೋಸುಂಬಿಯ ಬಣ್ಣದ ಬಟ್ಟೆಯನ್ನು ಧರಿಸಿರುವವಳೂ, ಗೋಸುಂಬೆಹೂವಿನಲ್ಲಿ ಪ್ರೀತಿಯುಳ್ಳವಳೂ ಕುಂದಗಿಡದ ಮೊಗ್ಗಿಗೆ ಸಮವಾದ ದಂತಪಂಕ್ತಿಗಳುಳ್ಳವಳೂ ಆಗಿದ್ದಾಳೆ. ||೧೨-೧೩||

ಗೌರೀದೇವಿಯು ಕಾಳೀಸ್ವರೂಪಳೂ, ಕಪಾಲವನ್ನು ಹಿಡಿದಿರುವವಳೂ ಕ್ರೂರಳೂ, ಕತ್ತಿಯನ್ನು ಕೈಯಲ್ಲಿ ಹಿಡಿದಿರುವವಳೂ ಕ್ರಿಯಾಸ್ವರೂಪಳೂ ಭಕ್ತರಿಂದ ಅಪೇಕ್ಷಿಸಲ್ಪಡುವವಳೂ, ಕುಮಾರಿಯೂ, ಕಪಟೆಯೂ, ಷಣ್ಮುಖನ ತಾಯಿಯೂ, ಕುಲೇಶ್ವರಿಯೂ, ಮೃಡಾಣಿಯೂ, ಜಿಂಕೆಯ ಕಣ್ಣಿನಂತೆ ಕಣ್ಣುಗಳುಳ್ಳವಳೂ, ಮೃದುವಾದ ಶರೀರವುಳ್ಳವಳೂ, ಜಿಂಕೆಯಲ್ಲಿ ಪ್ರೀತಿಯುಳ್ಳವಳೂ, ಮೃಕಂಡು ಎಂಬುವನಿಂದ ಪೂಜಿಸಲ್ಪಟ್ಟವಳೂ, ಮದ್ಯದಲ್ಲಿ ಪ್ರೀತಿಯುಳ್ಳವಳೂ, ಮಾತೃಗಳ ಸಮೂಹದಿಂದ ಪೂಜಿಸಲ್ಪಟ್ಟವಳೂ, ಲೋಕಮಾತೆಯೂ, ಮಾಧವೀ ಸ್ವರೂಪಳೂ, ಮದಿಸಿದ ಮನಸ್ಸುಳ್ಳವಳೂ, ಮದಿಸಿದ ನೋಟವುಳ್ಳವಳೂ, ಸಂತೋಷಸ್ವರೂಪಳೂ, ಸಂತೋಷವನ್ನುಂಟುಮಾಡುವವಳೂ, ಋಷಿಗಳಿಂದ ಧ್ಯಾನಿಸಲ್ಪಡುವವಳೂ ಆಗಿದ್ದಾಳೆ. ||೧೪-೧೫-೧೬||

ಗೌರೀದೇವಿಯು ಪರ್ವತದ ಮೇಲೆ ವಾಸಮಾಡುವವಳೂ, ಪರ್ವಕಾಲಗಳಲ್ಲಿ ಪೂಜಿಸಲ್ಪಡುವವಳೂ, ಶ್ರೇಷ್ಠಳೂ ಮೋಕ್ಷವನ್ನು ಕೊಡುವವಳೂ, ಪರಾತ್ಪರಸ್ವರೂಪಳೂ, ಜ್ಞಾನಸ್ವರೂಪಳೂ, ಸರ್ವವಿಧವಾದ ಪರಿಣಾಮವನ್ನುಂಟುಮಾಡುವವಳೂ, ಪಾಶಿಯಿಂದ ಸೇವಿಸಲ್ಪಟ್ಟವಳೂ, ಪಶುಪತಿಯಾದ ಶಿವನ ಪ್ರಿಯಳೂ,

ಪಾಶಿಸೇವ್ಯಾ ಪಶುಪತಿ ಪ್ರಿಯಾ ಪಶುವೃಷಸ್ತುತಾ ।
ಪಶ್ಯಂತೀ ಪರಚಿದ್ರೂಪಾ ಪರೀವಾದ ಹರಾ ಪರಾ ॥೧೮॥

ಸರ್ವಜ್ಞಾ ಸರ್ವರೂಪಾ ಸಾ ಸಂಪತ್ತಿಃ ಸಂಪದುನ್ನತಾ ।
ಆಪನ್ನಿವಾರಿಣೀ ಭಕ್ತಸುಲಭಾ ಕರುಣಾಮಯಿಯಾ ॥೧೯॥

ಕಲಾವತೀ ಕಲಾಮೂಲಾ ಕಲಾಕಲಿತವಿಗ್ರಹಾ ।
ಗಣಸೇವ್ಯಾ ಗಣೇಶಾನಾ ಗತಿರ್ಗಮನವರ್ಜಿತಾ ॥೨೦॥

ಈಶ್ವರೀಶಾನದಯಿತಾ ಶಕ್ತಿಃ ಶಮಿತಪಾತಕಾ ।
ಪೀಠಗಾ ಪೀಠಿಕಾರೂಪಾ ಪೃಷತ್ಪೂಜ್ಯಾ ಪ್ರಭಾಮಯಿಯಾ ॥೨೧॥

ಮಹಾಮಾಯಾ ಮತಂಗೇಷ್ಟಾ ಲೋಕಾಽಲೋಕಾ ಶಿವಾಂಗನಾ ।
ಏತತ್ತೇಽಭಿಹಿತಂ ರಾಮ ಸ್ತೋತ್ರಮತ್ಯಂತ ದುರ್ಲಭಂ ॥೨೨॥

---

ಪಶುಗಳು ಮತ್ತು ಧರ್ಮ ಜೀವಶ್ರೇಷ್ಠರು ಇವರಿಂದ ಸ್ತೋತ್ರಮಾಡಲ್ಪಟ್ಟವಳೂ, ಎಲ್ಲವನ್ನೂ ನೋಡುವವಳೂ, ಶ್ರೇಷ್ಠಜ್ಞಾನಸ್ವರೂಪಳೂ, ಐಶ್ವರ್ಯದಿಂದ ಉನ್ನತಳೂ, ಕಷ್ಟಗಳನ್ನು ನಿವಾರಣೆ ಮಾಡುವವಳೂ, ಭಕ್ತರಿಗೆ ಸುಲಭವಾಗಿ ಸಿಕ್ಕುವವಳೂ, ಕರುಣಾಪೂರ್ಣಳೂ ಆಗಿದ್ದಾಳೆ. ॥೧೭-೧೮-೧೯॥

ಗೌರೀದೇವಿಯು ಕಲಾವತಿಯು, ಕಲೆಗಳಿಗೆಲ್ಲಕ್ಕೂ ಮೂಲಕಾರಣಳೂ, ಕಲೆಯಿಂದ ಕೂಡಿದ ಶರೀರವುಳ್ಳವಳೂ, ಗಣಗಳಿಂದ ಸೇವಿಸಲ್ಪಡುವವಳೂ ಗಣಗಳಿಗೆ ಅಧಿದೇವತೆಯೂ, ಎಲ್ಲರಿಗೂ ರಕ್ಷಕಳೂ ಚಲನೆಯಿಲ್ಲದವಳೂ, ಈಶ್ವರಿಯೂ ಈಶ್ವರನ ಪತ್ನಿಯೂ, ಶಕ್ತಿಸ್ವರೂಪಳೂ ಭಕ್ತರ ಪಾಪಗಳನ್ನೆಲ್ಲವನ್ನೂ ನಾಶಮಾಡುವವಳೂ, ಪೀಠದ ಮೇಲೆ ಕುಳಿತಿರುವವಳೂ, ಪೀಠಿಕಾಸ್ವರೂಪಳೂ, ದೇವತೆಗಳಿಂದ ಪೂಜಿಸಲ್ಪಡುವವಳೂ, ಕಾಂತಿಪೂರ್ಣಳೂ, ಮಹಾಮಾಯಾಸ್ವರೂಪಳೂ, ಆನೆಯಲ್ಲಿ ಪ್ರೀತಿಯುಳ್ಳವಳೂ, ಲೋಕ ಮತ್ತು ಬೆಳಕಿನ ಸ್ವರೂಪಳೂ, ಶಿವನ ಪತ್ನಿಯೂ, ಆಗಿದ್ದಾಳೆ. ಎಲೈ ಪರಶುರಾಮನೇ, ಸಾಮಾನ್ಯರಿಗೆ ದುರ್ಲಭವಾದ ದೇವಿಯ ಈ ನೂರೆಂಟು ನಾಮಗಳ ಸ್ತೋತ್ರವನ್ನು ನಿನಗೆ ಹೇಳಿದ್ದೇನೆ. ॥೨೦-೨೧-೨೨॥

ಗೌರ್ಯಾ ಅಷ್ಟೋತ್ತರಶತನಾಮಭಿಃ ಸುಮನೋಹರಂ ।
ಆಪದಂಭೋಧಿತರಣೇ ಸುದೃಢಪ್ಲವರೂಪಕಂ ॥೨೩॥

ಏತತ್ಪ್ರಪಠತಾಂ ನಿತ್ಯಮಾಪದೋ ಯಾಂತಿ ದೂರತಃ ।
ಗೌರೀಪ್ರಸಾದ ಜನನಮಾತ್ಮಜ್ಞಾನಪ್ರದಂ ನೃಣಾಂ ॥೨೪॥

ಭಕ್ತ್ಯಾಪ್ರಪಠತಾಂ ಪುಂಸಾಂ ಸಿಧ್ಯತ್ಯಖಿಲಮೀಹಿತಂ ।
ಅಂತೇ ಕೈವಲ್ಯಮಾಪ್ನೋತಿ ಸತ್ಯಂ ತೇ ಭಾರ್ಗವೇರಿತಂ ॥೨೫॥

ಶ್ರುತ್ವೇತ್ಥಂ ನಾರದವಚಃ ಪ್ರಾಲೇಯಾದ್ರಿಃ ಮಹಾಮತಿಃ ।
ಗೌರೀಮುದ್ದಿಶ್ಯ ತಪಸಿ ನಿಶ್ಚಲಂ ಮನ ಆದಧೇ ॥೨೬॥

ಅಥ ಪುಣ್ಯನದೀತೀರೇ ಸಭಾರ್ಯಃ ಪರ್ವತಾಧಿಪಃ ।
ಸ್ನಾತ್ವಾ ಸುಖಾಸನಾಸೀನೋ ದೇವರ್ಷಿಪ್ರೋದಿತಕ್ರಮಾತ್ ॥೨೭॥

ಧ್ಯಾತ್ವಾ ಮೂರ್ತಿಂ ಮಹಾಗೌರ್ಯಾಃ ಸಿಂಹಸಂಸ್ಥಾಂ ವಿಭೂಷಿತಾಂ ।
ಅಭ್ಯರ್ಚ್ಯ ವಿವಿಧಾಕಾರೈರುಪಹಾರೈಃ ಸುಭಕ್ತಿತಃ ॥೨೮॥

---

ಮೇಲೆ ಹೇಳಿದ ಸ್ತೋತ್ರವು ಗೌರಿಯ ನೂರೆಂಟುನಾಮಗಳಿಂದ ಬಹಳ ಮನೋಹರವಾಗಿಯೂ, ಜನಗಳಿಗೆ ಕಷ್ಟಗಳೆಂಬ ಸಮುದ್ರವನ್ನು ದಾಟಿಸುವುದರಲ್ಲಿ ಬಹಳ ಗಟ್ಟಿಯಾದ ಹಡಗಿನಂತೆಯೂ ಇದೆ. ಈ ಸ್ತೋತ್ರವನ್ನು ಪ್ರತಿದಿನವಲ್ಲಿಯೂ ಚೆನ್ನಾಗಿ ಪಠಿಸುವ ಜನಗಳ ಕಷ್ಟಗಳೆಲ್ಲವೂ ದೂರವಾಗುತ್ತವೆ. ಅಲ್ಲದೆ ಇದು ಜನರಿಗೆ ಗೌರಿಯ ಮೆಚ್ಚಿಗೆಯನ್ನು ಸಂಪಾದಿಸಿ ಕೊಡುವುದಾಗಿಯೂ ಆತ್ಮಜ್ಞಾನವನ್ನುಂಟುಮಾಡುವುದಾಗಿಯೂ ಇದೆಯೆಂದು ತಿಳಿಯಬೇಕು. ॥೨೩-೨೪॥

ಈ ಸ್ತೋತ್ರವನ್ನು ಭಕ್ತಿಯಿಂದ ಚೆನ್ನಾಗಿ ಪಠಿಸುವ ಮಾನವನು ಕೊನೆಗೆ ಮೋಕ್ಷವನ್ನು ಪಡೆಯುವನು. ಎಲೈ ಪರಶುರಾಮನೇ, ಇದು ಸತ್ಯವೆಂದು ತಿಳಿ. ॥೨೫॥

ನಾರದನ ಮಾತನ್ನು ಕೇಳಿ, ಬಹಳ ಬುದ್ಧಿಶಾಲಿಯಾದ ಪರ್ವತರಾಜನು ಗೌರಿಯನ್ನುದ್ದೇಶಿಸಿ ತಪಸ್ಸನ್ನು ಮಾಡಲು ಮನೋನಿಶ್ಚಯ ಮಾಡಿದನು. ಅನಂತರದಲ್ಲಿ ಪುಣ್ಯಕರವಾದ ನದಿಯ ತೀರದಲ್ಲಿ ಪರ್ವತರಾಜನು ತನ್ನ ಪತ್ನಿಯೊಡನೆ ಸ್ನಾನಮಾಡಿ, ಸುಖವಾದ ಪೀಠದ ಮೇಲೆ ಕುಳಿತುಕೊಂಡು, ದೇವರ್ಷಿಯು ಹೇಳಿದ್ದ ಕ್ರಮದಲ್ಲಿ ಮಹಾಗೌರಿಯ ಮೂರ್ತಿಯನ್ನು ಧ್ಯಾನಿಸಿ, ಸಿಂಹದ

ಧ್ಯಾನೈಕತತ್ಪರೋ ನಿತ್ಯಮಭೂತ್ಪ್ರಾಲೇಯಪರ್ವತಃ ।
ಧ್ಯಾನಾದುಪರತಃ ಸ್ತೋತ್ರಂ ಪಠತ್ಯೇತತ್ ಪುನಃಪುನಃ ॥೨೯॥

ಪಕ್ವಪರ್ಣಾಶನೋ ದಾಂತೋ ಮೌನೀ ಸ್ಥಂಡಿಲಸಂಶ್ರಯಃ ।
ತಪಸ್ತೇಪೇ ಪರ್ವತೇಂದ್ರೋ ವರ್ಷದ್ವಾದಶಕಂ ತತಃ ॥೩೦॥

ಗೌರೀ ಪ್ರಸನ್ನಾ ತಸ್ಯಾಗ್ರೇ ಧ್ಯಾನರೂಪಂ ಸಮಾಸ್ಥಿತಾ ।
ಪ್ರೋವಾಚ ತಂ ಪರ್ವತೇಂದ್ರಂ ಮೇಘಗಂಭೀರಯಾ ಗಿರಾ ॥೩೧॥

ನಗೇಂದ್ರ ತ್ವಂ ಕಿಮುದ್ದಿಶ್ಯ ತಪಶ್ಚರಸಿ ತದ್ವದ ।
ಅಲಂ ತೇ ಘೋರತಪಸಾ ದದಾಮಿ ವರಮುತ್ತಮಂ ॥೩೨॥

---

ಮೇಲೆ ಕುಳಿತಿರುವವಳೂ ಅಲಂಕಾರಭೂಷಿತಳೂ ಆದ ಆಕೆಯ ಮೂರ್ತಿಯನ್ನು ಅನೇಕ ವಿಧವಾದ ಉಪಚಾರಗಳಿಂದ, ಬಹಳ ಭಕ್ತಿಭಾವದಿಂದ ಕೂಡಿದವನಾಗಿ ಪೂಜಿಸಿದನು. ॥೨೬-೨೭-೨೮॥

ಹಿಮವಂತನು ಪ್ರತಿದಿನವೂ ಗೌರಿಯ ಧ್ಯಾನವೊಂದರಲ್ಲೇ ನೆಟ್ಟಮನಸ್ಸುಳ್ಳವನಾಗಿದ್ದನು. ಧ್ಯಾನಮಾಡುವುದನ್ನು ನಿಲ್ಲಿಸಿದ ಕಾಲದಲ್ಲಿ ಇವನು ಗೌರೀಸ್ತೋತ್ರವನ್ನು ಪದೇ ಪದೇ ಪಠಿಸುತ್ತಿದ್ದನು. ॥೨೯॥

ಹಿಮವಂತನು ಹಣ್ಣೆಲೆಗಳನ್ನು ತಿನ್ನುತ್ತಾ ಇಂದ್ರಿಯನಿಗ್ರಹಮಾಡಿದವನಾಗಿ ಮೌನವ್ರತವನ್ನು ಧರಿಸಿ ಬರಿಯ ನೆಲದ ಮೇಲೆ ಯಾವಾಗಲೂ ಇರುತ್ತಾ ಹನ್ನೆರಡು ವರ್ಷಗಳ ಕಾಲ ಈ ರೀತಿಯಲ್ಲಿ ತಪಸ್ಸನ್ನು ಮಾಡಿದನು. ॥೩೦॥

ಗೌರಿಯು ಇವನ ತಪಸ್ಸಿಗೆ ಮೆಚ್ಚಿ ಅವನು ಧ್ಯಾನಿಸುತ್ತಿದ್ದ ರೂಪದಲ್ಲಿಯೇ ಬಂದು ಮುಂದೆ ನಿಂತು ಅವನನ್ನು ಕುರಿತು ಮೇಘಧ್ವನಿಗೆ ಸಮಾನವಾಗಿ ಗಂಭೀರವಾದ ಧ್ವನಿಯಲ್ಲಿ ಈ ರೀತಿಯಲ್ಲಿ ಹೇಳಿದಳು. ॥೩೧॥

ಎಲೈ ಪರ್ವತರಾಜನೇ, ನೀನು ಏತಕ್ಕಾಗಿ ಇಂಥಾ ತಪಸ್ಸನ್ನು ಮಾಡುತ್ತಿರುವೆ? ಯೆಂಬುದನ್ನು ಹೇಳು. ನೀನು ಮಾಡುತ್ತಿರುವ ಈ ಭಯಂಕರವಾದ ತಪಸ್ಸನ್ನು ಸಾಕುಮಾಡು. ನಿನಗೆ ಉತ್ತಮವಾದ ವರವನ್ನು ನೀಡುವೆನು. ॥೩೨॥

ತಚ್ಛ್ರುತ್ವಾ ಪರ್ವತಾಧೀಶಃ ಪ್ರಣಮ್ಯ ಭುವಿ ದಂಡವತ್ ।
ಬದ್ಧಾಂಜಲಿಪುಟಃ ಸ್ತುತ್ವಾ ಸ್ತೋತ್ರೈರ್ನಾಮಸಮನ್ವಿತೈಃ ॥೩೩॥

ಶಿರಸ್ಯಂಜಲಿಮಾದಾಯ ತಾಂ ಗೌರೀಮಭಿಯಾಚತ ।
ದೇವಿ ಗೌರಿ ನಮಸ್ತುಭ್ಯಂ ಶಂಕರಪ್ರಿಯದರ್ಶನೇ ॥೩೪॥

ಅನಪತ್ಯತ್ವ ದೋಷಾಗ್ನಿದಗ್ಧಂ ಮಾಮನುಜೀವಯ ।
ಇತಿ ಶ್ರುತ್ವಾ ನಗವಚಃ ಪ್ರಾಹ ಗೌರೀ ನಗೇಶ್ವರಂ ॥೩೫॥

ಪರ್ವತೇಶ ನ ತೇಽಪತ್ಯಂ ಪುರುಷಂ ಜಾತು ವಿದ್ಯತೇ ।
ಕನ್ಯೈಕಾ ಮತ್ ಪ್ರಸಾದೇನ ಭವಿಷ್ಯತಿ ನ ಸಂಶಯಃ ॥೩೬॥

ಅಥಾಽಬ್ರವೀದ್ಧಿಮಗಿರಿಃ ಪ್ರಣಮ್ಯ ರಚಿತಾಂಜಲಿಃ ।
ದೇವಿ ಕನ್ಯಾಪಿತೃತ್ವಂ ತು ದುಃಖಾಯೇತಿ ಬುಧಾ ಜಗುಃ ॥೩೭॥

---

ಗೌರಿಯ ಈ ಮಾತನ್ನು ಕೇಳಿ, ಹಿಮವಂತನು ಆಕೆಗೆ ಭೂಮಿಯಲ್ಲಿ ದಂಡಾಕಾರವಾಗಿ ಪ್ರಣಾಮಮಾಡಿ, ಕೈಮುಗಿದುಕೊಂಡು ಆಕೆಯನ್ನು ನಾಮಗಳಿಂದ ಕೂಡಿರುವ ಸ್ತೋತ್ರಗಳಿಂದ ಸ್ತುತಿಸಿ ತಲೆಯಮೇಲೆ ಕೈಜೋಡಿಸಿಕೊಂಡು ಶಿವನಿಗೆ ಪ್ರಿಯವಾದ ನೋಟವುಳ್ಳ ಗೌರೀದೇವಿಯೇ, ನಿನಗೆ ಅನೇಕ ನಮಸ್ಕಾರಗಳು. ಎಂದನು. ॥೩೩-೩೪॥

"ಓ ದೇವಿಯೇ, ಮಕ್ಕಳಿಲ್ಲದಿರುವ ದೋಷವೆಂಬ ಅಗ್ನಿಯಿಂದ ಸುಡಲ್ಪಟ್ಟ ನನ್ನನ್ನು ಬದುಕಿಸು." ಎಂದು ಹಿಮವಂತನು ಹೇಳಿದ ಮಾತನ್ನು ಕೇಳಿ ಗೌರಿಯು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೩೫॥

ಎಲೈ ಹಿಮವಂತನೇ, ನಿನಗೆ ಗಂಡುಮಕ್ಕಳಾಗುವ ಯೋಗವು ಬರುವುದಿಲ್ಲ. ಆದರೆ ನನ್ನ ಪ್ರಸಾದದಿಂದ ನಿನಗೆ ಒಬ್ಬಳು ಹೆಣ್ಣುಮಗಳಾಗುವ ವಿಷಯದಲ್ಲಿ ಸಂಶಯವೇ ಇಲ್ಲ. ॥೩೬॥

ಅನಂತರದಲ್ಲಿ ಹಿಮವಂತನು ಗೌರೀದೇವಿಗೆ ನಮಸ್ಕರಿಸಿ, ಕೈಜೋಡಿಸಿಕೊಂಡು ಈ ರೀತಿಯಲ್ಲಿ ಹೇಳಿದನು. "ಓ ದೇವಿಯೇ, ವಿದ್ವಾಂಸರಾದವರು ಕನ್ಯೆಗೆ ತಂದೆಯಾಗಿರುವುದು ದುಃಖಕರವೆಂದು ಹೇಳುತ್ತಾರಲ್ಲವೇ?" ಎಂದನು. ॥೩೭॥

ಯದಿ ಕನ್ಯೈವ ಮೇ ಭೂಯಾತ್ತನ್ಮೇ ತ್ವಂ ತನುಜಾ ಭವ ।
ನ ಹ್ಯನ್ಯಥಾ ಪ್ರತೀಚ್ಛಾಮಿ ವರಂ ತ್ವದ್ದತ್ತಮುಪ್ಯುತ ॥೩೮॥

ಶ್ರುತ್ವಾ ಹಿಮವತಾ ಪ್ರೋಕ್ತಂ ಪ್ರಾಹ ಗೌರೀ ಮಹೇಶ್ವರೀ ।
ನಗಾಧಿರಾಜ ನ ತನುಂ ಧಾರಯಾಮಿ ಕದಾಚನ ॥೩೯॥

ಕನ್ಯಾ ಚೈಕಾ ಪ್ರದಿಷ್ಟಾ ಮೇ ನ ತತಸ್ತೇಽಧಿಕಂ ಭವೇತ್ ।
ಇತ್ಯುಕ್ತ್ವಾಽಂತರ್ಹಿತಾ ಸದ್ಯೋ ಮನೋರಥಶರೀರವತ್ ॥೪೦॥

ಅಥಾದ್ರಿರಾಜಸ್ತಪಸಿ ಪುನರ್ನಿಶ್ಚಿತಮಾನಸಃ ।
ಆತಿಷ್ಠದತ್ಯುಗ್ರತರಂ ತಪಸ್ತಾಪಸಸಂಮತಂ ॥೪೧॥

ಅಬ್ಭಕ್ಷೋ ವರ್ಷಶತಕಂ ವಾಯುಭಕ್ಷಸ್ತಥಾ ಶತಂ ।
ಏವಂ ಶತದ್ವಯೇಽತೀತೇ ವಹ್ನಿಕುಂಡಂ ಮಹತ್ತರಂ ॥೪೨॥

---

ಹಿಮವಂತನು, ನನಗೆ ಕನ್ಯೆಯೇ ಹುಟ್ಟುವುವುದಾದರೆ ನೀನೇ ನನಗೆ ಮಗಳಾಗೆಂದು ಅಪೇಕ್ಷಿಸುವೆನು. ಹಾಗಿಲ್ಲದಿದ್ದರೆ ನೀನು ಕೊಡುವ ಇನ್ನಾವ ವರವನ್ನೂ ಹೊಂದಲು ನನಗೆ ಇಷ್ಟವಿಲ್ಲ, ಎಂದನು. ॥೩೮॥

ಹಿಮವಂತನು ಹೇಳಿದ ಮಾತನ್ನು ಕೇಳಿ ಮಹೇಶ್ವರನ ಪತ್ನಿಯಾದ ಗೌರಿಯು ಅವನನ್ನು ಕುರಿತು, “ಎಲೈ ಪರ್ವತರಾಜನೇ, ನಾನು ಯಾವಾಗಲೂ ಶರೀರವನ್ನು ಧಾರಣೆಮಾಡುವುದೇ ಇಲ್ಲ.” ಎಂದಳು. ॥೩೯॥

ನಿನಗೊಬ್ಬಳು ಕನ್ಯೆಯು ಮಾತ್ರ ಆಗುವಳು. ಅದಕ್ಕಿಂತ ಹೆಚ್ಚಿಗೇನೂ ಆಗುವುದಿಲ್ಲ.” ಎಂದು ಹೇಳಿ, ಸ್ವೇಚ್ಛೆಯಿಂದ, ಮನಸ್ಸಿನಲ್ಲಿ ಕಲ್ಪಿತವಾದ ಶರೀರದ ಹಾಗೆ, ತತ್‌ಕ್ಷಣದಲ್ಲಿಯೇ ಅಂತರ್ಧಾನಳಾದಳು. ॥೪೦॥

ಅನಂತರದಲ್ಲಿ ಪರ್ವತರಾಜನಾದ ಹಿಮವಂತನು ಪುನಃ ತಪಸ್ಸನ್ನು ಮಾಡಲು ಮನೋನಿಶ್ಚಯಮಾಡಿ ಮೊದಲಿಗಿಂತಲೂ ಕಠಿನತರವಾದ ತಪಸ್ಸನ್ನು ಕೈಗೊಂಡನು. ಹೇಗೆಂದರೆ, ॥೪೧॥

ಹಿಮವಂತನು ನೀರನ್ನು ಮಾತ್ರ ಆಹಾರವನ್ನಾಗಿ ಸೇವಿಸುತ್ತಾ ಒಂದುನೂರು ವರ್ಷಕಾಲವೂ, ವಾಯುವನ್ನು ಮಾತ್ರ ಸೇವಿಸುತ್ತಾ ಒಂದುನೂರುವರ್ಷಕಾಲವೂ,

ಕೃತ್ವೋರ್ಧ್ವರಜ್ಜು ಶತಕಂ ವಿಟಪೇ ವಟಶಾಖಿನಃ ।
ಬಧ್ವಾ ತತ್ ಸನ್ನಿವೇಶ್ಯ ಸ್ವಪಾದಯೋರ್ಹಿಮವಾಂಸ್ತತಃ ॥೪೩॥

ಅವಾಕ್ಶಿರಾ ನಿರಾಲಂಬೀ ನಿರುಚ್ಛ್ವಾಸೋ ನಿರಾಶಕಃ ।
ಏಕಾಗ್ರತಪ ಆತಿಷ್ಠದಧಸ್ತಸ್ಯ ಪ್ರಿಯಾ ಸತೀ ॥೪೪॥

ಏಧಾಂಸಿ ಕುಂಡೇ ನಿಕ್ಷಿಪ್ಯ ಸಮೇಧಯತಿ ಪಾವಕಂ ।
ಏವಂ ಪ್ರತಪತಸ್ತಸ್ಯ ಸಮಾಪ್ತೇ ವತ್ಸರೇ ಪುನಃ ॥೪೫॥

ಛಿತ್ವೈಕಾಂ ರಜ್ಜುಮಗರಾಡಾತಿಷ್ಠತ್ತಪ ಉತ್ತರಂ ।
ಏವಂ ತಪಸ್ಯತಸ್ತಸ್ಯ ವರ್ಷಾಣಾಂ ಶತಕಂ ಯದಾ ॥೪೬॥

ಏಕನ್ಯೂನ ಮತಿಕ್ರಾಂತಂ ತಸ್ಯ ಮೂರ್ಧ್ನಸ್ತದಾ ಮಹಾನ್ ।
ತಪೋಽಗ್ನೇರ್ಧೂಮ ಉದಭೂತ್ತೇನ ವ್ಯಾಪ್ತಂ ತ್ರಿವಿಷ್ಟಪಂ ॥೪೭॥

---

ತಪಸ್ಸನ್ನು ಮಾಡುತ್ತಿದ್ದನು. ಹೀಗೆ ಇನ್ನೂರು ವರುಷಗಳು ಕಳೆದ ಬಳಿಕ ಹಿಮವಂತನು ಬಹು ದೊಡ್ಡದಾದ ಅಗ್ನಿಕುಂಡವನ್ನು ರಚಿಸಿ ಅದರ ಮೇಲೆ ಆಲದಮರದ ಕೊಂಬೆಗೆ ನೂರು ಹಗ್ಗಗಳನ್ನು ಕಟ್ಟಿಹಾಕಿ ಅದನ್ನು ತನ್ನ ಪಾದಗಳಿಗೆ ಕಟ್ಟಿಹಾಕಿಸಿಕೊಂಡು, ತಳಗಡೆ ಇರುವ ಶಿರಸ್ಸುಳ್ಳವನಾಗಿ, ಆಧಾರವಿಲ್ಲದೆಯೂ, ಶ್ವಾಸಗಳನ್ನು ತಡೆದು ಆಹಾರವಿಲ್ಲದೆ ಏಕಾಗ್ರಮನಸ್ಸಿನಿಂದ ಅದರ ಕೆಳಗಡೆ ಉಗ್ರತಪಸ್ಸನ್ನು ಮಾಡಿದನು. ಅವನ ಪತಿವ್ರತೆಯಾದ ಪತ್ನಿಯೂ ಇದಕ್ಕೆ ಸಹಾಯಕಳಾಗಿದ್ದಳು. ॥೪೨-೪೩-೪೪॥

ಅವನ ಪತ್ನಿಯು ಅಗ್ನಿಕುಂಡಕ್ಕೆ ಕಟ್ಟಿಗೆಗಳನ್ನು ಹಾಕುತ್ತ ಬೆಂಕಿಯನ್ನು ಉರಿಸುತ್ತಿದ್ದಳು. ಹೀಗೆ ಹಿಮವಂತನು ತಪಸ್ಸು ಮಾಡುತ್ತಾ ಒಂದುವರ್ಷವು ಕಳೆಯಲು, ಹಗ್ಗಗಳ ಪೈಕಿ ಒಂದನ್ನು ಕತ್ತರಿಸಿ, ಪುನಃ ಅವನು ತಪಸ್ಸು ಮಾಡುತ್ತಿದ್ದನು. ಹೀಗೆ ಹಿಮವಂತನು ಒಂದು ವರ್ಷವು ಕಳೆಯಲು (ಪುನಃ ಹಗ್ಗಗಳ ಪೈಕಿ ಒಂದನ್ನು ಕತ್ತರಿಸುತ್ತಾ ತೊಂಬತ್ತೊಂಬತ್ತು ವರ್ಷಗಳವರೆಗೆ ತಪಸ್ಸು ಮಾಡುತ್ತಿದ್ದನು.) ಆಗ ಅವನ ತಲೆಯಿಂದ ತಪಸ್ಸಿನ ಅಗ್ನಿಯ ಹೊಗೆಯು ಹೊರಗೆ ಹೊರಟು, ಅದರಿಂದ ಮೂರುಲೋಕವೂ ವ್ಯಾಪಿಸಲ್ಪಟ್ಟಿತು. ॥೪೫-೪೬-೪೭॥

ಧೂಮವ್ಯಾಪ್ತಾ ವ್ಯಾಕುಲಿತಾ ದೇವಾ ಇಂಪ್ರಾದಯೋ ಯದಾ ।
ತದಾ ಭೀತಿಂ ಸಮಾಪನ್ನಾ ಶ್ಚಾಽಽಜಗ್ಮುರಗಸನ್ನಿಧಿಂ ॥೪೮॥

ಕುಂಡಾಽಽಗ್ನಿನಾ ಸಮೃದ್ಧಸ್ಯ ತಪೋಽಗ್ನೇರ್ಜ್ವಾಲಯಾ ತತಃ ।
ದೂರಾದೇವ ಪರಾವೃತ್ತಾಃ ಸತ್ಯಲೋಕಮುಪಾಽಽಯಯುಃ ॥೪೯॥

ಆಗತ್ಯ ಧಾತೃಸದನಂ ಸಭಾಯಾಂ ದದೃಶುರ್ವಿಧಿಂ ।
ದೃಷ್ಟ್ವಾ ತಂ ದೂರತೋ ದೇವಾ ಇಂದ್ರಾದ್ಯಾ ದಂಡವನ್ನತಾಃ ॥೫೦॥

ಪ್ರಣತಾನಮರಾನ್ ದೃಷ್ಟ್ವಾ ಬ್ರಹ್ಮಾ ಲೋಕಪಿತಾಮಹಃ ।
ಪ್ರಾಹ ಗಂಭೀರಯಾ ವಾಚಾ ಸಂಬೋಧ್ಯ ವಿಬುಧಾಧಿಪಂ ॥೫೧॥

ದೇವೇಂದ್ರೋತ್ತಿಷ್ಠ ದೇವೈಸ್ತ್ವಂ ಕಿಮಾಗಮನಕಾರಣಂ ।
ವದ ಶೀಘ್ರಂ ಭಯಂ ತ್ಯಕ್ತ್ವಾ ವಿಧಾಸ್ಯೇ ತೇ ಹ್ಯಭೀಪ್ಸಿತಂ ॥೫೨॥

---

ಹಿಮವಂತನ ತಪಸ್ಸಿನ ಅಗ್ನಿಯ ಧೂಮವು ವ್ಯಾಪಿಸಿದ್ದರಿಂದ ಕಳವಳಗೊಂಡ ಇಂದ್ರಾದಿ ದೇವತೆಗಳೂ ಭಯಗೊಂಡವರಾಗಿ, ಹಿಮವಂತನ ಸಮೀಪಕ್ಕೆ ಬಂದರು. ॥೪೮॥

ಅಲ್ಲಿ ಅಗ್ನಿಕುಂಡದ ಅಗ್ನಿಯಿಂದ ವೃದ್ಧಿಹೊಂದಿದ ಹಿಮವಂತನ ತಪಸ್ಸಿನ ಅಗ್ನಿಯ ಜ್ವಾಲೆಯನ್ನು ತಡೆಯಲಾರದೆ, ಇಂದ್ರಾದಿ ದೇವತೆಗಳು ದೂರದಲ್ಲಿಯೇ ಹಿಂತಿರುಗಿ ಸತ್ಯಲೋಕಕ್ಕೆ ಹೋದರು. ॥೪೯॥

ಇಂದ್ರನೇ ಮೊದಲಾದ ದೇವತೆಗಳು ಸತ್ಯಲೋಕದಲ್ಲಿ ಬ್ರಹ್ಮನ ಮನೆಗೆ ಬಂದು ಸಭೆಯಲ್ಲಿ ಕುಂಡಿಸಿದ್ದ ಅವನನ್ನು ದರ್ಶನಮಾಡಿದರು. ಅವರೆಲ್ಲರೂ ಅವನನ್ನು ನೋಡಿದ ಕೂಡಲೇ ದೂರದಲ್ಲಿಯೇ ದಂಡಾಕಾರವಾಗಿ ಪ್ರಣಾಮ ಮಾಡಿದರು. ಲೋಕಗಳಿಗೆ ಸೃಷ್ಟಿಕರ್ತನೂ, ಅಜ್ಜನೂ ಆದ ಬ್ರಹ್ಮನು, ನಮಸ್ಕಾರ ಮಾಡಿದ ದೇವತೆಗಳನ್ನು ನೋಡಿ, ಇಂದ್ರನನ್ನು ಸಂಬೋಧಿಸಿ, ಗಂಭೀರವಾದ ವಾಣಿಯಿಂದ ಈರೀತಿಯಲ್ಲಿ ಮಾತನಾಡಿದನು. ಎಲೈ ದೇವೇಂದ್ರನೇ, ಮೇಲೇಳು. ನೀನು ಇತರ ದೇವತೆಗಳೊಡನೆ ಇಲ್ಲಿಗೆ ಬರಲು ಕಾರಣವೇನು ? ನಿರ್ಭಯವಾಗಿ ನೀನು ಬಂದ ಕಾರಣವೇನೆಂಬುದನ್ನು ತಿಳಿಸು. ನಿನ್ನ ಇಷ್ಟವನ್ನು ನಡೆಸಿಕೊಡುವೆನು. ॥೫೦-೫೧-೫೨॥

ಶ್ರುತ್ವೈವಂ ಬ್ರಹ್ಮವಚನಮುತ್ತಸ್ಥುಃ ಸೇಶ್ವರಾಃಮರಾಃ ।
ಬದ್ಧಾಂಜಲಿಪುಟಸ್ತತ್ರ ಪ್ರಾಹೇಂದ್ರೋ ಮಂಥರಂ ವಚಃ ॥೫೩॥

ಜಗದೀಶ್ವರ ಭೀತಾಃ ಸ್ಮೋ ಭಯಹೇತುಂ ಬ್ರವೀಮಿ ತೇ ।
ಪೃಥಿವ್ಯಾಂ ಶೈಲರಾಜೋ ವೈ ಹಿಮವಾನಿತಿ ವಿಶ್ರುತಃ ॥೫೪॥

ಸ ಇದಾನೀಂ ತಪಃಶ್ರೇಷ್ಠಮಾತಿಷ್ಠತಿ ಚಿರಂ ಖಲು ।
ತದೀಹಿತಜ್ಞಾ ನ ವಯಂ ಕಿಂ ವಾ ವಾಂಛತಿ ಸಂಪ್ರತಿ ॥೫೫॥

ತಸ್ಯ ಮೂರ್ಧ್ನೋ ಮಹಾನ್ ಧೂಮೋ ನಿರ್ಗತಃ ಸ್ವರ್ಗವಾಸಿನಾಂ।
ಭಯಂ ಸುತೀವ್ರಂ ತೇನೇತ್ಥಮಭೂತ್ಪರಮದಾರುಣಂ ॥೫೬॥

ಸರ್ವತ್ರ ತೇನ ಧೂಮೇನ ವ್ಯಾಪ್ತಂ ಸ್ವರ್ಗಪುರಂ ನನು ।
ಅಮರಾಣಾಂ ಶರೀರಾಣಿ ದಹತ್ಯಗ್ನಿರಿವೋಲ್ಬಣಃ ॥೫೭॥

---

ದೇವೇಂದ್ರನೊಡನೆ ಸಮಸ್ತ ದೇವತೆಗಳೂ ಬ್ರಹ್ಮನ ಈ ಮಾತನ್ನು ಕೇಳಿ ಮೇಲೆದ್ದರು. ದೇವೇಂದ್ರನು ಕೈಜೋಡಿಸಿ ಮೆಲ್ಲಗೆ ಈರೀತಿಯಲ್ಲಿ ಬ್ರಹ್ಮನಿಗೆ ವಿಜ್ಞಾಪನೆ ಮಾಡಿದನು. ॥೫೩॥

ಓ ಜಗದೀಶ್ವರನಾದ ಬ್ರಹ್ಮನೇ, ನಾವೆಲ್ಲರೂ ಭಯಗೊಂಡಿದ್ದೇವೆ. ನಮ್ಮ ಭಯಕ್ಕೆ ಕಾರಣವೇನೆಂಬುದನ್ನು ನಿಮಗೆ ಹೇಳುವೆನು. ಭೂಲೋಕದಲ್ಲಿ ಹಿಮವಂತ ನೆಂಬ ಪರ್ವತರಾಜನು ಪ್ರಸಿದ್ಧನಾಗಿರುವುದು ಸರಿಯಷ್ಟೆ? ಅವನು ಬಹಳಕಾಲ ದಿಂದಲೂ ಘೋರವಾದ ತಪಸ್ಸನ್ನು ಮಾಡುತ್ತಿದ್ದಾನೆ. ಅವನು ಎತಕ್ಕಾಗಿ ತಪಸ್ಸನ್ನು ಮಾಡುತ್ತಿರುವನೆಂಬುದು ನಮಗೆ ಗೊತ್ತಿಲ್ಲ. ಅವನ ತಲೆಯಿಂದ ದೊಡ್ಡ ಹೊಗೆಯು ಹೊರಟು ಸ್ವರ್ಗವಾಸಿಗಳಾದ ನಮ್ಮವರೆಗೂ ವ್ಯಾಪಿಸಿದೆ. ಆದ್ದರಿಂದಲೇ ಬಹಳ ಘೋರವಾದ ಮತ್ತು ತೀಕ್ಷ್ಣವಾದ ಭಯವು ನಮಗೆ ಈಗ ಪ್ರಾಪ್ತವಾಗಿದೆ. ॥೫೪-೫೫-೫೬॥

ಆ ಹೊಗೆಯಿಂದ ಸ್ವರ್ಗದ ಪಟ್ಟಣದ ಎಲ್ಲಾ ಭಾಗವೂ ವ್ಯಾಪಿಸಲ್ಪಟ್ಟಿದೆ. ವೃದ್ಧಿಹೊಂದಿದ ಅಗ್ನಿಯಂತೆ, ಇದು ದೇವತೆಗಳಾದ ನಮ್ಮ ಶರೀರಗಳನ್ನೆಲ್ಲವನ್ನೂ ಸುಡುತ್ತಿದೆ. ॥೫೭॥

ಪ್ರಚಲತ್ಯಾಸನಂ ಭೂಯಃ ಸುಧರ್ಮಾಯಾಂ ಮಯಿ ಸ್ಥಿತೇ ।
ಅತ್ಯಸ್ವಸ್ಥಾ ದೇವಗಣಾ ವಿಂದಂತಿ ನ ಸುಖಂ ಕ್ವಚಿತ್ ॥೫೮॥

ತ್ವಮೇವ ಶರಣಂ ಲೋಕೇ ವಿಪನ್ನಾನಾಂ ಸದಾ ಹಿ ನಃ ।
ಏವಂ ನಿಶಮ್ಯೇಂದ್ರವಚೋ ವಿಶ್ವಸೃಟ್ ಧ್ಯಾನಮಾಸ್ಥಿತಃ ॥೫೯॥

ಕ್ಷಣೇನೋನ್ಮೀಲ್ಯ ನಯನೇ ಮಾಭೈರಿತಿ ಶತಕ್ರತುಮ್ ।
ಪ್ರವದನ್ನಿರ್ಜಗಾಮಾಥ ದೇವೈಸ್ಸಹ ವಿಧಿಸ್ತಥಾ ॥೬೦॥

ಆಗತ್ಯ ಕ್ಷೀರಪಾಥೋಧೇಃ ಶಯಾನಮುಪಕೂಲಕೇ ।
ಸಂಸ್ಥಿತಾ ದದೃಶು ರ್ದೇವಂ ಶಂಖಚಕ್ರಗದಾಧರಮ್ ॥೬೧॥

ಪ್ರಣಮ್ಯ ದಂಡವದ್ವಿಷ್ಣುಂ ಬದ್ಧಾಂಜಲಿಪುಟಾ ಬುಧಾಃ ।
ಅಸ್ತುವನ್ ಸಂಸ್ತವೈ ಸ್ತಸ್ಯ ವೈದಿಕೈಃ ಕೀರ್ತಿವರ್ಧನೈಃ ॥೬೨॥

ಅಥ ಪ್ರಣಮ್ಯಾಬ್ಜಯೋನಿ ರುಪಸೃತ್ಯ ಬುಧೇರಿತವಃ ।
ಹಿಮವತ್ತಪಸೋ ವೃತ್ತಮುವದಲ್ಲೋಕಸೃಟ್ತದಾ ॥೬೩॥

---

ಈ ಹೊಗೆಯು ನನ್ನ ಸಭೆಯಾದ ಸುಧರ್ಮಾ ಎಂಬುದರಲ್ಲಿ ನಾನು ಕುಳಿತಿರಲು ನನ್ನ ಪೀಠವನ್ನೇ ಅಲ್ಲಾಡಿಸುತ್ತದೆ. ದೇವತೆಗಳ ಸಮೂಹಗಳು ಬಹಳ ಅಸ್ವಸ್ಥರಾಗಿ ಸುಖವನ್ನು ಸ್ವಲ್ಪವೂ ಹೊಂದುತ್ತಿಲ್ಲ. ॥೫೮॥

ಕಷ್ಟದಲ್ಲಿ ಸಿಕ್ಕಿರುವ ನಮಗೆ ಯಾವಾಗಲೂ ನೀನೇ ರಕ್ಷಕನಷ್ಟೆ? ಹೀಗೆ ಹೇಳಿದ ಇಂದ್ರನ ಮಾತನ್ನು ಕೇಳಿ ಸೃಷ್ಟಿಕರ್ತನಾದ ಬ್ರಹ್ಮನು ಸ್ವಲ್ಪ ಹೊತ್ತು ಧ್ಯಾನಾಸಕ್ತನಾದನು. ॥೫೯॥

ಬ್ರಹ್ಮನು ಒಂದು ಕ್ಷಣಕಾಲದಲ್ಲಿಯೇ ಕಣ್ತೆರೆದು ಇಂದ್ರನನ್ನು ಕುರಿತು "ಎಲೈ ಇಂದ್ರನೇ, ಹೆದರಬೇಡ" ಎಂದು ಹೇಳಿ, ದೇವತೆಗಳೊಂದಿಗೆ ಬ್ರಹ್ಮನು ಹೊರಟನು. ॥೬೦॥

ಬ್ರಹ್ಮನು, ಇಂದ್ರನೇ ಮೊದಲಾದ ದೇವತೆಗಳೊಂದಿಗೆ ಕ್ಷೀರಸಮುದ್ರಕ್ಕೆ ಬಂದು, ಅಲ್ಲಿ ತೀರದ ಸಮೀಪದಲ್ಲಿ ಸಮುದ್ರದ ಮೇಲೆ ಮಲಗಿರುವ, ಶಂಖ, ಚಕ್ರ, ಗದಾ ಇವುಗಳನ್ನು ಹಿಡಿದಿರುವ ದೇವನಾದ ವಿಷ್ಣುವನ್ನು ದರ್ಶನ ಮಾಡಿದನು. ದೇವತೆಗಳೆಲ್ಲರೂ ವಿಷ್ಣುವಿಗೆ ದಂಡಾಕಾರವಾಗಿ ಪ್ರಣಾಮಮಾಡಿ ಕೈಜೋಡಿಸಿ

ಶ್ರುತ್ವಾ ವಿಷ್ಣುರ್ವಿಧಿಮುಖ್ಯೈಃ ಸಹ ತತ್ರ ದ್ರುತಂ ಯಯೌ ।
ಯತ್ರ ಪರ್ವತರಾಜನ್ಯಸ್ತಪೋ ದಾರುಣಮಾಸ್ಥಿತಃ ॥೬೪॥

ದೃಷ್ಟ್ವಾ ತಂ ತದ್ವಿಧಂ ವಿಷ್ಣುಃ ಏಕರಜ್ಜ್ವವಲಂಬಿನಮ್ ।
ಜ್ವಲದಗ್ನಿಕುಂಡಮೂರ್ಧ್ನಿ ಲಂಬಮಾನಂ ತಪಸ್ವಿನಮ್ ॥೬೫॥

ತಪಸ್ತೇಜೋರಾಶಿಮಯಂ ಭಾಸಂತಮಿವ ಭಾಸ್ಕರಮ್ ।
ನಿಶಾಮಯತ ಪತ್ನೀಂ ಚ ಪರಿಚರ್ಯಾರತಾಂ ತದಾ ॥೬೬॥

ವಿಷ್ಣುಸ್ತಾಮುಪಸಂಗಮ್ಯ ಪರ್ಯಪೃಚ್ಛದ್ವಿನೀತವತ್ ।
ಕಾ ತ್ವಮತ್ರ ಮಹಾರಣ್ಯೇ ಶುಶ್ರೂಷಸಿ ಕುತಸ್ತ್ವಿಮಮ್ ॥೬೭॥

ಕ ಏಷ ಕಿಮಭಿಪ್ರೇತ್ಯ ತಪ ಉಗ್ರಮುಪಸ್ಥಿತಃ ।
ಶ್ರುತ್ವಾ ಸಾ ವಿಷ್ಣುವಚನಂ ಪ್ರಾಹ ಮಂಜುಲಯಾ ಗಿರಾ ॥೬೮॥

---

ಕೊಂಡು, ಅವನ ಕೀರ್ತಿಯನ್ನು ವಿಶೇಷವಾಗಿ ಪ್ರಕಾಶಪಡಿಸುವ, ವೇದೋಕ್ತವಾದ ಸ್ತೋತ್ರಗಳಿಂದ ಅವನ ಸ್ತೋತ್ರವನ್ನು ಮಾಡಿದರು. ಅನಂತರದಲ್ಲಿ ಬ್ರಹ್ಮನು ವಿಷ್ಣುವಿಗೆ ನಮಸ್ಕರಿಸಿ, ದೇವತೆಗಳು ಹೇಳಿದ ಹಿಮವಂತನು ಮಾಡುತ್ತಿರುವ ತಪಸ್ಸಿನ ವಿಷಯವನ್ನು ಅವನಿಗೆ ವಿಜ್ಞಾಪನೆ ಮಾಡಿಕೊಂಡನು. ॥೬೧-೬೨-೬೩॥

ಬ್ರಹ್ಮನು ಹೇಳಿದ್ದನ್ನು ಕೇಳಿ, ಬ್ರಹ್ಮನೇ ಮೊದಲಾದವರೊಂದಿಗೆ ವಿಷ್ಣುವು ಶೀಘ್ರವಾಗಿ ಪರ್ವತರಾಜನಾದ ಹಿಮವಂತನು ಭಯಂಕರವಾದ ತಪಸ್ಸುಮಾಡುತ್ತಿದ್ದ ಪ್ರದೇಶಕ್ಕೆ ಹೋದನು. ॥೬೪॥

ವಿಷ್ಣುವು ಅಲ್ಲಿ ಒಂದೇ ಹಗ್ಗವನ್ನು ಅವಲಂಬಿಸಿಕೊಂಡು ಜ್ವಲಿಸುವ ಅಗ್ನಿಕುಂಡದ ಮೇಲುಗಡೆಯಲ್ಲಿ ನೇತಾಡುತ್ತಾ, ತಪೋನಿಷ್ಠನಾಗಿದ್ದ, ತಪಸ್ಸಿನಿಂದ ಉಂಟಾದ ತೇಜಸ್ಸಿನ ರಾಶಿಯಂತಿರುವ, ಸೂರ್ಯನಂತೆ ಪ್ರಕಾಶಿಸುತ್ತಿರುವ, ಆ ರೀತಿಯಲ್ಲಿ ಕಾಂತಿಪೂರ್ಣನಾಗಿದ್ದ ಹಿಮವಂತನನ್ನೂ ಅವನ ಸೇವೆಯಲ್ಲಿ ಆಸಕ್ತಳಾಗಿದ್ದ ಅವನ ಪತ್ನಿಯನ್ನೂ ಕಂಡನು. ॥೬೫-೬೬-೬೭॥

ವಿಷ್ಣುವು ಆಕೆಯನ್ನು ಸಮೀಪಿಸಿ ವಿನಯಶಾಲಿಯಂತೆ ಆಕೆಯನ್ನು ಈರೀತಿಯಲ್ಲಿ ಪ್ರಶ್ನಿಸಿದನು. ಓ ಮಹಿಳೆಯೇ, ನೀನು ಯಾರು ? ಈ ಮಹಾರಣ್ಯದಲ್ಲಿ ಇವನನ್ನು ಏಕೆ ಹೀಗೆ ಸೇವೆಮಾಡುತ್ತಿದ್ದೀಯೆ ? ಈತನು ಯಾರು ? ಯಾವ

ಪರ್ವತಾನಾಮಧಿಪತಿಃ ಹಿಮವಾನೇಷ ಮೇ ಪತಿಃ ।
ಅಪತ್ಯತ್ವೇ ಸಮಾನೇತುಂ ಭವಾನೀಮಭಿವಾಂಛತಿ ॥೧೯॥

ಪ್ರತಿಷಿದ್ಧ ಸ್ತಯಾ ದೇವ್ಯಾ ಶತಪಾಶಾಽವಲಂಬನಃ ।
ಸಂಕಲ್ಪ್ಯ ವರ್ಷಶತಕಂ ಲಂಬನ್ನಗ್ನಿ ಶಿಖೋರ್ಧ್ವತಃ ॥೨೦॥

ಪ್ರತಿವರ್ಷಂ ಹ್ಯೇಕಪಾಶಂ ಛಿನತ್ತಿ ನಗಭೂಪತಿಃ ।
ಏಕೋನವರ್ಷಶತಕಮತೀತಮಧುನಾ ಪುನಃ ॥೨೧॥

ವರ್ಷೇ ಶತತಮೇ ಚೈಕಂ ದಿನಂ ತು ಪರಿಶೇಷಿತಮ್ ।
ಯದಿ ಗೌರೀ ನ ಪ್ರಸನ್ನಾ ಶ್ವಃ ಕಲ್ಯೇ ಶೇಷಪಾಶಕಮ್ ॥೨೨॥

ಛಿತ್ವಾ ಕುಂಡೇ ಸ್ವಕಂ ದೇಹಂ ಭಸ್ಮಸಾತ್ಕರ್ತುಮುದ್ಯತಃ ।
ತದಾ ತ್ವಸ್ಮಿನ್ ಅಹಮಪಿ ಕುಂಡೇ ದೇಹಮಿಮಂ ಸ್ವಕಮ್ ॥೨೩॥

---

ಉದ್ದೇಶದಿಂದ ಈತನು ಈ ರೀತಿಯಾಗಿ ಉಗ್ರತಪಸ್ಸನ್ನು ಮಾಡುತ್ತಿದ್ದಾನೆ? ವಿಷ್ಣು ವಿನ ಈ ಮಾತನ್ನು ಕೇಳಿ ಹಿಮವಂತನ ಪತ್ನಿಯು ಮನೋಹರವಾದ ಧ್ವನಿಯಿಂದ ಈ ರೀತಿಯಲ್ಲಿ ಹೇಳಿದಳು. ॥೧೮॥

ಪರ್ವತಗಳಿಗೆ ಅಧಿಪತಿಯಾದ ಈತನು ನನ್ನ ಗಂಡನು. ಗೌರಿಯೇ ತನಗೆ ಮಗಳಾಗಿ ಹುಟ್ಟಬೇಕೆಂಬ ಅಭಿಲಾಷೆಯಿಂದ ಈ ರೀತಿಯಲ್ಲಿ ತಪಸ್ಸುಮಾಡುವುದನ್ನು ಕೈಗೊಂಡಿರುತ್ತಾನೆ. ॥೧೯॥

ಗೌರೀದೇವಿಯು ಅದನ್ನು ನಿಷೇಧಿಸಲು ಈತನು ನೂರು ಹಗ್ಗಗಳನ್ನು ಅವಲಂಬಿಸಿಕೊಂಡು ನೂರುವರ್ಷಗಳ ತಪಸ್ಸನ್ನು ಸಂಕಲ್ಪಮಾಡಿ, ಅಗ್ನಿಜ್ವಾಲೆಯ ಮೇಲೆ ಹಗ್ಗದ ಆಸರೆಯಲ್ಲಿದ್ದು ಒಂದು ವರ್ಷ ಮುಗಿದಕೂಡಲೆ ಒಂದೊಂದು ಹಗ್ಗ ವನ್ನು ಕತ್ತರಿಸುತ್ತಾನೆ. ಹೀಗೆ ನನ್ನ ಪತಿಯು ತಪಸ್ಸುಮಾಡುತ್ತಾ ತೊಂಬತ್ತು ವರ್ಷಗಳು ಕಳೆದುವು. ॥೨೦-೨೧॥

ಈಗ ನೂರುವರ್ಷವಾಗಲು ಒಂದು ದಿನ ಮಾತ್ರ ಉಳಿದಿದೆ. ಇದು ಮುಗಿ ಯುವುದರೊಳಗಾಗಿ ಗೌರಿಯು ಪ್ರಸನ್ನಳಾಗದೇ ಹೋದರೆ ನಾಳೆ ಮುಂಜಾನೆಯ ಹೊತ್ತಿಗೆ ಈಗ ಉಳಿದಿರುವ ಒಂದು ಹಗ್ಗವನ್ನೂ ಕತ್ತರಿಸಿ, ನನ್ನ ಪತಿಯು ತನ್ನ ದೇಹವನ್ನು ಅಗ್ನಿಕುಂಡದಲ್ಲಿ ಹೋಮಮಾಡಿ ಬೂದಿಯಾಗಲು ಪ್ರಯತ್ನಿಸಿದಾನೆ.

ತ್ಯಜಾಮಿ ಭರ್ತೃರ್ಲೋಕಾಯೇತ್ಯುವಾಚ ಪರ್ವತಪ್ರಿಯಾ ।
ಅಥ ವಿಷ್ಣುಃ ವಿಧಾತ್ರಾದ್ಯೈರ್ವಿಚಾರ್ಯ ಕೃತ್ಯಮುತ್ತರಮ್ ॥೭೪॥

ಉಪತಸ್ಥೇ ಶಿವಾಂ ಗೌರೀಮಸ್ತೌಷೀದ್ಭಕ್ತಿನಿರ್ಭರಃ ।
ನಮಸ್ತೇ ಗೌರಿ ಶರ್ವಾಣಿ ನಮೋ ಮಂಗಲರೂಪಿಣಿ ॥೭೫॥

ನಮಃ ಸರ್ವಜಗದ್ಧಾತ್ರಿ ಶರಣಾಗತವತ್ಸಲೇ ।
ಇತ್ಯಾದಿ ಬಹುಶಃ ಸ್ತುತ್ವಾ ಪ್ರಣತೋ ದಂಡವತ್ಸ ತಾಮ್ ॥೭೬॥

ಏವಂ ಹರೇಃ ಪ್ರಾರ್ಥನಯಾ ಪ್ರಸನ್ನಾ ಸಾ ಮಹೇಶ್ವರೀ ।
ಆಕಾಶರೂಪಿಣೀ ಪ್ರಾಹ ಸ್ನಿಗ್ಧಗಂಭೀರಯಾ ಗಿರಾ ॥೭೭॥

---

ನಾಳೆಯ ದಿನ ನಾನೂ ಕೂಡ ನನ್ನ ಪತಿಯು ಪ್ರಯಾಣಮಾಡುವ ಲೋಕಕ್ಕೆ ತೆರಳಲು ನನ್ನ ದೇಹವನ್ನು ಅಗ್ನಿಕುಂಡದಲ್ಲಿ ಸಮರ್ಪಿಸುವೆನು. ಎಂದು ಹಿಮವಂತನ ಪತ್ನಿಯು ಹೇಳಿದಳು. ಅನಂತರದಲ್ಲಿ ವಿಷ್ಣುವು ಬ್ರಹ್ಮನೇ ಮೊದಲಾದವರೊಂದಿಗೆ ಕಲೆತು ಯೋಚಿಸಿ ಈಗೇನನ್ನು ಮಾಡಬೇಕೆಂಬುದನ್ನು ನಿರ್ಧರಿಸಿದನು. ॥೭೨-೭೩-೭೪॥

ಅನಂತರದಲ್ಲಿ ವಿಷ್ಣುವು ಶಿವನ ಪತ್ನಿಯಾದ ಗೌರಿಯನ್ನು ಅಲ್ಲಿಯೇ ಉಪಾಸನೆ ಮಾಡಿದನು. ಭಕ್ತಿಯಿಂದ ತುಂಬಿದ ಹೃದಯವುಳ್ಳವನಾಗಿ ಇವನು ಆ ದೇವಿಯನ್ನು ಈರೀತಿಯಲ್ಲಿ ಸ್ತೋತ್ರಮಾಡಿದನು. "ಶಿವನ ಪತ್ನಿಯಾದ ಮಂಗಳ ಸ್ವರೂಪಳಾದ ಗೌರಿಯೇ, ನಿನಗೆ ಅನೇಕ ನಮಸ್ಕಾರಗಳು. ಎಲ್ಲಾ ಲೋಕಗಳಿಗೂ ತಾಯಿಯೂ, ಶರಣಾಗತರಾದ ಜನರಲ್ಲಿ ವಿಶೇಷ ಪ್ರೀತಿಯುಳ್ಳವಳೂ ಆದ ನಿನಗೆ ನಮಸ್ಕಾರಗಳು." ಇವೇ ಮೊದಲಾದ ಅನೇಕ ವಿಧವಾದ ಅನೇಕ ನಾಮಗಳಿಂದ ಆಕೆಯನ್ನು ಸ್ತೋತ್ರಮಾಡಿ ಶ್ರೇಷ್ಠಳಾದ ಗೌರಿಯ ಮೂರ್ತಿಗೆ ದಂಡಾಕಾರವಾಗಿ ಪ್ರಣಾಮಮಾಡಿದನು. ॥೭೫-೭೬॥

ಹೀಗೆ ವಿಷ್ಣುವು ಮಾಡಿದ ಪ್ರಾರ್ಥನೆಯಿಂದ ಮೆಚ್ಚಿ ಮಹೇಶ್ವರನ ಪತ್ನಿಯಾದ ಗೌರಿಯು ಆಕಾಶಸ್ವರೂಪಳಾಗಿ ಪ್ರೀತಿಯುಕ್ತವೂ ಗಂಭೀರವೂ ಆದ ಮಾತುಗಳಿಂದ ಅವನನ್ನು ಕುರಿತು ಹೀಗೆಂದಳು. ॥೭೭॥

ನಾರಾಯಣ ಕಿಮರ್ಥಂ ತೇ ಸಂಸ್ತುತಾಽಹಂ ವದಸ್ವ ತತ್ ।
ತ್ವಂ ಮೇಽಗ್ರಜ ಇತಿ ಪುರಾ ಪ್ರಾಹ ಶ್ರೀತ್ರಿಪುರೇಶ್ವರೀ ॥೭೮॥

ತತ್ತೇ ಸ್ಮೃತಾ ಹ್ಯವರಜಾ ಕಿಮರ್ಥಮಿಹ ತದ್ವದ ।
ಶ್ರುತ್ವಾ ಗೌರೀವಚೋ ವಿಷ್ಣುಃ ಪ್ರಾಹ ಸಸ್ಮಿತಪೂರ್ವಕಂ ॥೭೯॥

ಶೃಣು ಮದ್ವಚನಂ ಗೌರಿ ಪಶ್ಯ ಲೋಕೇ ಮಹದ್ಭಯಂ ।
ಉಪಸ್ಥಿತಂ ಪರ್ವತಸ್ಯ ತಪಸಾಽತಿ ಗರೀಯಸಾ ॥೮೦॥

ಪೂರಯಿತ್ವಾ ಪರ್ವತಸ್ಯ ವಾಂಛಿತಂ ಶಿವವಲ್ಲಭೇ ।
ರಕ್ಷ ಲೋಕಾನ್ ಸಭುವನಾನ್ ತಪೋಽಗ್ನಿಶಲಭಾಯಿತಾನ್ ॥೮೧॥

ಏತೇನ ಲೋಕಾಸ್ಸೇಂದ್ರಾದ್ಯಾ ಭವಾಮಃ ಪಾಲಿತಾ ವಯಂ ।
ಪಶ್ಯ ತ್ವನ್ಮೂರ್ತಿರಹಿತಂ ಶಂಕರಂ ತಪಸಿ ಸ್ಥಿತಂ ॥೮೨॥

---

ಎಲೈ ನಾರಾಯಣನೇ, ನೀನು ನನ್ನನ್ನು ಏಕೆ ಸ್ತೋತ್ರಮಾಡಿದೆ? ಎಂಬ ವಿಷಯವನ್ನು ಹೇಳು. ಶ್ರೀ ತ್ರಿಪುರಸುಂದರೀದೇವಿಯು ನೀನು ನನ್ನ ಅಣ್ಣನೆಂದು ಹಿಂದೆ ನನಗೆ ಹೇಳಿದ್ದಳು. ॥೭೮॥

ಎಲೈ ನಾರಾಯಣನೇ, ಆದ್ದರಿಂದ ನಿನ್ನ ತಂಗಿಯಾದ ನನ್ನನ್ನು ಏಕೆ ಸ್ಮರಿಸಿದೆಯೆಂಬುದನ್ನು ಹೇಳು." ಎಂದು ಹೇಳಿದ ಗೌರಿಯ ಮಾತನ್ನು ಕೇಳಿ ವಿಷ್ಣುವು ಮುಗುಳ್ನಗೆಯೊಡನೆ, ಈರೀತಿಯಲ್ಲಿ ಹೇಳಿದನು. ॥೭೯॥

ಎಲೌ ಗೌರಿಯೇ, ನನ್ನ ಮಾತನ್ನು ಕೇಳು. ಪರ್ವತರಾಜನಾದ ಹಿಮವಂತನು ಮಾಡುತ್ತಿರುವ ಘೋರವಾದ ತಪಸ್ಸಿನಿಂದ ಲೋಕದಲ್ಲಿ ವಿಶೇಷ ಭಯವುಂಟಾಗಿದೆ. ಎಲೌ ಶಿವನ ಪತ್ನಿಯಾದ ಪಾರ್ವತಿಯೇ, ಪರ್ವತರಾಜನಾದ ಹಿಮವಂತನ ಇಷ್ಟಾರ್ಥವನ್ನು ಪೂರ್ತಿಮಾಡಿ ಆತನ ತಪಸ್ಸಿನ ಅಗ್ನಿಗೆ ಶಲಭಗಳಂತಾಗುತ್ತಿರುವ ಸಮಸ್ತ ಲೋಕಗಳನ್ನೂ ಅಲ್ಲಿನ ಪ್ರಾಣಿಗಳನ್ನೂ ರಕ್ಷಿಸು.॥೮೦-೮೧॥

ನೀನು ಹಾಗೆ ಮಾಡುವುದರಿಂದ ಸ್ವರ್ಗಲೋಕವೇ ಮೊದಲಾದುವೂ ನಾವೂ ರಕ್ಷಿಸಲ್ಪಡುತ್ತೇವೆ. ಅಲ್ಲದೆ ನಿನ್ನ ಸ್ವರೂಪವನ್ನು ಕಾಣದೆ, ಶಿವನು ತಪಸ್ಸನ್ನು ಮಾಡುತ್ತಿರುವದನ್ನೂ ನೋಡು. ಪರಮೇಶ್ವರಿಯಾದ ತ್ರಿಪುರಾದೇವಿಯು ತಾನು

ಪುರಾಽಸ್ಮಾಕಂ ಜಗತ್ಕೃತ್ಯೇ ಸೃಷ್ಟ್ಯಾದೌ ವಿಶ್ರಮಾಯ ವೈ ।
ಸಸರ್ಜೈವ ತ್ರಿಮೂರ್ತಿಂ ಸಾ ತ್ರಿಪುರಾಪರಮೇಶ್ವರೀ ॥೮೩॥

ಯದಿತ್ವಮಶರೀರೈವ ಭವಿಷ್ಯಸಿ ಮಮಾನುಜೇ ।
ತದಾ ಶ್ರೀತ್ರಿಪುರೇಶಾನ್ಯಾ ಶಾಸನೋಲ್ಲಂಘನಂ ಭವೇತ್ ॥೮೪॥

ಇತ್ಯೇತತ್ತೇ ಪ್ರಕಥಿತಂ ಸ್ಮೃತಿಕಾರಣಮಂಬಿಕೇ ।
ಅಗ್ರೇ ಯಥಾ ತ್ವಂ ಜಾನಾಸಿ ತಥಾ ರಕ್ಷ ಚರಾಚರಂ ॥೮೫॥

ಶ್ರುತ್ವೈವಂ ವಿಷ್ಣುವಚನಂ ದೃಷ್ಟ್ವಾ ಲೋಕೇ ತಪೋಭಯಂ ।
ಶ್ರುತ್ವಾಜ್ಞಾಂ ತ್ರಿಪುರಾಯಾಶ್ಚ ಪ್ರೋವಾಚೇಮಿತಿ ವೈ ಹರಿಂ॥೮೬॥

ಅಥ ದೇವಾ ಹರಿಮುಖಾ ನತ್ವಾ ಗೌರೀಂ ಮಹೇಶ್ವರೀಂ ।
ಆಜ್ಞಾಮಾದಾಯ ಸ್ವಂ ಸ್ಥಾನಮಭಿಜಗ್ಮುರ್ಗತತ್ರಸಾಃ ॥೮೭॥

---

ವಿಶ್ರಾಂತಿ ಪಡೆಯುವುದಕ್ಕಾಗಿ ಜಗತ್ತಿನ ಸೃಷ್ಟಿಯೇ ಮೊದಲಾದುದನ್ನು ನಿರ್ವಹಿಸಲು ತ್ರಿಮೂರ್ತಿಸ್ವರೂಪರಾದ ನಮ್ಮನ್ನು ಸೃಷ್ಟಿಸಿದಳು. ಓ ನನ್ನ ತಂಗಿಯಾದ ಗೌರೀದೇವಿಯೇ, ನೀನು ಹೀಗೆ ಶರೀರವನ್ನು ಧರಿಸದೆ ಇದ್ದರೆ ಶ್ರೀ ತ್ರಿಪುರಾದೇವಿಯ ಆಜ್ಞೆಯನ್ನು ಮೀರಿದಂತಾಗುವುದು. ॥೮೨-೮೩-೮೪॥

ಎಲೌ ಜಗದಂಬಿಕೆಯಾದ ಗೌರೀದೇವಿಯೇ, ನಿನಗೆ ಈ ವಿಷಯವನ್ನು ಜ್ಞಾಪಿಸಿದ್ದೇನೆ. ಇನ್ನು ಮುಂದೆ ನಿನಗೆ ಹೇಗೆ ಮಾಡುವುದು ಸರಿ ಎಂದು ಹೊಳೆಯುವುದೋ ಹಾಗೆ ಮಾಡಿ ಈ ಎಲ್ಲ ಚರಾಚರ ಪ್ರಾಣಿಗಳನ್ನು ರಕ್ಷಿಸುವುದು ನಿನಗೇ ಸೇರಿದ್ದಾಗಿದೆ. ॥೮೫॥

ವಿಷ್ಣುವು ಹೇಳಿದ ಈಮಾತನ್ನು ಕೇಳಿ, ಲೋಕದಲ್ಲಿ ಹಿಮವಂತನ ತಪಸ್ಸಿನಿಂದುಂಟಾಗಿದ್ದ ಭಯವನ್ನೂ ಮನಗಂಡು, ತ್ರಿಪುರಾದೇವಿಯ ಆಜ್ಞೆಯನ್ನೂ ಮನ್ನಿಸಿ, ಗೌರೀದೇವಿಯು ವಿಷ್ಣುವನ್ನು ಕುರಿತು, " ಹಾಗೆಯೇ ಆಗಲಿ.'' ಎಂದಳು. ॥೮೬॥

ಅನಂತರದಲ್ಲಿ ವಿಷ್ಣುವೇ ಮೊದಲಾದ ದೇವತೆಗಳು ಮಹೇಶ್ವರನ ಪತ್ನಿಯಾದ ಗೌರಿಗೆ ನಮಸ್ಕರಿಸಿ, ಭಯವಿಲ್ಲದವರಾಗಿ ಆಕೆಯ ಅಪ್ಪಣೆಯನ್ನು ಕೇಳಿ ಪಡೆದು, ತಂತಮ್ಮ ಸ್ಥಾನಗಳಿಗೆ ತೆರಳಿದರು. ॥೮೭॥

ಅಥಾಽಕಾಶವಪುರ್ಗೌರೀ ಮಹಾಗಂಭೀರಯಾ ಗಿರಾ ।
ಪ್ರಾಹ ತಂ ಶೈಲಕುಲಪಂ ತಪೋಽಗ್ನಿಜ್ವಾಲಯಾಽಽವೃತಂ ॥೮೮॥

ಭೋ ಭೋ ಶೈಲಕುಲೇಶಾನ ಪ್ರಸನ್ನಾಽಸ್ಮಿ ನಿರೀಕ್ಷ ಮಾಂ ।
ಯತ್ತೇಽಭಿಲಷಿತಂ ತತ್ತೇ ದಿಶಾಮಿ ದ್ರುತಮೀರಯ ॥೮೯॥

ಏವಂ ವಚಃ ಪರ್ವತೇಶಃ ಶ್ರುತ್ವೇಷದ್ಧ್ಯಾನಮಾ(ಸಂ)ಸ್ಥಿತಃ ।
ಕಿಂ ಸ್ವಪ್ನ ಉತ ಸತ್ಯೋ ವೇತ್ಯೇವಂ ಸಂಚಿಂತ್ಯ ಚ ಕ್ಷಣಂ ॥೯೦॥

ಉನ್ಮೀಲ್ಯ ನಯನೇಽಪಶ್ಯತ್ ಪರಿತಃ ಪರ್ವತೇಶ್ವರಃ ।
ದೃಷ್ಟ್ವಾ ನ ಕಿಂಚಿತ್ತತ್ರಾಽಗಃ ಸ್ವಪ್ನಂ ಯಾವದಮನ್ಯತ ॥೯೧॥

ತಾವದ್ಗೌರೀ ಪುನಃ ಪ್ರಾಹ ವಚನಂ ಪ್ರಾಙ್ನಿರೂಪಿತಂ ।
ಸಂಶ್ರುತ್ಯ ಗೌರ್ಯಾ ವಚನಂ ಖರೂಪಾಯಾಃ ಶುಭೋದಯಂ॥೯೨॥

---

ತರುವಾಯ ಗೌರಿಯು, ಆಕಾಶಸ್ವರೂಪಳಾಗಿಯೇ ಇದ್ದರೂ, ಬಹಳ ಗಂಭೀರವಾದ ಧ್ವನಿಯಿಂದ ತಪಸ್ಸಿನ ಅಗ್ನಿಯ ಜ್ವಾಲೆಯಿಂದ ಕೂಡಿದ್ದ ಪರ್ವತಾಧಿಪತಿಯಾದ ಹಿಮವಂತನನ್ನು ಕುರಿತು, ಈ ರೀತಿಯಲ್ಲಿ ಹೇಳಿದಳು. ॥೮೮॥

ಎಲೈ ಪರ್ವತಾಧಿಪತಿಯಾದ ಹಿಮವಂತನೇ, ನಿನ್ನನ್ನು ನಾನು ಮೆಚ್ಚಿದ್ದೇನೆ. ನಾನು ಬಂದಿರುವುದನ್ನು ನೋಡು. ನಿನಗೆ ಇಷ್ಟವಾದುದನ್ನು ಶೀಘ್ರವಾಗಿ ಹೇಳು, ಕೊಡುವೆನು. ॥೮೯॥

ಈ ಮಾತನ್ನು ಕೇಳಿ ಪರ್ವತರಾಜನು ಸ್ವಲ್ಪ ಹೊತ್ತು ಧ್ಯಾನದಲ್ಲಿದ್ದು, ಒಂದುಕ್ಷಣಕಾಲ ಇದೇನು ಸತ್ಯವೊ? ಅಥವಾ ಸ್ವಪ್ನವೊ? ಎಂದು ಯೋಚಿಸಿ, ಕಣ್ದೆರೆದು ಸುತ್ತಲೂ ನೋಡಿದನು. ಆದರೆ ಹಿಮವಂತನು ಏನನ್ನೂ ಅಲ್ಲಿ ಕಾಣದೆ, ಅದು ಸ್ವಪ್ನವೇ ಇರಬಹುದೆಂದು ಭಾವಿಸುವಷ್ಟರಲ್ಲಿಯೇ ಗೌರಿಯು ಪುನಃ ಹಿಂದೆ ಹೇಳಿದ ಮಾತನ್ನೇ ಹೇಳಲು, ಆಕಾಶರೂಪದಲ್ಲಿದ್ದ ಗೌರಿಯು ಹೇಳಿದ ಮಂಗಳಕರವಾದ ಮಾತನ್ನು ಕೇಳಿ ಬಹಳ ಸಂತೋಷಪಟ್ಟನು. ॥೯೦-೯೧॥

ಹಿಮವಂತನು ಹೆಚ್ಚಾಗಿ ಸಂತೋಷಪಟ್ಟು, ಗೌರಿಯು ಮಾತನಾಡಿದ ದಿಕ್ಕಿನ ಕಡೆಗೆ ನಮಸ್ಕರಿಸಿದನು. ಆ ಬಳಿಕ ಭಕ್ತಿಭರಿತವಾದ ಮನಸ್ಸಿನಿಂದ ಗೌರೀದೇವಿ

ಸ ಹರ್ಷಮಧಿಕಂ ಪ್ರಾಪ್ತೋ ವವಂದೇ ತದ್ದಿಶಾಮುಖಃ ।
ಅಥ ಸ್ತುತ್ವಾ ಬಹುತರಂ ಭಕ್ತಿನಿರ್ಭರಿತಾಂತರಃ ॥೯೩॥

ಹಿಮಾದ್ರಿಃ ಸ್ವಂ ಹ್ಯಭಿಮತಂ ವರಂ ವವ್ರೇ ಮಹೇಶ್ವರೀಂ ।
ಗೌರಿ ಮೇ ಸುಪ್ರಸನ್ನಾಽಸಿ ಯದಿ ಮೇ ತಪಸಃ ಫಲಂ ॥೯೪॥

ಅಸ್ತಿ ಚೇನ್ಮಮ ಪುತ್ರೀತ್ವಂ ಕ್ಷೇತ್ರಸಂಭವತೋಽಸ್ತು ತೇ ।
ಅಭಿಲಾಷೋ ಮಹಾನತ್ರ ತ್ವಾಂ ದೇವೀಂ ಶಿಶುರೂಪಿಣೀಮ್ ॥೯೫॥

ವತ್ಸಲೋ ಲಾಲಯಿಷ್ಯಾಮಿ ಮುಗ್ಧಲೀಲಾಽವಲೋಕಕಃ ।
ಜಾಮಾತರಂ ಮಹಾದೇವಂ ಪ್ರಾಪ್ಯ ಸಂಪೂಜ್ಯ ವಾಽಂತತಃ ॥೯೬॥

ಸಂಚಿಂತ್ಯ ಲೋಕದ್ವಿತಯಂ ಸಂಭವಾನ್ಮ್ಯತಿನಿರ್ವೃತಃ ।
ಇತಿ ಮೇ ಪ್ರಾರ್ಥನಾಂ ದೇವಿ ಪೂರಯ ಪ್ರತಿಯಾಚಿತಾ ॥೯೭॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಅಷ್ಟಾವಿಂಶತಿತಮೋಽಧ್ಯಾಯಃ

---

ಯನ್ನು ಕುರಿತು, ತನ್ನ ಇಷ್ಟಾರ್ಥವನ್ನು ಪ್ರಾರ್ಥಿಸಿಕೊಂಡನು. ಓ ಗೌರೀಯೇ, ನೀನು ನನ್ನ ತಪಸ್ಸಿಗೆ ಮೆಚ್ಚಿರುವುದಾದರೆ, ನನ್ನ ತಪಸ್ಸಿಗೆ ಫಲವಿರುವುದಾದರೆ, ನೀನು ನನಗೆ ಮಗಳಾಗಿ ಹುಟ್ಟಬೇಕು. ದೇವಿಯಾದ ನೀನು ನನ್ನ ಹೆಂಡಿತಿಯಲ್ಲಿ ಹುಟ್ಟಿದ ಶಿಶುವಿನ ರೂಪಿನಲ್ಲಿರುವುದನ್ನು ನೋಡಬೇಕೆಂಬ ಅಭಿಲಾಷೆಯು ನನಗೆ ವಿಶೇಷವಾಗಿದೆ.'' ಎಂದನು. ॥೯೩-೯೪-೯೫॥

ನಾನು ನಿನ್ನ ಶಿಶುತನದ ಮೋಹಕವಾದ ಲೀಲೆಗಳನ್ನು ನೋಡುತ್ತಾ ಬಹಳ ಪ್ರೀತಿಯಿಂದ ನಿನ್ನನ್ನು ಆಡಿಸುವೆನು. ಮಹಾದೇವನಾದ ಶಿವನನ್ನು ಅಳಿಯ ನನ್ನಾಗಿ ಪಡೆದು ನಿಮ್ಮಿಬ್ಬರನ್ನೂ ಪೂಜಿಸಿ, ಇಹಲೋಕ ಪರಲೋಕಗಳೆರಡರಲ್ಲಿಯೂ ನನಗೆ ಸೌಖ್ಯ ಸದ್ಗತಿಗಳುಂಟೆಂಬುದನ್ನೂ ತಿಳಿದು ಅತ್ಯಂತವಾಗಿ ಆನಂದವನ್ನನುಭವಿಸುವೆನು. ಎಲೌ ದೇವಿಯೇ, ಇದೇ ನನ್ನ ಪ್ರಾರ್ಥನೆ. ಈ ನನ್ನ ಬೇಡಿಕೆಯನ್ನು ದಯವಿಟ್ಟು ಸಲ್ಲಿಸು. ಎಂದನು. ॥೯೬-೯೭॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಕಾಮೋಪಾಖ್ಯಾನದಲ್ಲಿ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಏಕೋನತ್ರಿಂಶೋಽಧ್ಯಾಯಃ ॥

### ಇಪ್ಪತ್ತೊಂಬತ್ತನೆಯ ಅಧ್ಯಾಯವು

ಶ್ರುತ್ವೈವಂ ಗಿರಿವರ್ಯಸ್ಯ ಪ್ರಾರ್ಥನಾಂ ಸಾ ಮಹೇಶ್ವರೀ ।
ಪ್ರೋವಾಚಾಽತಿಶುಭಾಂ ವಾಚಂ ನಭೋಮಾತ್ರಸ್ವರೂಪಿಣೀ(೦) ॥೧॥

ಶೃಣು ಪರ್ವತರಾಜನ್ಯ ಯಸ್ತ್ವಯಾ ಯಾಚಿತೋ ವರಃ ।
ಭವಿಷ್ಯತಿ ದ್ರುತಂ ಸರ್ವಂ ತನುಜಾಽಹಂ ಭವಾಮಿ ತೇ ॥೨॥

ಯನ್ಮಯಾ ತ್ವಂ ನಿಷಿದ್ಧೋಽಪಿ ತಪಸ್ಯೇವಾಭಿಸಂರತಃ ।
ಅನೀಹಂತ್ಯಾ ಮಮ ವಪುಃ ತಪಸಾ ತೇ ಸುಸಾಧಿತಮ್ ॥೩॥

ಇತ್ಯುಕ್ತ್ವಾ ಸಾ ಮಹಾದೇವೀ ಅಂತರ್ಧಾನಂ ಸಮಾಗಮತ್ ।
ಅಥಾಽದ್ರಿರಾಟ್ ಪ್ರಣಮ್ಯಾಂಬಾ ಮಾಜಗಾಮ ಸ್ವಮಾಲಯಮ್॥೪॥

---

ಮಹೇಶ್ವರಿಯಾದ ಗೌರಿಯು, ಆಕಾಶರೂಪಳಾಗಿಯೇ ಇದ್ದು, ಹಿಮವಂತನ ಈ ಪ್ರಾರ್ಥನೆಯನ್ನು ಕೇಳಿ, ಬಹಳ ಮಂಗಳಕರವಾದ ಈ ಮಾತನ್ನು ಆಡಿದಳು. ॥೧॥

ಎಲೈ ಹಿಮವಂತನೇ, ಕೇಳು ನೀನು ಅಪೇಕ್ಷಿಸಿದ ವರವು ಶೀಘ್ರವಾಗಿಯೇ ಸಿದ್ಧಿಸುವುದು. ನಾನು ಶರೀರಧಾರಣಮಾಡಲು ಇಷ್ಟಪಡದಿದ್ದರೂ ನೀನು ತಪಸ್ಸನ್ನು ಬಿಡದೆ ಮಾಡಿ, ನಾನು ಶರೀರವನ್ನು ಧರಿಸುವಂತೆ ಮಾಡಿದೆ. ಆದ್ದರಿಂದ ನಿನ್ನ ಮಗಳಾಗಿ ಹುಟ್ಟಿದಾಗ ನಾನು ಪರಶಿವ ಸ್ವರೂಪಳೆಂಬುದನ್ನು ನೀನು ಮರೆತು ಕೇವಲ ನಿನ್ನ ಮಗಳೆಂದೇ ಪ್ರಕೃತಿನಿಯಮಗಳಿಗೆ ಅನುಸಾರವಾಗಿರುವ ನಿನ್ನ ಬುದ್ಧಿಯಿಂದ ಭಾವಿಸುವೆ. ॥೨-೩॥

ಹೀಗೆ ಹೇಳಿ, ಮಹಾದೇವಿಯು ಅಂತರ್ಧಾನವಾದಳು. ತರುವಾಯ

ಮೇನಯಾ ಪ್ರಿಯಯಾ ಯುಕ್ತಃ ಪ್ರಾಪ್ತೇಷ್ಟಮುದಿತೋಽಭವತ್ ।
ತತಃ ಸ್ವಲ್ಪೇನ ಕಾಲೇನ ಪ್ರಶಸ್ತತರಸಂಮತೇ ॥೬॥

ಮೇನಕಾ ಹಿಮಶೈಲಸ್ಯ ಸತೀ ಗರ್ಭಮಧಾರಯತ್ ।
ನಿವಿಷ್ಟಾ ಸಾ ಪರಾ ತತ್ರ ಮಹಾಯೋಗಮಯೀ ಶಿವಾ ॥೭॥

ವಿಷ್ಣ್ವಾದಿದೇವಕಾರ್ಯಾರ್ಥಂ ಪರಾಯಾಶ್ಚ ನಿದೇಶತಃ ।
ಅಥ ಸಾ ಮೇನಕಾ ತತ್ರ ಗಿರಿರಾಜಗೃಹೋತ್ತಮೇ ॥೮॥

ಪರಾಶಕ್ತ್ಯಂಶಯೋಗೇನ ಬಭ್ರಾಜಾಽತಿತರಾಂ ತದಾ ।
ದದರ್ಶ ಹಿಮವಾನ್ ಕಾಂತಾಂ ದೇವತಾಮಿವ ರೂಪಿಣೀಮ್ ॥೯॥

ಉಪಲಕ್ಷ್ಯ ಸ್ವಾಽಭಿಮತಂ ಮುಮೋದಾಽತ್ಯಂತತೋ ಗಿರಿಃ ।
ಸಂಪೂರ್ಣಸರ್ವಾವಯವಾಂ ದೇಹಗೌರವಯೋಗಿನೀಮ್ ॥೧೦॥

---

ಹಿಮವಂತನು ಲೋಕಮಾತೆಯಾದ ಗೌರಿಯನ್ನು ನಮಿಸಿ ತನ್ನ ಮನೆಗೆ ಹಿಂತಿರುಗಿದನು. ॥೫॥

ಹಿಮವಂತನು ತನ್ನ ಪ್ರಿಯೆಯಾದ ಮೇನಾ ಎಂಬುವಳೊಡನೆ ಕೂಡಿ ಇಷ್ಟಪ್ರಾಪ್ತಿಯಾದುದರಿಂದ ಸಂತೋಷಗೊಂಡನು. ಅನಂತರದಲ್ಲಿ ಸ್ವಲ್ಪಕಾಲದಲ್ಲೇ ಅತ್ಯಂತ ಪ್ರಶಸ್ತವಾದ ವೇಳೆಯಲ್ಲಿ ಹಿಮವಂತನ ಪತ್ನಿಯಾದ ಮೇನಕಾದೇವಿಯು ಗರ್ಭಧಾರಣಮಾಡಿದಳು. ಆಗ ಮಹಾಯೋಗಸ್ವರೂಪಳಾದ ಗೌರಿಯೇ ಆಕೆಯ ಗರ್ಭದೊಳಗೆ ಪ್ರವೇಶಿಸಿ ಸೇರಿಕೊಂಡಳು. ॥೬-೭॥

ಗೌರಿಯು, ವಿಷ್ಣುವೇ ಮೊದಲಾದ ದೇವತೆಗಳ ಕಾರ್ಯಸಿದ್ಧಿಗಾಗಿಯೂ ಮತ್ತು ಶ್ರೇಷ್ಠಳಾದ ತ್ರಿಪುರಾದೇವಿಯ ಅಪ್ಪಣೆಯಂತೆಯೂ, ಮೇನಕಾದೇವಿಯ ಗರ್ಭದಲ್ಲಿ ಸೇರಿದ್ದಳು. ಅನಂತರದಲ್ಲಿ ಹಿಮವಂತನ ಶ್ರೇಷ್ಠವಾದ ಮನೆಯಲ್ಲಿ ಪರಾಶಕ್ತಿಯ ಅಂಶವು ಗರ್ಭದೊಳಗೆ ಸೇರಿದ್ದರಿಂದ ಮೇನಕೆಯು ಆ ದಿವ್ಯಾಂಶಸಂಗದಿಂದ ಬಹಳವಾಗಿ ಪ್ರಕಾಶಿಸುತ್ತಿದ್ದಳು. ಆಗ ಹಿಮವಂತನು ತನ್ನ ಪತ್ನಿಯು ಸಾಕ್ಷಾದ್ದೇವತೆಯೇ ಈ ರೂಪದಿಂದ ಬಂದಿರುವಳು ಎಂಬಂತೆ ಹೆಚ್ಚಾಗಿ ಮನೋಹರಳಾಗಿದ್ದುದನ್ನು ಕಂಡನು. ॥೮-೯॥

ಹಿಮವಂತನು ತನ್ನ ಇಷ್ಟಾರ್ಥವು ನೆರವೇರಿದ್ದನ್ನು ಕಂಡು ಬಹಳ ಸಂತೋಷಪಟ್ಟನು. ಆಗ ಇವನು ತುಂಬಿದ ಸಕಲ ಅವಯವಗಳುಳ್ಳ ಭಾರವಾದ

ಕಪೋಲಯೋಃ ಪಾಂಡುರಾಃಭಾಂ ಸ್ವೇದಬಿಂದುಲಸನ್ಮುಖಾಮ್ ।
ಶ್ರಾಂತಾಮಕಾಂಡತಃ ಶ್ಯಾಮಸ್ನಿಗ್ಧಚೂಚುಕಸುಸ್ತನೀಮ್ ॥೧೧॥

ಉದ್ಗಚ್ಛದ್ರೋಮಲತಿಕಾಂ ವಿಲೀನವಲಿಕೋದರಾಮ್ ।
ಸುಗೂಢಜಘನಾಂ ಲೀಲಾವಿಲಾಸೇಷ್ವಲಸಪ್ರಿಯಾಮ್ ॥೧೨॥

ಸಮಾಲೋಕ್ಯ ಜಹೌ ತಾಪಂ ಮಾನಸಂ ಪರ್ವತೇಶ್ವರಃ ।
ಯದಾ ಗೌರೀ ಮೇನಕಾಯಾ ಗರ್ಭಭೂತಾ ಬಭೌ ಶಿವಾ ॥೧೩॥

ತದಾ ಪ್ರಭೃತಿ ಶೈಲೇಂದ್ರವಿಷಯೇಷು ಶುಭೋದಯಃ ।
ವೃಕ್ಷಾಃ ಪುಷ್ಪಫಲಾಃಕ್ರಾಂತಾಃ ಪುಷ್ಪಾಣಿ ಚ ಫಲಾನಿ ಚ ॥೧೪॥

ನಿಬಿಡಾನಿ ರಸೈರ್ಗಂಧೈಃ ಪಕ್ಷಿಣಃ ಶಿವವಾಶಿತಾಃ ।
ಮಾರುತೋ ಮಂಪಗಮನೋ ಹಿತಸ್ಪರ್ಶಶ್ಚ ಪ್ರಾಣಿನಾಮ್ ॥೧೫॥

---

ದೇಹವುಳ್ಳ, ಕೆನ್ನೆಗಳಲ್ಲಿ ಬಿಳುಪುಬಣ್ಣದ ಕಾಂತಿಯನ್ನು ಹೊಂದಿರುವ, ಬೆವರು ನೀರಿನ ತೊಟ್ಟುಗಳಿಂದ ಪ್ರಕಾಶಮಾನವಾದ ಮುಖವುಳ್ಳ, ಅಕಾಲಗಳಲ್ಲಿಯೇ ಬಳಲುತ್ತಿರುವ, ಕಪ್ಪಗೂ ಮತ್ತು ಮನೋಹರವೂ ಆದ ಸ್ತನಾಗ್ರಭಾಗವುಳ್ಳ ಸ್ತನಗಳಿಂದ ಶೋಭಿಸುತ್ತಿರುವ ತನ್ನ ಪತ್ನಿಯನ್ನು ನೋಡಿದನು. ॥೧೦-೧೧॥

ಹಿಮವಂತನು ಹೊರಗೆ ಹೊರಟಿರುವ ಬಳ್ಳಿಗಳಂತಿರುವ ರೋಮಗಳುಳ್ಳ, ಒಳಗೆ ಅಡಗಿದ ತ್ರಿವಳಿಗಳುಳ್ಳ ಉದರವುಳ್ಳ, ಬಹಳ ಗೂಢವಾದ ಜಘನಪ್ರದೇಶಗಳುಳ್ಳ, ಲೀಲಾಸಮಯಗಳಲ್ಲೂ ಆಲಸ್ಯವನ್ನು ತೋರಿಸುತ್ತಿದ್ದ ಮೇನಕಾದೇವಿಯನ್ನು ನೋಡಿ ಮನಸ್ಸಿನಲ್ಲಿದ್ದ ಖೇದವನ್ನೆಲ್ಲವನ್ನೂ ಬಿಟ್ಟುಬಿಟ್ಟನು. ಗೌರಿಯು ಮೇನಕೆಯ ಗರ್ಭದಲ್ಲಿ ಸೇರಿದಕೂಡಲೇ ಹಿಮವಂತನರಾಜ್ಯದಲ್ಲೆಲ್ಲಾ ಕಡೆಯಲ್ಲಿಯೂ ಮಂಗಳದ ಸೂಚನೆಗಳೇ ಕಂಡುಬಂದವು. ಹೇಗೆಂದರೆ ಮರಗಳೆಲ್ಲವೂ, ಹೂವು, ಹಣ್ಣುಗಳಿಂದ ತುಂಬಿದ್ದುವು. ಮತ್ತು ಹೂವು ಹಣ್ಣುಗಳು ಚೆನ್ನಾಗಿದ್ದುವು. ॥೧೨-೧೩-೧೪॥

ಹೂವು ಮತ್ತು ಹಣ್ಣುಗಳು ಸೊಗಸಾದ ರಸ ಮತ್ತು ವಾಸನೆಯಿಂದ ಕೂಡಿದ್ದುವು. ಹಕ್ಕಿಗಳು ಮಂಗಳಕರವಾದ ಧ್ವನಿಯನ್ನು ಮಾಡುತ್ತಿದ್ದುವು. ಪ್ರಾಣಿಗಳಿಗೆ ಹಿತವನ್ನುಂಟುಮಾಡುವಂತೆಯೂ ಮತ್ತು ನಿಧಾನವಾಗಿಯೂ ಗಾಳಿಯು

ದ್ಯಾಃ ಶುಭ್ರಾಭ್ರಸಮಾಕೀರ್ಣಾ ಮೇಘಾಃ ಸೌರಭವರ್ಷಿಣಃ ।
ದಿನೇಶೋ ನಿರ್ಮಲಕರೋ ದಿಶೋ ವಿಮಲದರ್ಶನಾಃ ॥೧೬॥

ರಾತ್ರಿಸ್ತಾರೇಂದುಶೋಭಾಢ್ಯಾ ಜನಾಃ ಸಂಹೃಷ್ಟಮಾನಸಾಃ ।
ಏವಂವಿಧಾನಿ ಚಿಹ್ನಾನಿ ಸಂಭೂತಾನ್ಯಭಿತಸ್ತದಾ ॥೧೭॥

ಏವಂ ಚಿಹ್ನಾನಿ ಸಂವೀಕ್ಷ್ಯ ಗೌರ್ಯಾವಿರ್ಭಾವಮದ್ರಿರಾಟ್।
ಮೇನೇತಿಹರ್ಷಸಂಯುಕ್ತಸ್ತಂ ಕಾಲಮಭಿಕಾಂಕ್ಷಿತಮ್ ॥೧೮॥

ಅಥ ಪರ್ವತರಾಜಸ್ಯಕಾಂತಾ ಸರ್ವಶುಭೋದಯೇ ।
ಸುಷುವೇ ಕನ್ಯಕಾಂ ಕಾಲೇ ಗೌರೀ ಶಂಕರವಲ್ಲಭಾಮ್ ॥೧೯॥

ತಾಂ ತ್ರಿಣೇತ್ರಾಂ ಚಂದ್ರಚೂಡಾಂ ಚತುರ್ಬಾಹುವಿರಾಜಿತಾಮ್ ।
ಖಡ್ಗಂ ಖೇಟಂ ಮುದ್ಗರಂ ಚ ದಧಾನಾಂ ತೀಕ್ಷ್ಣಶೂಲಕಮ್ ॥೨೦॥

---

ಬೀಸುತ್ತಿತ್ತು. ಆಕಾಶವು ಶುಭ್ರವಾದ ಮೇಘಗಳಿಂದ ಕೂಡಿತ್ತು ಮತ್ತು ಮೇಘಗಳು ಸುವಾಸನೆಯಾದ ಮಳೆಯನ್ನು ಕರೆಯುತ್ತಿದ್ದವು! ಸೂರ್ಯನು ಶುದ್ಧವಾದ ಕಿರಣಗಳನ್ನು ಬಿಡುತ್ತಿದ್ದನು. ದಿಕ್ಕುಗಳೆಲ್ಲವೂ ನಿರ್ಮಲವಾಗಿ ಕಾಣುತ್ತಿದ್ದವು. ॥೧೫-೧೬॥

ರಾತ್ರಿಯು ನಕ್ಷತ್ರಗಳು ಮತ್ತು ಚಂದ್ರ ಇವುಗಳಿಂದ ಪೂರ್ಣವಾಗುತ್ತಿತ್ತು. ಜನರೆಲ್ಲರೂ ಅತ್ಯಂತ ಸಂತೋಷಭರಿತವಾದ ಮನಸ್ಸುಳ್ಳವರಾಗಿದ್ದರು. ಆಗ ಇಂಥಾ ಶುಭಚಿಹ್ನೆಗಳು ಎಲ್ಲಾ ಕಡೆಯಲ್ಲಿ ತೋರಿಬಂದವು. ॥೧೭॥

ಇಂಥಾ ಚಿಹ್ನೆಗಳನ್ನು ನೋಡಿ, ಪರ್ವತರಾಜನಾದ ಹಿಮವಂತನು ಬಹಳ ಹರ್ಷದಿಂದ ಕೂಡಿದವನಾಗಿ ಗೌರೀದೇವಿಯು ಮಗಳಾಗಿ ಹುಟ್ಟುವಳೆಂದು ತಿಳಿದು ಅದನ್ನು ಅತ್ಯಂತ ಇಷ್ಟವೂ ಶುಭಕಾರಕವೂ ಆದ ಕಾಲವೆಂದು ತಿಳಿದನು. ॥೧೮॥

ಅನಂತರದಲ್ಲಿ ಹಿಮವಂತನ ಪತ್ನಿಯು ಎಲ್ಲಾ ಮಂಗಳ ಚಿಹ್ನೆಗಳೂ ಉದಯಿಸಿರುವ ಆ ಪ್ರಶಸ್ತಕಾಲದಲ್ಲಿ ಶಂಕರನ ಪತ್ನಿಯಾದ ಗೌರೀದೇವಿಯು ಅವತಾರಸ್ವರೂಪಳಾಗಿರುವ ಕನ್ಯೆಯನ್ನು ಪ್ರಸವಿಸಿದಳು. ಹೇಗೆಂದರೆ, ॥೧೯॥

ಮೂರು ಕಣ್ಣುಗಳುಳ್ಳ ಚಂದ್ರನನ್ನೇ ಶಿರಸ್ಸಿನಲ್ಲಿ ಧರಿಸಿರುವ, ನಾಲ್ಕು ತೋಳುಗಳಲ್ಲಿ ಪ್ರಕಾಶಿಸುತ್ತಿರುವ ಕತ್ತಿ, ಖೇಟಕ, ಹಾರೆ, ತೀಕ್ಷ್ಣವಾದ ಶೂಲ

ಮೇಚಕಾಽಽಭಾಂ ರಕ್ತವಸ್ತ್ರಾಂ ಸರ್ವಾಽಽಭರಣಭೂಷಿತಾಮ್ ।
ವಿಲೋಕ್ಯೈವಂವಿಧಾಂ ದೇವೀಂ ಭೀತಾ ಶೈಲೇಂದ್ರವಲ್ಲಭಾ ॥೨೦॥

ಪ್ರಿಯಂ ಪರ್ವತರಾಜನ್ಯಮಾಹ ಯನ್ಮೇನಕಾ ಭೃಶಮ್ ।
ಆಗತ್ಯ ಹಿಮಶೈಲೇಂದ್ರೋ ದೃಷ್ಟ್ವಾ ಕನ್ಯಾಂ ಚ ತಾದೃಶೀಮ್ ।೨೨॥

ಮತ್ವಾ ಗೌರೀಂ ಮಹೇಶಾನೀಂ ನನಾಮ ಭುವಿ ದಂಡವತ್ ।
ಅಥೋತ್ಥಾಯ ಭಕ್ತಿಭರಾಽಽಕ್ರಾಂತಃ ಸಂಸ್ತವಮಾರಭತ್ ॥೨೩॥

ನಮೋ ದೇವಿ ದೇವೇಶಲೋಕೇಶಪೂಜ್ಯೇ
ನಮೋ ಗೌರಿ ಭಕ್ತಾರ್ತಿಸಂಹಾರಕರ್ತ್ರಿ ।
ನಮೋ ಲೋಕಜಾಲೈಕಹೇತುಸ್ವರೂಪೇ
ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥೨೪॥

---

ಮುಂತಾದ ಆಯುಧಗಳನ್ನು ಹಿಡಿದಿರುವ, ಮೇಚಕಪುಷ್ಪಕ್ಕೆ ಸಮಾನವಾದ ಕಾಂತಿಯುಳ್ಳ, ಕೆಂಪುಬಟ್ಟೆಯನ್ನು ಧರಿಸಿರುವ, ಎಲ್ಲಾ ಒಡವೆಗಳಿಂದಲೂ ಶೋಭಿತಳಾದ, ದೇವಿಯಾದ ಈ ಕನ್ಯಕೆಯನ್ನು ನೋಡಿ ಲೋಕಾತಿಶಯವಾದ ದಿವ್ಯ ಲಕ್ಷಣಗಳುಳ್ಳವಳಾಗಿ ಕಂಡುಬಂದದ್ದರಿಂದ ಹಿಮವಂತನ ಪತ್ನಿಯು ಹೆದರಿದಳು. ॥೨೦-೨೧॥

ಮೇನಕೆಯು ತನ್ನ ಪ್ರಿಯನಾದ ಹಿಮವಂತನಿಗೆ ಈ ಸಮಾಚಾರವನ್ನು ತಿಳಿಸಿದಳು. ಆದ್ದರಿಂದ, ಅವನು ಬಂದು ಹೀಗೆ ಅವತರಿಸಿರುವ ಕನ್ಯಕೆಯನ್ನು ನೋಡಿ, ಮಹೇಶ್ವರನ ಪತ್ನಿಯಾದ ಗೌರೀದೇವಿಯೇ ಈರೀತಿಯಲ್ಲಿ ಹುಟ್ಟಿರುವಳೆಂದು ತಿಳಿದು, ಕೂಡಲೇ ಅವಳಿಗೆ ದಂಡಾಕಾರವಾಗಿ ಭೂಮಿಯಲ್ಲಿ ಪ್ರಣಾಮ ಮಾಡಿದನು. ಅನಂತರದಲ್ಲಿ ಅವನು ಮೇಲಕ್ಕೆದ್ದು ಭಕ್ತಿಭಾವದಿಂದ ಪೂರ್ಣವಾದ ಮನಸ್ಸುಳ್ಳವನಾಗಿ ಆ ಕನ್ಯಕೆಯನ್ನು ಸ್ತೋತ್ರಮಾಡಲು ಆರಂಭಿಸಿದನು. ॥೨೨-೨೩॥

ಓ ದೇವಿಯೇ, ದೇವೇಶ್ವರ ಮತ್ತು ಲೋಕೇಶ್ವರರಿಗೂ ಪೂಜ್ಯಳಾಗಿರುವ ಗೌರೀದೇವಿಯೇ, ಭಕ್ತರ ಸಂಕಟಗಳನ್ನೆಲ್ಲವನ್ನೂ ನಾಶಮಾಡುವವಳೇ, ಸಮಸ್ತ ಲೋಕಕ್ಕೂ ಒಂದಾದ ಕಾರಣ ಸ್ವರೂಪಳೇ, ನಿನಗೆ ಅನೇಕ ನಮಸ್ಕಾರಗಳು. ॥೨೪॥

ಪರಾಶಕ್ತಿರೂಪಾ ಶಿವಸ್ಯ ತ್ವಮೇಕಾ
ಜಗಜ್ಜಾಲಸೂತ್ರಾತ್ಮಿಕಾ ಸರ್ವಸಂಸ್ಥಾ ।
ತ್ವಮೇಕಾಕ್ಷರಾರ್ಥೈಕರೂಪಾ ವಿರೂಪಾ
ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥೨೫॥

ನತಾನಾಂ ಭವಾಬ್ಧೌ ಗಭೀರೈತಿಭೀಮೇ
ಸ್ಥಿತಾನಾಂ ಸಮುದ್ಧಾರಣೇ ಕಾ ತ್ವದನ್ಯಾ ।
ಸಮರ್ಥಾ ತತೋ ಮಾಂ ಸಮುಭ್ಯುದ್ಧರಾऽऽರ್ತಂ
ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥೨೬॥

ಅವಿದ್ಯಾಮಹಾಗ್ರಾಹವಕ್ತ್ರೇ ನಿವಿಷ್ಟಂ
ಹೃಷೀಕಾರ್ಥವಾಂಛಾಮಹಾಸರ್ಪದಷ್ಟಮ್ ।
ವಿದಿತ್ವಾ ವಿಲಂಬಂ ನ ಯುಕ್ತಂ ಕೃಪಾऽऽರ್ದ್ರೇ
ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥೨೭॥

---

ನೀನು ಪರಾಶಕ್ತಿಸ್ವರೂಪಳೂ ಶಿವನ ಏಕಮಾತ್ರಪತ್ನಿಯೂ, ಪ್ರಪಂಚ ಸಮೂಹಕ್ಕೆ ಕಾರಣಳಾದ ಸೂತ್ರಸ್ವರೂಪಳೊ, ಎಲ್ಲೆಲ್ಲಿಯೂ ಇರುವವಳೂ, ಒಂದೇ ಅಕ್ಷರದ ಓಂಕಾರದ ಅರ್ಥಸ್ವರೂಪಳೂ, ವಿರೂಪಳೂ ಆಗಿದ್ದೀಯೆ. ಇಂಥಾ ಸ್ವರೂಪವುಳ್ಳ ಎಲೌ ಭವಾನಿಯೇ, ನಿನಗೆ ಅನೇಕ ನಮಸ್ಕಾರಗಳು. ||೨೫||

ಓ ಭವಾನೀದೇವಿಯೇ, ಅತ್ಯಂತ ಆಳವೂ ಮತ್ತು ದುಃಖಕ್ಲೇಶಗಳ ನಿರ್ಬಂಧದಿಂದ ಭಯಂಕರವೂ ಆದ ಸಂಸಾರವೆಂಬ ಸಾಗರದಲ್ಲಿ ಮುಳುಗಿರುವ ನಿನ್ನ ಭಕ್ತರಾದ ಜನರನ್ನು ಉದ್ಧಾರಮಾಡುವ ವಿಷಯದಲ್ಲಿ ನಿನ್ನನ್ನು ಬಿಟ್ಟು ಬೇರೊಬ್ಬರು ಹೇಗೆ ಸಮರ್ಥರಾದಾರು ? ಆದ್ದರಿಂದ ದುಃಖಪೀಡಿತನಾದ ನನ್ನನ್ನು ನೀನು ದಯೆಯಿಟ್ಟು ಉದ್ಧಾರಮಾಡು. ಓ ತಾಯಿಯೇ, ನಿನಗೆ ಅನೇಕ ನಮಸ್ಕಾರಗಳು. ||೨೬||

ಅಜ್ಞಾನವೆಂಬ ದೊಡ್ಡ ಮೊಸಳೆಯ ಬಾಯಲ್ಲಿ ಸಿಕ್ಕಿಬಿದ್ದಿರುವ, ಅನೇಕ ವಿಧವಾದ ಇಂದ್ರಿಯಗಳ ವಿಷಯಗಳಲ್ಲಿ ದುರಾಶೆಗಳೆಂಬ ದೊಡ್ಡ ಹಾವುಗಳಿಂದ ಕಚ್ಚಲ್ಪಡುತ್ತಲಿರುವ, ನನ್ನನ್ನು ಕನಿಕರದಿಂದ ಕರಗುವ ಮನಸ್ಸುಳ್ಳ ತಾಯಿಯೇ,

ಚಿರಾತ್ತ್ವತ್ಪದಂ ಮೋಚಕಂ ದುಃಖಪಾಶಾತ್
ನಚಾನ್ಯನ್ಮಮಾಸ್ತೀಹ ದುಃಖಪ್ರಶಾಂತ್ಯೈ ।
ಇತಿ ಸ್ವಾಂತರೇ ನಿಶ್ಚಿತಾರ್ಥಸ್ಸದಾಹಂ
ನಮಸ್ತೇ ನಮಸ್ತೇ ನಮಸ್ತೇ ಭವಾನಿ ॥೨೮॥

ಸ್ತುತ್ವೇತ್ಥಂ ಹಿಮಶೈಲೇಶಃ ನತ್ವಾ ಭೂಯಃ ಕೃತಾಂಜಲಿಃ ।
ಭಕ್ತ್ಯುದ್ರೇಕಘನಸ್ವಾಂತೇ ಗೌರೀಂ ಪ್ರೋವಾಚ ಶಂಕರೀಮ್ ॥೨೯॥

ದೇವೀದಾನೀಂ ಮಯಿ ಮಹಾನ್ ರಚಿತೋಽನುಗ್ರಹಸ್ತ್ವಯಾ ।
ಕಲ್ಪದ್ರುಮಾಶ್ರಿತಾನಾಂ ಕಿಂ ವಾಂಛಿತಾಪ್ತಿರ್ವಿಚಿತ್ರತಾ ॥೩೦॥

ಸ ಹಿ ಧನ್ಯೋ ಮದನ್ಯೋಽತ್ರ ಯದ್ದೇವೀ ಮದಪತ್ಯತಾಮ್ ।
ಸ್ವೀಚಕ್ರೇ ನ ಮನ್ಯೈತಸ್ಮಾದನ್ಯದ್ಭಾಗ್ಯಂ ಸುದುರ್ಲಭಮ್ ॥೩೧॥

---

ಉದ್ಧರಿಸಲು ದಯವಿಟ್ಟು ಈಗ ತಡಮಾಡಬೇಡ. ಕರುಣಾರಾಶಿಸ್ವರೂಪಳೂ, ಪಾರ್ವತಿಯೂ ಆದ ನಿನಗೆ ಅನೇಕ ನಮಸ್ಕಾರಗಳು. ॥೨೭॥

ದುಃಖವೆಂಬ ಪಾಶದಿಂದ ಬಿಡುಗಡೆ ಮಾಡಲು ನಿನ್ನ ಪಾದಕಮಲಗಳನ್ನು ಬಿಟ್ಟರೆ ಮತ್ತೊಂದಿಲ್ಲವೆಂದು ಬಹಳಕಾಲದಿಂದಲೂ ದೃಢವಾಗಿ ತಿಳಿದು, ನನ್ನ ಸಮಸ್ತ ದುಃಖನಾಶಕ್ಕೂ ನೀನೇ ಸಮರ್ಥಳೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ನಿನ್ನನ್ನು ಪ್ರಾರ್ಥಿಸುತ್ತಿದ್ದೇನೆ. ಓ ಭವಾನಿಯೇ, ನಿನಗೆ ಅನೇಕ ನಮಸ್ಕಾರಗಳು. ॥೨೮॥

ಹಿಮವಂತನು ಆ ಕನ್ಯಕೆಯನ್ನು ಹೀಗೆ ಸ್ತೋತ್ರಮಾಡಿ ಪುನಃ ಕೈಜೋಡಿಸಿಕೊಂಡು ಭಕ್ತಿಯ ಉದ್ರೇಕದಿಂದ ತುಂಬಿದ ಮನಸ್ಸುಳ್ಳವನಾಗಿ ಶಂಕರಿಯಾದ ಆಕೆಯನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೨೯॥

ಓ ದೇವಿಯೇ, ಈಗ ನೀನು ನನ್ನ ಮೇಲೆ ಮಹತ್ತಾದ ಅನುಗ್ರಹವನ್ನು ಉಂಟುಮಾಡಿದ್ದೀಯೆ! ಕಲ್ಪವೃಕ್ಷವನ್ನು ಆಶ್ರಯಿಸಿದವರಿಗೆ ಇಷ್ಟಾರ್ಥಪ್ರಾಪ್ತಿಯಾಗುವುದರಲ್ಲಿ ಆಶ್ಚರ್ಯವೇನಿದೆ? ॥೩೦॥

ಸಾಕ್ಷಾದ್ಗೌರೀದೇವಿಯಾದ ನೀನೇ ನನ್ನ ಮಗಳಾಗಿ ಹುಟ್ಟಿ ನನ್ನನ್ನು ಅನುಗ್ರಹಿಸಿದ್ದರಿಂದ ನನಗಿಂತಲೂ ಧನ್ಯನು ಬೇರೆ ಯಾವನಿರುವನು? ನನಗೆ ಇದಕ್ಕಿಂತಲೂ ಹೆಚ್ಚಿನ ಭಾಗ್ಯವು ಮತ್ತೇನಿದೆ? ॥೩೧॥

ಅಹಂ ಜಡಾऽತ್ಮಾ ದೀನೋऽಪಿ ಲೋಕೇ ದೇವ್ಯನುಕಂಪಿತಃ ।
ಮಹಾಭಾಗ್ಯವತಾಂ ಮೂರ್ಧ್ನಿ ನ್ಯಸ್ತವಾನ್ ಪದಮಂಬಿಕೇ ॥೩೨॥

ಅಹೋ ಭಾಗ್ಯಮಹೋ ಭಾಗ್ಯಂ ಮದನ್ಯೋ ಭಾಗ್ಯವಾನ್ನಹಿ ।
ಯದ್ದೇವೀಂ ತನುಜಾರೂಪಾಂ ಪಶ್ಯಾಮ್ಯಥ ಸ್ವಚಕ್ಷುಷಾ ॥೩೩॥

ದೇವಿ ಮೇ ಮಾನಸೇ ಕಿಂಚಿದಸ್ತಿ ತತ್ಪ್ರಾರ್ಥಯಾಮಿ ತೇ ।
ಬಿಭೇಮಿ ದೇಹಿ ದೇವ್ಯಾಜ್ಞಾಂ ಶರಣ್ಯೇ ಭಕ್ತವತ್ಸಲೇ ॥೩೪॥

ಶ್ರುತ್ವಾ ಹಿಮಗಿರೇರ್ವಾಕ್ಯಂ ಮಧುರಂ ಪ್ರಾಹ ಸಾ ತದಾ ।
ಜಹಿ ಭೀತಿಂ ಶೈಲರಾಜ ವದ ಯದ್ವಾಂಛಿತಂ ತವ ॥೩೫॥

---

ಓ ತಾಯಿಯಾದ ದೇವಿಯೇ, ಲೋಕದಲ್ಲಿ ಮೂಢನೂ ಮತ್ತು ದೀನನೂ ಆದಾಗ್ಯೂ ನಾನು ನಿನ್ನ ಕರುಣೆಗೆ ಪಾತ್ರನಾದ್ದರಿಂದ ಮಹಾಭಾಗ್ಯವಂತರ ಮೇಲೂ ನನ್ನ ಕಾಲನ್ನು ಈಗ ಇಟ್ಟಿದ್ದೇನೆ. ಎಂದರೆ ಎಲ್ಲಾ ಭಾಗ್ಯಶಾಲಿಗಳನ್ನೂ ಮೀರಿಸಿರುತ್ತೇನೆ. ॥೩೨॥

ಓಹೋ ನನಗೆ ಒಳ್ಳೆಯ ಅದೃಷ್ಟವು ಫಲಿಸಿದೆ! ನನ್ನ ಅದೃಷ್ಟವು ಅತಿಶಯದ ಫಲವುಳ್ಳದ್ದಾಗಿದೆ! ನನಗಿಂತಲೂ ಮಿಗಿಲಾದ ಬೇರೊಬ್ಬ ಭಾಗ್ಯವಂತನಿಲ್ಲ. ಏಕೆಂದರೆ, ಸಾಕ್ಷಾದ್ಗೌರೀದೇವಿಯೇ ನನ್ನ ಮಗಳಾಗಿ ಹುಟ್ಟಿರುವುದನ್ನು ನನ್ನ ಸ್ವಂತ ಕಣ್ಣುಗಳಿಂದಲೇ ನೋಡುತ್ತಿದೇನೆ! ಅದರೂ, ॥೩೩॥

ಓ ದೇವಿಯೇ, ನನ್ನ ಮನಸ್ಸಿನಲ್ಲಿರುವ ಒಂದು ವಿಷಯವನ್ನು ಕುರಿತು ನಿನ್ನನ್ನು ಪ್ರಾರ್ಥಿಸಬೇಕೆಂದಿದ್ದೇನೆ. ಆದರೆ ಅದನ್ನು ಪ್ರಾರ್ಥಿಸಲು ಹೆದರಿಕೆಯಾಗುತ್ತಿದೆ. ಭಕ್ತವತ್ಸಲಳೂ, ಶರಣಾಗತ ರಕ್ಷಕಳೂ ಆದ ದೇವಿಯೇ, ನೀನು ಆಜ್ಞೆಯನ್ನು ನೀಡಿದರೆ ಅದನ್ನು ಬೇಡುವೆನು. ॥೩೪॥

ಹಿಮವಂತನ ಈ ಮಾತನ್ನು ಕೇಳಿ, ದೇವಿಯು ಮಧುರವಾದ ಮಾತುಗಳಿಂದ ಈ ರೀತಿಯಲ್ಲಿ ಹೇಳಿದಳು. ಎಲೈ ಪರ್ವತರಾಜನೇ, ಭಯವನ್ನು ಬಿಡು, ನಿನ್ನ ಇಷ್ಟಾರ್ಥವೇನಿದೆಯೋ ಅದನ್ನು ಬೇಡಿಕೋ. ॥೩೫॥

ಮದ್ಭಕ್ತೇನ ಹಿ ನ ಪ್ರಾಪ್ಯಮಿತಿ ಕಿಂಚಿನ್ನವಿದ್ಯತೇ ।
ಶ್ರುತ್ವಾ ಪ್ರಣಮ್ಯ ಶೈಲೇಶೋ ವಾಕ್ಯಮಾಹ ಕೃತಾಂಜಲಿಃ ॥೩೬॥

ದೇವಿ ತ್ವಾಂ ಪ್ರಾಕೃತಶಿಶುರೂಪಾಂ ದ್ರಷ್ಟುಂ ಸಮೀಹಿತಮ್ ।
ಶಿಶೋರ್ಲೀಲಾಽವಲೋಕೇನ ತುಷ್ಯಂತಿ ಪಿತರೋ ಭುವಿ ॥೩೭॥

ದೇವತಾರೂಪಿಣೀಂ ದೃಷ್ಟ್ವಾ ಸಾ ಮೇ ಪ್ರೀತಿರ್ನ ವಿದ್ಯತೇ ।
ಯಾ ಪಿತ್ರೋರ್ವರ್ಧತೇಽಪತ್ಯೇ ಪ್ರಜಾಲೋಕಪ್ರಪೂರ್ತಿದಾ ॥೩೮॥

ಏಷಾ ಮೇ ಪ್ರೇಯಸೀ ಮೇನಾ ಶಿಶುಂ ತ್ವಾಂ ದ್ರಷ್ಟುಮೀಪ್ಸತಿ ।
ಕಾಲಿಕಾ ತ್ವಂ ಕರಾಲಾಽಭಾ ನ ಹ್ಯೇವಂರೂಪಮೀಪ್ಸಿತಮ್ ॥೩೯॥

ಭವ ಗೌರೀ ವರ್ಣತೋಽಪಿ ಭವೇನ್ನಾಮಾಽಪಿ ಸಾರ್ಥಕಮ್ ।
ಅಥ ತ್ವಯಾ ಚ ಯೋ ದತ್ತಃ ಶಾಪಸ್ತ್ವದ್ರೂಪವೀಕ್ಷಣೇ ॥೪೦॥

---

ಎಲೈ ಹಿಮವಂತನೇ, ನನ್ನ ಭಕ್ತರಾದವರು ನನ್ನಿಂದ ಪಡೆಯಲಾಗದ ವಸ್ತುವಾವುದೂ ಇಲ್ಲ. ಎಂದು ಹೇಳಿದ ದೇವಿಯ ಮಾತನ್ನು ಕೇಳಿ, ಹಿಮವಂತನು ಆಕೆಗೆ ನಮಸ್ಕರಿಸಿ ಕೈಜೋಡಿಸಿಕೊಂಡು ಈ ರೀತಿಯಲ್ಲಿ ಹೇಳಿದನು. ॥೩೬॥

ಓ ದೇವಿಯೇ, ನೀನು ಸಾಮಾನ್ಯ ಶಿಶುಗಳಂತೆ ಸ್ವರೂಪವನ್ನು ಹೊಂದಿರುವುದನ್ನು ನೋಡಬೇಕೆಂಬುದೇ ನನ್ನ ಅಭಿಲಾಷೆಯಾಗಿದೆ. ಏಕೆಂದರೆ, ತಂದೆ ತಾಯಿಯರು ಲೋಕದಲ್ಲಿ ಮಕ್ಕಳ ಲೀಲೆಗಳನ್ನು ನೋಡಿ ಸಂತೋಷಪಡುತ್ತಾರಷ್ಟೆ ? ॥೩೭॥

ಹೀಗೆ ನೀನು ದೇವತಾಸ್ವರೂಪದಲ್ಲಿದ್ದರೆ ತಂದೆಯಾದ ನನಗೆ ಅಷ್ಟು ಸಂತೋಷವೃದ್ಧಿಯಾಗುವುದಿಲ್ಲ. ಲೋಕಕ್ಕೆ ಅನುಗುಣವಾದ ಸ್ವರೂಪದಿಂದ ನೀನು ಕಾಣಿಸಿಕೊಂಡಿರುವುದಾದರೆ ತಾಯಿತಂದೆಯರಿಗೆ ಮಕ್ಕಳಲ್ಲಿರುವ ವಿಶೇಷವಾದ ಪ್ರೀತಿಗೆ ಸಫಲತೆಯುಂಟಾಗುವುದು. ಅಲ್ಲದೆ ನನ್ನ ಹೆಂಡಿತಿಯಾದ ಮೇನಕೆಯು ಸಾಮಾನ್ಯಶಿಶುವಿನಂತೆ ನೀನೂ ಸ್ವರೂಪವನ್ನು ಧರಿಸಿದ್ದರೆ ಸಂತೋಷಪಡುತ್ತಾಳೆ. ಕಾಳಿಕಾಸ್ವರೂಪದಲ್ಲಿ ಭಯಂಕರವಾಗಿ ಈಗ ಇರುವ ನಿನ್ನ ದೇವತಾಸ್ವರೂಪವು ಅವಳಿಗೆ ಮನಸ್ಸಿಗೆ ಅಪ್ಯಾಯಕವಾಗಿಲ್ಲವು. ॥೩೮-೩೯-॥

ಕುರು ತತ್ರಾಽನುಗ್ರಹಂ ಮೇ ಪ್ರಾರ್ಥಿತಾಽಸಿ ಮಹೇಶ್ವರಿ ।
ಏವಂ ಹಿಮಾದ್ರಿವಚನಂ ಶ್ರುತ್ವೋವಾಚ ಶಿವಪ್ರಿಯಾ ॥೪೧॥

ಅದ್ರಿರಾಜ ಮಯಾ ದತ್ತಃ ಶಾಪಸ್ತೇ ಪ್ರೀತಿಕಾರಣಮ್ ।
ಮದ್ರೂಪಾಽವಿಸ್ಮೃತೌ ನ ಸ್ಯಾದಪತ್ಯಪ್ರೀತಿರೀಪ್ಸಿತಾ ॥೪೨॥

ಕಿಂತು ಕಾಲೇನಾಽಽತ್ಮರೂಪಂ ದರ್ಶಯಾಮಿ ಮಹೋದಯಮ್ ।
ಇತ್ಯುಕ್ತ್ವಾ ನಿಜರೂಪಂ ತತ್ ಸಂಜಹಾರ ಮಹೇಶ್ವರೀ ॥೪೩॥

ಕೃತ್ವಾ ರೂಪಂ ಶಿಶುರಿವ ರುರೋದ ಪರ್ವತಾಽಽತ್ಮಜಾ ।
ಶ್ರುತ್ವಾ ತದ್ರುದಿತಂ ದೇವ್ಯಾ ಪರ್ವತಃ ಪ್ರಿಯಯಾ ಸಹ ॥೪೪॥

---

ಓ ದೇವಿಯೇ, ನಿನ್ನ ಮೈಯಿನ ಬಣ್ಣದಲ್ಲಿಯೂ ಬಿಳಿಗೆಂಪಿನಿಂದ ನಿನ್ನ ಗೌರೀ ಎಂಬ ನಾಮವು ಸಾರ್ಥಕವಾಗುವಂತೆ ಅನುಗ್ರಹಿಸು. ನೀನು ಹಿಂದೆ ಶಾಪವನ್ನು ಕೊಟ್ಟಿಯಲ್ಲಾ ಅದನ್ನು ಹೋಗಲಾಡಿಸಿ ನಿನ್ನ ಸುಂದರರೂಪವನ್ನು ನೋಡುವ ಭಾಗ್ಯವನ್ನು ನನಗೆ ಕರುಣಿಸು. ಹೀಗೆ ಹಿಮವಂತನು ಹೇಳಿದ ಮಾತನ್ನು ಕೇಳಿ ಶಿವಪ್ರಿಯೆಯಾದ ಗೌರಿಯು ಅವನನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೪೦-೪೧॥

"ಎಲೈ ಪರ್ವತರಾಜನೇ, ನಾನು ನಿನಗೆ ಹಿಂದೆ ಶಾಪಕೊಟ್ಟದ್ದು ನಿನಗೆ ಅನುಕೂಲಕ್ಕಾಗಿಯೇ ಎಂದು ತಿಳಿ. ಏಕೆಂದರೆ ನನ್ನ ನಿಜವಾದ ದೇವೀಸ್ವರೂಪವನ್ನು ನೀನು ಮರೆಯದಿದ್ದರೆ, ನಿನಗೆ ಮಗಳಲ್ಲಿರುವ ನಿಜವಾದ ಪ್ರೀತಿಯು ಉಂಟಾಗದೇ ಹೋದೀತು." ॥೪೨॥

"ಆದರೆ ಬೇರೊಂದು ತಕ್ಕ ಕಾಲದಲ್ಲಿ ಮಹಾತ್ಮ್ಯೆಯುಳ್ಳ ನಿಜವಾದ ನನ್ನ ರೂಪವನ್ನು ನಿನಗೆ ತೋರಿಸುವೆನು. ಎಂದು ಹೇಳಿ ಮಹೇಶ್ವರಿಯು ಆ ತನ್ನ ನಿಜರೂಪವನ್ನು ಮರೆಮಾಡಿಬಿಟ್ಟಳು. ॥೪೩॥

ಪರ್ವತರಾಜನ ಮಗಳಾದ ಪಾರ್ವತಿಯು ಮಗುವಿನಂತೆ. ರೂಪವನ್ನು ತೆಗೆದುಕೊಂಡು ಅಳಲು ಪ್ರಾರಂಭಿಸಿದಳು. ಶಿಶುವಿನ ಆ ರೋದನವನ್ನು ಕೇಳಿ, ಹಿಮವಂತನು ತನ್ನ ಪ್ರಿಯೆಯೊಂದಿಗೆ ಎಲ್ಲಾ ಕಷ್ಟಗಳನ್ನೂ ಆ ಸಂಗತಿಯನ್ನೂ ವೈಷ್ಣವೀಮಾಯೆಯ ಮಹಿಮೆಯಿಂದ ಮರೆತನು. ॥೪೪॥

ವಿಸಸ್ಮಾರಾಽಖಿಲಂ ತಚ್ಚ ಕನ್ಯಾಂ ಜಾತಾಮಮನ್ಯತ ।
ಪ್ರಸೂತಿಪೀಡಿತೇವಾಸೀನ್ಮೇನಕಾ ಮೋಹಿತಾ ಸತೀ ॥೪೫॥

ಅಥ ತತ್ರ ಜನಾಃ ಶ್ರುತ್ವಾ ರುದಿತಂ ರಾಜವೇಶ್ಮನಿ ।
ಅಭ್ಯಾಽಜಗ್ಮುಃ ದ್ರುತತರಂ ಪೃಚ್ಛಂತಃ ಕಿಮಭೂದಿತಿ ॥೪೬॥

ಕನ್ಯಾಪ್ರಸೂತಿಂ ಸಂಶ್ರುತ್ಯ ಸ್ತ್ರಿಯಃ ಸರ್ವಾಸ್ಸಮಾಗತಾಃ ।
ದದೃಶುಃ ಸೂತಿಕಾಽಗಾರೇ ಕೋಟಿಸೂರ್ಯಸಮದ್ಯುತಿಮ್ ॥೪೭॥

ನೂತನಸ್ವರ್ಣವರ್ಣಾಭಾಂ ಪದ್ಮಪತ್ರಾಯತೇಕ್ಷಣಾಮ್ ।
ಪೂರ್ಣಚಂದ್ರಾನನಾಂ ರಕ್ತಪಾಣಿಪಾದತಲಾನ್ವಿತಾಮ್ ॥೪೮॥

ಸಮಾನದೇಹವಿನ್ಯಾಸಾಂ ಚಿತ್ರಾಽಲಿಖಿತಸುಂದರೀಮ್ ।
ಕನ್ಯಾಮದ್ಭುತರೂಪಾಂ ತಾಂ ಜಹರ್ಷುಃ ಸರ್ವತೋ ಜನಾಃ ॥೪೯॥

---

ಪರ್ವತರಾಜನು ತನ್ನ ಪತ್ನಿಯೊಡನೆ ಗೌರೀದೇವಿಯ ನಿಜರೂಪದರ್ಶನ, ಸಲ್ಲಾಪ, ಅನುಗ್ರಹ, ಮುಂತಾದ ಎಲ್ಲವನ್ನೂ ಮರೆತು ಇತರ ಸಾಮಾನ್ಯ ಗೃಹಸ್ಥನಂತೆ ತನಗೆ ಕನ್ಯಾಶಿಶುವಾಯಿತೆಂದು ತಿಳಿದನು. ಮೇನಕೀದೇವಿಯೂ ಕೂಡ ಅಜ್ಞಾನದಿಂದ ಪ್ರಸವವೇದನೆಯನ್ನನುಭವಿಸುವಂತಿದ್ದಳು. ॥೪೫॥

ತರುವಾಯ ರಾಜನ ಮನೆಯಲ್ಲಿ ಶಿಶುವಿನ ರೋದನದ ಧ್ವನಿಯನ್ನು ಕೇಳಿ ಬಹು ಶೀಘ್ರವಾಗಿ ಅಲ್ಲಿದ್ದವರು ನೆರೆದು ಏನಾಯಿತೆಂದು ಪ್ರಶ್ನಿಸುತ್ತಾ ತಿಳಿಯುತ್ತಿದ್ದರು. ॥೪೬॥

ರಾಣಿಯಾದ ಮೇನಕಾದೇವಿಗೆ ಹೆಣ್ಣುಮಗುವಾದುದನ್ನು ಕೇಳಿ ಎಲ್ಲಾ ಹೆಂಗಸರೂ ಅಲ್ಲಿಗೆ ಬಂದು ಸೇರಿದರು. ಅವರೆಲ್ಲರೂ, ಹೆರಿಗೆಯಮನೆಯಲ್ಲಿ, ಕೋಟಿ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ, ಹೊಸ ಚಿನ್ನದ ಬಣ್ಣದಂತೆ ಕಾಂತಿಯುಳ್ಳ, ಕಮಲದ ಎಲೆಯಂತೆ ವಿಶಾಲವಾದ ಕಣ್ಣುಗಳುಳ್ಳ, ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳ, ಕೆಂಪಾದ ಕೈ ಅಂಗಾಲುಗಳಿಂದ ಕೂಡಿದ್ದ, ಪರಸ್ಪರವಾಗಿ ಅನುರೂಪವಾಗಿರುವ ಅವಯುವಗಳಿಂದ ಕೂಡಿದ ದೇಹದ ರಚನೆಯುಳ್ಳ, ಚಿತ್ರದಲ್ಲಿ ಚಿತ್ರಗಾರನು ಕೌಶಲದಿಂದ ಬರೆದ ಸುಂದರಿಯಂತಿದ್ದ ಆಶ್ಚರ್ಯಕರವಾದ

ತದಂತರೇ ಸಮಾಗತ್ಯ ಧಾತ್ರೀ ಕನ್ಯಾಂ ಸಮಾದದೇ ।
ಪರ್ವತೇಂದ್ರಸ್ತದಾ ತೀರ್ಥಂ ಸಂಸ್ಪೃಶ್ಯ ವಿಧಿವದ್ಧ್ರುತಮ್ ॥೫೦॥

ಧೇನೂನಾಮಯುತಂ ತದ್ವದ್ದ್ವಿಶಾಽಯುತಸುವರ್ಣಕಮ್ ।
ಪ್ರಾಯಚ್ಛದ್ವಿಪ್ರಮುಖ್ಯೇಭ್ಯೋ ಜಾತಕಂ ಚಾಽಕರೋತ್ತದಾ ॥೫೧॥

ಉತ್ಸವಶ್ಚ ಮಹಾನಾಸೀತ್ ಹಿಮಶೈಲಪುರೇ ತದಾ ।
ದೇವದುಂದುಭಯೋ ನೇದುಃ ಪುಷ್ಪವೃಷ್ಟಿಶ್ಚ ಖಾತ್ಪತತ್ ॥೫೨॥

ತದಾಽಗರಾಜಸ್ಯ ಗೃಹೇ ಸಂಮರ್ದಸ್ಸುಮಹಾನಭೂತ್ ।
ಬ್ರಾಹ್ಮಣಾನಾಂ ಗಾಯಕಾನಾಂ ನರ್ತಕಾನಾಂ ಚ ವಂದಿನಾಂ ॥೫೩॥

ಯಾಚಕಾನಾಂ ಶಿಲ್ಪಿನಾಂ ಚ ಜಲ್ಪಘೋಷಶ್ಚ ಸಂಬಭೌ ।
ಅಥ ಕಾಲೇ ವಿಪ್ರಮುಖ್ಯೈ ರಗೇಶಃ ಸ್ವತನೂದ್ಭವಾಮ್ ॥೫೪॥

---

ರೂಪವುಳ್ಳ ಹೆಣ್ಣುಮಗುವನ್ನು ನೋಡಿ ಎಲ್ಲರೂ ಬಹಳ ಸಂತೋಷಗೊಂಡರು. ॥೪೭-೪೮-೪೯॥

ಈ ಸಂದರ್ಭದಲ್ಲಿ ದಾದಿಯು ಬಂದು ಹೆಣ್ಣು ಮಗುವನ್ನು ತನ್ನ ವಶಕ್ಕೆ ತೆಗೆದುಕೊಂಡಳು. ಆಗ ಪರ್ವತರಾಜನು ತೀರ್ಥವನ್ನು ಮುಟ್ಟಿ ಸ್ನಾನಾಚಮನಗಳನ್ನು ಮಾಡಿ ಜಾತಕರ್ಮಾದಿಗಳನ್ನೂ ನೆರವೇರಿಸಲು ಶಾಸ್ತ್ರೋಕ್ತಕ್ರಮದಲ್ಲಿ ಶೀಘ್ರವಾಗಿ ಅನೇಕ ದಾನಗಳನ್ನು ಮಾಡಿದನು. ॥೫೦॥

ಹಿಮವಂತನು ಹತ್ತುಸಾವಿರ ಹಸುಗಳನ್ನೂ ಇಪ್ಪತ್ತುಸಾವಿರ ಚಿನ್ನದ ನಾಣ್ಯಗಳನ್ನು ಬ್ರಾಹ್ಮಣಶ್ರೇಷ್ಠರಿಗೆ ಆ ಕಾಲದಲ್ಲಿ ದಾನಮಾಡಿದನು. ಮತ್ತು ಇವನು ಮಗುವಿನ ಜಾತಕರ್ಮ ಮುಂತಾದ ಸ್ಮಾರ್ತಕರ್ಮಗಳೆಲ್ಲವನ್ನೂ ನೆರವೇರಿಸಿದನು. ॥೫೧॥

ಆಗ ಹಿಮವಂತನ ಪಟ್ಟಣದಲ್ಲಿ ಮಹೋತ್ಸವವು ನಡೆಯಿತು. ದೇವದುಂದುಭಿಗಳು ಮೊಳಗಿದುವು! ಆಕಾಶದಿಂದ ಹೂಮಳೆಯಾಯಿತು! ॥೫೨॥

ಆಗ ಹಿಮವಂತನ ಮನೆಯಲ್ಲಿ ಜನಸಂಮರ್ದವು ಹೆಚ್ಚಾಗಿ ಉಂಟಾಯಿತು. ಬ್ರಾಹ್ಮಣರು, ಗಾಯಕರು, ನರ್ತಕರು, ಹೊಗಳುಭಟರು, ಯಾಚಕರು, ಶಿಲ್ಪಿಗಳು, ಇವರೆಲ್ಲರ ಮಾತುಗಳು ಮತ್ತು ಘೋಷಣೆಗಳೂ ಸಂಭವಿಸಿ ಮೊಳಗಿದುವು. ತರುವಾಯ ಸಕಾಲದಲ್ಲಿ ಹಿಮವಂತನು ಬ್ರಾಹ್ಮಣಶ್ರೇಷ್ಠರಿಂದ ತನ್ನ ಮಗಳಿಗೆ

ನಾಮ ಕೃತ್ವಾ ಸಂಸ್ಕುರುತ ನಾಮ ಚಕ್ರೇ ಪುರೋಹಿತಃ ।
ಸ್ವರ್ಣವದ್ಗೌರವರ್ಣೇಯಂ ಯಸ್ಮಾತ್ಕನ್ಯಾ ತವಾಚಲ ॥೫೫॥

ತತೋ ಗೌರೀತಿ ವಿಖ್ಯಾತಾ ಭವತ್ವಿಹ ಮಹೀತಲೇ ।
ಏವಂ ಹಿಮಾಚಲಃ ಕನ್ಯಾಂ ಪ್ರಾಪ್ಯ ಗೌರೀಂ ಮಹೇಶ್ವರೀಮ್ ॥೫೬॥

ಮುಮೋದ ಸರ್ವರ್ದ್ಧಿಯುತಃ ಕನ್ಯಾಲೀಲಾಂ ವಿಲೋಕಯನ್ ।
ಏವಂ ಶೈಲೇಂದ್ರಭವನೇ ವವೃಧೇ ಲೀಲಯಾಽನ್ವಿತಾ ॥೫೭॥

ಆರೂಢಯೌವನಾ ಗೌರೀ ಬಭೂವ ಸ್ವಲ್ಪಕಾಲತಃ ।
ಹಿಮಾದ್ರಿಸ್ತಾಂ ವಿಲೋಕ್ಯ ಸ್ವಾಂ ಕನ್ಯಾಮಾರೂಢಯೌವನಾಮ್ ॥೫೮॥

ಅಚಿಂತಯತ್ಪತಿಂ ತಸ್ಯಾ ಅನುರೂಪಗುಣಾನ್ವಿತಮ್ ।
ಗರ್ಗಂ ಮುನೀಂದ್ರಂ ಸಂಗಮ್ಯ ನತ್ವಾ ಪಪ್ರಚ್ಛ ಪರ್ವತಃ ॥೫೯॥

---

ನಾಮಕರಣ ಸಂಸ್ಕಾರವನ್ನೂ ನೆರವೇರಿಸಿದನು. ರಾಜಪುರೋಹಿತನು ಎಲೈ ಹಿಮವಂತನೇ, ಚಿನ್ನದಂತೆ ನಿರ್ಮಲವಾಗಿ ಹೊಳೆಯುವ ಬಣ್ಣವಿರುವುದರಿಂದ ನಿನ್ನ ಮಗಳು ಗೌರಿಯೆಂದು ಕರೆಯಲ್ಪಡಲಿ, ಎಂದು ಹೇಳಿ ಆ ಹೆಸರನ್ನೇ ಮಗುವಿಗೆ ಇಟ್ಟನು. ॥೫೩-೫೪-೫೫॥

ಪುರೋಹಿತನು ಈ ರೀತಿಯಲ್ಲಿ, "ಈ ಮಗುವು ಗೌರಿಯೆಂದು ಭೂಮಿಯಲ್ಲಿ ಪ್ರಸಿದ್ಧಳಾಗಲಿ" ಎಂದನು. ಹೀಗೆ ಹಿಮವಂತನು ಮಹೇಶ್ವರಿಯಾದ ಗೌರಿಯನ್ನೇ ಮಗಳನ್ನಾಗಿ ಪಡೆದು, ಸಮಸ್ತ ಸಮೃದ್ಧಿಯಿಂದಲೂ ತುಂಬಿದವನಾಗಿ, ಮಗಳ ಲೀಲೆಗಳನ್ನು ನೋಡುತ್ತಾ, ಬಹಳ ಆನಂದಪಟ್ಟನು. ಇಂತು ಹಿಮವಂತನ ಮನೆಯಲ್ಲಿ ಲೀಲಾವಿಲಾಸಗಳಿಂದ ಕೂಡಿದ ಗೌರಿಯು ಸುಖವಾಗಿ ಬೆಳೆದಳು. ॥೫೬-೫೭॥

ಗೌರಿಯು ಸ್ವಲ್ಪಕಾಲದಲ್ಲಿಯೇ ಎಂದರೆ, ಇಂತಹ ಸಂತೋಷದ ಕಾಲವು ಬೇಗ ಕಳೆಯುತ್ತಿರಲು, ಗೌರಿಯು ಯೌವನದಲ್ಲಿ ಪದಾರ್ಪಣಮಾಡಿದಳು. ಹಿಮವಂತನು ಹೀಗೆ ಯುವತಿಯಾದ ತನ್ನ ಮಗಳನ್ನು ನೋಡಿ, ಅವಳಿಗೆ ಅನುರೂಪವಾದ ಗುಣಗಳಿಂದ ಕೂಡಿದ ಪತಿಯು ಯಾರೆಂದು ಯೋಚಿಸತೊಡಗಿದನು. ಆಗ ಪರ್ವತ

ಮಹರ್ಷೇ ಮಮ ಕನ್ಯೇಯಂ ಪತಿಂ ಕಂ ಸಮುಪೇಷ್ಯತಿ ।
ವದ ತೇ ನ ಹ್ಯವಿದಿತಂ ಭವಿಷ್ಯಂ ಭೂತಮಪ್ಯುತ ॥೬೦॥

ಶ್ರುತ್ವೇತ್ಥಂ ಹಿಮಶೈಲಸ್ಯ ವಾಕ್ಯಂ ಗರ್ಗೋ ಮಹಾಮುನಿಃ ।
ಧ್ಯಾತ್ವಾ ಕ್ಷಣಂ ವಿದಿತ್ವಾ ತತ್ಪ್ರಾಹ ಸಂಹೃಷ್ಟಮಾನಸಃ ॥೬೧॥

ನತ್ವಾ ತಾಂ ಪರಮಾಂ ಗೌರೀಂ ಸಂಬೋಧ್ಯಾಗಕುಲೇಶ್ವರಮ್ ।
ಶೃಣು ಶೈಲೇಶ ಕನ್ಯಾಯಾಸ್ತವ ವೃತ್ತಂ ಮಹಾಽದ್ಭುತಮ್ ॥೬೨॥

ಭವಾನೀ ತವ ಕನ್ಯೇಯಂ ತಪಸಾ ತೇಽಭಿರಾಧಿತಾ ।
ಅಸ್ಯಾಃ ಪತಿಃ ಶಿವೋ ನಾಽನ್ಯಃ ಸರ್ವದೇವಪ್ರಪೂಜಿತಃ ॥೬೩॥

---

ರಾಜನಾದ ಹಿಮವಂತನು ಗರ್ಗಋಷಿಗಳನ್ನು ಸಮೀಪಿಸಿ ನಮಸ್ಕರಿಸಿ ಈ ವಿಚಾರವಾಗಿ ಅವರನ್ನು ಪ್ರಶ್ನಿಸಿದನು. ॥೫೮-೫೯॥

ಓ ಮಹರ್ಷಿಗಳೇ, ಈ ನನ್ನ ಮಗಳು ಅನುರೂಪನಾದ ಯಾವ ಪತಿಯನ್ನು ಹೊಂದುವಳು? ತಮಗೆ ಭೂತ, ಭವಿಷ್ಯತ್‌ಕಾಲಗಳಲ್ಲಿ ನಡೆಯುವ ವಿಚಾರಗಳೆಲ್ಲವೂ ಗೊತ್ತಿರುವುದರಿಂದ, ತಮಗೆ ತಿಳಿಯದೆ ಇರುವ ಸಂಗತಿಗಳು ಯಾವುವೂ ಇಲ್ಲದೆ ಇರುವುದರಿಂದ, ಈ ವಿಷಯವನ್ನು ದಯವಿಟ್ಟು ತಿಳಿಸಿರಿ. ॥೬೦॥

ಹಿಮವಂತನ ಈ ಮಾತನ್ನು ಕೇಳಿ ಗರ್ಗಮಹರ್ಷಿಗಳು ಕ್ಷಣಕಾಲ ಧ್ಯಾನಿಸಿ, ವಿಷಯಗಳನ್ನು ತಿಳಿದು ಬಹಳ ಸಂತೋಷದಿಂದ ಹಿಮವಂತನನ್ನು ಕುರಿತು ಈರೀತಿಯಲ್ಲಿ ಹೇಳಿದರು. ॥೬೧॥

ಗರ್ಗಮಹರ್ಷಿಗಳು ಶ್ರೇಷ್ಠಳಾದ ಗೌರಿಯನ್ನು ಮನಸ್ಸಿನಲ್ಲಿ ನಮಸ್ಕರಿಸಿ, ಹಿಮವಂತನನ್ನು ಸಂಬೋಧಿಸಿ, "ಎಲೈ ಪರ್ವತರಾಜನೇ, ನಿನ್ನ ಮಗಳ ಮಹಾದ್ಭುತವಾದ ಸಮಾಚಾರವನ್ನು ಹೇಳುವೆನು, ಕೇಳು." ಎಂದರು. ॥೬೨॥

ನೀನು ಪೂಜಿಸಿದ ಸಾಕ್ಷಾದ್ಗೌರಿಯೇ ಈಗ ನಿನ್ನ ಮಗಳಾಗಿ ಹುಟ್ಟಿದ್ದಾಳೆ. ಎಲ್ಲಾ ದೇವತೆಗಳಿಂದಲೂ ವಿಶೇಷವಾಗಿ ಪೂಜಿಸಲ್ಪಡುವ ಶಿವನೇ ಇವಳಿಗೆ ಪತಿಯಾಗುವನಲ್ಲದೆ ಬೇರೊಬ್ಬನು ಈಕೆಯ ಪತಿಯಾಗುವುದಿಲ್ಲವೆಂದು ತಿಳಿ. ॥೬೩॥

ತ್ವಮೇನಾಂ ನ ವಿಜಾನಾಸಿ ತಸ್ಯಾಃ ಶಾಪೇನ ಮೋಹಿತಃ ।
ಸಸ್ಮಾರ ಗೌರೀಂ ಪರಮಾಂ ಗರ್ಗವಾಕ್ಯೇನ ಶೈಲರಾಟ್ ॥೬೪॥

ಕದಾಚಿದಥ ದೇವರ್ಷಿರ್ನಾರದೋ ಭಕ್ತಶೇಖರಃ ।
ತನ್ಮಾಹಾತ್ಮ್ಯಂ ವಿಜಿಜ್ಞಾಸುಃ ಪರ್ವತೇಂದ್ರಗೃಹಂ ಯಯೌ ॥೬೫॥

ದೃಷ್ಟ್ವಾ ದೇವರ್ಷಿಮಾಯಾಂತಂ ಹಿಮಾದ್ರಿಃ ಸಹಸೋತ್ಥಿತಃ ।
ಅಭಿಗಮ್ಯ ಮುನೀಂದ್ರಂ ತಮಾಸನಾದ್ಯೈರಪೂಜಯತ್ ॥೬೬॥

ಪೂಜಿತಃ ಪ್ರಾಹ ದೇವರ್ಷಿಃ ಹಿಮಾಗಂ ಸ್ಮಿತಪೂರ್ವಕಂ ।
ಪರ್ವತೇಂದ್ರ ತನೂಜಾ(ಂ)ತೇ ಸಂಪ್ರಾಪ್ತೋಽಹಮವೇಕ್ಷಿತುಂ॥೬೭॥

---

ಆಕೆಯ ಶಾಪದಿಂದಲೇ ನಿನ್ನ ಕೋರಿಕೆಯಂತೆ ಉಂಟಾಗಿರುವ ಅಜ್ಞಾನ ದಿಂದ ಈಕೆಯ ನಿಜಸ್ವರೂಪವನ್ನು ಮರೆತಿದ್ದೀಯೆ! ಹೀಗೆ ಗರ್ಗಮಹರ್ಷಿಯ ಮಾತಿನಿಂದ ಹಿಮವಂತನು ಶ್ರೇಷ್ಠಳಾದ ಗೌರಿಯಸ್ವರೂಪವನ್ನೇ ಜ್ಞಾಪಿಸಿ ಕೊಂಡು ಸಂತುಷ್ಟನಾಗಿದ್ದನು. ॥೬೪॥

ಒಂದುದಿನ ಭಕ್ತಾಗ್ರಗಣ್ಯನೂ ದೇವರ್ಷಿಯೂ ಆದ ನಾರದನು ಆ ದೇವಿಯ ಮಹಿಮೆಯನ್ನು ತಿಳಿಯಲು ಇಚ್ಛಿಸಿ ಪರ್ವತರಾಜನಾದ ಹಿಮವಂತನ ಮನೆಯನ್ನು ಪಡೆದನು. ॥೬೫॥

ದೇವರ್ಷಿಯಾದ ನಾರದನು ಬಂದದ್ದನ್ನು ಕಂಡು, ಹಿಮವಂತನು ಶೀಘ್ರವಾಗಿ ಎದ್ದು ಅವನನ್ನು ಎದುರುಗೊಂಡು, ಆಸನವೇ ಮೊದಲಾದುವನ್ನು ಕೊಡುವುದರ ಮೂಲಕ ಆತನನ್ನು ಸತ್ಕರಿಸಿದನು. ॥೬೬॥

ಹಿಮವಂತನಿಂದ ಪೂಜಿಸಲ್ಪಟ್ಟ ದೇವರ್ಷಿಯಾದ ನಾರದನು ಹಿಮವಂತ ನನ್ನು ಕುರಿತು ಮುಗುಳುನಗೆಗಳಿಂದ ಕೂಡಿ ಈ ರೀತಿಯಲ್ಲಿ ಹೇಳಿದನು. ಎಲೈ ಪರ್ವತರಾಜನಾದ ಹಿಮವಂತನೇ, ನಿನ್ನ ಮಗಳಾದ ಪಾರ್ವತಿಯನ್ನು ನೋಡಿ ಕೊಂಡು ಹೋಗಲು ಬಂದಿದ್ದೇನೆ. ॥೬೭॥

ತಾಂ ಮೇ ಪ್ರದರ್ಶಯ ಕ್ಷಿಪ್ರಂ ತತೋ ಯಾಸ್ಯಾಮಿ ವೈ ದಿವಂ ।
ಶ್ರುತ್ವೇತ್ಥಂ ನಾರದವಚಃ ಕನ್ಯಾಮಾನೀಯ ಸತ್ವರಂ ॥೩೮॥

ವತ್ಸೇ ನಮಸ್ಕುರು ಮುನಿಮಿತ್ಯುವಾಚ ಕುಮಾರಿಕಾಂ ।
ಅಥ ಗೌರೀ ತ(ಯ)ಥಾಽಽಗತ್ಯ ನಮಶ್ಚಕ್ರೇ ಮುನೀಶ್ವರಂ ॥೩೯॥

ಪ್ರಣಮಂತೀಂ ಪರಾಂ ಗೌರೀಂ ದೃಷ್ಟ್ವಾ ದೇವರ್ಷಿಸತ್ತಮಃ ।
ಸಂಗೋಪಯನ್ ದೇವಗುಹ್ಯಂ ಮನಸಾ ಪ್ರಣನಾಮ ತಾಂ ॥೪೦॥

ದೃಷ್ಟ್ವಾ ತಾಂ ಯೌವನಾಽಽರೂಢಾಮುವಾಚ ವಿಧಿನಂದನಃ ।
ಅಗೇಶ ದಿಷ್ಟ್ಯಾ ತೇಽಪತ್ಯಂ ಸಂಪ್ರಾಪ್ತಂ ಚಿರಕಾಲತಃ ॥೪೧॥

ನನ್ವಿಯಂ ಕೇರಪೀಡಾಯಾಃ ಕಾಲಮಾಲಂಬ್ಯ ಸಂಸ್ಥಿತಾ ।
ಕಾಲೇ ಕನ್ಯಾಂ ಸುಪಾತ್ರೇ ಯೋ ನ ಪ್ರಯಚ್ಛತಿ ದುರ್ಮತಿಃ ॥೪೨॥

---

ಎಲೈ ಹಿಮವಂತನೇ, ನಿನ್ನ ಮಗಳನ್ನು ಶೀಘ್ರವಾಗಿ ತೋರಿಸು. ಅವಳ ದರ್ಶನವನ್ನು ಪಡೆದ ಮೇಲೆ ನಾನು ಸ್ವರ್ಗಕ್ಕೆ ತೆರಳುವೆನು. ಎಂದು ಹೇಳಿದ ನಾರದನ ಮಾತನ್ನು ಕೇಳಿ ಜಾಗ್ರತೆಯಾಗಿ ಗೌರಿಯನ್ನು ಕರೆದು ಅವಳನ್ನು ಕುರಿತು, " ಎಲೌ ಮಗಳೇ, ನಾರದಮಹರ್ಷಿಗಳಿಗೆ ನಮಸ್ಕಾರ ಮಾಡು." ಎಂದು ಎಂದು ಹೇಳಿದನು. ಅನಂತರದಲ್ಲಿ ಗೌರಿಯು ಅದರಂತೆಯೇ ಬಂದು ಮುನೀಶ್ವರ ನಾದ ನಾರದನಿಗೆ ನಮಸ್ಕಾರವನ್ನು ಮಾಡಿದಳು. ॥೩೯॥

ನಮಸ್ಕಾರ ಮಾಡುತ್ತಿರುವ ಶ್ರೇಷ್ಠಳಾದ ಆ ಗೌರಿಯನ್ನು ನೋಡಿ, ದೇವರ್ಷಿಶ್ರೇಷ್ಠನಾದ ನಾರದನು ದೇವರಹಸ್ಯವನ್ನು ತನ್ನ ಮನಸ್ಸಿನಿಂದ ಹೊರಗೆ ಡಹದೇ ಇರುವವನಾಗಿ, ಆಕೆಗೆ ತನ್ನ ಮನಸ್ಸಿನಲ್ಲಿಯೇ ನಮಸ್ಕಾರಮಾಡಿದನು. ॥೪೦॥

ಬ್ರಹ್ಮನ ಮಗನಾದ ನಾರದನು ಯೌವನದಲ್ಲಿ ಪದಾರ್ಪಣಮಾಡಿರುವ ಪಾರ್ವತಿಯನ್ನು ನೋಡಿ, ಹಿಮವಂತನನ್ನು ಕುರಿತು, ಎಲೈ ಪರ್ವತರಾಜನೇ, ನಿನಗೆ ಬಹಳಕಾಲದಮೇಲೆ ಸುದೈವದ ಅನುಗ್ರಹದಿಂದ ಜನಿಸಿದ ಈ ಮಗಳು ಈಗ ಯೌವನವನ್ನು ಹೊಂದುತ್ತಿದ್ದಾಳೆಂಬುದು ಸಂತೋಷದ ವಿಷಯ ಎಂದನು. ॥೪೧॥

ಈ ನಿನ್ನ ಮಗಳು ಈಗ ಪಾಣಿಗ್ರಹಣರೂಪವಾದ ಮದುವೆಗೆ ಯೋಗ್ಯ

ತಸ್ಯ ಪೂರ್ವತರಾಃ ಸರ್ವೇ ಗಚ್ಛೇಯುರ್ದುರ್ಗತಿಂ ಗತಿಂ ।
ವದ ಪರ್ವತರಾಜನ್ಯ ಕಸ್ಮೈ ತಾಂ ದಾತುಮುದ್ಯತಃ ॥೭೩॥

ಕನ್ಯಾ ಪಾತ್ರೇ ನಿಯುಕ್ತಾ ತು ಮಹಾಸೌಖ್ಯಪ್ರದಾಯಿನೀ ।
ಶ್ರುತ್ವರ್ಷಿವಾಕ್ಯಮಗರಾಟ್ ನತ್ವಾ ಪ್ರಾಹ ಕೃತಾಂಜಲಿಃ ॥೭೪॥

ದೇವರ್ಷೇ ತ್ವಂ ಸಮಸ್ತಸ್ಯ ಲೋಕಸ್ಯ ಪ್ರಸಮೀಕ್ಷಕಃ ।
ನ ಹಿ ತ್ವಯಾ ಹ್ಯವಿದಿತಂ ಶುಭಮನ್ಯದ್ಭವೇತ್ಕ್ವಚಿತ್ ॥೭೫॥

ಅಹಂ ಗರ್ಗಸ್ಯ ವಚಸಾ ವರಂ ಮನ್ಯೇ ತ್ರಿಲೋಚನಂ ।
ತ್ವಂ ಕಥಂ ಮನ್ಯಸೇ ತನ್ಮೇ ಶಂಸ ಶಿಷ್ಯಸ್ಯ ಪೃಚ್ಛತಃ ॥೭೬॥

---

ವಾದ ಕಾಲವನ್ನು ಪಡೆದವಳಾಗಿದ್ದಾಳೆ. ಯಾವನು ಸಕಾಲದಲ್ಲಿ ಕನ್ಯಾದಾನವನ್ನು ಮಾಡುವುದಿಲ್ಲವೋ ಅವನು ನೀಚನೆನಿಸಿಕೊಳ್ಳುತ್ತಾನೆ. ॥೭೨॥

ಅಂತಹ ನೀಚನ ಪೂರ್ವಿಕರೆಲ್ಲರೂ, ಇವನು ಮದುವೆಮಾಡಲು ತಡ ಮಾಡಿದ್ದರಿಂದ, ದುರ್ಗತಿಯನ್ನು ಹೊಂದುತ್ತಾರೆ. ಆದ್ದರಿಂದ ಎಲೈ ಪರ್ವತ ರಾಜನೇ, ಈ ನಿನ್ನ ಮಗಳನ್ನು ಯಾರಿಗೆ ಕೊಟ್ಟು ಮದುವೆ ಮಾಡಬೇಕೆಂದು ಯೋಚಿಸಿ ಇದ್ದೀಯೇ? ಎಂಬುದನ್ನು ಹೇಳು. ॥೭೩॥

ತಂದೆತಾಯಿಗಳು ತಮ್ಮ ಮಗಳನ್ನು ಯೋಗ್ಯನಾದ ವರನಿಗೆ ಕೊಟ್ಟರೆ ಆಕೆಯು ಅವರಿಗೆ ವಿಶೇಷ ಸಂತೋಷವನ್ನುಂಡುಮಾಡುತ್ತಾಳೆ. ಎಂದು ಹೇಳಿದ ದೇವರ್ಷಿಯಾದ ನಾರದನ ಮಾತನ್ನು ಕೇಳಿ ಹಿಮವಂತನು ಅವನಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ಈರೀತಿಯಲ್ಲಿ ಹೇಳಿದನು. ॥೭೪॥

ಓ ದೇವರ್ಷಿಗಳೇ, ತಾವು ಎಲ್ಲಾ ಲೋಕಗಳಲ್ಲಿ ನಡೆಯುವದನ್ನೂ ಬಲ್ಲವರು. ನಿಮಗೆ ಗೊತ್ತಿಲ್ಲದ ಬೇರೊಂದು ಮಂಗಳವು ಎಲ್ಲಿಯೂ ಸಂಭವಿಸುವುದು ಇಲ್ಲವಷ್ಟೆ? ॥೭೫॥

ನಾನು ಗರ್ಗಋಷಿಗಳ ಮಾತಿನ ಪ್ರಕಾರ ಮುಕ್ಕಣ್ಣನಾದ ಶಿವನೇ ನನ್ನ ಮಗಳಿಗೆ ಸರಿಯಾದ ವರನೆಂದು ತಿಳಿದಿದ್ದೇನೆ. ತಮಗೆ ಇದು ಹೇಗೆ ತೋರುತ್ತದೆ? ಎಂಬ ವಿಷಯವನ್ನು ತಮ್ಮನ್ನೇ ಕೇಳುತ್ತಿರುವ ಶಿಷ್ಯನಾದ ನನಗೆ ದಯವಿಟ್ಟು ತಿಳಿಸಿ. ॥೭೬॥

ನಿಶಮ್ಯ ಪರ್ವತವಚೋ ಜಗಾದ ಸುರತಾಪಸಃ ।
ಶೃಣು ಪರ್ವತರಾಜನ್ಯ ಶಿವೋ ಯಸ್ತೇ ವರೋ ಮತಃ ॥೬೭॥

ನಾಽಹಂ ಮನ್ಯೇ ಕುಮಾರ್ಯಾಸ್ತೇ ತುಲ್ಯಂ ತಂ ಪಾಣಿಪೀಡನೇ ।
ಇಯಂ ಸರ್ವೇಷು ಲೋಕೇಷು ರತ್ನಭೂತಾ ಕುಮಾರಿಕಾ ॥೬೮॥

ಸಮಸ್ತಗುಣಶೋಭಾಽಢ್ಯಂ ಪತಿಮರ್ಹತಿ ತಾದೃಶಂ ।
ಶಿವೇ ಸರ್ವೇಽಶಿವಗುಣಾಃ ಸದೋನ್ಮತ್ತವಿಚೇಷ್ಟಿತಃ ॥೬೯॥

ಶ್ಮಶಾನನಿಲಯೋ ಭೂತಸಂಘಸೇವ್ಯೋಽಹಿಭೂಷಣಃ ।
ಚರ್ಮವಾಸಾ ವಿರೂಪಾಕ್ಷೋ ವಿಷಾಽಽಹಾರೋ ಭಯಂಕರಃ ॥೭೦॥

---

ದೇವರ್ಷಿಯಾದ ನಾರದನು ಪರ್ವತರಾಜನಾದ ಹಿಮವಂತನ ಮಾತನ್ನು ಕೇಳಿ ಈ ರೀತಿಯಲ್ಲಿ ಹೇಳಿದನು. ಎಲೈ ಹಿಮವಂತನೇ, ನಿನ್ನ ಮಗಳಿಗೆ ಶಿವನು ವರನೆಂದು ಹೇಳುತ್ತಿದ್ದೀಯಲ್ಲವೆ? ಈ ವಿಷಯವಾಗಿ ಹೇಳುವೆನು, ಕೇಳು. ॥೬೭॥

ಶಿವನು ನಿನ್ನ ಮಗಳಾದ ಪಾರ್ವತಿಯು ಪಾಣಿಗ್ರಹಣವನ್ನು ಮಾಡಲು ಅನುರೂಪನಲ್ಲವೆಂದು ನಾನು ಹೇಳುತ್ತೇನೆ. ಏಕೆಂದರೆ ಈ ನಿನ್ನ ಮಗಳು ಎಲ್ಲಾ ಲೋಕಗಳಲ್ಲಿಯೂ ರತ್ನಗಳಂತೆ ಉತ್ತಮಗಳಾದ ಗುಣಗಳ ಸೌಂದರ್ಯಗಳಿಂದ ಅತ್ಯಂತ ಶ್ರೇಷ್ಠಳಾದ ಕುಮಾರಿ ಎನಿಸಿಕೊಂಡಿರುತ್ತಾಳೆ. ॥೬೮॥

ಆದ್ದರಿಂದ ಈ ಪಾರ್ವತಿಯು ಸಮಸ್ತ ಗುಣಗಳಿಂದಲೂ ಶೋಭಿಸುವ ತನಗೆ ಅನುರೂಪನಾದ ಪತಿಯನ್ನೇ ಪಡೆಯಲು ಅರ್ಹಳು. ಆದರೆ ಶಿವನಲ್ಲಿಯಾದರೋ ಎಲ್ಲಾ ಅಮಂಗಳಗಳಾದ ಗುಣಗಳೇ ತುಂಬಿವೆ. ಅವನಲ್ಲಿ ಯಾವಾಗಲೂ ಉನ್ಮತ್ತನಾದ ಮನುಷ್ಯನ ನಡೆವಳಿಕೆಗಳೇ ಕಾಣಬರುತ್ತಿವೆ! ಹೇಗೆಂದರೆ, ॥೬೯॥

ಶಿವನು ಯಾವಾಗಲೂ ಶ್ಮಶಾನದಲ್ಲಿ ವಾಸಮಾಡುವವನೂ, ಭೂತಗಳ ಸಮೂಹದಿಂದ ಸೇವಿಸಲ್ಪಡುವವನೂ, ಸರ್ಪಗಳನ್ನೇ ಅಲಂಕಾರಗಳನ್ನಾಗಿ ಧರಿಸಿರುವವನೂ, ಚರ್ಮವನ್ನೇ ವಸ್ತ್ರಗಳನ್ನಾಗಿ ಧರಿಸಿರುವವನೂ, ವಿಷಮವಾದ ಕಣ್ಣುಳ್ಳವನೂ, ವಿಷವನ್ನು ಆಹಾರವನ್ನಾಗಿ ಸೇವಿಸಿದವನೂ, ಭಯಂಕರಸ್ವರೂಪನೂ ಆಗಿದ್ದಾನೆ! ॥೭೦॥

ಪುರಾ ದೇವೀ ತಸ್ಯ ಪತ್ನೀ ಗೌರೀ ತಮುನವಸ್ಥಿತಂ ।
ದೃಷ್ಟ್ವಾ ಲೋಪಂ ಗತವತೀ ಪುನರ್ದಾಕ್ಷಾಯಣೀ ತಥಾ ॥೮೧॥

ಸದ್ಭಿರ್ವಿನಿಂದಿತಂ ವೀಕ್ಷ್ಯ ಭಸ್ಮೀಭೂತಾ ಮಹಾಽಧ್ವರೇ ।
ತಸ್ಮಾದೇನಾಂ ಶಿವೋನಾಽರ್ಹಃ ಪತ್ನೀಂ ಸರ್ವಗುಣಾಽಲಯಾಂ॥೮೨॥

ಶೃಣು ಪ್ರಾಲೇಯಶೈಲೇಶ ಕನ್ಯಾಯಾಃ ಸದೃಶಂ ಪತಿಂ ।
ಮಾಧವಃ ಪುಂಡರೀಕಾಕ್ಷೋ ವೈಕುಂಠನಿಲಯಃ ಪುಮಾನ್ ॥೮೩॥

ಏನಾಮರ್ಹತಿ ಪತ್ನೀತ್ವೇ ಸಮಾನೇತುಂ ಸದೃಗ್ಗುಣೈಃ ।
ಇಯಂ ಚಾಽಪಿ ಪತಿಂ ವಿಷ್ಣುಂ ಗುಣೈರರ್ಹತಿ ಸಂಮತೈಃ ॥೮೪॥

---

ಹಿಂದೆ ಅವನ ಪತ್ನಿಯಾಗಿದ್ದ ಗೌರಿಯು ಉನ್ಮತ್ತವಾದ ಸ್ವಭಾವವುಳ್ಳ ಇವನನ್ನು ನೋಡಿ, ಬಿಟ್ಟುಹೋಗಿ ಇವನಿಗೆ ಕಾಣಿಸದಂತಾದಳು! ಮತ್ತು ದಾಕ್ಷಾಯಿಣೀರೂಪದಲ್ಲಿಯೂ ಅವಳು ದೇಹತ್ಯಾಗವನ್ನೇ ಮಾಡಿದಳು. ॥೮೧॥

ದಾಕ್ಷಾಯಣಿಯು ಸತ್ಪುರುಷರಿಂದ ನಿಂದಿಸಲ್ಪಟ್ಟ ಇವನ ನಡವಳಿಕೆಯನ್ನು ನೋಡಿ, ದಕ್ಷಬ್ರಹ್ಮನ ಮಹಾಯಾಗದಲ್ಲಿ ಬೂದಿಯಾಗಿ ಬಿಟ್ಟಳು. ಆದ್ದರಿಂದ ಎಲ್ಲಾ ಗುಣಗಳಿಗೂ ಆವಾಸಸ್ಥಾನಳಾದ ಇವಳಿಗೆ ಶಿವನು ಅನುರೂಪನಾದ ಪತಿಯಲ್ಲ. ॥೮೨॥

ಎಲೈ ಹಿಮವಂತನೇ, ಆದುದರಿಂದ ನಿನ್ನ ಮಗಳಿಗೆ ಸರಿಯಾದ ಪತಿಯನ್ನು ಹೇಳುವೆನು ಕೇಳು. ಕಮಲದಂತೆ ಕಣ್ಣುಳ್ಳವನೂ, ವೈಕುಂಠದಲ್ಲಿ ವಾಸಮಾಡುವವನೂ, ಪರಮಪುರುಷನೂ ಆದ ನಾರಾಯಣನಿದ್ದಾನೆ. ॥೮೩॥

ಅವನು ಇವಳಿಗೆ ಅನುರೂಪವಾದ ಗುಣಗಳಿಂದ ಕೂಡಿರುವುದರಿಂದ ಇವಳನ್ನು ಮದುವೆಯಾಗಲು ಯೋಗ್ಯನಾಗಿದ್ದಾನೆ. ಇವಳೂ ಕೂಡ ಅವನಿಗೆ ಅನುರೂಪವಾದ ಗುಣಗಳಿಂದ ಕೂಡಿರುವುದರಿಂದ ವಿಷ್ಣುವನ್ನು ಪತಿಯನ್ನಾಗಿ ಹೊಂದಲು ಯೋಗ್ಯಳಾಗಿದ್ದಾಳೆ. ॥೮೪॥

ಅಹೋ ಪರ್ವತ ತೇ ಭಾಗ್ಯಂ ವಿಷ್ಣುರ್ಜಾಮಾತೃತಾಂ ವ್ರಜೇತ್ ।
ಯಂ ಗುಣೈರ್ಮೋಹಿತಾ ಲಕ್ಷ್ಮೀಃ ದಾಸೀವತ್ಸೇವತೇಽನ್ವಹಂ॥೮೫॥

ಸನ್ನಸೇ ಯದಿ ಮದ್ವಾಕ್ಯಂ ವೃಣೋಮಿ ಹರಿಮೀಶ್ವರಂ ।
ಇತ್ಯಾಕರ್ಣ್ಯ ನಾರದೋಕ್ತಿಂ ಪರ್ವತೇಶೋಽತಿವಿಸ್ಮೃತಃ ॥೮೬॥

ಶಾಪಾದ್ಗೌರ್ಯಾಃ ಪ್ರಿಯಾಂ ಶಂಭೋಸ್ತಪಸಾಽಽರಾಧಿತಾಂ ಪುರಾ ।
ಪ್ರಾಹ ದೇವಮುನಿಂ ಶೈಲೋ ವರಂ ನಿಶ್ಚಿತ್ಯ ಮಾಧವಂ ॥೮೭॥

ಧನ್ಯೋಽಹಂ ಯತ್ತ್ವಯಾ ಕನ್ಯಾ ಮಮ ಪಾತ್ರೇ ನಿಯೋಜಿತಾ ।
ಸತ್ಯಂ ಶಿವೋ ನಾಽರ್ಹತಿ ಮೇ ಕನ್ಯಾಮಶಿವಲಕ್ಷಣಃ ॥೮೮॥

---

ಎಲೈ ಹಿಮವಂತನೇ, ನಿನಗೆ ಅಂತಹ ಮಹಾಪುರುಷನಾದ ವಿಷ್ಣುವು ಅಳಿಯನಾಗುವುದಾದರೆ ನಿನ್ನ ಅದೃಷ್ಟಕ್ಕೆ ಎಣೆಯೇ ಇಲ್ಲ! ಏಕೆಂದರೆ ಲಕ್ಷ್ಮಿಯೂ ಕೂಡ ಅವನ ಗುಣಗಳಿಗೆ ಮೆಚ್ಚಿ ತೃಪ್ತಳಾಗಿ ದಾಸಿಯಂತೆ ಅವನನ್ನು ಸೇವಿಸುತ್ತಿದಾಳೆ. ॥೮೫॥

ಎಲೈ ಹಿಮವಂತನೇ, ನನ್ನ ಮಾತನ್ನು ನೀನು ಒಪ್ಪಿ ನಂಬುವುದಾದರೇ ನಿನಗಾಗಿ ಲೋಕೇಶ್ವರನಾದ ವಿಷ್ಣುವನ್ನು ಈ ವಿಷಯದಲ್ಲಿ ಪ್ರಾರ್ಥಿಸುವೆನು. ಎಂದು ಹೇಳಿದ ನಾರದನ ಮಾತನ್ನು ಕೇಳಿ ಪರ್ವತರಾಜನಾದ ಹಿಮವಂತನು ಹಿಂದಿನ ವಿಷಯವನ್ನು ಮರೆತುಬಿಟ್ಟನು. ॥೮೬॥

ಹಿಂದೆ ತಾನೇ ತಪಸ್ಸುಮಾಡಿ ಪೂಜಿಸಿ ಶಿವನ ಪ್ರಿಯಪತ್ನಿಯಾಗಿದ್ದ ಗೌರಿಯನ್ನು ಆಕೆಯ ಹಿಂದಿನ ಶಾಪದಿಂದಲೇ ಮರೆತುಬಿಟ್ಟು, ಹಿಮವಂತನು ಪಾರ್ವತಿಗೆ ವಿಷ್ಣುವೇ ಅನುರೂಪನಾದ ವರನೆಂದು ಮನಗಂಡು ನಿಶ್ಚಯಿಸಿ, ದೇವರ್ಷಿಯಾದ ನಾರದನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೮೭॥

ಓ ದೇವರ್ಷಿಗಳೇ, ತಾವು ನನ್ನ ಮಗಳಿಗೆ ಅನುರೂಪನಾದ ವರನನ್ನು ತಿಳಿಸಿ ಗೊತ್ತುಮಾಡುವಂತೆ ಹೇಳಿ ಉಪಕರಿಸಿದ್ದರಿಂದ ನಾನೇ ಧನ್ಯನೆಂದು ತಿಳಿಯುತ್ತೇನೆ. ಅಮಂಗಳವಾದ ಸ್ವರೂಪವುಳ್ಳ ಶಿವನು ನನ್ನ ಮಗಳಿಗೆ ಯೋಗ್ಯನಾದ ವರನಲ್ಲನೆಂದು ತಾವು ಹೇಳಿದ್ದುದು ನಿಜವೆಂದೂ ತೋರುತ್ತಿದೆ. ॥೮೮॥

ಪ್ರಜಾದ್ಯೈವ ಯಥಾ ಕನ್ಯಾಂ ಸಮೀಯಾನ್ಮಾಧವೋ ದ್ರುತಂ ।
ತಥಾ ವಿಧೇಹಿ ಸಂಧಾನಂ ಮಾಭೂತ್ಕಾಲಸ್ಯ ಪರ್ಯಯಃ ॥೮೯॥

ಸಮುತ್ಪತಂತಿ ಪ್ರತ್ಯೂಹಾಃ ಶುಭೋದರ್ಕೇಷು ಕರ್ಮಸು ।
ತಸ್ಮಾದವಿಹತಂ ಯದ್ವದ್ಭವೇತ್ತದ್ವತ್ಸಮಾಚರ ॥೯೦॥

ಶ್ರುತ್ವೇತ್ಥಂ ಪರ್ವತವಚೋ ನಾರದಃ ಪ್ರಹಸನ್ ಗಿರಿಂ ।
ಸಾಧಯಾಮಿ ತವಾಭೀಷ್ಟಮಿತ್ಯುಕ್ತ್ವಾ ಪ್ರಯಯೌ ದಿವಂ ॥೯೧॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಏಕೋನತ್ರಿಂಶೋಽಧ್ಯಾಯಃ

---

ಓ ದೇವರ್ಷಿಗಳೇ, ತಾವು ದಯವಿಟ್ಟು ಕೂಡಲೇ ಹೋಗಿ ನಾರಾಯಣನು ನನ್ನ ಮಗಳನ್ನು ಸ್ವೀಕರಿಸಲು ಒಪ್ಪುವಂತೆ ಸಂಧಾನವನ್ನು ಮಾಡಿ, ಕಾಲವು ಮೀರದಂತೆ ದಯವಿಟ್ಟು ಶೀಘ್ರವಾಗಿ ಈ ಕಾರ್ಯವನ್ನು ಕೆಡದಂತೆ ನಡೆಸಿ ಕೊಡಿ. ॥೮೯॥

ಮಂಗಳಕರವಾದ ಪರ್ಯವಸಾನವುಳ್ಳ ಕೆಲಸಗಳಿಗೆ ವಿಘ್ನಗಳು ಮೇಲಿಂದ ಮೇಲೆ ಬರುತ್ತವೆ. ಆದ್ದರಿಂದ ತಡವಾಗದಂತೆ ದಯವಿಟ್ಟು ಜಾಗ್ರತೆಯಾಗಿ ಈ ಕೆಲಸವನ್ನು ನಡೆಸಿಕೊಡಿ. ॥೯೦॥

ಹೀಗೆ ಹೇಳಿದ ಹಿಮವಂತನ ಮಾತನ್ನು ಕೇಳಿ ನಾರದನು ನಗುತ್ತಾ ಅವನನ್ನು ಕುರಿತು, ಎಲೈ ಪರ್ವತರಾಜನೇ, ನಿನ್ನ ಇಷ್ಟಾರ್ಥವನ್ನು ಸಾಧಿಸಿ ಕೊಡುವೆನು. ಎಂದು ಹೇಳಿ ಸ್ವರ್ಗಕ್ಕೆ ತೆರಳಿದನು. ॥೯೧॥

ಇಲ್ಲಿಗೆ ಶ್ರೀ ತ್ರಿಪುರಾರಹಸ್ಯದಲ್ಲಿ ಮಹಾತ್ಮ್ಯಖಂಡದಲ್ಲಿ ಮನ್ಮಥೋಪಾಖ್ಯಾನದಲ್ಲಿ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ತ್ರಿಂಶೋಽಧ್ಯಾಯಃ ॥

### ಮೂವತ್ತನೆಯ ಅಧ್ಯಾಯವು

ಅಧಿಗತ್ಯ ಪಿತುರ್ಗೌರೀ ವ್ಯವಸಾಯಮಸಮ್ಮತಂ ।
ಸ್ವರೂಪಗೋಪನೋದ್ಯುಕ್ತಾ ಲೀಲಾಂ ಚಾಽಪಿ ವಿತನ್ವತೀ ॥೧॥

ಜಗಾಮ ಸಖಿಭಿಃ ಸಾರ್ಧಂ ವನಂ ಚತಸೃಭಿಃ ಶುಭಂ ।
ಹಿಮಶೈಲತಟಪ್ರಾಂತಸಂಸ್ಥಿತಂ ಘೋರಸನ್ನಿಭಂ ॥೨॥

ಝಲ್ಲೀ ಝಂಕಾರಭರಿತಂ ನಿಕುಂಜತತಿಮಂಡಿತಂ ।
ನಾನಾತರುಲತಾಚಿತ್ರಂ ವಿಹಗೈಶ್ಚ ಸುಶೋಭಿತಂ ॥೩॥

ದಿವಾಕರಕರೈರ್ಹೀನಂ ಶೀತಲೋದ್ದೇಶಸುಂದರಂ ।
ಕ್ವಚಿದ್ಧಿಮೈರ್ನಿಪತಿತೈಃ ಪಾಂಡುರಂ ತೃಣವರ್ಜಿತಂ ॥೪॥

---

ತಂದೆಯಾದ ಹಿಮವಂತನು ಈ ಮನೋನಿಶ್ಚಯವನ್ನು ಒಪ್ಪದೇ ಹೋದುದನ್ನು ತಿಳಿದು, ಪಾರ್ವತಿಯು ಆದನ್ನು ಹೇಗಾದರೂ ಅಡಗಿಸಿಕೊಳ್ಳಲು ಯತ್ನಿಸಿ, ಹೊರಗಡೆ ಲೀಲೆಯಿಂದ ಸಮಾಧಾನವಾಗಿರುವವಳಂತೆ ನಟನೆಮಾಡಿದಳು. ರಹಸ್ಯವಾಗಿ ॥೧॥

ಪಾರ್ವತಿಯು ತನ್ನ ನಾಲ್ಕುಜನ ಸಖಿಯರೊಂದಿಗೆ ಹಿಮವತ್ಪರ್ವತದ ತಪ್ಪಲಿನ ಅಂಚಿನಲ್ಲಿದ್ದ ಭಯಂಕರವಾದ ಮಂಗಳಕರವಾದ ಕಾಡನ್ನು ಕುರಿತು ತೆರಳಿದಳು. ॥೨॥

ಆ ವನವು ದುಂಬಿಗಳ ಝೇಂಕಾರಗಳಿಂದ ಪೂರ್ಣವಾಗಿಯೂ ಅನೇಕ ಲತಾಮಂಡಪಗಳಿಂದ ಮನೋಹರವಾಗಿಯೂ ಅನೇಕ ವಿಧವಾದ ಮರಗಳು ಬಳ್ಳಿಗಳು ಇವುಗಳಿಂದ ಆಶ್ಚರ್ಯಕರವಾಗಿಯೂ, ಹಕ್ಕಿಗಳಿಂದ ವಿಶೇಷವಾಗಿ ಶೋಭಿಸುತ್ತಲೂ ಇತ್ತು. ॥೩॥

ಆ ವನವು ಸೂರ್ಯಕಿರಣಗಳ ಪ್ರಸಾರವಿಲ್ಲದ್ದಾಗಿಯೂ, ತಣ್ಣಗಿರುವ ಪ್ರದೇಶ

ರಜತಾಽದ್ರಿ ನಿಭಂ ಶೃಂಗಂ ದೂರತಃ ಪ್ರವಿರಾಜತೇ ।
ಕ್ವಚಿನ್ನಿರ್ಝರತೋ ನೀರಂ ಯೋಗಿಮಾನಸ ನಿರ್ಮಲಂ ॥೫॥

ವಹತ್ಯತ್ಯಚ್ಛ ಪಾಷಾಣ ಫಲಕಾಽಽವಲಿ ಭೂಮಿಷು ।
ಅತ್ಯುಚ್ಚ ವಿಟಪಾಽಽಸಕ್ತ ಘನರಾಜಿ ವಿರಾಜಿತಂ ॥೬॥

ನೃತ್ಯದ್ಬರ್ಹಿ ಗಣಾಽಽಕೀರ್ಣಂ ಪರಭೃತ್ಪಂಚನೋದಯಂ ।
ತತ್ರ ದೇವನದೀಂ ದಿವ್ಯಾಮಾಸಾದ್ಯ ಗಿರಿಕನ್ಯಕಾ ॥೭॥

ವಯಸ್ಯಾಭಿಃ ಪರಿವೃತಾ ನಿಷಸಾದೋಪಕೂಲಕೇ ।
ಶ್ರಾಂತಾಂ ತಾಂ ಸಮುಪಾಲಕ್ಷ್ಯ ಗೌರೀಂ ಕಾಚಿತ್ಸಖೀ ತದಾ ॥೮॥

---

ಗಳಿಂದ ಮನೋಹರವಾದದ್ದಾಗಿಯೂ ಕೆಲವು ಕಡೆ ಹಿಮವು ಬಿದ್ದಿದ್ದುದರಿಂದ ಬೂದಿಬಣ್ಣವುಳ್ಳದ್ದಾಗಿಯೂ ಮತ್ತು ಹುಲ್ಲುಗಳಿಲ್ಲದ್ದಾಗಿಯೂ ಇತ್ತು. ॥೪॥

ಆ ವನದಲ್ಲಿ ನಿಂತುಕೊಂಡು ನೋಡಿದರೆ . ಹಿಮವತ್ಪರ್ವತದ ತುದಿಯು ಬೆಳ್ಳಿಯ ಬೆಟ್ಟದಂತೆ ಪ್ರಕಾಶಿಸುತ್ತಿತ್ತು. ಈ ಕಾಡಿನ ಕೆಲವು ಭಾಗಗಳಲ್ಲಿ ಯೋಗಿಗಳ ಮನಸ್ಸಿನಂತೆ ಶುದ್ಧವಾದ ಗಿರಿನದಿಯ ಪ್ರವಾಹವು ಹರಿಯುತ್ತಿತ್ತು. ॥೫॥

ಬಹಳ ಸ್ವಚ್ಛವಾದ ಕಲ್ಲಿನ ಚಪ್ಪಡಿಗಳಿಂದ ಕೂಡಿದ ಭೂಮಿಗಳಲ್ಲಿ ಅಂತಹ ನೀರು ಪ್ರವಹಿಸುತ್ತಿತ್ತು. ಅಲ್ಲದೇ ಈ ಕಾಡು ಅತ್ಯಂತ ಎತ್ತರವಾದ ಮರಗಳ ಮೇಲೆ ಆಶ್ರಯಿಸಿಕೊಂಡಿರುವ ಮೇಘಗಳ ಸಮೂಹದಿಂದಲೂ ಬಹಳವಾಗಿ ಪ್ರಕಾಶಮಾನವಾಗಿತ್ತು. ॥೬॥

ನರ್ತನಮಾಡುತ್ತಿರುವ ನವಿಲುಗಳ ಸಮೂಹದಿಂದ ಕೂಡಿರುವ, ಕೋಗಿಲೆಗಳ ಪಂಚಮಸ್ವರಗಳಿಂದ ಮೊಳಗುತ್ತಿರುವ ಆ ವನದ ಅಂಚಿನಲ್ಲಿ ಗಂಗಾನದಿಯ ದಡದಲ್ಲಿ ಪರ್ವತರಾಜನ ಮಗಳಾದ ಪಾರ್ವತಿಯು ಕುಳಿತುಕೊಂಡಳು. ॥೭॥

ಪಾರ್ವತಿಯು ತನ್ನ ಸಖಿಯರಿಂದ ಸುತ್ತುವರಿಯಲ್ಪಟ್ಟು ಆ ನದಿಯ ದಡದಲ್ಲಿ ವಿಶ್ರಾಂತಿಗಾಗಿ ಕುಳಿತುಕೊಳ್ಳಲು, ಆಗ ಗೌರಿಯು ಬಳಲಿರುವುದನ್ನು ಕಂಡು ಒಬ್ಬಳು ಸಖಿಯು ಈರೀತಿಯಲ್ಲಿ ಅವಳನ್ನು ಉಪಚರಿಸಿದಳು. ॥೮॥

ದ್ಧೃತಂ ಗಂಗಾಂಬುನಾ ಪಾದೌ ಸಮ್ಯಕ್ ಸಮವನೇಜತ ।
ಕೃತಸಖ್ಯೂರುಪಧಾನಾಂ ಸುಪ್ತಾಂ ತಾಂ ಪರ್ವತಾತ್ಮಜಾಂ ॥೯॥

ತೃಣರಾಜೋರು ವೃಂತೇನ ಸಂವೀಜಯತ ಕಾಚನ ।
ಅನ್ಯಾ ನಿಜೋರುಯುಗಲೇ ಕೌಶೇಯ ಸ್ತೋಮಕೋಮಲೇ ॥೧೦॥

ಆರೋಪ್ಯ ತತ್ಪಾದಯುಗಂ ಸಂವಾಹನಪರಾಭವತ್ ।
ಏವಂ ಮುಹೂರ್ತಂ ವಿಶ್ರಾನ್ಯ ಸಮುತ್ಥಾಯಾಲಿಭಿಃ ಸಹ ॥೧೧॥

ಸ್ನಾತ್ವಾ ಸುರಸರಿತ್ತೋಯೇ ಕಂದರಂ ತೀರಸಂಶ್ರಯಂ ।
ಸಮಾಸಾದ್ಯ ತತ್ರ ರಾತ್ರೌ ಸೈಕತೀಂ ತ್ರಿಪುರಾತನುಂ ॥೧೨॥

ಕಾಮೇಶ್ವರಾಂಕ ನಿಲಯಾಂ ಗಂಧಪುಷ್ಪಫಲಾದಿಭಿಃ ।
ಸಮಾರಾಧ್ಯ ವಿಧಾನೇನ ಮಹದ್ಭಿರುಪಚಾರಕೈಃ ॥೧೩॥

---

ಆ ಸಖಿಯು ಗಂಗೆಯ ನೀರನ್ನು ಸ್ವಲ್ಪ ತೆಗೆದುಕೊಂಡು ಗೌರಿಯ ಪಾದಕ್ಕೆ ಚೆನ್ನಾಗಿ ಚುಮುಕಿಸಿ ತೊಳೆದಳು. ಅನಂತರ ಸಖಿಯ ತೊಡೆಯನ್ನೇ ದಿಂಬನ್ನಾಗಿ ಮಾಡಿಕೊಂಡು ಪಾರ್ವತಿಯು ಮಲಗಿದಳು. ॥೯॥

ಮತ್ತೊಬ್ಬ ಸಖಿಯು ಆಗ ದೊಡ್ಡದಾದ ಹುಲ್ಲಿನಿಂದ ಮಾಡಿದ ಬೀಸಣಿಗೆಯಿಂದ ಗೌರೀದೇವಿಗೆ ಬೀಸಿದಳು. ಇನ್ನೊಬ್ಬಳು ರೇಷ್ಮೆ ಬಟ್ಟೆಯ ಸಮೂಹದಂತೆ ಕೋಮಲವಾಗಿದ್ದ ತನ್ನ ಎರಡು ತೊಡೆಗಳ ಮೇಲೂ ಗೌರಿಯ ಕಾಲುಗಳನ್ನಿರಿಸಿಕೊಂಡಳು. ॥೧೦॥

ಆ ಸಖಿಯು ಈರೀತಿಯಲ್ಲಿ ಗೌರಿಯ ಪಾದಗಳನ್ನಿರಿಸಿಕೊಂಡು ಒತ್ತುವುದಕ್ಕೆ ಪ್ರಾರಂಭಿಸಿದಳು. ಹೀಗೆ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಪಾರ್ವತಿಯು ಮೇಲಕ್ಕೆದ್ದಳು. ಮತ್ತು ಸಖಿಯರೊಡಗೂಡಿ ಸ್ನಾನಮಾಡಲು ಹೊರಟಳು. ॥೧೧॥

ಪಾರ್ವತಿಯು ಸ್ನಾನವನ್ನು ಮಾಡಿ ಗಂಗಾನದಿಯ ದಡದಲ್ಲಿರುವ ಗುಹೆಯನ್ನು ಸೇರಿ ಅಲ್ಲಿ ರಾತ್ರಿಯಲ್ಲಿ ಕಾಮೇಶ್ವರನ ತೊಡೆಯ ಮೇಲೆ ವಾಸಿಸುವ ತ್ರಿಪುರಾದೇವಿಯ ಶರೀರವನ್ನು ಮರಳಿನಿಂದ ರಚಿಸಿ, ಗಂಧಪುಷ್ಪ ಫಲ ಮುಂತಾದುವುಗಳಿಂದಲೂ ಶಾಸ್ತ್ರೋಕ್ತಕ್ರಮದಲ್ಲಿ ಪೂಜಿಸಿದಳು. ॥೧೨-೧೩॥

ಸ್ತುತ್ವಾ ಸ್ತುತಿಗಣೈರ್ದೇವೀಂ ವೈದಿಕೈಸ್ತಾಂತ್ರಿಕೈರಪಿ ।
ವಾರ್ಷ್ಣೈರ್ವಿಶೇಷತೋಽಭ್ಯರ್ಚ್ಯ ಗಾನೈರ್ನೃತ್ಯೈಃ ಪರಿಕ್ರಮೈಃ ॥೧೪॥

ಏವಂ ತಸ್ಯಾಃ ಪೂಜಯಂತ್ಯಾ ಶ್ಚಾತ್ಯಗಾತ್ ಸಾ ನಿಶೀಥಿನೀ ।
ಕಲ್ಪೇ(ಲ್ಯೇ) ಕಾಲೇಽಭಿಸಂವೃತ್ತೇ ಚಕ್ರೇ ಗೌರೀ ಶುಭಂ ಸ್ತವಂ॥೧೫॥

ಪರಾಪದಾಂಬುಜಪ್ರೀತಿ ರಸಮಾದ್ಯಚ್ಛುಭಾಂತರಾ ।
ಅದ್ಭುತಂ ಜ್ಞಾನಕಲಿಕಾಸ್ತೋತ್ರಂ ಸಮುಪಚಕ್ರಮೇ ॥೧೬॥

ಶಿವೇ ದೇವಿ ಸಂವಿತ್ಸುಧಾ ಸಾಗರಾಽಽತ್ಮ
ಸ್ವರೂಪಾಽಸಿ ಸರ್ವಾಂತರಾತ್ಮೈಕರೂಪಾ ।
ನ ಕಿಂಚಿದ್ವಿನಾ ತ್ವತ್ಕಲಾಮಸ್ತಿ ಲೋಕೇ
ತತಃ ತತ್ಸ್ವರೂಪಾಽಸಿ ಸತ್ಯೇಽಪ್ಯಸತ್ಯೇ ॥೧೭॥

---

ಪಾರ್ವತಿಯು ತ್ರಿಪುರಾದೇವಿಯ ಮೂರ್ತಿಯನ್ನು ವೇದೋಕ್ತವಾದ ಮತ್ತು ತಂತ್ರ ಶಾಸ್ತ್ರೋಕ್ತವಾದ ಸ್ತೋತ್ರಗಳಿಂದ ಸ್ತೋತ್ರಮಾಡಿ, ಪುಷ್ಪ ಮತ್ತು ಫಲಗಳಿಂದಲೂ, ಮತ್ತು ಅನೇಕ ವಿಧವಾದ ಗಾನ ಮತ್ತು ನೃತ್ಯಗಳಿಂದಲೂ ಆರಾಧಿಸಿದಳು. ॥೧೪॥

ಹೀಗೆ ಪಾರ್ವತಿಯು ಪೂಜಿಸುತ್ತಿರಲು ಆ ರಾತ್ರಿಯು ಕಳೆಯಿತು. ಮುಂಜಾನೆಯಲ್ಲಿ ಗೌರೀದೇವಿಯು ತ್ರಿಪುರಾದೇವಿಯ ಮಂಗಳಕರವಾದ ಸ್ತೋತ್ರಗಳನ್ನು ಹಾಡಿದಳು. ॥೧೫॥

ಪಾರ್ವತಿಯು ಅತ್ಯಂತ ಶ್ರೇಷ್ಠಳಾದ ತ್ರಿಪುರಾದೇವಿಯ ಪಾದಕಮಲದ ಮೇಲಿನ ಪ್ರೀತಿಯ ರಸದಿಂದ ಮದಿಸುತ್ತಿರುವ ಮಂಗಳಕರವಾದ ಮನಸ್ಸುಳ್ಳವಳಾಗಿ ಅತ್ಯಂತಾಶ್ಚರ್ಯಕರವಾದ "ಜ್ಞಾನಕಲಿಕಾ ಸ್ತೋತ್ರ" ವನ್ನು ಹೇಳಲು ಪ್ರಾರಂಭಿಸಿದಳು. ॥೧೬॥

ಓ ಮಂಗಳಕರಳಾದ ದೇವಿಯೇ, ನೀನು ಜ್ಞಾನಾಮೃತದ ಸಾಗರದ ಸ್ವರೂಪಳೂ, ಎಲ್ಲರ ಅಂತರಂಗದಲ್ಲಿರುವ ಒಂದೇ ಆತ್ಮಸ್ವರೂಪವುಳ್ಳವಳೂ ಆಗಿದ್ದೀಯೆ. ನಿನ್ನ ಅಂಶವಿಲ್ಲದ ವಸ್ತುವು ಪ್ರಪಂಚದಲ್ಲಿ ಒಂದೂ ಇಲ್ಲ. ಆದ್ದರಿಂದ ನೀನು ಸತ್ಯಕಾರಣಸ್ವರೂಪವುಳ್ಳವಳಾಗಿಯೂ, ಸತ್ಯ ಮತ್ತು ಸುಳ್ಳಿನಿಂದ ಮಿಶ್ರವಾದ ಕಾರ್ಯರೂಪವಾದ ಜಗತ್ತಿಗೆ ಆಶ್ರಯಳಾಗಿಯೂ ಇದ್ದೀಯೆ. ॥೧೭॥

ಅಸತ್ಯಂ ಪುನಃ ಸತ್ಯಮನ್ಯೇ ದ್ವಿರೂಪಂ
ತ್ರಯೋಽತೀತ ಮೇಕೇ ಜಗುಃ ಸರ್ವಮೇತತ್ ।
ನ ತೇ ತಾಂ ವಿದುರ್ಮಾಯಯಾ ಮೋಹಿತಾಸ್ತೇ
ಚಿದಾನಂದರೂಪಾ ತ್ವಮೇವಾಽಸಿ ಸರ್ವಂ ॥೧೪॥

ಕ್ಷಣಾನಾಂ ಕ್ರಮೈರ್ಭಿನ್ನರೂಪಾಂ ಧರಾದ್ಯೈ
ರ್ಮಿತಾ ಮಾಹುರೇಕೇ ತಮೋಮಾತ್ರರೂಪಾಂ ।
ತಮೋದೀಪ್ತಿ ಸಂಭಿನ್ನರೂಪಾಂ ಚ ಶಾಂತ
ಸ್ವರೂಪಾಂ ಮಹೇಶೀಂ ವಿದುಸ್ತ್ವಾಂ ನ ತೇಽಜ್ಞಾಃ ॥೧೯॥

ಶಿವಾದಿಕ್ಷಿತಿಪ್ರಾಂತ ತತ್ವಾವಲಿರ್ಯಾ
ವಿಚಿತ್ರಾಯದೀಯೇ ಶರೀರೇ ವಿಭಾತಿ ।
ಪಟೇ ಚಿತ್ರಕಲ್ಪಾ ಜಲೇ ಸೇಂದು ತಾರಾ
ನಭೋವತ್ಪರಾ ಸಾ ತ್ವಮೇವಾಽಸಿ ಸರ್ವಾ ॥೨೦॥

---

ಜಗತ್ತನ್ನು ಸತ್ಯ ಮತ್ತು ಅಸತ್ಯವೆಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ನಿನ್ನ ಸ್ವರೂಪವಾದರೋ ಇವೆರಡು ಸ್ವರೂಪಗಳನ್ನೂ ಮೀರಿದೆ. ಮಾಯೆಯಿಂದ ಅಜ್ಞಾನಿಗಳಾದ ಜನರು ನಿನ್ನ ಆ ನಿಜವಾದ ಸ್ವರೂಪವನ್ನು ತಿಳಿಯಲಾರರು. ಜ್ಞಾನಾನಂದ ಸ್ವರೂಪಳಾದ ನೀನೇ ಎಲ್ಲಾ ಸ್ವರೂಪಳೂ ಆಗಿದ್ದೀಯೆ. ॥೧೪॥

ಕ್ಷಣಗಳು ಭಿನ್ನಭಿನ್ನವಾಗಿರುವುದರಿಂದ ಈ ಕಾಲಭೇದದಿಂದ ಭಿನ್ನಸ್ವರೂಪ ಗಳನ್ನು ತಾಳುವ ಭೂಮಿಯೇ ಮೊದಲಾದ ಕಾರ್ಯಸ್ವರೂಪಳೆಂದೂ, ಕತ್ತಲೆ ಯೊಂದೇ ಸ್ವರೂಪವು ನಿನ್ನದೆಂದೂ ಕೆಲವರು ಹೇಳುತ್ತಾರೆ. ಕತ್ತಲು ಮತ್ತು ಬೆಳಕು ಇವುಗಳಿಗೆ ವ್ಯತಿರಿಕ್ತವಾದ, ಶಾಂತವಾದ ಸ್ವರೂಪವು ನಿನ್ನದು ಎಂಬುದನ್ನು ಅಜ್ಞರಾದ ಜನರು ತಿಳಿಯಲಾರರು. ॥೧೯॥

ಯಾವಾಕೆಯ ಶರೀರದಲ್ಲಿಯೇ ಶಿವನು ಮೊದಲು ಮಾಡಿಕೊಂಡು ಭೂಮಿಯ ವರೆಗಿನ ವಿಚಿತ್ರವಾದ ಸಮಸ್ತ ತತ್ವಗಳ ಸಮೂಹಗಳೂ, ಬಟ್ಟೆಯಮೇಲೆ ಚಿತ್ರ ಗಳಂತೆ, ಯಾರ ದೇಹದಲ್ಲಿ ತೋರುತ್ತಿವೆಯೋ, ನೀರಿನಲ್ಲಿ ಚಂದ್ರ ಮತ್ತು ನಕ್ಷತ್ರ ಗಳಂತೆ ಕಾಣುತ್ತವೆಯೋ, ಅಂಥಾ ಆಕಾಶದಂತೆ ವಿಶಾಲವಾದ ಸ್ವರೂಪವುಳ್ಳ ನೀನೇ ಈ ಎಲ್ಲಾ ಸ್ವರೂಪವನ್ನೂ ಹೊಂದಿದ್ದೀಯೆ. ॥೨೦॥

ಅಭಿನ್ನಂ ವಿಭಿನ್ನಂ ಬಹಿರ್ವಾಽಂತರೇ ವಾ
ವಿಭಾತಿ ಪ್ರಕಾಶಸ್ತ್ವನೋ ವಾಽಪಿ ಸರ್ವಂ।
ಋತೇ ತ್ವಾಂ ಚಿತಿಂ ಯೇನ ನೋ ಭಾತಿ ಕಿಂಚಿ
ತ್ತತಸ್ತ್ವಂ ಸಮಸ್ತಂ ನಕಿಂಚಿತ್ತ್ವದನ್ಯತ್ ॥೨೦॥

ನಿರುಧ್ಯಾಽಂತರಂಗಂ ವಿಲೀಯಾಽಕ್ಷಸಂಘಂ
ಪರಿತ್ಯಜ್ಯ ಸರ್ವತ್ರ ಕಾಮಾದಿ ಭಾವಂ।
ಸ್ಥಿತಾನಾಂ ಮಹಾಯೋಗಿನಃ ಚಿತ್ತಭೂಮೌ
ಚಿದಾನಂದರೂಪಾ ತ್ವಮೇಕಾ ವಿಭಾಸಿ ॥೨೨॥

ತಥಾಽನ್ಯೇ ಮನಃ ಸೇಂದ್ರಿಯಂ ಸಂಚರಚ್ಚಾ
ಪ್ಯಸಂಯಮ್ಯ ತನ್ಮಾರ್ಗಕೇ ಜಾಗರೂಕಾಃ।
ಸ್ವಸಂವಿತ್ಸುಧಾಽದರ್ಶದೇಹೇ ಸ್ಫುರಂ ತಂ
ಮಹಾಯೋಗಿನಾಥಾಃ ಪ್ರಪಶ್ಯಂತಿ ಸರ್ವಂ ॥೨೩॥

---

ಅಭಿನ್ನವಾಗಿಯೂ, ವಿಭಿನ್ನವಾಗಿಯೂ, ಒಳಗಾಗಲೀ, ಹೊರಗಾಗಲೀ ಕಾಣುವ, ಪ್ರಕಾಶಸ್ವರೂಪ ಅಥವಾ ಕತ್ತಲಿನ ಸ್ವರೂಪವಾದ ಸಮಸ್ತ ಜಗತ್ತೂ ಜ್ಞಾನಸ್ವರೂಪಳಾದ ನಿನ್ನ ಪ್ರಕಾಶವಿಲ್ಲದೇ ಪ್ರಕಾಶಿಸಲಾರದು. ಆದ್ದರಿಂದ ನೀನೇ ಎಲ್ಲಾ ಸ್ವರೂಪಳೂ ಆಗಿದ್ದೀಯೆ. ನಿನಗಿಂತ ಬೇರೆಯಾದದ್ದು ಯಾವುದೂ ಇಲ್ಲ. ॥೨೧॥

ತಮ್ಮ ಮನಸ್ಸನ್ನು ನಿಗ್ರಹಮಾಡಿ, ಇಂದ್ರಿಯಸಮೂಹಗಳನ್ನೂ ತಡೆದು, ಕಾಮಕ್ರೋಧವೇ ಮೊದಲಾದ ಮನಸ್ಸಿನ ವಿಕಾರಗಳನ್ನೂ ಬಿಟ್ಟು, ಸ್ಥಿರವಾಗಿರುವ ಮಹಾಯೋಗಿಗಳ ಮನಸ್ಸಿನ ಭೂಮಿಯಲ್ಲಿ ಜ್ಞಾನಾನಂದ ಸ್ವರೂಪಳಾದ ನೀನೊಬ್ಬಳೇ ಪ್ರಕಾಶಿಸುತ್ತಿರುತ್ತೀಯೆ. ॥೨೨॥

ಹಾಗೆಯೇ ತಮ್ಮ ಮನಸ್ಸು ಮತ್ತು ಇಂದ್ರಿಯಗಳ ಚಲನೆಗಳನ್ನು ತಡೆಯುದಿದ್ದರೂ ದೇವಿಯ ಸಾಕ್ಷಾತ್ಕಾರದ ಮಾರ್ಗದಲ್ಲಿಯೇ ಜಾಗರೂಕರಾಗಿ ನಡೆಯುತ್ತಿರುವ ಮಹಾಯೋಗೀಶ್ವರರು ತಮ್ಮ ಜ್ಞಾನಾಮೃತದ ಕನ್ನಡಿಯಂತಿರುವ ದೇಹದಲ್ಲಿಯೇ ಪ್ರಕಾಶಿಸುವ ಎಲ್ಲಾ ವಸ್ತುಗಳನ್ನೂ ನೋಡಲು ಸಮರ್ಥರಾಗುತ್ತಾರೆ.॥೨೩॥

ನಿರುಕ್ತೇ ಮಹಾಸಾರಮಾರ್ಗೇಽತಿ ಸೂಕ್ಷ್ಮೇ
ಗತಿಂ ಯೇ ನ ವಿಂದಂತಿ ಮೂಢಸ್ವಭಾವಾಃ ।
ಜನಾನ್ ತಾನ್ ಸಮುದ್ಧರ್ತುಮಕ್ಷ್ಣೋಽವಗಮ್ಯಂ
ಬಹಿಃ ಸ್ಥೂಲರೂಪಂ ವಿಭಿನ್ನಂ ಬಿಭರ್ಷಿ ॥೨೪॥

ತದಾರಾಧನೇಽನೇಕ ಮಾರ್ಗಾನ್ ವಿಚಿತ್ರಾನ್
ವಿಧಾಯಾಽಥ ಮಾರ್ಗೇಣ ಕೇನಾಪಿ ಯಾಂತಂ ।
ನದೀ ವಾರಿ ಸಿಂಧುರ್ಯಥಾ ಸ್ವೀಕರೋತಿ
ಪ್ರದಾಯ ಸ್ವಭಾವಂ(ಚ) ಸ್ವಾತ್ಮೀಕರೋಷಿ ॥೨೫॥

ತಥಾ ತಾಸು ಮೂರ್ತಿಷ್ವನೇಕಾಸು ಮುಖ್ಯಾ
ಧನುರ್ಬಾಣಪಾಶಾಂಕುಶಾಽಽಢ್ಯೈವ ಮೂರ್ತಿಃ ।
ಶರೀರೇಷು ಮೂರ್ಧೇವ ಯೇ ತಾಂ ಭಜೇಯು-
ರ್ಜನಾಸ್ತ್ರೈಪುರೀಂ ಮೂರ್ತಿ ಮುತ್ಯುತ್ತಮಾಸ್ತೇ ॥೨೬॥

---

ಅತ್ಯಂತ ಸಾರಭೂತವಾದ ಅತಿ ಸೂಕ್ಷ್ಮವಾದ ಈ ವೇದೋಕ್ತಮಾರ್ಗದಲ್ಲಿ ನಿನ್ನ ಸ್ವರೂಪಜ್ಞಾನವನ್ನು ಪಡೆಯಲು ಅಸಮರ್ಥರಾದ ಮೂಢರಾದ ಜನರನ್ನು ಉದ್ಧಾರಮಾಡುವುದಕ್ಕಾಗಿ ಕಣ್ಣಿಗೆ ಕಾಣಿಸುವ ಬೇರೆ ಬೇರೆಯಾದ ಹೊರಗಿನ ಸ್ಥೂಲರೂಪವನ್ನು ನೀನು ಹೊಂದಿದ್ದೀಯೆ. ॥೨೪॥

ನಿನ್ನ ಪೂಜೆಯ ವಿಷಯದಲ್ಲಿ ವಿಚಿತ್ರವಾದ ಅನೇಕ ಮಾರ್ಗಗಳನ್ನು ಅನುಸರಿಸುವ ಜನರಿಗೆ ಬೇರೆ ಬೇರೇ ವಿಧಾನಗಳನ್ನು ನೀನೇ ತೋರಿಸಿ, ಯಾವೊಂದು ಮಾರ್ಗದಲ್ಲಿ ಪೂಜಿಸುವವರಿಗೂ, ಅನೇಕ ದಾರಿಗಳಲ್ಲಿ ಬರುವ ನದಿಗಳ ನೀರನ್ನು ಸಮುದ್ರವು ಹೇಗೆ ಸ್ವೀಕರಿಸುತ್ತದೆಯೋ ಹಾಗೆ, ಅವರವರ ಸ್ವಭಾವಕ್ಕನುಗುಣವಾಗಿಯೇ ಮಾಡಿದ ಆ ಆರಾಧನೆಯನ್ನು ಕೈಗೊಂಡು ಅವರೆಲ್ಲರನ್ನೂ ನಿನ್ನವರನ್ನಾಗಿ ಮಾಡಿಕೊಳ್ಳುತ್ತೀಯೆ. ॥೨೫॥

ಹೀಗೆ ನಿನ್ನ ಅನೇಕವಿಧವಾದ ಶರೀರಗಳಲ್ಲಿ ಧನುಸ್ಸು, ಬಾಣ, ಪಾಶ, ಅಂಕುಶ ಮುಂತಾದ ಆಯುಧಗಳನ್ನು ಹಿಡಿದಿರುವ ನಿನ್ನ ಶರೀರವೇ, ಶರೀರದಲ್ಲಿ ತಲೆಯು ಹೇಗೆ ಪ್ರಧಾನವಾದುದೋ ಹಾಗೆ, ಮುಖ್ಯವಾಗಿದೆ. ಇಂತಹ ನಿನ್ನ ಈ ತ್ರಿಪುರಾ ಶರೀರವನ್ನು ಭಜಿಸುವ ಜನರೇ ಅತ್ಯುತ್ತಮರಾದವರು. ॥೨೬॥

ಜನಾನ್ ದುಃಖಸಿಂಧೋಃ ಸಮುದ್ಧರ್ತುಕಾಮಾ
ಪಥಸ್ತ್ವನನೇಕಾನ್ ಪ್ರದಿಶ್ಯ ಪ್ರಕೃಷ್ಟಾನ್ ।
ಯದಾರ್ದ್ರಸ್ವಭಾವೇತಿ ವಿಖ್ಯಾತಕೀರ್ತಿ
ಸ್ತ್ವಮೇಕೈವ ಪೂಜ್ಯಾ ಪರಾಶಕ್ತಿರೂಪಾ ॥೨೭॥

ಸದಾ ತೇ ಪದಾಬ್ಜೇ ಮನಃ ಷಟ್ಪದೋ ಮೇ
ಪಿಬನ್ ತದ್ರಸಂ ನಿರ್ವೃತಃ ಸಂಸ್ಥಿತೋಽಸ್ತು ।
ಇತಿ ಪ್ರಾರ್ಥನಾಂ ಮೇ ನಿಶಮ್ಯಾಽಽಶುಮಾತ
ರ್ನಿಧೇಹಿ ಸ್ವದೃಷ್ಟಿಂ ದಯಾಽಽರ್ದ್ರಾಮಪೀಷತ್ ॥೨೮॥

ಇತಿ ಸಂಸ್ತುತ್ಯ ಸಾ ಗೌರೀ ತ್ರಿಪುರಾಂ ಪರಮೇಶ್ವರೀಂ ।
ಸ್ತೋತ್ರೇಣ ಜ್ಞಾನಕಲಿಕಾಽಽಖ್ಯೇನ ಧ್ಯಾನಂ ಸಮಾಸ್ಥಿತಾ ॥೨೯॥

ಅಥ ಸಾ ಧ್ಯೇಯಮಾಶ್ರಾಽತ್ಮ ರೂಪಿಣೀ ಸಮಜಾಯತ ।
ಯದಾ ತದಾ ಸಾ ತ್ರಿಪುರಾ ಪ್ರತ್ಯಕ್ಷೀ ಭವದಂಬಿಕಾ ॥೩೦॥

---

ಜನರನ್ನು ದುಃಖವೆಂಬ ಸಾಗರದಿಂದ ಉದ್ಧಾರಮಾಡಲು ಇಷ್ಟಪಟ್ಟು, ಅದಕ್ಕಾಗಿ ಅವರಿಗೆ ಉತ್ತಮವಾದ ನಾನಾ ಮಾರ್ಗಗಳನ್ನು ಕಲ್ಪಿಸಿ, ಕರುಣೆಯಿಂದ ಮೃದುವಾದ ಸ್ವಭಾವವುಳ್ಳವಳು ಎಂದು ಪ್ರಸಿದ್ಧವಾದ ಕೀರ್ತಿಯುಳ್ಳ ಪರಾಶಕ್ತಿ ಸ್ವರೂಪಳಾದ ನೀನೊಬ್ಬಳೇ ಪೂಜ್ಯಳು. ॥೨೭॥

ನಿನ್ನ ಪಾದಕಮಲಗಳಲ್ಲಿ ನನ್ನ ಮನಸ್ಸೆಂಬ ಜೇನುಹುಳುವು ಅದರ ರಸವನ್ನು ಪಾನಮಾಡುತ್ತಾ ಸುಖವಾಗಿ, ಸ್ಥಿರವಾಗಿ. ಇರಲಿ ಎಂಬ ನನ್ನ ಪ್ರಾರ್ಥನೆಯನ್ನು ನೀನು ದಯವಿಟ್ಟು ಕೇಳಿ ಕರುಣಾಪೂರ್ಣವಾದ ನಿನ್ನ ದೃಷ್ಟಿಯನ್ನು ಸ್ವಲ್ಪವಾದರೂ ನನ್ನಮೇಲಿಡು. ॥೨೮॥

ಆ ಗೌರಿಯು ತ್ರಿಪುರಾಪರಮೇಶ್ವರಿಯನ್ನು ಈರೀತಿಯಲ್ಲಿ "ಜ್ಞಾನಕಲಿಕಾ" ಎಂಬ ಸ್ತೋತ್ರದಿಂದ ಸ್ತೋತ್ರಮಾಡಿ ಧ್ಯಾನಮಾಡಿದಳು. ॥೨೯॥

ಅನಂತರ ಪಾರ್ವತಿಯು ಧ್ಯೇಯಳಾದ ತ್ರಿಪುರಾದೇವಿಯಲ್ಲಿಯೇ ಲೀನವಾದ ಮನಸ್ಸುಳ್ಳವಳಾಗಲು ತ್ರಿಪುರಾದೇವಿಯು ಆ ಗೌರಿಗೆ ಪ್ರತ್ಯಕ್ಷಳಾದಳು. ॥೩೦॥

ಚಕ್ರರಾಜ ರಥಾರೂಢಾ ಸರ್ವಾಭರಣಭೂಷಿತಾ ।
ಸಾ(ಸ)ಚಾಮರ ರಮಾವಾಣೀ ಸವ್ಯದಕ್ಷಿಣಸೇವಿತಾ ॥೩೧॥

ಪಾಶಾಂಕುಶಧನುರ್ಬಾಣ ಲಸದ್ಬಾಹು ಚತುಷ್ಟಯಾ ।
ಬಂಧೂಕಕುಸುಮಾಭಾಸಾ ಚಂದ್ರಚೂಡಾ ತ್ರಿಲೋಚನಾ ॥೩೨॥

ಕಾಮೇಶ್ವರಾಂಕ ನಿಲಯಾ ರತ್ನಕೌಶೇಯವಾಸಿನೀ ।
ದದರ್ಶ ಗೌರೀಂ ಧ್ಯಾಯಂತೀಂ ಧ್ಯೇಯಮಾತ್ರಾವಶೇಷಿಣೀಂ ॥೩೩॥

ಪರಿವಾರ ಸ್ವಾನುಚರ ಕೋಲಾಹಲ ಶತೈರಪಿ ।
ಅಪ್ರಬುದ್ಧಾಂ ಸಮಾಲೋಕ್ಯ ಗೌರೀಂ ತಾಂ ತ್ರಿಪುರಾಂಬಿಕಾ ॥೩೪॥

---

ತ್ರಿಪುರಾದೇವಿಯು ಚಕ್ರರಾಜರಥದಮೇಲೆ ಕುಳಿತುಕೊಂಡು ಎಲ್ಲಾ ಆಭರಣಗಳಿಂದಲೂ ಶೋಭಿಸುತ್ತಾ ದೇವತೆಗಳು ಲಕ್ಷ್ಮಿ ಮತ್ತು ಸರಸ್ವತಿಯರಿಂದ ಎಡ ಬಲ ಭಾಗಗಳಲ್ಲಿ ಸೇವಿಸಲ್ಪಡುವವಳಾಗಿ ಅಲ್ಲಿ ಕಾಣಿಸಿಕೊಂಡಳು. ॥೩೧॥

ತ್ರಿಪುರಾದೇವಿಯು ಪಾಶ, ಅಂಕುಶ, ಧನುಸ್ಸು, ಬಾಣ ಇವುಗಳಿಂದ ಪ್ರಕಾಶ ಮಾನವಾದ ನಾಲ್ಕು ತೋಳುಗಳುಳ್ಳವಳಾಗಿ, ಬಂಧೂಕ ಎಂಬ ಹುವ್ವಿನಂತೆ ಕಾಂತಿಯುಳ್ಳವಳಾಗಿ, ಚಂದ್ರನನ್ನೇ ತಲೆಗೆ ಆಭರಣವನ್ನಾಗಿ ಮಾಡಿಕೊಂಡು ಮುಕ್ಕಣ್ಣಳಾಗಿದ್ದಳು. ॥೩೨॥

ಕಾಮೇಶ್ವರನ ತೊಡೆಯಮೇಲೆ ವಾಸಮಾಡುವವಳೂ ರತ್ನಮಯವಾದ ರೇಷ್ಮೇ ಬಟ್ಟೆಯನ್ನು ಧರಿಸಿರುವವಳೂ, ಆದ ತ್ರಿಪುರಾದೇವಿಯು ಧ್ಯೇಯಳಾದ ತನ್ನಲ್ಲೇ ನೆಟ್ಟಮನಸ್ಸುಳ್ಳವಳಾಗಿದ್ದ, ಧ್ಯಾನವನ್ನು ಮಾಡುತ್ತಿರುವ ಗೌರಿಯನ್ನು ನೋಡಿದಳು. ॥೩೩॥

ತನ್ನ ಪರಿವಾರ ಮತ್ತು ಸೇವಕರ ನೂರಾರು ವಿಧವಾದ ಕೋಲಾಹಲಧ್ವನಿಯಿಂದಲೂ ಎಚ್ಚರಗೊಳ್ಳದಿರುವ ಗೌರಿಯನ್ನು ತ್ರಿಪುರಾದೇವಿಯು ಗಮನಿಸಿದಳು. ॥೩೪॥

ಚಿತ್ತಾಽಽಕರ್ಷಿಣಿಕಾಂ ಶಕ್ತಿಮುವಲೋಕಯದಂಬಿಕಾ ।
ಅಥ ಸಾ ಪರಮೇಶಾನ್ಯಾ ವಿದಿತ್ವಾ ವೀಕ್ಷಣಾಽಽಶಯಂ ॥೩೫॥

ಚಕರ್ಷ ಗೌರೀ ಚಿತ್ತಂ ತದ್ಧ್ಯೇಯೇ ಲೀನ ಮಾಸ್ಥಿತಂ ।
ಧ್ಯೇಯನಿರ್ಗತ ಚಿತ್ತಾ ಸಾ ಕಿಮೇತದಿತಿ ವಿಸ್ಮಿತಾ ॥೩೬॥

ಪ್ರೇಕ್ಷಾಂ ಚಕ್ರೇ ಬಹಿರ್ದೃಷ್ಟಿಮುನ್ಮೀಲ್ಯ ನಗಕನ್ಯಕಾ ।
ದೃಷ್ಟ್ವಾ ಪರಾಂಬಿಕಾಂ ಗೌರೀ ಪ್ರಣನಾಮಾಽತಿಹರ್ಷಿತಾ ॥೩೭॥

ಬದ್ಧಾಂಽಜಲಿ ಪುಟಾ ದೇವೀಂ ಪ್ರವಕ್ತುಮುಪಚಕ್ರಮೇ ।
ದೇವಿ ಸಂಶಾಧಿ ಮಾಂ ಭೃತ್ಯಾಂ ಕಿಂ ವಿಧಾಸ್ಯಾಮಿ ಸಾಂಪ್ರತಂ ॥೩೮॥

ಅಗ್ರಜಃ ಕಮಲಾಕ್ಷೋ ಮಾಂ ದೇಹೇನ ಸಮಯೋಜಯತ್ ।
ತತ್ತ್ವದಾಜ್ಞಾಮಹಂ ಮೂರ್ಧ್ನಾಽಽವಹಂತೀ ದೇಹಮಾಸ್ಥಿತಾ ॥೩೯॥

---

ಆಗ ತ್ರಿಪುರಾದೇವಿಯು ಚಿತ್ತಾಕರ್ಷಣಿಕಾ ಎಂಬ ಶಕ್ತಿಯನ್ನು ನೋಡಿದಳು. ಆಗ ಆ ಶಕ್ತಿದೇವಿಯು ತನ್ನನ್ನು ತ್ರಿಪುರಾದೇವಿಯು ನೋಡಿದುದರ ಆಶಯವನ್ನೂ ತಿಳಿದಳು. ॥೩೫॥

ದೇವಿಯ ಧ್ಯಾನದಲ್ಲಿಯೇ ನಿರತಳಾಗಿದ್ದ ಗೌರಿಯ ಮನಸ್ಸನ್ನು ಆ ಶಕ್ತಿಯು ಆಕರ್ಷಿಸಿದಳು. ಆಗ ತ್ರಿಪುಟಿಯಳಿದ ಸಮಾಧಿಯಲ್ಲಿದ್ದ ಧ್ಯಾನಮಾರ್ಗದಿಂದ ಬಹಿರ್ಮುಖವಾಗಿ ಗೌರಿಯು ಇದೇನಿದು ? ಎಂದು ಆಶ್ಚರ್ಯಪಟ್ಟಳು. ॥೩೬॥

ಪಾರ್ವತಿಯು ಕಣ್ಣುಗಳನ್ನು ತೆರೆದು ಹೊರಗಡೆ ನೋಡಿದಳು. ಆಗ ಅವಳು ಪರಾಂಬಿಕೆಯಾದ ತ್ರಿಪುರಾದೇವಿಯನ್ನು ಸಂದರ್ಶಿಸಿ ಬಹಳ ಸಂತೋಷ ಭರಿತಳಾದಳು. ॥೩೭॥

ಪಾರ್ವತಿಯು ಕೈಜೋಡಿಸಿಕೊಂಡು ದೇವಿಯನ್ನು ಕುರಿತು ಹೀಗೆ ಪ್ರಾರ್ಥಿಸಿಕೊಂಡಳು. "ಓ ದೇವಿಯೇ, ನಿನ್ನ ಸೇವಕಿಯಾದ ನನ್ನನ್ನು ಕಾಪಾಡುವವಳಾಗು. ಈಗ ನಾನೇನನ್ನು ಮಾಡಲಿ ?" ॥೩೮॥

ಆಗ ನನ್ನ ಅಣ್ಣನೇ ಆದ ನಾರಾಯಣನು ನಾನು ದೇಹತೆಗೆದುಕೊಳ್ಳುವಂತೆ ಪ್ರೇರೇಪಿಸಿದನು. ನಾನಾದರೋ ನಿನ್ನ ಆಜ್ಞೆಯನ್ನು ಶಿರಸಾವಹಿಸಿಯೇ ಈ ದೇಹವನ್ನು ತೆಗೆದುಕೊಂಡೆನು. ॥೩೯॥

ತ್ವದ್ವಿತೀರ್ಣಶ್ಚ ಮೇ ಭರ್ತಾ ತಪಸ್ಯೇವಾಽಭಿಸಂ ರತಃ ।
ತದಾಜ್ಞಾಪಯ ಯತ್ಕಾರ್ಯಂ ಮಯಾ ತತ್ಪರಮೇಶ್ವರಿ ॥೪೦॥

ನಿಶಮ್ಯ ಪ್ರಾರ್ಥನಾಂ ಗೌರ್ಯಾಃ ಪ್ರಾಹ ಸಾ ಪರಮೇಶ್ವರೀ ।
ಶೃಣು ಪಾರ್ವತಿ ಯತ್ಕಿಂಚಿನ್ನಾಽಸ್ತಿ ತೇಽವಿದಿತಂ ಕ್ವಚಿತ್ ॥೪೧॥

ಮದಂಶಭೂತಾ ಯಸ್ಮಾತ್ತ್ವಂ ನ ಹಾಸ್ಯತಿ ತವೇಪ್ಸಿತಂ ।
ತಪಸಾ ವಿರತೋ ದೇವಃ ಶಿವಸ್ತ್ವಾಂ ಪರಿಣೇಷ್ಯತಿ ॥೪೨॥

ಕುಮಾರೋ ಭವಿತಾ ಶೀಘ್ರಂ ಸರ್ವಲೋಕೈಕನಂದನಃ ।
ತ್ವಯಾಽಹಂ ಸಂಸ್ತುತಾ ಯೇನ ಸ್ತೋತ್ರೇಣ ನಗನಂದಿನಿ ॥೪೩॥

ಯಸ್ಮಾತ್ತಚ್ಛಾಕ್ತ ವಿಜ್ಞಾನಗರ್ಭಿತಂ ಪಠತಾಂ ನೃಣಾಂ ।
ಜ್ಞಾನದಂ ಜ್ಞಾನಕಲಿಕಾಸ್ತೋತ್ರ ಮಿತ್ಯಭಿವಿಶ್ರುತಂ ॥೪೪॥

---

ನೀನೇ ನನಗೆ ತಿಳಿಸಿಕೊಟ್ಟ ನನ್ನ ಗಂಡನು ತಪಸ್ಸಿನಲ್ಲಿ ಆಸಕ್ತನಾಗಿದ್ದಾನೆ. ಓ ಪರಮೇಶ್ವರಿಯೇ, ಆದ್ದರಿಂದ ನಾನು ಈಗೇನು ಮಾಡಬೇಕೆಂಬುದನ್ನು ದಯವಿಟ್ಟು ಹೇಳು. ॥೪೦॥

ಗೌರಿಯ ಈ ಪ್ರಾರ್ಥನೆಯನ್ನು ಕೇಳಿ ಪರಮೇಶ್ವರಿಯು ಅವಳನ್ನು ಕುರಿತು "ಎಲೌ ಪಾರ್ವತಿಯೇ, ನಿನಗೆ ಗೊತ್ತಿಲ್ಲದಿರುವುದಾವುದೂ ಇಲ್ಲ. ಆದರೂ ಕೇಳು ಎಂದಳು. ॥೪೧॥

ನೀನು ನನ್ನ ಅಂಶದಿಂದಲೇ ಹುಟ್ಟಿರುವುದರಿಂದ ನಿನ್ನ ಇಷ್ಟಾರ್ಥವು ನೆರವೇರದೇ ಇರುವುದಿಲ್ಲ. ತಪಸ್ಸುಮಾಡುವುದನ್ನು ಬಿಟ್ಟು ಶಿವನು ನಿನ್ನನ್ನು ಮದುವೆಯಾಗುವನು. ॥೪೨॥

ಎಲೈ ಪಾರ್ವತಿಯೇ, ಜ್ಞಾನಕಲಿಕಾಸ್ತೋತ್ರದಿಂದ ನನ್ನನ್ನು ಸ್ತುತಿಸಿರುವುದರಿಂದ ನಿನಗೆ ಎಲ್ಲಾ ಲೋಕಗಳಿಗೂ ಸಂತೋಷವನ್ನುಂಟುಮಾಡುವ ಶ್ರೇಷ್ಠನಾದ ಕುಮಾರನು ಜನಿಸುವನು. ॥೪೩॥

ನೀನು ಹೇಳಿದ ಸ್ತೋತ್ರವು ಶಾಕ್ತಶಾಸ್ತ್ರವಿಷಯಗರ್ಭಿತವಾಗಿಯೂ ಅದನ್ನು ಪಠಿಸುವ ಜನರಿಗೆ ಜ್ಞಾನವನ್ನುಂಟುಮಾಡುವುದಾಗಿಯೂ ಇರುವುದರಿಂದ ಅದು ಜ್ಞಾನಕಲಿಕಾಸ್ತೋತ್ರವೆಂದು ಪ್ರಸಿದ್ಧವಾಗಿದೆ. ॥೪೪॥

ತಸ್ಮಾದಸ್ತು ಮತ್ಪ್ರಸಾದಾ ತ್ಪ್ರೀತಾ ಸ್ಯಾಂ ಪಠತಾಂ ನೃಣಾಂ ।
ಇತಿ ಗೌರೀಂ ಸಮಾಭಾಷ್ಯ ಜಗಾಮಾಂತರ್ಧಿಮಂಬಿಕಾ ॥೪೫॥

ಅಥ ಗೌರೀ ಪ್ರಣಮ್ಯಾಂಬಾಂ ಸ್ನಾತ್ವಾ ಸುರಸರಿದ್ವರೇ ।
ಪುನಃ ಸಂಪೂಜ್ಯ ತಾಂ ಮೂರ್ತಿಂ ವಿಸೃಜ್ಯ ಸಲಿಲೇ ತತಃ ॥೪೬॥

ಭುಕ್ತ್ವಾ ಪ್ರಸಾದಂ ಸಖಿಭಿಃ ಸಹ ಪರ್ವತನಂದಿನೀ ।
ವನಸ್ಯ ಶೋಭಾಂ ಪ್ರೇಕ್ಷಂತೀ ಸುಶೀತಲ ಶಿಲಾತಲೇ ॥೪೭॥

ಶಯಾನಾ ಪರ್ಣಶಯನೇ ಶೃಣ್ವಂತೀ ಸಖಿಭಾಷಿತಂ ।
ತತ್ರ ಕಾಚಿತ್ಸಖೀ ಪ್ರಾಹ ಗೌರೀಂ ಪ್ರತಿ ತದಾ ವಚಃ ॥೪೮॥

ಶೃಣು ಗೌರಿ ತ್ವಯಾ ಚೈತದವಿಮೃಶ್ಯ ಕೃತಂ ನನು ।
ಪಿತರೌ ಸಂಪರಿತ್ಯಜ್ಯ ವೃದ್ಧೌ ತ್ವದ್ವಿರಹಾತುರೌ ॥೪೯॥

---

ಆದ್ದರಿಂದ ಜ್ಞಾನಕಲಿಕಾಸ್ತೋತ್ರವನ್ನು ಪಠಿಸುವ ಜನರಿಗೆ ನಾನು ಪ್ರೀತಳಾಗುವೆನು. ಎಂದು ಗೌರಿಯನ್ನು ಕುರಿತು ಹೇಳಿ, ಲೋಕಮಾತೆಯಾದ ತ್ರಿಪುರಾದೇವಿಯು ಅಂತರ್ಧಾನವನ್ನು ಹೊಂದಿದಳು. ॥೪೫॥

ಅನಂತರ ಪಾರ್ವತಿಯು ತ್ರಿಪುರಾದೇವಿಯ ಮೂರ್ತಿಗೆ ನಮಸ್ಕಾರಮಾಡಿ ಪುನಃ ಪೂಜೆಮಾಡಿ, ಆ ಮೂರ್ತಿಯನ್ನು ಗಂಗಾನದಿಯ ಶ್ರೇಷ್ಠವಾದ ಜಲದಲ್ಲಿ ವಿಸರ್ಜನೆಮಾಡಿದಳು. ॥೪೬॥

ಆಮೇಲೆ ಪಾರ್ವತಿಯು ತನ್ನ ಸಖಿಯರೊಂದಿಗೆ ದೇವಿಯ ಪ್ರಸಾದವನ್ನು ಭಕ್ಷಿಸಿ, ಆ ಕಾಡಿನ ಸೌಂದರ್ಯವನ್ನು ನೋಡುತ್ತಾ ಬಹಳ ತಣ್ಣಗಿರುವ ಒಂದು ಕಲ್ಲಿನ ಪೀಠದಮೇಲೆ ವಿಶ್ರಮಿಸಲು ಅಪೇಕ್ಷಿಸಿದಳು. ॥೪೭॥

ಅಲ್ಲಿ ಎಲೆಗಳಿಂದ ಮಾಡಿದ ಒಂದು ಹಾಸಿಗೆಯ ಮೇಲೆ ಮಲಗಿ ಪಾರ್ವತಿಯು ಸ್ನೇಹಿತೆಯರೊಂದಿಗೆ ಸರಸಸಲ್ಲಾಪಗಳನ್ನು ಕೇಳುತ್ತಿದ್ದಳು. ಆಗ ಒಬ್ಬ ಸಖಿಯು ಗೌರಿಯನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೪೮॥

ಎಲೌ ಗೌರಿಯೇ, ನೀನು ವಿಮರ್ಶೆಮಾಡದೇ ಈ ಕೆಲಸಕ್ಕೆ ಹೊರಟೆ ಯಲ್ಲವೆ? ಏಕೆಂದರೆ ವೃದ್ಧರೂ ನಿನ್ನ ವಿಯೋಗವನ್ನು ಸಹಿಸಲಾರದವರೂ ಆದ ತಾಯಿತಂದೆಗಳ ಮಾತನ್ನು ಕೇಳದೇ ಇಲ್ಲಿಗೆ ಬಂದೆಯಲ್ಲವೇ?. ॥೪೯॥

ವನೇಽಸ್ಮಾಭಿರ್ಮಹಾಘೋರೇ ಸಮಾಯಾತಾಽಸಿ ತನ್ನಸತ್ ।
ತ್ವಾಂ ವಿನಾ ತೌ ಮಹಾದುಃಖ ದಾವಾಗ್ನಿಮಭಿಸಂಗತೌ ॥೫೦॥

ಜೀವಿತಂ ಜಹೀತಃ ಸತ್ಯಂ ಶಲಭಾವಿವ ಪಾವಕಂ ।
ಶ್ರುತ್ವೈವಂ ಸಖಿವಾಕ್ಯಂ ಸಾ ಗೂಹಂತೀ ಸ್ವಸ್ಯ ವೈಭವಂ ॥೫೧॥

ಪಿತ್ರೋರ್ವಿಯೋಗತೋ ದೀನಾ ರುದಂತೀ ಪ್ರಾಹ ತಾಂ ಸಖೀಂ ।
ಅಪೇಹಿ ಸಖಿ ಮದ್ವಾಕ್ಯ ಮಹಂ ಪೂರ್ವಂ ಪತಿಂ ಶಿವಂ ॥೫೨॥

ವೃತಾಽಸ್ಮಿ ಮನಸಾ ತನ್ಮೇ ಪಿತ್ರಾ ಮೋಘಂ ಕೃತಂ ತತಃ ।
ಯುಷ್ಮಾಭಿರಾಗತಾ ಸಾಕಂ ವನಮೇತದ್ಭಯಂಕರಂ ॥೫೩॥

ತೌ ರಕ್ಷತು ಪರಾದೇವೀ ಯಾ ಮಯಾ ಪೂಜಿತಾ ಶಿವಾ ।
ಏವಮಾದಿ ಬಹೂಕ್ತ್ವಾ ಸಾ ನಿದ್ರಾಮಭಿಸಮಾಗತಾ ॥೫೪॥

---

ನಮ್ಮ ಜೊತೆಯಲ್ಲಿ ಈ ಭಯಂಕರವಾದ ಅರಣ್ಯಕ್ಕೆ ಅವರ ಅಪ್ಪಣೆಯಿಲ್ಲದೇ ಬಂದುದು ಅನುಚಿತವು. ನೀನು ಹತ್ತಿರವಿಲ್ಲದೇ ಅವರ ಮನಸ್ಸು ಮಹಾದುಃಖ ವೆಂಬ ಕಾಡುಕಿಚ್ಚಿನ ದಾಹಕ್ಕೆ ಒಳಗಾಗಿರಬಹುದು. ॥೫೦॥

ಅವರು ಪತಂಗದ ಹುಳುವು ಬೆಂಕಿಗೆ ಬೀಳುವಂತೆ ಪ್ರಾಣತ್ಯಾಗವನ್ನೂ ಮಾಡಿಬಿಡಬಹುದು! ಎಂದು ಹೇಳಿದ ಸಖಿಯು ಮಾತನ್ನು ಕೇಳಿ ಪಾರ್ವತಿಯು ತನ್ನ ವೈಭವವನ್ನು ಪ್ರಕಟಿಸದೇ ರಹಸ್ಯವಾಗಿಯೇ ಮರೆಮಾಡಿದ್ದಳು. ॥೫೧॥

ಪಾರ್ವತಿಯು ತಾಯಿತಂದೆಗಳನ್ನು ಬಿಟ್ಟು ದೂರ ಬಂದಿರುವುದರಿಂದ ದೀನ ಳಾಗಿ ಆ ಸಖಿಯನ್ನು ಕುರಿತು " ಎಲೌ ಸಖಿಯೇ, ನನ್ನ ಮಾತನ್ನು ಕೇಳು. ನಾನು ಹಿಂದೆ ಶಿವನನ್ನು ಮನಃಪೂರ್ವಕವಾಗಿ ವರಿಸಿದ್ದೆನು. ॥೫೨॥

ನಾನು ಶಿವನನ್ನೇ ಮನಸ್ಸಿನಿಂದ ಸ್ವಯಂವರಮಾಡಿಕೊಂಡಿದ್ದೇನಾದರೂ, ಅದನ್ನು ನಮ್ಮ ತಂದೆಯು ವ್ಯರ್ಥವಾಗುವಂತೆ ಮಾಡಿದನು. ಆದ್ದರಿಂದ ನಿಮ್ಮ ಜೊತೆಯಲ್ಲಿ ಈ ಭಯಂಕರವಾದ ಕಾಡಿಗೆ ಯಾರಿಗೂ ತಿಳಿಸದೇ ಬಂದೆನು. ॥೫೩॥

ಆದ್ದರಿಂದ ನಾನು ಯಾವ ಮಂಗಳಸ್ವರೂಪಳಾದ ತ್ರಿಪುರಾದೇವಿಯನ್ನು ಪೂಜಿಸಿದೆನೋ ಆ ಶ್ರೇಷ್ಠಳಾದ ದೇವಿಯೇ ನಮ್ಮ ತಾಯಿತಂದೆಗಳನ್ನೂ ಕಾಪಾಡಲಿ!

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ತ್ರಿಂಶೋಽಧ್ಯಾಯಃ

---

ಇವೇ ಮೊದಲಾದ ಅನೇಕ ಮಾತುಗಳನ್ನಾಡಿ ಹಾಗೆಯೇ ಪಾರ್ವತಿಯು ನಿದ್ದೆ ಮಾಡಿದಳು. ||೫೪||

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಮನ್ಮಥೋಪಾಖ್ಯಾನದಲ್ಲಿ
ಮೂವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಏಕತ್ರಿಂಶೋಽಧ್ಯಾಯಃ ||

### ಮೂವತ್ತೊಂದನೆಯ ಅಧ್ಯಾಯವು

ಯದಾ ಗೌರೀ ವನಂ ಯಾತಾ ತತಃ ಪಶ್ಚಾನ್ಮಹೀಧರಃ ।
ವನಾದ್ಗೃಹಾಂತರಂ ಪ್ರಾಪ್ತಸ್ತನೂಜಾದರ್ಶನೋತ್ಸುಕಃ ||೧||

ಆಯಾಂತಂ ಸಮ್ಮುಖೇ ಯಾತಿ ಪ್ರತ್ಯಹಂ ತಂ ತನೂದ್ಭವಾ ।
ಅನಾಗತಾ ತದ್ದಿನೇ ತಾಂ ಚಿಂತಯಾಮಾಸ ಭೂಧರಃ ||೨||

ನೂನಂ ನಾಽಽಯಾತಿ ಸಾ ಕಸ್ಮಾತ್ಸಮ್ಮುಖೇಽದ್ಯ ಮಮಾಽಽತ್ಮಜಾ ।
ಗತಾ ಕ್ವಚಿದ್ವಾ ಶಾರೀರ ಪೀಡಿತಾ ವಾ ಭವೇತ್ ಕ್ವಚಿತ್ ||೩||

---

ಗೌರಿಯು ಕಾಡಿಗೆ ಹೋದ ಅನಂತರದಲ್ಲಿ ಹಿಮವಂತನು ಆ ಕಾಡಿನ ಪಕ್ಕದಲ್ಲೇ ಇರುವ ಉಪವನದಿಂದ ತನ್ನ ಮಗಳನ್ನು ನೋಡಬೇಕೆಂದು ಅಭಿಲಾಷೆಪಟ್ಟವನಾಗಿ ಅರಮನೆಯೊಳಕ್ಕೆ ಬಂದನು. ||೧||

ಆಗ ಆ ಮನೆಗೆ ಬರುತ್ತಿರುವ ತನ್ನ ತಂದೆಯನ್ನು ನೋಡಲು ಪಾರ್ವತಿಯು ಅವನನ್ನು ಎದುರ್ಗೊಳ್ಳಲು ಪ್ರತಿದಿನವೂ ಹೋಗುತ್ತಿದ್ದಳು. ಆ ದಿನ ಈ ರೀತಿಯಾಗಿ ತನ್ನ ಮಗಳು ಬಾರದಿರುವುದನ್ನು ನೋಡಿ ಹಿಮವಂತನು ಯೋಚಿಸತೊಡಗಿದನು. ||೨||

ನನ್ನ ಮಗಳು ಈ ದಿನ ಏತಕ್ಕಾಗಿ ನನ್ನೆದುರಿಗೆ ಬರಲಿಲ್ಲ? ಅವಳೇನಾದರೂ ಎಲ್ಲಿಯಾದರೂ ಹೋಗಿರುವಳೇ? ಅಥವಾ ಯಾವುದಾದರೂ ರೋಗದಿಂದ ಪೀಡಿತಳಾಗಿರುವಳೇ? ||೩||

ಅಥವಾ ಮಯಿ ರುಷ್ಟಾ ಸ್ಯಾನ್ನ ರುಷ್ಟಾ ಮಯಿ ಸಾ ಕ್ವಚಿತ್ ।
ಕಿಂಚಿದತ್ರ ನಿಯುಕ್ತಂ ಸ್ಯಾದಿತಿ ಚಿಂತಾಽಽಕುಲೋ ನಗಃ ॥೪॥

ಪ್ರವಿಶ್ಯಾಂತರ್ಗೃಹಂ ಮೇನಾಂ ಪ್ರಿಯಾಂ ಸ ಸಮುಚ (ಪ್ರ) ಷ್ಟತ ।
ಕುತ್ರಾತ್ಮಜೇತಿ ಸಾ ಪೃಷ್ಟಾ ಪ್ರ(ಪ್ರಾ)ಬ್ರವೀತ್ ಪತಿಮದ್ರಿಪಂ ॥೫॥

ಸಖೀಭಿಃ ಸಹಿತಾ ಯಾತಾ ಕ್ವಚಿತ್ಕ್ರೀಡಾ ಪರಾಽಽತ್ಮಜಾ ।
ಸ್ಯಾತ್ಸಖೀನಾಂ ಗೃಹೇ ವಾಽಪಿ ವಾಟಿಕಾಯಾ ಮಥಾಽಪಿ ವಾ ॥೬॥

ತಾಮಾನೇತುಂ ಪ್ರೇಷಯಾಮಿ ಧಾತ್ರೀ ಮಿತ್ಯಬ್ರವೀತ್ಪ್ರಿಯಾ ।
ಪ್ರೇಷಿತಾಽಪಿ ತಯಾ ಧಾತ್ರೀ ವಿಚಿತ್ಯಾಽಽಲಿ ಗೃಹಾಣಿ ಚ ॥೭॥

ವಾಟಿಕಾಂ ಪುನರಭ್ಯೇತ್ಯ ನ ಕ್ವಚಿತ್ಸೇತಿ ಸಾಽಬ್ರವೀತ್ ।
ನಗಃ ಶ್ರುತ್ವಾ ವಚೋ ಧಾತ್ರ್ಯಾಃ ಶೋಕಸಂವಿಗ್ನಮಾನಸಃ ॥೮॥

---

ಅಥವಾ ಅವಳು ನನ್ನಮೇಲೆ ಕೋಪಗೊಂಡಿರುವಳೇ? ಹಾಗೆಯೂ ಇರಲಾರದು. ಏಕೆಂದರೆ ಅವಳು ನನ್ನ ಮೇಲೆ ಎಂದೂ ಕೋಪಗೊಂಡವಳಲ್ಲ. ಆದ್ದರಿಂದ ಬೇರೆ ಏನೋ ಕಾರಣವಿರಬೇಕು. ಎಂದುಕೊಂಡು ಪರ್ವತರಾಜನು ಚಿಂತಾಕ್ರಾಂತನಾಗಿ ಒಳಭಾಗದ ಮನೆಗೆ ಹೋಗಿ ತನ್ನ ಪತ್ನಿಯಾದ ಮೇನಕಿಯನ್ನು ಕುರಿತು, "ನನ್ನ ಮಗಳೆಲ್ಲಿ?" ಎಂದು ಕೇಳಿದನು. ಪತಿಯು ಹೀಗೆ ಪ್ರಶ್ನಿಸಲಾಗಿ ಪತಿಯನ್ನು ಕುರಿತು ಅವಳು ಈ ರೀತಿಯಲ್ಲಿ ಹೇಳಿದಳು. ॥೪-೫॥

ಮಗಳು ಆಟಕ್ಕಾಗಿ ತನ್ನ ಸಖಿಯರ ಜೊತೆಯಲ್ಲಿ ಎಲ್ಲಿಗೋ ಹೋಗಿರುತ್ತಾಳೆ. ಬಹುಶಃ ಅವಳು ಸಖಿಗಳ ಮನೆಯಲ್ಲಿಯೋ ಅಥವಾ ಉಪವನದಲ್ಲಿಯೋ ಇರಬೇಕು. ॥೬॥

ಅವಳನ್ನು ಕರೆತರಲು ದಾದಿಯರನ್ನು ಕಳುಹಿಸುವೆನೆಂದು ಹಿಮವಂತನ ಪತ್ನಿಯು ಹೇಳಿದಳು. ಮೇನಕಿಯು ಆದರಂತೆಯೇ ದಾದಿಯರನ್ನು ಕಳುಹಿಸಲು ಅವರು ಪಾರ್ವತಿಯನ್ನು ಅವಳ ಸಖಿಯರ ಮನೆಯಲ್ಲಿ ಬಹಳವಾಗಿ ಹುಡುಕಿದರು. ॥೭॥

ದಾದಿಯು ಪಾರ್ವತಿಯನ್ನು ಉಪವನದಲ್ಲಿಯೂ, ಹುಡುಕಿಬಂದು ಅವಳನ್ನೆಲ್ಲಿಯೂ ಕಾಣಲಿಲ್ಲವೆಂದು ಹೇಳಲು, ಹಿಮವಂತನು ದಾದಿಯ ಮಾತನ್ನು ಕೇಳಿ ದುಃಖದಿಂದ ಕಳವಳಗೊಂಡ ಮನಸ್ಸುಳ್ಳವನಾದನು. ॥೮॥

ಹಾ ಹತೋಽಸ್ಮೀತಿ ನಿಶ್ಚಿತ್ಯ ತಾಂ ವಿಚೇತುಂ ಬಹಿರ್ಯಯೌ ।
ಅನುಜೀವಿಭಿಃ ಸಾರ್ಧಂ ವಿಚಿನ್ವನ್ ತತ್ರ ತತ್ರ ಹಾ ॥೯॥

ಶೋಕಾಂಧಃ ಪ್ರಸ್ಖಲನ್ ಭೂಯೋ ಮಾರ್ಗಯಾಣಃ ಸಮಂತತಃ ।
ಮೃಗಯಿತ್ವಾ ಪುರೇ ತಸ್ಮಿನ್ ಗೃಹಾಣಿ ಚ ವನಾನಿ ಚ ॥೧೦॥

ಸಮಾಗತಾ ಗೃಹೇ ಸ್ಯಾದಿ ತ್ಯೇವಂ ಭೂಯೋ ಗೃಹಂ ಯಯೌ ।
ತತ್ರಾಪ್ಯನುಪಲಭ್ಯೈನಾಂ ವಿಲಲಾಪ ಮಹೀಧರಃ ॥೧೧॥

ಹಾ ಕನ್ಯೇ ಕುತ್ರ ಯಾತಾ ತ್ವಂ ಸಂಹೃತಾ ವಾಽಪಿ ಕೇನಚಿತ್ ।
ಹೃತಾ ವಾ ಭಕ್ಷಿತಾ ವಾ ತ್ವಂ ರಕ್ಷೋಭಿರ್ವಾ ವೃಕಾಽದಿಭಿಃ ॥೧೨॥

ನ ಮಾಂ ವೃದ್ಧಂ ಪ್ರಿಯಂ ತಾತಂ ಗತಾ ಹಿತ್ವಾ ಕದಾಽಪಿ ಸಾ ।
ಕಶ್ಚಿನ್ನ ಹಂತಾ ತಸ್ಯಾ ವೈ ಗುಣೈಃ ಸ್ವೀಯೈಃ ಶುಭೋದಯೈಃ ॥೧೩॥

---

ಅಯ್ಯೋ? ಹಾಳಾದೆನಲ್ಲ! ಎಂದು ನಿಟ್ಟುಸಿರುಬಿಟ್ಟು ಅವಳನ್ನು ಹುಡುಕಲು ತಾನೇ ಹೊರಗಡೆಗೆ ಹೊರಟನು. ಹಿಮವಂತನು ತನ್ನ ಸೇವಕರೊಂದಿಗೆ ಅಲ್ಲಲ್ಲಿ ಪಾರ್ವತಿಯನ್ನು ಹುಡುಕಿದನು. ॥೯॥

ಹಿಮವಂತನು ಶೋಕದಿಂದ ಕುರುಡನಂತಾಗಿ ಅಲ್ಲಲ್ಲಿ ಮುಗ್ಗರಿಸುತ್ತಾ ಎಲ್ಲಾ ಕಡೆಯಲ್ಲಿಯೂ ಪಾರ್ವತಿಯನ್ನು ಹುಡುಕಿದನು. ಅವನು ಅವಳನ್ನು ಆ ಪಟ್ಟಣದ ಅನೇಕ ಮನೆಗಳಲ್ಲಿಯೂ, ಮತ್ತು ವನಗಳಲ್ಲಿಯೂ ಹುಡುಕಿದನು. ॥೧೦॥

ಇಷ್ಟು ಹೊತ್ತಿಗೆ ಅವಳು ಮನೆಗೆ ಬಂದಿರಬಹುದೆಂದು ಭಾವಿಸಿ ಪುನಃ ಹಿಮವಂತನು ಮನೆಗೆ ಹಿಂತಿರುಗಿದನು. ಅವನು ಅವಳನ್ನು ಅಲ್ಲಿಯೂ ಕಾಣದೇ ವಿಶೇಷವಾಗಿ ಅತ್ತನು. ॥೧೧॥

ಎಲೌ ಮಗಳೇ, ನೀನು ಎಲ್ಲಿಗೆ ಹೋದೆ? ಅಥವಾ ನಿನ್ನನ್ನು ಯಾರಾದರೂ ಸಂಹರಿಸಿದರೋ? ಅಥವಾ ನಿನ್ನನ್ನು ಯಾರಾದರೂ ಅಪಹರಿಸಿದರೋ? ಅಥವಾ ನಿನ್ನನ್ನು ಯಾರಾದರೂ ರಾಕ್ಷಸರಾಗಲೀ, ತೋಳವೇ ಮುಂತಾದುವುಗಳಾಗಲೀ ಭಕ್ಷಿಸಿದರೋ? ॥೧೨॥

ವೃದ್ಧನೂ ತಂದೆಯೂ ಆದ ನನ್ನನ್ನು ಯಾವಾಗಲೂ ಪಾರ್ವತಿಯು ಬಿಟ್ಟು ಹೋದವಳಲ್ಲ. ಅವಳ ಮಂಗಳಕರಗಳಾದ ಗುಣಗಳನ್ನು ನೋಡಿ ಯಾರೂ ಅವಳನ್ನು ಕೊಲ್ಲಲಾರರು. ॥೧೩॥

ವಶೀಕೃತ್ಯ ಸ್ಥಿತಾ ಸಾ ಹಿ ಮದ್ರಿಪೂನಪಿ ಸರ್ವತಃ ।
ತಾಂ ವಿನಾಽಹಂ ಕ್ಷಣಮಪಿ ಜೀವಿತುಂ ನೋತ್ಸಹೇ ಕ್ವಚಿತ್ ॥೧೪॥

ಶಸ್ತ್ರೇಣ ಕಾಲಕೂಟೇನ ತಥೋದ್ಬಂಧೇನ ಕೇನ ವಾ ।
ಅಗ್ನಿನಾ ವಾಽಪಿ ಹಾಸ್ಯಾಮಿ ಪ್ರಾಣಾನ್ನಾಸ್ತ್ಯತ್ರ ಸಂಶಯಃ ॥೧೫॥

ಅಹೋ ವೃಷೋಕ್ತಂ ಭವತಿ ದೈವತಾನಾಮಪಿ ಕ್ವಚಿತ್ ।
ಯದೇನಾಂ ಪ್ರಾಹ ದೈವಜ್ಞೋ ಮಮ ಮಾನಪ್ರವರ್ಧಿನೀಂ ॥೧೬॥

ಅಸ್ಯ ಭರ್ತಾ ಸರ್ವ ಸೇವ್ಯಃ ಸರ್ವಜ್ಞಃ ಪುರುಷೋತ್ತಮಃ ।
ಸ ತೇ ಕೀರ್ತಿಂ ಸರ್ವಲೋಕೇ ಪ್ರಕೃಷ್ಟಾಂ ಪ್ರವಿಧಾಸ್ಯತಿ ॥೧೭॥

ಇತ್ಯಾದಿ ವಚಸಾಂ ತೇಷಾಂ ವೃಷಾತ್ವಂ ನ ಕಥಂ ಭವೇತ್ ।
ಇತ್ಯೇವಂ ವಿಲಪನ್ ಶೈಲಃ ಪಪಾತ ಭುವಿ ಮೂರ್ಛಿತಃ ॥೧೮॥

---

ಅವಳು ತನ್ನ ಗುಣಗಳಿಂದ ನನ್ನ ಶತ್ರುಗಳನ್ನೂ ವಶಮಾಡಿಕೊಂಡಿದ್ದಳು. ಅಂತಹ ಮಗಳನ್ನು ಬಿಟ್ಟು ನಾನು ಒಂದು ಕ್ಷಣವೂ ಜೀವಿಸಲು ಉತ್ಸಾಹಪಡುವುದಿಲ್ಲ. ॥೧೪॥

ನಾನು ಶಸ್ತ್ರ ಅಥವಾ ಕಾಲಕೂಟವಿಷ ಅಥವಾ ಮೇಲಕ್ಕೆ ಕಟ್ಟಿದ ನೇಣು ಹಗ್ಗ ಇವುಗಳಲ್ಲಿ ಯಾವುದಾದರೊಂದು ಸಾಧನದಿಂದ ಅಥವಾ ಅಗ್ನಿಯಲ್ಲಾದರೂ ಪ್ರಾಣಗಳನ್ನು ಕಳೆದುಕೊಳ್ಳುವೆನೆಂಬುದರಲ್ಲಿ ಸಂಶಯವಿಲ್ಲ. ॥೧೫॥

ಜ್ಯೋತಿಷ್ಕರ ಎಂದಿಗೂ ಸುಳ್ಳಾಗದ ಮಾತೂ ಈಗ ಸುಳ್ಳಾಗುವ ಕಾಲವು ಬಂದಿತು ! ಏಕೆಂದರೆ ಜ್ಯೋತಿಷ್ಕರು ಇವಳು (ಪಾರ್ವತಿಯು) ನನ್ನ ಕೀರ್ತಿಯನ್ನು ಹೆಚ್ಚಿಸುವಳೆಂದು ಹೇಳಿದ್ದರು. ॥೧೬॥

ಅಲ್ಲದೇ ಅವರು ಇವಳ ಗಂಡನು ಎಲ್ಲರಿಂದಲೂ ಸೇವಿಸಲ್ಪಡುವ ಸರ್ವಜ್ಞನೂ ಪುರುಷೋತ್ತಮನೂ ಆದ ವಿಷ್ಣುವೇ ಎಂದೂ, ಅವನು ನನಗೆ ಅತ್ಯಂತ ಉತ್ಕೃಷ್ಟವಾದ ಕೀರ್ತಿಯೂ ಎಲ್ಲೆಲ್ಲಿಯೂ ಉಂಟಾಗುವಂತೆ ಮಾಡುವನು. ಎಂಬುದಾಗಿಯೂ ಹೇಳಿದ್ದರು. ॥೧೭॥

ಇವೇ ಮೊದಲಾದ ಅವರ ಮಾತುಗಳು ಹೇಗೆ ಸುಳ್ಳಾದವು? ಎಂದು ಮುಂತಾಗಿ ಹೇಳಿಕೊಂಡು ಅಳುತ್ತಾ ಹಿಮವಂತನು ಮೂರ್ಛೆಹೊಂದಿ ಭೂಮಿಯ ಮೇಲೆ ಬಿದ್ದನು. ॥೧೮॥

ಅಥ ತಂ ತಾದೃಶಂ ವೀಕ್ಷ್ಯ ನೃಪಂ ಮಂತ್ರಿಪುರೋಗಮಾಃ ।
ಉತ್ಥಾಪ್ಯಾಶ್ವಾಸಯಾಂ ಚಕ್ರುಸ್ಸಮಾಧಾನವಚೋಗಣೈಃ ॥೧೯॥

ನೃಪತೇ ಮಾ ತ್ಯಜ ಧೃತಿಮಾಪತ್ಸು ಧೃತಿಮುತ್ತಮಾಂ ।
ನ ತ್ಯಜಂತಿ ಮಹಾತ್ಮಾನೋ ಧೃತಿರಾಪತ್ಸುಸಮ್ಮತಃ (ತಾ) ॥೨೦॥

ಆಪತ್ಸು ಧೈರ್ಯ ತ್ಯಾಗಂ ವೈ ಪ್ರಾಹುಃ ಕಾಪುರುಷವ್ರತಂ ।
ತಸ್ಮಾದ್ಧೈರ್ಯಂ ಸಮಾಲಂಬ್ಯ ಯತ ಬುದ್ಧ್ಯನುಸಾರತಃ ॥೨೧॥

ಏವಂ ಪ್ರಬೋಧಿತೋಽಮಾತ್ಯೈರುತ್ಥಾಯ ಮಂತ್ರಿಭಿಃ ಸಹ ।
ಯಾವದನ್ವೇಷಣೋದ್ಯುಕ್ತ ಸ್ತಾವಚ್ಚಾರಃ ಸಮಾಯಯೌ ॥೨೨॥

ವರ್ಧಯಿತ್ವಾ ಶೈಲರಾಜಂ ಪ್ರಣತಃ ಪ್ರಾಹ ವೈ ವಚಃ ।
ಮಹಾರಾಜ ವಯಂ ದಿಕ್ಷು ತಾಂ ಮಾರ್ಗಿತುಮಭಿದ್ರುತಾಃ ॥೨೩॥

---

ಅನಂತರ ಹೀಗೆ ಬಿದ್ದಿದ್ದ ರಾಜನನ್ನು ನೋಡಿ ಅವನ ಮಂತ್ರಿಯೇ ಮೊದಲಾದವರು ಅವನನ್ನು ಎಬ್ಬಿಸಿ ಸಮಾಧಾನಕರವಾದ ಅನೇಕ ಮಾತುಗಳನ್ನು ಹೇಳಿ ಉತ್ಸಾಹಗೊಳಿಸಿದರು. ಹೇಗೆಂದರೆ, ॥೧೯॥

ಓ ಧೊರೆಯೇ, ಧೈರ್ಯಗೆಡಬೇಡ. ಮಹಾತ್ಮರು ಶ್ರೇಷ್ಠವಾದ ಧೈರ್ಯವನ್ನು ಎಂಥಾ ಸಂಕಟಕಾಲದಲ್ಲಿಯೂ ಬಿಡುವುದಿಲ್ಲ. ಆಪತ್ಕಾಲದಲ್ಲಿ ಧೈರ್ಯವೇ ಯುಕ್ತವೆಂದು ಸಾಧು ಜನರು ಒಪ್ಪಿದ ವಿಷಯವಾಗಿದೆ. ॥೨೦॥

ಆಪತ್ಕಾಲದಲ್ಲಿ ಧೈರ್ಯಗೆಡುವುದು ನೀಚಜನರ ನಡತೆ ಎನ್ನುತ್ತಾರೆ. ಆದ್ದರಿಂದ ಈ ಸಂದರ್ಭದಲ್ಲಿ ಧೈರ್ಯವನ್ನು ಅವಲಂಬಿಸಿಕೊಂಡು ನಿಮ್ಮ ಬುದ್ಧಿಗೆ ತೋಚಿದಂತೆ ಕರ್ತವ್ಯವನ್ನು ನಡೆಸಿ. ॥೨೧॥

ಹೀಗೆ ಮಂತ್ರಿಗಳು ಹಿಮವಂತನನ್ನು ಎಚ್ಚರಗೊಳಿಸಲು, ಅವನು ಮೇಲಕ್ಕೆದ್ದು ಮಂತ್ರಿಗಳೊಡನೆ ಪಾರ್ವತಿಯನ್ನು ಹುಡುಕುವುದಕ್ಕೆ ಹೊರಡುವಷ್ಟರಲ್ಲಿ ಒಬ್ಬ ಗೂಢಚಾರನು ಅಲ್ಲಿಗೆ ಬಂದನು. ॥೨೨॥

ಅವನು ಹಿಮವಂತನಿಗೆ ಜಯಜಯಾಕಾರವನ್ನು ಮಾಡಿ, ನಮಸ್ಕರಿಸಿ ಅವನನ್ನು ಕುರಿತು "ಓ ಮಹಾರಾಜನೇ, ನಾವು ಆಕೆಯನ್ನು ಹುಡುಕಲು ಸುತ್ತಲೂ ಶೀಘ್ರವಾಗಿ ಹೋಗಿದ್ದೆವು. ಎಂದನು. ॥೨೩॥

ತತ್ರ ಪ್ರಾಗುತ್ತರಸ್ಯಾಂ ವೈ ಮಹಾರಣ್ಯ ಪ್ರವೇಶಿನೀ ।
ಅಸ್ತ್ಯೇಕ ಪದಿಕಾ ಯಾತಾ ತಯಾಽರಣ್ಯಂ ಕುಮಾರಿಕಾ ॥೨೪॥

ತತ್ಪದಾಂಕ ಮುಪಾಲಕ್ಷ್ಯ ಜಾನೀಮೋ ವಯಮದ್ರಿಪ ।
ಅನ್ಯಾಸಾಂ ಚ ಚತಸ್ಯಾಣಾಂ ಲಕ್ಷಿತಾನಿ ಪದಾನ್ಯಪಿ ॥೨೫॥

ನಗರೋಪ(ರೇಽಪಿ)ಚತಸ್ರಸ್ತಾಃ ಕನ್ಯಾ ನ ಸಂತಿ ಕುತ್ರಚಿತ್ ।
ದಾರಿಕಾಯೊಸ್ತವ ವಿಭೋ ಪ್ರೇಯಸ್ಯೋಽತಿತರಾಂ ಹಿ ತಾಃ ॥೨೬॥

ತಥೈಕ ಪದ್ಯಯಾ ವನಂ ಗತಾಶ್ಚಾರಾಃ ಸಹಸ್ರಶಃ ।
ಮಾರ್ಗಿತುಂ ರಾಜಪುತ್ರೀಂ ತಾಂ ಸರ್ವತೋ ಮಾರ್ಗಕೋವಿದಾಃ॥೨೭॥

ತತ್ಸಂದೇಶಹರಶ್ಚಾಽಹಂ ಸಂಪ್ರಾಪ್ತಸ್ತ್ವತ್ಪದಾಽಂತಿಕಂ ।
ಪ್ರಾಪ್ಯೈವಂ ಚಾರವಚನಂ ಮುಮೂರ್ಷುರಿವ ಸದ್ರಸಂ ॥೨೮॥

---

ಅಲ್ಲಿ ಪೂರ್ವೋತ್ತರದಿಕ್ಕುಗಳ ಮಧ್ಯಭಾಗದಲ್ಲಿ ಮಹಾರಣ್ಯಕ್ಕೆ ಹೋಗುವ ಕಾಲುದಾರಿಯೊಂದಿದೆ. ಅದರ ಮೂಲಕ ತಮ್ಮ ಕುಮಾರಿಯಾದ ಪಾರ್ವತಿಯು ಹೋಗಿರಬಹುದೆಂದು ತೋರುತ್ತದೆ. ॥೨೪॥

ಓ ಪರ್ವತರಾಜನೇ, ಆ ದಾರಿಯಲ್ಲಿ ಆಕೆಯ ಹೆಜ್ಜೆಯ ಗುರುತನ್ನು ಕಂಡು ನಾವು ಹೀಗೆ ಊಹಿಸುತ್ತಿದ್ದೇವೆ. ಅಲ್ಲದೇ ಅಲ್ಲಿ ಇನ್ನೂ ನಾಲ್ಕುಮಂದಿಯ ಹೆಜ್ಜೆಗಳ ಗುರುತುಗಳೂ ಕಂಡುಬಂದವು. ॥೨೫॥

ಆ ನಾಲ್ಕು ಕನ್ಯಕೆಯರೂ ಪಟ್ಟಣದ ಸಮೀಪದಲ್ಲಿ ಎಲ್ಲಿಯೂ ಕಾಣಬರುತ್ತಿಲ್ಲ. ಓ ಸ್ವಾಮಿಯೇ, ನಿಮ್ಮ ಮಗಳಿಗೆ ಅವರು ಅತ್ಯಂತ ಆಪ್ತರಾದ ಸಖಿಯರಾಗಿದ್ದಾರೆ. ॥೨೬॥

ಹೀಗೆಯೇ ಆ ಕಾಲುದಾರಿಯಿಂದ ಆ ವನವನ್ನು ಕುರಿತು ಆ ಮಾರ್ಗಗಳನ್ನು ಚೆನ್ನಾಗಿ ತಿಳಿದಿರುವ ಸಾವಿರಾರು ಮಂದಿ ಗೂಢಚಾರರು ರಾಜಪುತ್ರಿಯನ್ನು ಹುಡುಕಲು ಹೋಗಿದ್ದಾರೆ. ॥೨೭॥

ಅವರ ಸಂದೇಶವನ್ನು ತೆಗೆದುಕೊಂಡು ನಾನು ನಿಮ್ಮ ಪಾದದ ಸಮೀಪಕ್ಕೆ ಬಂದಿದ್ದೇನೆ. ಎಂಬುದಾಗಿ ಹೇಳಿದ ಗೂಢಚಾರನ ಮಾತನ್ನು ಕೇಳಿ ಸಂತೋಷದಿಂದ ಮೂರ್ಛೆಬೀಳುವನೋ ಎಂಬಂತೆ ಹಿಗ್ಗುತ್ತಾ, ಹಿಮವಂತನು ಬಹಳ ಬೆಲೆ

ಹಾರಂ ಮಣಿಮಯಂ ತಸ್ಮೈ ಸಂಪ್ರಹೃಷ್ಟೋ ದದೌ ದ್ರುತಂ ।
ಅಥ ದ್ರುತತರಂ ಶೈಲಃ ಪ್ರಯಯೌ ತೇನ ವರ್ತ್ಮನಾ ॥೨೯॥

ಚಾರಪ್ರದಿಷ್ಟೇನ ವನಂ ಗಹನಂ ಭೀಮಸನ್ನಿಭಂ ।
ವೃಕ್ಷೈರ್ಗುಲ್ಮೈರ್ಲತಾಭಿಶ್ಚ ಮಹಾಸಾಲೈರ್ಭಯಾನಕೈಃ ॥೩೦॥

ನಿಚಿತಂ ಝಲ್ಲಿಕಾರಾವೈ ರ್ಝಂಕೃತಂ ಭೀತಿವರ್ಧನಂ ।
ಸಮಾಲೋಕ್ಯ ಶೈಲರಾಜಃ ಪರ್ಯತಪ್ಯತ ದುಃಖಿತಃ ॥೩೧॥

ಅಹೋ ಕಷ್ಟಮಿದಂ ದುರ್ಗಂ ವನಂ ಸಾ ಮಮ ಕನ್ಯಕಾ ।
ಭೀರುಃ ಕಥಂ ಪ್ರವಿಷ್ಟಾ ಸ್ಯಾ ತ್ಸುಕುಮಾರಶರೀರಿಣೀ ॥೩೨॥

ಅಯಸ್ಕಲ್ಪೈಃ ಸುನಿಶಿತೈಃ ಕಂಟಕೈರ್ವರ್ತ್ಮ ಸಂಚಿತಂ ।
ಕಥಂ ಸಾ ಮೃದುಪಾದಾಭ್ಯಾಂ ಸಂಯಾತಾ ಸಖಿಭಿಃ ಸಹ ॥೩೩॥

---

ಬಾಳುವ ಮಣಿಮಯವಾದ ಹಾರವನ್ನು ಆವನಿಗೆ ಬಹುಮಾನವಾಗಿ ತಕ್ಷಣದಲ್ಲಿಯೇ ಕೊಟ್ಟನು. ಅನಂತರದಲ್ಲಿ ಹಿಮವಂತನು ಆ ಮಾರ್ಗದಲ್ಲಿಯೇ ಶೀಘ್ರವಾಗಿ ಹೊರಟನು. ॥೨೮-೨೯॥

ಗೂಢಚಾರನು ತೋರಿಸಿದ ಗಹನವೂ, ಬಹಳ ಭಯಂಕರವೂ ಆದ ಮರಗಳು, ಪೊದರುಗಳು, ಬಳ್ಳಿಗಳು, ಭಯಂಕರವಾದ ದೊಡ್ಡ ದೊಡ್ಡ ಸಾಲವೃಕ್ಷಗಳೂ ಇವುಗಳಿಂದ ತುಂಬಿರುವ, ದುಂಬಿಗಳ ಝುಂಕಾರದಿಂದಲೂ ಕೂಡಿ, ಭಯವನ್ನು ಹೆಚ್ಚಿಸುತ್ತಿರುವ ಆ ಮಹಾರಣ್ಯವನ್ನು ನೋಡಿ ಹಿಮವಂತನು ಬಹಳ ಸಂಕಟಪಟ್ಟನು. ॥೩೦-೩೧॥

ಅಯ್ಯೋ, ಜನಗಳು ಪ್ರವೇಶಿಸಲು ಅಶಕ್ಯವೂ, ಅತ್ಯಂತ ಕಷ್ಟಜನಕವೂ ಆದ ಈ ಅರಣ್ಯವನ್ನು ನನ್ನ ಅಂಜುವ ಸ್ವಭಾವವುಳ್ಳ, ಕೋಮಲಾಂಗಿಯಾದ ಮಗಳು ಹೇಗೆ ಪ್ರವೇಶಿಸಿದಳು ? ॥೩೨॥

ಈ ಅರಣ್ಯಮಾರ್ಗವು ಕಬ್ಬಿಣಕ್ಕೆ ಸಮಾನವಾದ ಬಹಳ ತೀಕ್ಷ್ಣಗಳಾದ ಮುಳ್ಳುಗಳಿಂದ ತುಂಬಿದೆ. ಇಂತಹ ಮಾರ್ಗದಲ್ಲಿ ನನ್ನ ಮಗಳು ತನ್ನ ಕೋಮಲವಾದ ಕಾಲುಗಳನ್ನಿಡುತ್ತಾ ತನ್ನ ಸಖಿಯರೊಂದಿಗೆ ಹೇಗೆತಾನೇ ಹೋದಳು ? ॥೩೩॥

ಮಯಾ ಕದಾಚಿದಪಿ ನೋ ರೋಷಿತಾ ಕ್ವಾಽಪಿ ತತ್ಕೃತಃ ।
ವನಂ ಪ್ರವಿಷ್ಟಾ ಸಖಿಭಿಃ ಕೇನ ವಾ ಹೇತುನಾ ಭವೇತ್ ॥೩೪॥

ಏವಂ ಭೂತೇ ಘೋರತಮೇ ಶ್ವಾಪದೈರ್ಮಾಂಸಭೋಜನೈಃ ।
ಸಮಾಕೀರ್ಣೇ ಕಥಂ ಜೀವೇದ್ಭಯೇನೈವ ಮೃತಾ ಭವೇತ್ ॥೩೫॥

ಶ್ವಾಪದೈರ್ಭಕ್ಷಿತಾ ವಾ ಸ್ಯಾತ್ ದಷ್ಟಾ ಸ್ಯಾದ್ವಾಽಪಿ ಪನ್ನಗೈಃ ।
ವ್ಯಾಪಾದಿತಾ ವಾ ಭಲ್ಲೂಕೈರ್ಹೃತಾ ವಾ ವನಚಾರಿಭಿಃ ॥೩೬॥

ನಷ್ಟಾ ಸಾ ಸರ್ವಥೈವಾಽದ್ಯ ನ ತಾಂ ಪಶ್ಯಾಮ್ಯಹಂ ಪುನಃ ।
ಇತ್ಯೇವಂ ವಿಲಪನ್ ಭೂಯಃ ಸ್ಖಲಂಶ್ಚಾಪಿ ಪದೇ ಪದೇ ॥೩೭॥

ಆತಪೈರಭಿತಪ್ತಾಂಗಃ ಪತಿತೋಽಭೂನ್ಮಹೀತಲೇ ।
ಅಥಾನುಯಾಯಿಭಿಃ ಶೀಘ್ರಮುತ್ಥಾಪ್ಯ ತರುಮೂಲತಃ ॥೩೮॥

---

ನಾನು ಯಾವಾಗಲೂ ಎಲ್ಲಿಯೂ ಅವಳಿಗೆ ಕೋಪಬರುವಹಾಗೆ ಮಾಡಲಿಲ್ಲ. ಹಾಗಿದ್ದರೂ ಅವಳು ಏತಕ್ಕಾಗಿ ತನ್ನ ಸಖಿಯರೊಂದಿಗೆ ಇಂತಹ ಅರಣ್ಯಕ್ಕೆ ಪ್ರವೇಶಿಸಿದಳು ? ॥೩೪॥

ಮಾಂಸವನ್ನು ತಿನ್ನುವ ದುಷ್ಟಮೃಗಗಳಿಂದ ಈ ರೀತಿಯಲ್ಲಿ ತುಂಬಿ ಅತಿ ಭಯಂಕರವಾಗಿರುವ ಈ ಅರಣ್ಯದಲ್ಲಿ ಪಾರ್ವತಿಯು ಹೇಗೆ ಬದುಕಿದ್ದಾಳು ? ಅವಳು ಭಯದಿಂದಲೇ ಪ್ರಾಣವನ್ನು ಬಿಟ್ಟಿರಬಹುದು. ॥೩೫॥

ಅವಳು ಇಷ್ಟರಲ್ಲೇ ದುಷ್ಟಮೃಗಗಳಿಂದ ತಿನ್ನಲ್ಪಟ್ಟಿರಬಹುದು. ಅಥವಾ ಸರ್ಪಗಳಿಂದ ಕಚ್ಚಲ್ಪಟ್ಟಿರಬಹುದು. ಅಥವಾ ಕಿರಾತರಿಂದ ಅಪಹರಿಸಲ್ಪಟ್ಟಿರಬಹುದು. ॥೩೬॥

ಅಂತೂ ಅವಳು ಯಾವುದಾದರೊಂದು ರೀತಿಯಲ್ಲಿ ನಾಶವನ್ನೈದಿರಬಹುದು. ನಾನು ಪುನಃ ಅವಳನ್ನು ನೋಡಲಾರೆ. ಎಂದು ಮುಂತಾಗಿ ಹೇಳಿ ಅಳುತ್ತಾ ಹಿಮವಂತನು ಹೆಜ್ಜೆಹೆಜ್ಜೆಗೂ ಮುಗ್ಗರಿಸುತ್ತಿದ್ದನು. ॥೩೭॥

ಆಗ ಹಿಮವಂತನು ಬಿಸಿಲಿನಿಂದಲೂ ಸುಡಲ್ಪಟ್ಟ ಶರೀರವುಳ್ಳವನಾಗಿ ಭೂಮಿಯಮೇಲೆ ಬಿದ್ದುಬಿಟ್ಟನು. ಆದರೆ ತತ್‌ಕ್ಷಣದಲ್ಲೇ ಅವನ ಪರಿವಾರದವರು ಅವನನ್ನು ಎಬ್ಬಿಸಿ ಗಿಡದ ನೆರಳಿನಲ್ಲಿ ಮಲಗಿಸಿದರು. ॥೩೮॥

ನಿವೇಶಿತಃ ಶೀತಕೋಯೈರಭಿಷಿಕ್ತಶ್ಚ ಜೀವಿತಃ ।
ಉಪಲಭ್ಯ ತತಃ ಪ್ರಜ್ಞಾ ಮುನ್ಮೀಲ್ಯ ನಯನೇ ಗಿರಿಃ ॥೩೯॥

ಶೋಕಸಂವಿಗ್ನಹೃದಯಃ ಕನ್ಯಾಮೇವಾನು(ನ್ವ)ಶೋಚತ ।
ತತಃ ಕ್ಷಣೇನ ಸಂಪ್ರಾಪ್ತಶ್ಚಾರಃ ಪರ್ವತಸನ್ನಿಧಿಂ ॥೪೦॥

ವರ್ಧಯಿತ್ವಾ ಪ್ರಣಮ್ಯಾಽಹ ಹರ್ಷಯನ್ ಪರ್ವತಾಽಧಿಪಂ ।
ಪರ್ವತೇಶ್ವರ ಕನ್ಯಾ ತೇ ಇತಃ ಕ್ರೋಶಚತುಷ್ಟಯೇ ॥೪೧॥

ಚಾರೈ ರಾಸಾದಿತಾ ದೇವ ನದೀತೀರೇ ಸಖೀವೃತಾ ।
ಪ್ರಸುಪ್ತಾ ತತ್ರ ತಾಂ ಸರ್ವ ಚಾರಾ ರಕ್ಷಂತಿ ಸರ್ವತಃ ॥೪೨॥

ಅಹಂ ವಿಜ್ಞಪ್ತುಮಾಯಾತಃ ಸ್ವಾಮಿಪಾದಸಮೀಪತಃ ।
ದ್ರಷ್ಟುಮರ್ಹಸಿ ತಾಂ ಶೀಘ್ರಂ ಗೌರೀಂ ಹೃದಯನಂದಿನೀಂ ॥೪೩॥

---

ಅವರು ಹಿಮವಂತನನ್ನು ಈ ರೀತಿಯಲ್ಲಿ ಮಲಗಿಸಿ ತಣ್ಣಗಿರುವ ನೀರನ್ನು ಅವನ ಮೇಲೆ ಚುಮುಕಿಸಿದರು. ಇದರಿಂದ ಹಿಮವಂತನು ಮೂರ್ಛೆ ತಿಳಿದು ಕಣ್ಣುಗಳನ್ನು ತೆರೆದು ನೋಡಿದನು. ॥೩೯॥

ಹಿಮವಂತನು ದುಃಖದಿಂದ ಕಳವಳಗೊಂಡ ಮನಸ್ಸುಳ್ಳವನಾಗಿ ತನ್ನ ಮಗಳನ್ನೇ ನೆನಸಿಕೊಂಡು ದುಃಖಪಡುತ್ತಿದ್ದನು. ತತ್ ಕ್ಷಣದಲ್ಲಿಯೇ ಗೂಢಚಾರನೊಬ್ಬನು ಪರ್ವತರಾಜನ ಸಮೀಪಕ್ಕೆ ಬಂದನು. ॥೪೦॥

ಗೂಢಚಾರನು ರಾಜನಿಗೆ ಜಯಜಯಾಕಾರವನ್ನು ಮಾಡಿ ನಮಸ್ಕರಿಸಿ ಅವನಿಗೆ ಸಂತೋಷಪಡಿಸುವವನಾಗಿ ಅವನನ್ನು ಕುರಿತು, ಓ ಧೊರೆಯೇ, ತಮ್ಮ ಮಗಳು ಇಲ್ಲಿಗೆ ನಾಲ್ಕು ಹರಿದಾರಿಯ ದೂರದಲ್ಲಿದ್ದಾಳೆ. ಎಂದನು. ॥೪೧॥

ಗಂಗಾನದಿಯ ತೀರದಲ್ಲಿ ಸಖಿಯರಿಂದ ಸುತ್ತುವರಿಯಲ್ಪಟ್ಟು ಮಲಗಿರುವ ತಮ್ಮ ಮಗಳನ್ನು ಗೂಢಚಾರರು ಕಂಡುಹಿಡಿದರು. ಆ ಸಖಿಯರೆಲ್ಲರೂ ಆಕೆಯನ್ನು ಉಪಚರಿಸುತ್ತಲೂ, ಚಾರರು ಎಲ್ಲಾ ಕಡೆಗಳಲ್ಲಿಯೂ ರಕ್ಷಿಸುತ್ತಲೂ ಇದ್ದಾರೆ. ॥೪೨॥

ಈ ವಿಷಯವನ್ನು ನಾನು ವಿಜ್ಞಾಪನೆಮಾಡಲು ಬೇಗನೆ ಸ್ವಾಮಿಯ ಪಾದದ ಸಮೀಪಕ್ಕೆ ಬಂದಿದ್ದೇನೆ. ಮನಸ್ಸಿಗೆ ಸಂತೋಷವನ್ನೀಯುವ ಗೌರಿಯನ್ನು ಶೀಘ್ರವಾಗಿ ಸ್ವಾಮಿಯು ನೋಡಬೇಕು. ॥೪೩॥

ಶ್ರುತ್ವಾ ಚಾರಸ್ಯ ವಚನಮಮೃತಸ್ಯಂದಿ ಪೇಶಲಂ ।
ಉತ್ಥಿತಃ ಸಹಸಾ ದೇಹಃ ಪ್ರಾಣಾನಿವ ಸುಸಂಗತಃ ॥೪೪॥

ಯಯೌ ದ್ರುತಂ ವನಂ ಚಾರ ದರ್ಶಿತೇನೈವ ವರ್ತ್ಮನಾ ।
ಸ ಗತ್ವಾ ದದೃಶೇ ಕನ್ಯಾಂ ಸುಪ್ತಾಂ ಸಖಿಗಣೈಃ ಸಹ ॥೪೫॥

ಉತ್ಥಾಪ್ಯಾಂಕಂ ಸಮಾರೋಪ್ಯ ಮೂರ್ಧ್ನ್ಯಾಘ್ರಾಯ ಶೈಲರಾಟ್ ।
ಆನಂದಾಶ್ರೂಣಿ ಮುಂಚಾನಃ ಕನ್ಯಾಂ ಸ್ವಾಂ ಪರ್ಯಪೃಚ್ಛತ ॥೪೬॥

ವತ್ಸೇ ಕೇನ ನಿಮಿತ್ತೇನ ವನಮೇತತ್ಸಮಾಗತಾ ।
ನಾಽಪರಾದ್ಧಂ ಮಯಾ ಕ್ವಾಽಪಿ ತ್ಯಕ್ತೋಽಹಂ ಕೇನ ಹೇತುನಾ ॥೪೭॥

ಮಾತಾ ತೇ ತ್ವಾಂ ವಿನಾ ಸದ್ಯೋ ಜೀವಿತಾ ಸ್ಯಾತ್ಕಥಂ ಚನ ।
ವದ ತ್ವಮಿಹ ಸಂಪ್ರಾಪ್ತಾ ಹೇತುನಾ ಕೇನ ತದ್ದ್ರುತಂ ॥೪೮॥

---

ಅಮೃತದ ರಸವನ್ನು ಸುರಿಸುವಂತೆ ಮನೋಹರವಾದ ಗೂಢಚಾರನ ಈ ಮಾತುಗಳನ್ನು ಕೇಳಿ, ಹಿಮವಂತನು ಬಹಳ ಸಂತೋಷದಿಂದ ಜಾಗ್ರತೆಯಾಗಿ ಎದ್ದನು. ಆಗ ಅವನ ದೇಹಕ್ಕೆ ಹೊಸ ಪ್ರಾಣವು ಪುನಃ ಬಂದು ಸೇರಿಕೊಂಡಿತೋ ಎನ್ನುವ ಹಾಗಿತ್ತು. ॥೪೪॥

ಗೂಢಚಾರನು ತೋರಿಸಿದ ಮಾರ್ಗದ ಮೂಲಕವಾಗಿಯೇ ಹಿಮವಂತನು ಆ ವನವನ್ನು ಶೀಘ್ರವಾಗಿಯೇ ಪ್ರವೇಶಿಸಿ, ಸಖಿಯರಿಂದ ಸೇವಿಸಲ್ಪಟ್ಟು ಮಲಗಿರುವ ತನ್ನ ಮಗಳಾದ ಪಾರ್ವತಿಯನ್ನು ನೋಡಿದನು. ॥೪೫॥

ಪರ್ವತರಾಜನು ಮಗಳಾದ ಪಾರ್ವತಿಯನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಅವಳ ತಲೆಯನ್ನು ಮೂಸಿ, ಆನಂದ ಬಾಷ್ಪಗಳನ್ನು ಬಿಡುತ್ತಾ ಅವಳನ್ನು ಕುರಿತು ಹೀಗೆ ಪ್ರಶ್ನಿಸಿದನು. ॥೪೬॥

ಎಲೌ ಮಗಳೇ, ನೀನು ಏಕೆ ಈ ಕಾಡಿಗೆ ಬಂದೆ? ನಾನು ಯಾವಾಗಲೂ ನಿನಗೆ ಯಾವ ಅಪರಾಧವನ್ನೂ ಮಾಡಲಿಲ್ಲವಲ್ಲಾ; ಆದ್ದರಿಂದ ನೀನು ಏತಕ್ಕಾಗಿ ನನ್ನನ್ನು ಬಿಟ್ಟು ಇಲ್ಲಿಗೆ ಬಂದೆ. ? ॥೪೭॥

ನೀನಿಲ್ಲದೇ ನಿಮ್ಮ ತಾಯಿಯು ಹೇಗೆ ಈ ಕಷ್ಟದಿಂದ ಜೀವಂತಳಾಗಿರ ಬಹುದು ? ಆದ್ದರಿಂದ ನೀನು ಏಕೆ ಇಲ್ಲಿಗೆ ಬಂದೆ ? ಎಂಬ ವಿಷಯವನ್ನು ಶೀಘ್ರವಾಗಿ ಹೇಳುವವಳಾಗು. ॥೪೮॥

ಏವಂ ಪಿತುಃ ಸಮಾಕರ್ಣ್ಯ ಶೋಕೋದ್ಗಾರಯುತಂ ವಚಃ ।
ಪ್ರಾಕೃತಂ ಭಾವಮಾಶ್ರಿತ್ಯ ಮೋಹಯಂತೀ ಸಮಾಗತಾನ್ ॥೪೯॥

ತಾತ ಸತ್ಯಂ ಶೃಣು ವಚಃ ಪ್ರಬ್ರವೀಮಿ ತವಾಗ್ರತಃ ।
ಮಯಾ ತ್ರಿಲೋಚನಃ ಶಂಭುರ್ಮನಸಾ ಸಂವೃತಃ ಪತಿಃ ॥೫೦॥

ತ್ವಯಾ ತದನ್ಯಥಯಿತಂ ದೇವರ್ಷೇರ್ವಚನಾನ್ನನು ।
ತಸ್ಮಾದ್ವನಂ ಸಂಗತಾಽಸ್ಮಿ ಪ್ರಾಣಾನುತ್ಸೃಷ್ಟು ಮುದ್ಯತಾ ॥೫೧॥

ನ ಹಿ ಪತಿಂ ವೃಣೇ ಕೃಷ್ಣಂ ಭ್ರಾತರಂ ಭಗಿನೀ ಇವ (ಯಥಾ) ।
ಯದಿ ದಾಸ್ಯಸಿ ಮಾಂ ತಾತ ಶಂಭವೇ ಸತ್ಯಕೋ ವದ ॥೫೨॥

ತದಾಽಽಗಚ್ಛಾಮಿ ನಗರೇ ವನೇ ನೋ ಚೇದ್ವಸಾಮ್ಯಹಂ ।
ಇತ್ಯುಕ್ತ್ವಾ ಸಮುಪಾಶ್ಲಿಷ್ಯ ಪಿತರಂ ಸಾ ರುರೋದ ಹ ॥೫೩॥

---

ಹೀಗೆ ತಂದೆಯಾಡಿದ ದುಃಖರೂಪವಾದ ಮಾತುಗಳನ್ನು ಕೇಳಿ ಪಾರ್ವತಿಯುಸಾಧಾರಣ ಸ್ವಭಾವದಿಂದ ಅಲ್ಲಿರುವವರೆಲ್ಲರಿಗೂ ಮನಸ್ಸು ಕರಗುವಂತೆ ಮಾತನಾಡಿದಳು. ॥೪೯॥

ಓ ತಂದೆಯೇ, ನಾನು ಸತ್ಯವಾದ ಮಾತುಗಳನ್ನಾಡುವೆನು. ಇದನ್ನು ದಯವಿಟ್ಟು ಕೇಳು. ನಾನು ಮುಕ್ಕಣ್ಣನಾದ ಶಿವನನ್ನೇ ಪತಿಯನ್ನಾಗಿ ಮನಸ್ಸಿನಲ್ಲೇ ವರಿಸಿದ್ದೇನೆ. ॥೫೦॥

ದೇವರ್ಷಿಯಾದ ನಾರದನ ಮಾತಿನಮೇಲೆ ತಾವು ಈ ನನ್ನ ಉದ್ದೇಶವನ್ನು ಬದಲಾಯಿಸಲು ಯತ್ನಿಸಿದಿರಿ. ಆದ್ದರಿಂದ ಪ್ರಯತ್ನಪಟ್ಟು ಈ ಕಾಡಿಗೆ ಬಂದು ಪ್ರಾಣವನ್ನಾದರೂ ಬಿಡಲು ಉದ್ದೇಶಿಸಿದ್ದೇನೆ. ॥೫೧॥

ಓ ತಂದೆಯೇ, ನಾನು ವಿಷ್ಣುವಿನ ತಂಗಿಯು. ಅಣ್ಣನನ್ನು ಹೇಗೋ ಹಾಗೆ ನಾನು ಅವನನ್ನು ಮದುವೆಯಾಗಲಾರೆ. ಆದ್ದರಿಂದ ತಾವು ನನ್ನನ್ನು ಶಿವನಿಗೆ ಕೊಟ್ಟು ಮದುವೆಮಾಡುವಿರೋ? ಇಲ್ಲವೋ? ಎಂಬುದನ್ನೇ ನಿಜವಾಗಿ ಹೇಳಿ. ॥೫೨॥

ಹಾಗೆ ತಾವು ಮಾಡುವಪಕ್ಷದಲ್ಲಿ ನಾನು ಪಟ್ಟಣಕ್ಕೆ ಬರುತ್ತೇನೆ. ಹಾಗಿಲ್ಲದಿದ್ದರೆ ನಾನು ಈ ಕಾಡಿನಲ್ಲೇವಾಸವಾಗಿರುತ್ತೇನೆ. ಎಂದು ಹೇಳಿ ತಂದೆಯನ್ನು ಆಲಿಂಗಿಸಿಕೊಂಡು ಪಾರ್ವತಿಯು ಅತ್ತಳು. ॥೫೩॥

ಅಯಂ ಶೈಲಪತಿಃ ಕನ್ಯಾಂ ರುದಂತೀಂ ದೀನಮಾನಸಃ ।
ಸಮಾಶ್ವಾಸ್ಯ ತದಾ ಪ್ರಾಹ ಚಾಽಶ್ರೂಣಿ ಪರಿವರ್ತಯನ್ ॥೫೪॥

ವತ್ಸೇ ತ್ವಂ ನ ವಿಜಾನಾಸಿ ಶಿವಂ ನಾಮ್ನಾ ಶಿವಂ ನಸು ।
ಅಶಿವಾಽಽಕಾರಚಾರಿತ್ರಃ ಶ್ಮಶಾನಸ್ಥೋಽಹಿಭೂಷಣಃ ॥೫೫॥

ಚರ್ಮವಾಸಾಃ ಕಪಾಲಸ್ರಗ್ಭೂಷಿತೋ ಭೂತಸೇವಿತಃ ।
ಶ್ವಿತ್ರವತ್ಪಾಂಡುರತನುಃ ಕ್ರೋಧನಶ್ಚಾಽವ್ಯವಸ್ಥಿತಃ ॥೫೬॥

ಪುರಾ ದಾಕ್ಷಾಯಣೀ ತಸ್ಯ ಭರ್ತುರ್ದುಶ್ಚರಿತ್ರೈಃ ಸತೀ ।
ಶೋಕೋಪಹತಚಿತ್ತಾ ಸಾ ಭಸ್ಮೀಭೂತಾ ಪಿತುರ್ಗೃಹೇ ॥೫೭॥

ವಿಷ್ಣುಃ ಸಮಗುಣೋಪೇತಃ ಪಿತಾಂಬರ ಸುಶೋಭಿತಃ ।
ವನಮಾಲಾ ಕೌಸ್ತುಭಾದ್ಯೈರಲಂಕೃತತನುಃ ಶುಭಃ ॥೫೮॥

---

ಪರ್ವತರಾಜನಾದ ಹಿಮವಂತನು ಅಳುತ್ತಿರುವ ತನ್ನ ಮಗಳನ್ನು ನೋಡಿ, ತಾನೂ ಖೇದಗೊಂಡು ಅವಳ ಕಣ್ಣೀರನ್ನು ಒರಸುತ್ತಾ ಸಮಾಧಾನಮಾಡುವವನಾಗಿ ಈ ರೀತಿಯಲ್ಲಿ ಹೇಳಿದನು. ॥೫೪॥

ಎಲೌ ಮಗಳೇ, ನಿನಗೆ ಗೊತ್ತಿಲ್ಲ. ಶಿವನು ಹೆಸರಿನಲ್ಲಿ ಮಂಗಳಕರನಾದರೂ ಅಮಂಗಳವಾದ ಸ್ವರೂಪ ಮತ್ತು ನಡತೆಯುಳ್ಳವನೂ, ಶ್ಮಶಾನದಲ್ಲಿ ವಾಸಮಾಡುವವನೂ ಮತ್ತು ಸರ್ಪಗಳನ್ನೇ ಅಲಂಕಾರವಾಗಿ ಧರಿಸಿರುವವನೂ ಆಗಿರುತ್ತಾನೆ. ಅಲ್ಲದೆ ॥೫೫॥

ಅವನು ಚರ್ಮವನ್ನು ಹೊದ್ದಿರುವವನೂ, ರುಂಡಮಾಲೆಯನ್ನು ಅಲಂಕಾರವನ್ನಾಗಿ ಧರಿಸಿರುವವನೂ, ಪಿಶಾಚಿಗಳಿಂದ ಸೇವಿಸಲ್ಪಡುವವನೂ, ತೊನ್ನು ರೋಗವುಳ್ಳವನಂತೆ ಬಿಳಿಚಿಕೊಂಡಿರುವ ಶರೀರವುಳ್ಳವನೂ, ಕೋಪಿಷ್ಠನೂ, ಆದರಿಂದಲೇ ಉನ್ಮತ್ತನೂ ಆಗಿದ್ದಾನೆ. ॥೫೬॥

ಹಿಂದೆ ದಾಕ್ಷಾಯಣಿಯಾದ ಸತಿಯು ತನ್ನ ಪತಿಯಾದ ಇವನ ಕೆಟ್ಟ ನಡೆವಳಿಕೆಗಳಿಂದ ದುಃಖಕ್ಕೀಡಾದ ಮನಸ್ಸುಳ್ಳವಳಾಗಿ ತನ್ನ ತಂದೆಯ ಮನೆಯಲ್ಲಿಯೇ ಬೂದಿಯಾದಳು ! ॥೫೭॥

ವಿಷ್ಣುವಾದರೋ ಸಕಲ ಗುಣಗಳಿಂದ ಪೂರ್ಣನೂ, ಪೀತಾಂಬರದಿಂದ

ನಿಸರ್ಗಸುಗುಣೈರ್ಲಕ್ಷ್ಮೀರ್ಯಂ ವವ್ರೇ ಪತಿಮುತ್ತಮಂ ।
ಸ ತೇ ಯೋಗ್ಯಃ ಪತಿರ್ವತ್ಸೇ ನ ಶಿವಸ್ತೇ ಸದೃಗ್ಗುಣಃ ॥೫೯॥

ಶ್ರುತ್ವಾ ಪಿತುರ್ವಚಃ ಪ್ರಾಹ ಗೌರೀ ರೋಷಾರುಣೇಕ್ಷಣಾ ।
ತಾತ ಮೇ ಸೈವ ಭರ್ತಾಽಸ್ತು ಶುಭೋ ವಾಽಪ್ಯಶುಭೋಽಪಿ ವಾ ॥೬೦॥

ನಾಽನ್ಯಂ ವೃಣೇ ಶಿವಾತ್ಕಂಚಿದ್ಭರ್ತಾರಮಪಿ ಸದ್ಗುಣಂ ।
ನಿದಾನಮತ್ರ ದಿಷ್ಟಂ ಮೇ ನಾಽನ್ಯದ್ವಕ್ತುಂ ತ್ವಮರ್ಹಸಿ ॥೬೧॥

ಶ್ರುತ್ವೇತ್ಥಂ ತನುಜಾವಾಕ್ಯಂ ತದ್ವಿಶ್ಲೇಷ ಸುಕಾತರಃ ।
ಓ ಮಿತ್ಯುಕ್ತ್ವಾ ಸಮಾಧಾಯ ಕನ್ಯಾಂ ಸ್ವನಗರಂ ಯಯೌ ॥೬೨॥

---

ಶೋಭಿತನೂ, ವನಮಾಲೆ, ಕೌಸ್ತುಭ ರತ್ನ ಮುಂತಾದುದರಿಂದ ಅಲಂಕರಿಸಲ್ಪಟ್ಟ ದೇಹವುಳ್ಳವನೂ, ಮಂಗಳಕರನೂ ಆಗಿದ್ದಾನೆ. ಆದುದರಿಂದಲೇ ॥೫೮॥

ಉತ್ತಮಳಾದ ಲಕ್ಷ್ಮೀಯೂ ಕೂಡ, ಇವನ ಸಹಜವಾದ ಗುಣಗಳಿಂದಲೇ ಮೋಹಗೊಂಡು ವರಿಸಿದಳು. ಇಂಥಾ ನಿನಗೆ ಸಮಾನವಾದ ಉತ್ತಮಗುಣಗಳುಳ್ಳ ವಿಷ್ಣುವೇ ನಿನಗೆ ಯೋಗ್ಯನಾದ ಪತಿಯು! ಶಿವನು ನಿನಗೆ ಸಮಾನನಾದ ಪತಿಯಲ್ಲ. ॥೫೯॥

ತಂದೆಯ ಈ ಮಾತುಗಳನ್ನು ಕೇಳಿ ಗೌರಿಯು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಅವನನ್ನು ಕುರಿತು, ಓ ತಂದೆಯೇ, ಶಿವನು ಮಂಗಳಕರನಾಗಲಿ, ಅಥವಾ ಅಮಂಗಳಕರನೇ ಆಗಲಿ, ಅವನೇ ನನಗೆ ಪತಿಯಾಗಲಿ. ಎಂದಳು. ॥೬೦॥

ಶಿವನನ್ನು ಬಿಟ್ಟು ಇನ್ನಾವನನ್ನೂ ಅವನು ಗುಣಾಢ್ಯನಾಗಿದ್ದರೂ ನಾನು ವರಿಸಲಾರೆ. ಏಕೆಂದರೆ ಈ ವಿಷಯದಲ್ಲಿ ನನ್ನ ಅದೃಷ್ಟವೇ ಕಾರಣವೆಂದರಿಯುವೆನು. ತಾವು ದಯವಿಟ್ಟು ಬೇರೆ ಏನನ್ನೂ ಹೇಳಬೇಡಿ. ॥೬೧॥

ಮಗಳ ಈ ಮಾತುಗಳನ್ನು ಕೇಳಿ ಅವಳ ವಿರಹವನ್ನು ಸಹಿಸಲಾರದೇ ಹಾಗೆಯೇ ಆಗಲೆಂದು ಹೇಳಿ ಹಿಮವಂತನು ಅವಳನ್ನು ಕರೆದುಕೊಂಡು, ತನ್ನ ಪಟ್ಟಣಕ್ಕೆ ಹೋದನು. ॥೬೨॥

ಅಥ ತಾಂ ಪುತ್ರಿಕಾಂ ದಾತುಂ ಶಿವಾಯಾಚಿಂತಯದ್ಗಿರಿಃ ।
ಸಸ್ಮಾರ ನಾರದಂ ಭೂಯಃ ಪರ್ವತೇಂದ್ರಃ ಸಭಾಸ್ಥಿತಃ ॥೬೩॥

ವಿದಿತ್ವಾ ನಾರದಃ ತತ್ರ ತೇಜೋರಾಶಿಃ ಸಮಾಯಯೌ ।
ಗಿರಿಸ್ತಂ ಪೂಜಯಾಮಾಸ ಶಾಸ್ತ್ರದೃಷ್ಟೇನ ವರ್ತ್ಮನಾ ॥೬೪॥

ಸ್ವೀಕೃತ್ಯ ತತ್ಸಪರ್ಯಾಂ ಸ ಪ್ರಾಹ ಪರ್ವತಭೂಪತಿಂ ।
ಪರ್ವತೇಶ ಸ್ಮೃತಃ ಕಿಂ ತೇ ಕಾರಣಂ ತತ್ಪ್ರಚಕ್ಷ್ವ ಮೇ ॥೬೫॥

ಮಯಾ ತೇ ವಾಂಛಿತಂ ಯತ್ತತ್ಸಾಧಿತಂ ಶುಭಮೂರ್ಜಿತಂ ।
ಜಾಮಾತೃತ್ವೇ ರಮಾಕಾಂತಃ ಪುರುಷಃ ಪ್ರಾರ್ಥಿತೋ ಮಯಾ ॥೬೬॥

ಅಂಗೀಚಕಾರ ಭಗವಾಂಸ್ತವ ಭಾಗ್ಯವಶಾಚ್ಚ ನು ।
ಶ್ರುತ್ವೇತ್ಥಂ ನಾರದವಚೋ ಹಿಮಾದ್ರಿರ್ಭೀತಮಾನಸಃ ॥೬೭॥

---

ಅನಂತರದಲ್ಲಿ ಪರ್ವತರಾಜನು ತನ್ನ ಮಗಳನ್ನು ಶಿವನಿಗೇ ಕೊಡಲು ಯೋಚಿಸಿದನು. ಆಗ ಅವನು ಸಭೆಯಲ್ಲಿದ್ದುಕೊಂಡು ನಾರದನನ್ನು ಪುನಃ ಸ್ಮರಿಸಿದನು. ॥೬೩॥

ನಾರದನು ಇದನ್ನು ತಿಳಿದು ತೆಜೋರಾಶಿಸ್ವರೂಪನಾಗಿ ಅಲ್ಲಿಗೆ ಕೂಡಲೇ ಬಂದನು. ಹಿಮವಂತನು ಶಾಸ್ತ್ರೋಕ್ತಮಾರ್ಗದಲ್ಲಿ ಆ ನಾರದ ಋಷಿಯನ್ನು ಪೂಜಿಸಿದನು. ॥೬೪॥

ನಾರದನು ಹಿಮವಂತನ ಪೂಜೆಯನ್ನು ಕೈಗೊಂಡು ಅವನನ್ನು ಕುರಿತು, ಎಲೈ ಪರ್ವತರಾಜನೇ, ನೀನು ನನ್ನನ್ನು ಸ್ಮರಿಸಿದ ಕಾರಣವೇನೆಂಬುದನ್ನು ಹೇಳು. ಎಂದನು. ॥೬೫॥

ನೀನು ಅಪೇಕ್ಷಿಸಿದ ವಿಷಯವನ್ನು ನಾನು ಚೆನ್ನಾಗಿ ಸಾಧಿಸಿದ್ದೇನೆ. ನಿನ್ನ ಅಳಿಯನಾಗಲು ಆ ಶ್ರೀಮನ್ನಾರಾಯಣನನ್ನು ನಾನು ಬಹಳವಾಗಿ ಪ್ರಾರ್ಥಿಸಿದ್ದೇನೆ. ॥೬೬॥

ಪೂಜ್ಯನಾದ ವಿಷ್ಣುವೂ ನಿನ್ನ ಅದೃಷ್ಟ ವಶದಿಂದ ಇದನ್ನು ಒಪ್ಪಿದನು. ಎಂಬುದಾಗಿ ಹೇಳಿದ ನಾರದನ ಮಾತನ್ನು ಕೇಳಿ ಹಿಮವಂತನು ಭಯಗೊಂಡ ಮನಸ್ಸುಳ್ಳವನಾದನು. ॥೬೭॥

ಬದ್ಧಾಂಜಲಿಃ ಕ್ಷಮಸ್ವೇತಿ ಪ್ರಾರ್ಥಯಾಮಾಸ ತಂ ಮುನಿಂ ।
ಮುನೇ ಹಿ ತೇ ಪ್ರತಿಶ್ರುತ್ಯ ಕನ್ಯಾಂ ದಾಸ್ಯಾಮಿ ವಿಷ್ಣವೇ ॥೧೮॥

ಇತ್ಯಹಂ ವಿತಥೀಭೂತೋ ನಿಜಭಾಗ್ಯವಿಪರ್ಯಯಾತ್ ।
ಯದಾ ತೇ ವಿಷ್ಣವೇ ಕನ್ಯಾಂ ದಾಸ್ಯಾಮೀತಿ ಪ್ರತಿಶ್ರುತಂ ॥೧೯॥

ತತಃ ಪರದಿನೇ ಕನ್ಯಾ ಮಮ ರುಷ್ಟಾ ಸಖೀಗಣೈಃ ।
ಪ್ರವಿಷ್ಟಾ ವಿಪಿನಂ ಘೋರಂ ಮೃತ್ಯುವಕ್ತ್ರಮಿವ ಸ್ಥಿತಂ ॥೨೦॥

ಆಸಾದಿತಾ ಕಥಂಚಿತ್ಸಾ ಸಮಾನೀತಾ ಚ ಯತ್ನತಃ ।
ರಮಾಪತಿಂ ಪತಿಂ ನೈವ ಸರ್ವಥಾ ಸಾಽಭಿವಾಂಛತಿ ॥೨೧॥

ಪ್ರಮಥೇಶಂ ತು ಭರ್ತಾರಂ ದೌರ್ಭಾಗ್ಯಾದೀಹತಿ ಸ್ವಯಂ ।
ಮಯಾ ಕಿಂ ತತ್ರ ಕರ್ತವ್ಯಂ ದುರ್ಭಾಗ್ಯೇನ ಮುನೀಶ್ವರ ॥೨೨॥

---

ಹಿಮವಂತನು ಕೈಮುಗಿದುಕೊಂಡು " ಓ ಮುನಿಯೇ, ನನ್ನನ್ನು ನೀನು ಕ್ಷಮಿಸಬೇಕು. " ಎಂದು ನಾರದನನ್ನು ಪ್ರಾರ್ಥಿಸಿದನು. ಓ ಮುನಿಗಳೇ, ನನ್ನ ಮಗಳನ್ನು ವಿಷ್ಣುವಿಗೆ ವಿವಾಹಮಾಡಿಕೊಡುವೆನೆಂದು ನಿಮ್ಮ ಮುಂದೆ ಪ್ರತಿಜ್ಞೆ ಮಾಡಿದ್ದೇನೋ ನಿಜ. ಆದರೆ ಆ ಪ್ರತಿಜ್ಞೆಯು ನನ್ನ ದುರದೃಷ್ಟದಿಂದ ವ್ಯರ್ಥವಾಯಿತು. ನಾನು ತಮಗೆ ನನ್ನ ಮಗಳನ್ನು ವಿಷ್ಣುವಿಗೆ ಕೊಡುವೆನೆಂದು ಹೇಳಿದ ಮರುದಿನವೇ ನನ್ನ ಮಗಳು ಕೋಪಗೊಂಡು ತನ್ನ ಸಖಿಯರೊಂದಿಗೆ ಮೃತ್ಯುವಿನ ಬಾಯಿಯೋ ಎಂಬಂತಿರುವ ಬಹಳ ಭಯಂಕರವಾದ ಅರಣ್ಯವನ್ನು ಪ್ರವೇಶಿಸಿದಳು. ॥೧೮-೧೯-೨೦॥

ಅವಳನ್ನು ನಾನು ಬಹಳ ಕಷ್ಟದಿಂದ ಕಂಡು ಹಿಡಿದು ಬಹಳ ಪ್ರಯತ್ನದಿಂದ ಹಿಂದಕ್ಕೆ ಕರೆದುಕೊಂಡು ಬಂದೆನು. ಅವಳು ಲಕ್ಷ್ಮಿಯ ಗಂಡನಾದ ವಿಷ್ಣುವಿನೊಡನೆ ಮದುವೆಯನ್ನು ಮಾಡಿಕೊಳ್ಳಲು ಸರ್ವಥಾ ಇಷ್ಟಪಡುವುದೇ ಇಲ್ಲ! ॥೨೧॥

ಪಾರ್ವತಿಯು ಪ್ರಮಥಗಣಗಳಿಗೆ ಒಡೆಯನಾದ ಶಿವನೇ ತನಗೆ ಪತಿಯಾಗಬೇಕೆಂದು ದುರದೃಷ್ಟವಶಾತ್ ಅಪೇಕ್ಷಿಸುತ್ತಿದ್ದಾಳೆ. ಓ ಮುನೀಶ್ವರನೇ, ದುರದೃಷ್ಟಶಾಲಿಯಾದ ನಾನು ಈ ವಿಷಯದಲ್ಲಿ ಮಾಡತಕ್ಕದ್ದೇನು ? ॥೨೨॥

ಅಗಾಧೇ ಘೋರವಿಪದಿ ಮಗ್ನೋಽಹಂ ಸಾಗರೇ ನನು ।
ಅತ್ರ ತ್ವಮೇವ ಮಾಂ ಶೀಘ್ರಂ ಸಮುದ್ಧರ್ತುಮಿತೋಽರ್ಹಸಿ ॥೭೩॥

ಪರ್ವತಸ್ಯ ನಿಗದಿತಂ ಶ್ರುತ್ವೇತ್ಥಂ ದೇವತಾಪಸಃ ।
ದ್ರಷ್ಟುಂ ಗೌರ್ಯಾಸ್ತು ಮಾಹಾತ್ಮ್ಯಂ ಚುಕ್ರೋಧಾತಿತರಾಂ ತದಾ॥೭೪॥

ಸಸ್ಮಾರ ಪಾರ್ಷದಾ ನ್ವಿಷ್ಣೋಃ ವಿಜಯಾದೀಂಸ್ತದಾ ಮುನಿಃ ।
ಸ್ಮೃತಮಾತ್ರಾಃ ತು ತೇ ತತ್ರ ಸಂಪ್ರಾಪ್ತಾ ವಿಷ್ಣುಪಾರ್ಷದಾಃ ॥೭೫॥

ಪ್ರೋವಾಚ ವಿಜಯಂ ತತ್ರ ನಾರದೋ ಮನ್ಯುನಾ ಜ್ವಲನ್ ।
ಏಷ ಶೈಲಕುಲಾಂಗಾರಃ ಸ್ವಾಮಿನೇ ಮೇ ನಿಜಾತ್ಮಜಾಂ ॥೭೬॥

---

ನಾನು ಈ ರೀತಿಯಾಗಿ ಅಗಾಧವಾದ ಭಯಂಕರವಾದ ವಿಪತ್ತಿನ ಸಾಗರದಲ್ಲಿ ಮುಳುಗಿದ್ದೇನೆ. ಈ ಸಂದರ್ಭದಲ್ಲಿ ನನ್ನನ್ನು ಈ ದುಃಖಸಾಗರದಿಂದ ಉದ್ಧಾರ ಮಾಡಲು ತಾವೇ ಸಮರ್ಥರು. ॥೭೩॥

ದೇವರ್ಷಿಯಾದ ನಾರದನು ಹಿಮವಂತನ ಈ ಮಾತುಗಳನ್ನು ಕೇಳಿ, ಗೌರಿಯ ಮಾಹಾತ್ಮ್ಯೆಯನ್ನು ನೋಡೋಣವೆಂದು, ಆಗ ಅತ್ಯಂತವಾಗಿ ಕೋಪಗೊಂಡನು. ॥೭೪॥

ಆಗ ನಾರದ ಮುನಿಯು ವಿಷ್ಣುವಿನ ಸಭೆಗೆ ಸಂಬಂಧಪಟ್ಟ ವಿಜಯನೇ ಮೊದಲಾದ ಪರಿವಾರದವರನ್ನು ಜ್ಞಾಪಿಸಿಕೊಂಡನು. ವೈಕುಂಠಸಭಾಸದಸ್ಯರನ್ನು ನಾರದನು ಜ್ಞಾಪಿಸಿಕೊಂಡಕೂಡಲೇ ವಿಷ್ಣುವಿನ ಪರಿವಾರದವರು ಅಲ್ಲಿಗೆ ಬಂದರು. ॥೭೫॥

ನಾರದನು ಕೋಪದಿಂದ ಉರಿಯುತ್ತಾ ವಿಜಯನನ್ನು ಕುರಿತು ಈ ಪರ್ವತಗಳ ವಂಶಕ್ಕೆ ಅಗ್ನಿಪ್ರಾಯನಾಗಿ ನಾಶಕನಾದ ಹಿಮವಂತನು ನಮ್ಮ ಸ್ವಾಮಿಯಾದ ವಿಷ್ಣುವಿಗೆ ತನ್ನ ಮಗಳನ್ನು ಕೊಡುವೆನೆಂದು ಪ್ರತಿಜ್ಞೆಮಾಡಿದ್ದನು! ಎಂದನು. ॥೭೬॥

ದದಾಮೀತಿ ಪ್ರತಿಶ್ರುತ್ಯ ಪರಿಭಾವಯಿತುಂ ಹಿ ನಃ ।
ಸಮೀಹತ್ಯಧಮಸ್ತಸ್ಮಾದ್ಬಧ್ವೈನಂ ತತ್ತನೂದ್ಭವಾಂ ॥೨೭॥

ನಯ ಶೀಘ್ರಂ ಮುರರಿಪುಃ ಪಾಣಿಮಸ್ಯಾಃ ಪ್ರತೀಚ್ಛತು ।
ಶ್ರುತ್ವೈವಂ ನಾರದವಚೋ ವಿಜಯಃ ಪಾರ್ಷದೇಶ್ವರಃ ॥೨೮॥

ಜಿತ್ವಾ ಪರ್ವತರಾಜನ್ಯಂ ಸಮರೇಽಬಂಧಯದ್ದೃಢಂ ।
ಅಥ ಸರ್ವೇ ಪರ್ವತಸ್ಯ ಪೌರಾ ಭೀತಾ ವಿಚುಕ್ರುಶುಃ ॥೨೯॥

ಹಾಹೇತಿ ಧಾವಮಾನಾಶ್ಚ ಸಸ್ತ್ರೀಬಾಲಾಃ ಸಹಸ್ರಶಃ ।
ತಾವತ್ಕನ್ಯಾಂ ಸಮಾನೇತುಂ ವಿವಿಶುರ್ಹರಿಪಾರ್ಷದಾಃ ॥೩೦॥

ಮೇನಾ ಪುತ್ರೀಂ ಸಮಾಧಾಯ ಪುರೋಹಿತಮುಪಾಗಮತ್ ।
ಕಾಶ್ಯಪಃ ಪರ್ವತಗುರುರ್ದೃಷ್ಟ್ವಾ ನಗಪತಿಪ್ರಿಯಾಂ ॥೩೧॥

---

ಹೀಗೆ ಇವನು ಪ್ರತಿಜ್ಞೆಮಾಡಿದ್ದರೂ ಈಗ ನಮ್ಮನ್ನು ತಿರಸ್ಕರಿಸಲು ಇಷ್ಟಪಟ್ಟಿದ್ದಾನೆ. ಆದ್ದರಿಂದ ಇವನು ಅಧಮನಾಗಿದ್ದಾನೆ. ನೀವು ಇವನನ್ನು ಕಟ್ಟಿಹಾಕಿ ಇವನ ಮಗಳನ್ನು ಹಿಡಿಯಿರಿ. ॥೨೭॥

ಅನಂತರದಲ್ಲಿ ನೀವು ಆ ಪಾರ್ವತಿಯನ್ನು ವಿಷ್ಣುವಿನ ಸಮೀಪಕ್ಕೆ ಒಯ್ಯಬೇಕು. ವಿಷ್ಣುವು ಅವಳ ಪಾಣಿಗ್ರಹಣಮಾಡಿ, ಮದುವೆಮಾಡಿಕೊಳ್ಳಲಿ. ಎಂಬುದಾಗಿ ಹೇಳಿದ ನಾರದನ ಮಾತನ್ನು ಕೇಳಿ ನಾರಾಯಣನ ಪರಿವಾರದವರಿಗೆ ಯಜಮಾನನಾದ ವಿಜಯನು ಹಾಗೆ ಮಾಡಲು ಸಿದ್ಧನಾದನು. ॥೨೮॥

ವಿಜಯನು ಹಿಮವಂತನನ್ನು ಯುದ್ಧದಲ್ಲಿ ಸೋಲಿಸಿ ಅವನನ್ನು ಗಟ್ಟಿಯಾಗಿ ಕಟ್ಟಿಹಾಕಿದನು. ಅನಂತರ ಪರ್ವತರಾಜನ ಪಟ್ಟಣಿಗರೆಲ್ಲರೂ ಭಯಪಟ್ಟು ಗಟ್ಟಿಯಾಗಿ ಕೂಗಿಕೊಂಡರು. ॥೨೯॥

ಆ ಪಟ್ಟಣಿಗರು ತಮ್ಮ ತಮ್ಮ ಹೆಂಗಸರು ಮತ್ತು ಮಕ್ಕಳೊಂದಿಗೆ ಸಾವಿರ ಗಟ್ಟಲೆಯಲ್ಲಿ ಅಯ್ಯೋ, ಅಯ್ಯೋ, ಎಂದು ಕೂಗುತ್ತಾ ಓಡುತ್ತಿದ್ದರು. ಅಷ್ಟರೊಳಗಾಗಿಯೇ ವಿಷ್ಣುವಿನ ಪರಿವಾದವರು ಪಾರ್ವತಿಯನ್ನು ಒಯ್ಯಲು ಅರಮನೆಯೊಳಗೆ ಪ್ರವೇಶಿಸಿದರು. ॥೩೦॥

ಮೇನಕಿಯು ತನ್ನ ಮಗಳನ್ನು ಕರೆದುಕೊಂಡು ಪುರೋಹಿತನಾದ ಕಾಶ್ಯಪನ

ಹಸ್ತೇ ಗೃಹೀತ್ವಾ ತನುಜಾಂ ತ್ರಾತಾರಮಭಿವಾಂಛತೀಂ ।
ರುದಂತೀಂ ರಕ್ಷರಕ್ಷೇತಿ ಬ್ರುವಾಣಾಂ ಭಯವಿಹ್ವಲಾಂ ॥೮೨॥

ಮಾಭೈರ್ವತ್ಸೇ ಸಮಾಯಾಹೀತ್ಯುಕ್ತ್ವಾ ಸ್ವಸ್ಯ ಗೃಹಾಂತರಂ ।
ಪ್ರವೇಶ್ಯ ತಾಂ ಸಮಾಶ್ವಾಸ್ಯ ಪಾರ್ವತೀಂ ಪ್ರಾಹ ಕಾಶ್ಯಪಃ ॥೮೩॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಏಕತ್ರಿಂಶೋಽಧ್ಯಾಯಃ

---

ಬಳಿಗೆ ಹೋದಳು. ಆ ಋಷಿಯು ಈರೀತಿಯಾಗಿ ತನ್ನನ್ನು ಸಮೀಪಿಸಿದ ಹಿಮವಂತನ ಪತ್ನಿಯನ್ನು ನೋಡಿದನು. ॥೮೧॥

ಮಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ರಕ್ಷಕರನ್ನು ಬಯಸುತ್ತಾ, ಕಾಪಾಡಿ, ಕಾಪಾಡಿ, ಎಂದು ಭಯದಿಂದ ಕಳವಳಗೊಂಡು ಅಳುತ್ತಿದ್ದ ಮೇನಕಿಯನ್ನು ಕಾಶ್ಯಪ ಗುರುವು ನೋಡಿ ಅಭಯವನ್ನು ಕೊಟ್ಟು ಹೀಗೆ ಹೇಳಿದನು! ॥೮೨॥

ಎಲೌ ಮಗಳೇ, ಹೆದರಬೇಡ. ಇಲ್ಲಿ ಬಾ, ಎಂದು ಹೇಳಿ ಮೇನಕಿಯನ್ನು ಪಾರ್ವತಿಯೊಂದಿಗೆ ತನ್ನ ಮನೆಯೊಳಗೆ ಪ್ರವೇಶಿಸಿ, ಆಶ್ರಯವನ್ನು ಕೊಟ್ಟು, ಕಾಶ್ಯಪ ಋಷಿಯು ಪಾರ್ವತಿಯನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೮೩॥

ಇಲ್ಲಿಗೆ ಶ್ರೀ ತ್ರಿಪುರಾರಹಸ್ಯದಲ್ಲಿ ಮಹಾತ್ಮ್ಯಖಂಡದಲ್ಲಿ ಮನ್ಮಥೋಪಾಖ್ಯಾನದಲ್ಲಿ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ದ್ವಾತ್ರಿಂಶೋಽಧ್ಯಾಯಃ ॥

### ಮೂವತ್ತೆರಡನೆಯ ಅಧ್ಯಾಯವು

ಲೀಲಯಾಽಲಂ ಮಹಾದೇವಿ ಕಿಂರೋದಿಷಿ ಭಯಾರ್ತವತ್ ।
ಜಾನೇಽಹಂ ನ ಚ ತೇ ಭೀತಿರಸ್ಮಾನ್ಮೋಹಯಿತುಂ ಹಿ ತತ್ ॥೧॥

ತತೋ ಮೇನಾಂ ಭಯಾರ್ತಾಂ ತಾಂ ಪ್ರಾಹ ಪರ್ವತರಾಟ್ಪ್ರಿಯಾಂ ।
ಶೃಣು ಮೇನೇ ಮೋಹಿತಾಽಸಿ ದೇವ್ಯಾ ಸಂಸ್ಮರ ಪೂರ್ವಜಂ ॥೨॥

ವೃತ್ತಂ ಯತ್ತಪಸಾಽರಾಧ್ಯ ದೇವೀಂ ಪ್ರಾಪ್ತಾಽಸಿ ನಂದಿನೀಂ ।
ತಾಮೇವ ಶರಣಂ ಯಾಹಿ ಮಯಾ ಸಹ ನಗಪ್ರಿಯೇ ॥೩॥

---

ಓ ಮಹಾದೇವಿಯಾದ ಪಾರ್ವತಿಯೇ, ನಿನ್ನ ಲೀಲೆಗಳನ್ನು ಸಾಕುಮಾಡು. ಇದೇನು ಹೀಗೆ ಭಯದಿಂದ ಪೀಡಿತಳಾದವಳಂತೆ ಅಳುತ್ತಿದ್ದೀಯೆ ? ನಿನಗೆ ಭಯವು ಸ್ವಲ್ಪವೂ ಇಲ್ಲವೆಂದು ನಾನು ಬಲ್ಲೆನು. ಆದರೆ ಇದು ಕೇವಲ ನಮ್ಮನ್ನು ಮರುಳು ಗೊಳಿಸುವುದಕ್ಕಾಗಿಯೇ ಎಂದು ತಿಳಿಯುತ್ತೇನೆ. ॥೧॥

ಅನಂತರದಲ್ಲಿ ಕಾಶ್ಯಪನು ಭಯದಿಂದ ಪೀಡಿತಳಾದ ಪರ್ವತರಾಜನ ಪತ್ನಿಯಾದ ಮೇನಕಿಯನ್ನು ಕುರಿತು ಎಲೌ ಮೇನಕಿಯೇ, ನೀನು ಅಜ್ಞಾನವಶಳಾಗಿದ್ದೀಯೆ ! ನನ್ನ ಮಾತನ್ನು ಕೇಳು. ನಿನ್ನ ಮಗಳಾದ ಪಾರ್ವತೀದೇವಿಯ ಪೂರ್ವವೃತ್ತಾಂತವನ್ನು ಜ್ಞಾಪಿಸಿಕೋ. ಎಂದನು. ॥೨॥

ಎಲೌ ಹಿಮವಂತನ ಪತ್ನಿಯಾದ ಮೇನಕಿಯೇ, ನೀನು ಹಿಂದೆ ಯಾವ ದೇವಿಯನ್ನು ತಪಸ್ಸಿನಿಂದ ಸಂತೋಷಪಡಿಸಿ ಈ ಮಗಳನ್ನು ಪಡೆದೆಯೋ ಆ ದೇವಿಯನ್ನೇ ಈಗಲೂ ನನ್ನೊಡನೆ ಶರಣುಹೋಗು. ॥೩॥

ಶ್ರುತ್ವಾ ಪುರೋಹಿತವಚಃ ಸ್ಮೃತ್ವಾ ಕನ್ಯಾಂ ಪರಾಂಬಿಕಾಂ।
ಪ್ರಣಮ್ಯ ದಂಡವದ್ಭೂಮೌ ತುಷ್ಟಾವ ವಿವಿಧೈಃ ಸ್ತವೈಃ ॥೪॥

ಲೋಕಾನಾಂ ಜನಯಿತ್ರೀ ತ್ವಂ ಸರ್ವಲೋಕ ಮಹೇಶ್ವರೀ।
ಮತ್ತನೂದ್ಭವತ್ತ್ವಂ ಯತ್ತೇ ನಟಾನಾಂ ವೇಷವತ್ತುತತ್ ॥೫॥

ಅಹೋ ಧನ್ಯತಮಾ ಲೋಕೇ ಮತ್ತೋ ನಾನ್ಯೋ ಹಿ ವಿದ್ಯತೇ।
ಅನಂತ ಪುಣ್ಯೈರ್ಹ್ಯದೃಶ್ಯಾ ಸಾ ಮೇ ಯಸ್ಮಾತ್ತನೂದ್ಭವಾ ॥೬॥

ಅಥ ಸಂಸ್ತುತ್ಯ ಬಹುಧಾ ಕಾಶ್ಯಪಃ ಪ್ರಾಹ ಶಂಕರೀಂ।
ಮಾತರ್ನ ತೇ ಸ್ತುತಿಂ ಕರ್ತುಂ ಸಮರ್ಥೋಽಹ್ಯಹಿರಾಡಪಿ ॥೭॥

---

ಪುರೋಹಿತನ ಈ ಮಾತನ್ನು ಕೇಳಿ ಪರಾಂಬಿಕೆಯಾದ ಗೌರೀದೇವಿಯನ್ನು ಸ್ಮರಿಸಿ, ಭೂಮಿಯಲ್ಲಿ ಆಕೆಗೆ ದಂಡಾಕಾರವಾಗಿ ಪ್ರಣಾಮವನ್ನು ಮಾಡಿ, ಆಕೆಯನ್ನು ಮೇನಾದೇವಿಯು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸಿದಳು. ॥೪॥

ಓ ದೇವಿಯೇ, ನೀನು ಸಕಲಲೋಕಗಳನ್ನೂ ಸೃಜಿಸಿದವಳೂ, ಎಲ್ಲಾ ಲೋಕಗಳಿಗೂ ಮಹೇಶ್ವರಿಯೂ, ಆಗಿದ್ದೀಯೆ. ಹೀಗಿದ್ದರೂ ನನ್ನ ಶರೀರದಲ್ಲಿ ನೀನು ಹುಟ್ಟಿರುವುದೆಂಬುದು, ನಟರು ವೇಷವನ್ನು ಧರಿಸಿಕೊಂಡಂತೆ, ನಟನೆಯೇ ಸರಿ! ॥೫॥

ಲೋಕದಲ್ಲಿ ನನಗಿಂತಲೂ ಅತ್ಯಂತ ಧನ್ಯಳು ಮತ್ತೊಬ್ಬಳಿಲ್ಲವೆಂಬುದು ಅತ್ಯಂತ ಸಂತೋಷದ ವಿಷಯ. ಪಂಚೇಂದ್ರಿಯಗಳಿಗೂ ಅಗೋಚರಳಾದ ದೇವಿಯೇ ನನ್ನ ಅನಂತ ಪುಣ್ಯದ ಫಲವಾಗಿ ಮಗಳಾಗಿ ಹುಟ್ಟಿರುವುದೇ ಇದಕ್ಕೆ ಕಾರಣ ವಾಗಿದೆ! ॥೬॥

ಅನಂತರದಲ್ಲಿ ಕಾಶ್ಯಪನೂ ದೇವಿಯನ್ನು ಅನೇಕವಿಧವಾಗಿ ಸ್ತುತಿಸಿ ಶಂಕರಿ ಯನ್ನು ಕುರಿತು, ಓ ತಾಯಿಯೇ, ನಿನ್ನ ಸ್ತೋತ್ರವನ್ನು ಪೂರ್ಣಮಾಡಲು ಸರ್ಪರಾಜನಾದ ಸಾವಿರ ಬಾಯುಳ್ಳ ವಾಸುಕಿಗೂ ಸಾಧ್ಯವಿಲ್ಲ. ಎಂದನು. ॥೭॥

ತಸ್ಮಾತ್ತ್ವಾಂ ಕಿಮಹಂ ತೋಷ್ಯೇ ಪ್ರಸೀದ ಪರಮೇಶ್ವರಿ ।
ನಾತರಂ ತ್ರಾಹಿ ಸಂತ್ರಸ್ತಾಂ ದೀನಾಂ ಪರ್ವತರಾಟ್ಪ್ರಿಯಾಂ ॥೮॥

ಪ್ರಾರ್ಥಿತೇತ್ಥಂ ತದಾ ಗೌರೀ ನಿಜಂ ರೂಪಂ ಸಮಾಸ್ಥಿತಾ ।
ಕಾಲಮೇಘ ನಿಭಾ ಸಿಂಹವಾಹನಾ ಭೂಷಣೋಜ್ವಲಂ ॥೯॥

ಆಯುಧೈರ್ಜ್ವಲಿತೈರ್ಜ್ವಾಲಾ ಮಾಲಾ ಪರಿವೃತೈರ್ಯುತಾ ।
ತ್ರಿನೇತ್ರಾ ಸ್ವರ್ಣವಸನಾ ಬಾಲಚಂದ್ರಾವತಂಸಿನೀ ॥೧೦॥

ನಿರ್ಜಗಾಮ ಗೃಹಾತ್ತಸ್ಮಾತ್ಸಮುದ್ರಾದ್ಭಾನುಮಾನಿವ ।
ಅಥ ತಾಂ ನಾರದೋ ದೃಷ್ಟ್ವಾ ಪ್ರಣಮ್ಯ ವಿವಿಧೈಃ ಸ್ತವೈಃ ॥೧೧॥

---

ಓ ಪರಮೇಶ್ವರಿಯೇ, ಹೀಗಿರುವಾಗ ನನ್ನಂಥವನು ನಿನ್ನನ್ನು ಸ್ತೋತ್ರ ಮಾಡಬಲ್ಲನೇ? ದಯವಿಟ್ಟು ಪ್ರಸನ್ನಳಾಗು. ದೈನ್ಯವನ್ನು ಹೊಂದಿರುವ, ಭಯಗ್ರಸ್ತಳಾದ, ಪಾರ್ವತಿಯ ತಾಯಿಯಾದ, ಪರ್ವತರಾಜನ ಪತ್ನಿಯಾದ ಮೇನಕಿಯನ್ನು ದಯವಿಟ್ಟು ಕಾಪಾಡು. ॥೮॥

ಹೀಗೆ ಕಾಶ್ಯಪನು ಪ್ರಾರ್ಥಿಸಲಾಗಿ ಗೌರಿಯು ತನ್ನ ನಿಜವಾದ ಸ್ವರೂಪವನ್ನು ಹೊಂದಿ ಪ್ರಳಯಕಾಲದ ಮೇಘಕ್ಕೆ ಸಮನಾದ ಕಾಂತಿಯುಳ್ಳವಳಾಗಿಯೂ, ಸಿಂಹವನ್ನೇ ವಾಹನವನ್ನಾಗಿ ಮಾಡಿಕೊಂಡು ಅಲಂಕಾರಗಳಿಂದ ಶೋಭಿಸುತ್ತಾ ಕಾಣಿಸಿಕೊಂಡಳು. ॥೯॥

ಗೌರಿಯು ಜ್ವಾಲೆಗಳ ಸಾಲುಗಳಿಂದ ಕೂಡಿರುವ ಉರಿಯುತ್ತಿರುವ ಆಯುಧಗಳಿಂದ ಕೂಡಿದವಳಾಗಿಯೂ, ಮುಕ್ಕಣ್ಣಳಾಗಿಯೂ, ಚಿನ್ನದ ಬಟ್ಟೆಯುಳ್ಳವಳಾಗಿಯೂ, ಬಾಲಚಂದ್ರನನ್ನೇ ಕಿವಿಯ ಆಭರಣವನ್ನಾಗಿ ಮಾಡಿಕೊಂಡು ಕಾಣಿಸಿಕೊಂಡಳು. ॥೧೦॥

ಇಂತಹ ಸ್ವರೂಪವುಳ್ಳ ದೇವಿಯು ಸಮುದ್ರದಿಂದ ಸೂರ್ಯನು ಹೊರಗೆ ಬರುವಂತೆ, ಹಿಮವಂತನ ಮನೆಯಿಂದ ಹೊರಗೆ ಹೊರಟಳು. ಅನಂತರ ನಾರದನು ಈಕೆಯನ್ನು ನೋಡಿ ನಮಸ್ಕರಿಸಿ ಅನೇಕ ವಿಧವಾದ ಸ್ತೋತ್ರಗಳಿಂದ ಸ್ತುತಿಸಿದನು. ॥೧೧॥

ಅಸ್ತೂಯತ ಪರಾಂ ದೇವೀಂ ಗೌರೀಂ ಶಂಕರವಲ್ಲಭಾಂ ।
ಏತಸ್ಮಿನ್ನಂತರೇ ವಿಷ್ಣು ಪಾರ್ಷದಾಃ ಪರ್ವತೇಶ್ವರಂ ॥೧೨॥

ಬದ್ಧ್ವಾ ತಸ್ಯಾಃತ್ಮಜಾಂ ಗೌರೀಂ ಗೃಹೀತುಂ ತತ್ರ ಚಾಃಗಮನ್ ।
ತಾನ್ ದೃಷ್ಟ್ವಾ ಪಾರ್ವತೀ ಕ್ರುದ್ಧಾ ಪಿತರಂ ಚ ಪರಾಜಿತಂ ॥೧೩॥

ಆಕ್ರಂದತಶ್ಚ ತದ್ಭೃತ್ಯಾ ನೀಷತ್ಕ್ರೋಧಾಃರುಣಾಃಭವತ್ ।
ತದ್ದೇಹಾ ದರುಣಾ ದೇವೀ ನಿರ್ಜಗಾಮ ಭಯಂಕರೀ ॥೧೪॥

ಜ್ವಾಲಾಮುಖೀ ಕಾಲರಾತ್ರಿ ಸ್ತ್ರಿಶೀರ್ಷಾ ಚ ತ್ರಿಲೋಚನಾ ।
ತ್ರಿಶೂಲಂ ಕರವಾಲಂ ಚ ಬಿಭ್ರತೀ ಘೋರರಾವಿಣೀ ॥೧೫॥

ಸಾ ಪ್ರಣಮ್ಯ ಪ್ರಾಹ ಗೌರೀಂ ಕಿಂ ಕರೋಮೀತಿ ಸಮ್ಮುಖೇ ।
ಆಜ್ಞಾಪಯದ್ವಿಷ್ಣುಗಣಾನ್ ಜಹೀತಿ ಗಿರಿಜಾ ತದಾ ॥೧೬॥

---

ಶಂಕರನ ಪ್ರಿಯೆಯಾದ ಶ್ರೇಷ್ಠದೇವಿಯಾದ ಗೌರಿಯನ್ನು ಶ್ರೇಷ್ಠರೀತಿಯಲ್ಲಿ ನಾರದನು ಸ್ತೋತ್ರಮಾಡಿದನು. ಈ ಸಂದರ್ಭದಲ್ಲಿ ವಿಷ್ಣುವಿನ ಪರಿವಾರದವರು ಪರ್ವತರಾಜನಾದ ಹಿಮವಂತನನ್ನು ಕಟ್ಟಿಹಾಕಿದರು. ॥೧೨॥

ಹಿಮವಂತನನ್ನು ಕಟ್ಟಿಹಾಕಿ ಅವನ ಮಗಳಾದ ಪಾರ್ವತಿಯನ್ನು ಹಿಡಿಯಲು ಅಲ್ಲಿಗೂ ಬಂದರು. ಪಾರ್ವತಿಯು ತನ್ನ ತಂದೆಯು ಸೋತಿರುವುದನ್ನೂ, ವಿಷ್ಣುಪರಿವಾರದವರನ್ನೂ ಕೋಪಗೊಂಡವಳಾಗಿ ನೋಡಿದಳು. ॥೧೩॥

ಪಾರ್ವತಿಯು ಗಟ್ಟಿಯಾಗಿ ಕೂಗುತ್ತಿರುವ ತಂದೆಯನ್ನೂ ಪರಿವಾರದವರನ್ನೂ ನೋಡಿ ಸ್ವಲ್ಪ ಕೋಪದಿಂದ ಕೆಂಪೇರಿದಕಣ್ಣುಳ್ಳವಳಾದಳು. ಆಗ ಅವಳ ದೇಹದಿಂದ ಕೆಂಪಗಿರುವ ಭಯಂಕರಿಯಾದ ಅರುಣಾದೇವಿಯು ಹೊರಗೆ ಬಂದಳು. ॥೧೪॥

ಆ ದೇವಿಯು ಜ್ವಾಲೆಯನ್ನೇ ಬಾಯಿಂದ ಕಾರುವವಳೂ ಕಾಲರಾತ್ರಿ ಸ್ವರೂಪಳೂ ಮೂರು ತಲೆಗಳನ್ನು ಹೊಂದಿರುವವಳೂ ಮುಕ್ಕಣ್ಣಳೂ ತ್ರಿಶೂಲವನ್ನೂ ಮತ್ತು ಕತ್ತಿಯನ್ನೂ ಹಿಡಿದಿರುವವಳೂ ಭಯಂಕರವಾಗಿ ಶಬ್ದಮಾಡುತ್ತಿರುವವಳೂ ಆಗಿದ್ದಳು. ॥೧೫॥

ಆ ದೇವಿಯು ಗೌರಿಗೆ ನಮಸ್ಕರಿಸಿ " ನಾನೇನನ್ನು ಮಾಡಬೇಕು ? " ಎಂದು

ತತೋ ವಿಷ್ಣುಗಣಾನ್ವಿಷ್ಣು ಸಮಾಕಾರ ಬಲಾಽಯುಧಾನ್ ।
ಶಲಭಾನ್ ಪಾವಕಇವ ನಾಶಯಾಮಾಸ ಸಾಽರುಣಾ ॥೧೭॥

ಕರವಾಲ ತ್ರಿಶೂಲೋಽದ್ಯದ್ವಹ್ನಿನಾ ಭಸ್ಮತಾಂಗತಾಃ ।
ಅಥ ತದ್ವೃತ್ತಮಾಕರ್ಣ್ಯ ವಿಷ್ಣುರ್ಮನ್ಯುವಶಂ ಗತಃ ॥೧೮॥

ಸುಪರ್ಣ ಮಧಿರುಹ್ಯಾಽಶು ಚಕ್ರಹಸ್ತೋಽಭಿಸಂಯಯೌ ।
ತಾಂ ದದರ್ಶಾಽರುಣಾಂ ದೇವೀಂ ಜ್ವಾಲಾವಕ್ತ್ರಾಂ ಭಯಂಕರೀಂ॥೧೯॥

ಸಹಸ್ರಾರಂ ಪ್ರಚಿಕ್ಷೇಪ ಜ್ವಾಲಾಮಾಲಾ ಪರೀವೃತಂ ।
ಅಥಾಽಯಾಂತಂ ಸಹಸ್ರಾರಂ ಕೋಟಿಸೂರ್ಯಸಮಪ್ರಭಂ ॥೨೦॥

---

ಪ್ರಾರ್ಥಿಸಿದಳು. ನನ್ನ ಎದುರಿಗೆ ವಿಷ್ಣುವಿನ ಕಡೆಯ ಈ ಗುಂಪಿನವರೆಲ್ಲರನ್ನೂ ಕೊಲ್ಲು. ಎಂದು ಪಾರ್ವತಿಯು ಅವಳಿಗೆ ಅಪ್ಪಣೆಯನ್ನು ಮಾಡಿದಳು. ॥೧೬॥

ಅನಂತರ ವಿಷ್ಣುವಿಗೆ ಸಮವಾದ ರೂಪ, ಬಲ ಮತ್ತು ಆಯುಧಗಳನ್ನು ಹೊಂದಿದ್ದ ಆ ವಿಷ್ಣುವಿನ ಕಡೆಯವರನ್ನು ಕೋಪದಿಂದ ಕೆಂಪಾದ ಕಣ್ಣಿನ ಜ್ವಾಲೆಯಿಂದ ಕ್ಷಣಕಾಲದಲ್ಲಿಯೇ ದೇವಿಯು, ಬೆಂಕಿಯು ಪತಂಗದ ಹುಳುಗಳನ್ನು ಹೇಗೋ ಹಾಗೆ, ನಾಶಮಾಡಿದಳು. ॥೧೭॥

ಆ ದೇವಿಯ ಕತ್ತಿ ಮತ್ತು ತ್ರಿಶೂಲಗಳಿಂದ ಹೊರಟ ಬೆಂಕಿಯಿಂದ ವಿಷ್ಣುವಿನ ಕಡೆಯವರೆಲ್ಲರೂ ಬೂದಿಯಾದರು. ಅನಂತರ ಇವರ ಸಮಾಚಾರವನ್ನು ಕೇಳಿ ವಿಷ್ಣುವು ಕೋಪಕ್ಕೊಳಗಾದನು. ॥೧೮॥

ವಿಷ್ಣುವು ಗರುಡನ ಮೇಲೇರಿ ಚಕ್ರಾಯುಧವನ್ನು ಕೈಯ್ಯಲ್ಲಿ ಹಿಡಿದುಕೊಂಡು ಅಲ್ಲಿಗೆ ಬಂದನು. ಅವನು ಜ್ವಾಲೆಯನ್ನು ಬಾಯಲ್ಲಿ ಕಾರುತ್ತಿರುವ ಅತಿಭಯಂಕರವಾದ ಕೆಂಪಗಿರುವ ಆ ದೇವಿಯನ್ನು ನೋಡಿದನು. ॥೧೯॥

ವಿಷ್ಣುವೂ ಜ್ವಾಲೆಗಳ ಸಾಲಿನಿಂದ ಕೂಡಿರುವ ಚಕ್ರಾಯುಧವನ್ನು ಆ ದೇವಿಯ ಮೇಲೆ ಬಿಟ್ಟನು. ಕೋಟಿಸೂರ್ಯರಿಗೆ ಸಮನಾದ ಕಾಂತಿಯುಳ್ಳ ಚಕ್ರವು ದೇವಿಯ ಮೇಲೆ ಬೀಳಲು ಬರುತ್ತಿತ್ತು ! ॥೨೦॥

ಕಲ್ಪಾಂತಾಗ್ನಿರಿವಾಶೇಷಂ ಭಸ್ಮೀಕುರ್ವಾಣಮಂಬರೇ ।
ದೃಷ್ಟ್ವಾ ಶೂಲಂ ಪ್ರಚಿಕ್ಷೇಪ ಸಹಸ್ರಾರಂ ಪ್ರತೀಶ್ವರೀ ॥೨೧॥

ತಚ್ಛೂಲ ಮರುಣಾಹಸ್ತಾನ್ಮುಕ್ತಂ ಖೇ ಕ್ಷಣಮಾತ್ರತಃ ।
ಭಸ್ಮೀಚಕಾರಾಗ್ನಿರಿವ ತೃಣಂ ಚಕ್ರಂ ಸುದರ್ಶನಂ ॥೨೨॥

ಅಥ ಕ್ರುದ್ಧೋ ಹರಿರ್ಭೀಮಾಂ ಗದಾಮಾದಾಯ ವೇಗತಃ ।
ಅಭ್ಯಧಾವತ ತಾಂ ದೇವೀಂ ಗತ್ವಾ ಮೂರ್ಧ್ನ್ಯಭಿತಾಡಯತ್ ॥೨೩॥

ತಾಡಿತಾ ಘೂತ್ಕೃತಿಂ ಚಕ್ರೇ ಜ್ವಾಲಾವಕ್ತ್ರಾ ಹರೇಃ ಪುರಃ ।
ತನ್ಮುಖಜ್ವಾಲಯಾ ದಗ್ಧಃ ಸುಪರ್ಣಃ ಪತಗೇಶ್ವರಃ ॥೨೪॥

ವಿಷ್ಣುಂ ಸಮಾದಾಯ ವಕ್ತ್ರೇ ಚಿಕ್ಷೇಪ ಜ್ವಲಿತೇಽರುಣಾ ।
ವಿಷ್ಣುಂ ಗ್ರಸಂತೀಂ ತಾಂ ದೃಷ್ಟ್ವಾ ಜ್ವಾಲಾವಕ್ತ್ರಾಂ ಸುರಾ ನರಾಃ॥೨೫॥

---

ಕಲ್ಪಕಾಲದ ಕೊನೆಯ ಭಾಗವಾದ ಪ್ರಳಯಕಾಲದ ಅಗ್ನಿಯಂತೆ ಆಕಾಶದಲ್ಲಿ ಸಿಕ್ಕಿದ ಸಮಸ್ತ ಪದಾರ್ಥಗಳನ್ನೂ ಬೂದಿಯಾಗಿ ಮಾಡುತ್ತಾ ಬರುತ್ತಿರುವ ಚಕ್ರಕ್ಕೆ ಪ್ರತಿಯಾಗಿ ತನ್ನ ಶೂಲಾಯುಧವನ್ನು ದೇವಿಯು ಎಸೆದಳು. ||೨೧||

ಅರುಣಾದೇವಿಯ ಕೈಯ್ಯಿಂದ ಬಿಡಲ್ಪಟ್ಟ ಆ ಶೂಲವು ಆಕಾಶದಲ್ಲಿ ಕ್ಷಣಕಾಲ ದಲ್ಲಿಯೇ, ಅಗ್ನಿಯು ಹುಲ್ಲನ್ನು ಹೇಗೋ ಹಾಗೆ, ಸುದರ್ಶನ ಚಕ್ರವನ್ನು ಬೂದಿಯು ನ್ನಾಗಿ ಮಾಡಿತು. ||೨೨||

ಅನಂತರ ಕೋಪಗೊಂಡ ವಿಷ್ಣುವು ಭಯಂಕರವಾದ ಗದೆಯನ್ನು ತೆಗೆದು ಕೊಂಡು ವೇಗವಾಗಿ ಆ ದೇವಿಯನ್ನು ಅಟ್ಟಿಸಿಕೊಂಡು ಹೋಗಿ ಅವಳ ತಲೆಯು ಮೇಲಕ್ಕೆ ಚೆನ್ನಾಗಿ ಹೊಡೆದನು. ||೨೩||

ವಿಷ್ಣುವು ಅರುಣಾದೇವಿಯನ್ನು ಹೀಗೆ ಹೊಡೆಯಲಾಗಿ ಜ್ವಾಲೆಯನ್ನು ಕಾರುತ್ತಿರುವ ಆ ದೇವಿಯು ಬಾಯಿಂದ ಘೂತ್ಕಾರವನ್ನು ಮಾಡಿದಳು. ಆಗ ಅವಳ ಮುಖದಿಂದ ಹೊರಟ ಜ್ವಾಲೆಯಿಂದ ಪಕ್ಷಿರಾಜನಾದ ಗರುಡನು ಸುಡಲ್ಪಟ್ಟನು. ||೨೪||

ಅಲ್ಲದೇ ಅರುಣಾದೇವಿಯು ವಿಷ್ಣುವನ್ನು ಹಿಡಿದುಕೊಂಡು ತನ್ನ ಬಾಯಲ್ಲಿ ಹಾಕಿಕೊಳ್ಳಲು ಹೋದಳು ! ವಿಷ್ಣುವನ್ನು ನುಂಗಲು ಹೊರಟ, ಜ್ವಾಲೆಯೇ ಬಾಯ

ಹಾಹೇತ್ಯುಚ್ಚುಕ್ರುಶುಸ್ತತ್ರ ಯಾವತ್ಸಾ ಶ್ರೀಪತಿಂ ರುಷಾ ।
ದೇವೀ ನಿಗಿರಣೋದ್ಯುಕ್ತಾ ತಾವಜ್ಜ್ವಾಲಾಮುಖೀಂ ದ್ರುತಂ ॥೨೬॥

ಗಲೇ ಜಗ್ರಾಹ ಗೌರೀ ತಾಂ ಪ್ರೋವಾಚೇಷತ್ಸ್ಮಯಾನ್ವಿತಾ ।
ಅಲಂ ವತ್ಸೇ ಸಾಹಸೇನ ಭ್ರಾತರಂ ಮೇ ಸಮುದ್ಗಿರ ॥೨೭॥

ಪಾಲಕಂ ಜಗತೋ ನೋ ಚೇದುತ್ಸೀದೇತ್ರಿ ಜಗದ್ದ್ರುತಂ ।
ತತೋದ್ಗೀರ್ಣಸ್ತಯಾ ವಿಷ್ಣುಃ ಮೂರ್ಛಿತೋಽಪತತ್ಕ್ಷಿತೌ ॥೨೮॥

ಜ್ವಾಲಾರಾಶಿಶ್ಚ ಹರಿಣಾ ಸಹೋದ್ಗೀರ್ಣೋಽರುಣಾಖ್ಯಯಾ ।
ಗೌರೀ ಜ್ವಾಲಾ ಕುಲಾಂತಸ್ಥಂ ಹರಿಂ ನಿಃಸಾರಯದ್ದ್ರುತಂ ॥೨೯॥

---

ಲ್ಲಿರುವ, ಅರುಣಾದೇವಿಯನ್ನು ಕಂಡು ದೇವತೆಗಳೂ ಮತ್ತು ಮನುಷ್ಯರೂ ಹೆದರಿದರು. ॥೨೫॥

ಅಯ್ಯೋ! ಅಯ್ಯೋ! ಎಂದು ಎಲ್ಲರೂ ಗಟ್ಟಿಯಾಗಿ ಕೂಗಿದರು. ಶ್ರೀಪತಿಯಾದ ನಾರಾಯಣನನ್ನು ಅರುಣಾದೇವಿಯು ಕೋಪದಿಂದ ಕೂಡಿ ನುಂಗಿಬಿಡುವಷ್ಟರಲ್ಲೇ ಜ್ವಾಲಾಮುಖಿಯಾದ ಆ ದೇವಿಯನ್ನು ಗೌರಿಯು ಅಡ್ಡಿಮಾಡಿದಳು. ॥೨೬॥

ಅಷ್ಟರಲ್ಲೇ ಗೌರಿಯು ಅರುಣಾದೇವಿಯ ಕತ್ತನ್ನು ಹಿಡಿದುಕೊಂಡು ಸ್ವಲ್ಪ ಮುಗುಳು ನಗೆಯನ್ನು ನಗುತ್ತಾ ಅವಳನ್ನು ಕುರಿತು, ಎಲೈ ಮಗಳೇ, ಇಂತಹ ಸಾಹಸಕಾರ್ಯಕ್ಕೆ ಹೋಗಬೇಡ! ನನ್ನ ಅಣ್ಣನಾದ ವಿಷ್ಣುವನ್ನು ಬಾಯಿಂದ ಹೊರಗೆ ಬಿಡು. ॥೨೭॥

ಲೋಕದ ಪಾಲಕನಾದ ಇವನನ್ನು ಬಿಡು. ಹಾಗಿಲ್ಲದಿದ್ದರೆ ಮೂರುಲೋಕಗಳೂ ಶೀಘ್ರವಾಗಿ ನಾಶವಾದಾವು! ಆಗ ಅರುಣಾದೇವಿಯು ವಿಷ್ಣುವನ್ನು ಬಾಯಿಂದ ಹೊರಗಡೆಗೆ ಬಿಡಲಾಗಿ ಮೂರ್ಛಾಕ್ರಾಂತನಾಗಿ ಅವನು ಭೂಮಿಯ ಮೇಲೆ ಬಿದ್ದನು. ॥೨೮॥

ಅರುಣಾದೇವಿಯ ಉಗುಳಲಾಗಿ ಹೊರಗೆ ಬಂದ ವಿಷ್ಣುವಿನ ಜೊತೆಯಲ್ಲಿ ಜ್ವಾಲೆಯ ರಾಶಿಯೂ ಬಂದಿತು! ಗೌರಿಯು ಜ್ವಾಲಾರಾಶಿಯ ಮಧ್ಯದಲ್ಲಿದ್ದ ವಿಷ್ಣುವನ್ನು ಕೂಡಲೇ ಹೊರಗೆ ಎಳೆದಳು! ॥೨೯॥

ವವೃಧೇ ಚಾಽಥ ಸಾ ಜ್ವಾಲಾ ತಿರ್ಯಗೂರ್ಧ್ವಂ ಚ ಸರ್ವತಃ ।
ತಾಂ ದೃಷ್ಟ್ವಾ ಲೋಕಸಂಹರ್ತ್ರೀಂ ಜ್ವಾಲಾಮತಿಭಯಾಽಽನಕಾಂ ॥೩೦॥

ಬ್ರಹ್ಮೇಶಾದ್ಯಾಃ ಸುರಗಣಾ ಗೌರೀಂ ಭೀತಾಃ ಪ್ರತುಷ್ಟುವುಃ ।
ವೇಪಮಾನಾಂ ಜಗುಸ್ತ್ರಾಹಿ ತ್ರಾಹೀತ್ಯುಚ್ಚೈರ್ಮಹೇಶ್ವರೀಂ ॥೩೧॥

ಸಂಸ್ತುತಾ ಸಾ ಪ್ರಸನ್ನಾನ್ ತಾನ್ ಪ್ರಾಹ ಗಂಭೀರಯಾ ಗಿರಾ ।
ಮಾ ಭಿಭ್ಯತ ಸುರಾ ಯೂಯ ಮಭಯಂ ವಃ ಪ್ರಯಚ್ಛಿತಂ ॥೩೨॥

ಬ್ರುವಂತು ಕೋ ವರೋ ಮತ್ತೋ ಭವದ್ಭಿಃ ಪ್ರಾರ್ಥಿತೋ ದ್ರುತಂ ।
ಇತಿ ಶ್ರುತ್ವಾ ವಿಧಿಮುಖಾ ದೇವಾಃ ಪ್ರೋಚುರ್ನಗಾತ್ಮಜಾಂ ॥೩೩॥

---

ಆ ಜ್ವಾಲೆಯು ಅಡ್ಡಲಾಗಿಯೂ, ಎತ್ತರವಾಗಿಯೂ, ಎಲ್ಲಾ ಕಡೆಯಲ್ಲಿಯೂ ವಿಶೇಷವಾಗಿ ವೃದ್ಧಿಹೊಂದಿತು. ಲೋಕಸಂಹಾರಕವಾದ ಮತ್ತು ಬಹಳ ಭಯಂಕರವಾದ ಆ ಜ್ವಾಲೆಯನ್ನು ನೋಡಿ ಜನರು ದೇವಿಯನ್ನು ಸ್ತೋತ್ರಮಾಡಿದರು. ॥೩೦॥

ಬ್ರಹ್ಮ, ಈಶ್ವರ ಮೊದಲಾದ ದೇವಗಣಗಳೂ ಕೂಡ ಭಯಗೊಂಡವರಾಗಿ ದೇವಿಯಾದ ಗೌರಿಯನ್ನು ಸ್ತೋತ್ರಮಾಡಲಾರಂಭಿಸಿದರು. ಅವರೆಲ್ಲರೂ ನಡುಗುತ್ತಾ ಓ ತಾಯಿಯೇ, ಕಾಪಾಡು, ಕಾಪಾಡು. ಎಂದು ಗಟ್ಟಿಯಾಗಿ ಮಹೇಶ್ವರಿಯನ್ನು ಪ್ರಾರ್ಥಿಸಿದರು. ॥೩೧॥

ಅವರೆಲ್ಲರೂ ಹೀಗೆ ದೇವಿಯನ್ನು ಸ್ತೋತ್ರಮಾಡಲಾಗಿ ಆಕೆಯುಗಂಭೀರವಾದ ಧ್ವನಿಯಿಂದ ಶರಣಾಗತರಾದ ಅವರನ್ನು ಕುರಿತು, ಎಲೈ ದೇವತೆಗಳೇ, ಹೆದರಬೇಡಿರಿ, ನಿಮಗೆ ಅಭಯವನ್ನು ಕೊಟ್ಟಿದ್ದೇನೆ. ಎಂದಳು. ॥೩೨॥

ಎಲೈ ದೇವತೆಗಳೇ, ನೀವು ನನ್ನನ್ನು ಪ್ರಾರ್ಥಿಸುವ ವರವಾವುದು ? ಎಂಬುದನ್ನು ಜಾಗ್ರತೇ ತಿಳಿಸಿ. ಎಂಬುದಾಗಿ ಹೇಳಿದ ದೇವಿಯ ಮಾತನ್ನು ಕೇಳಿ ಬ್ರಹ್ಮನೇ ಮೊದಲಾದ ದೇವತೆಗಳು ಪಾರ್ವತೀದೇವಿಯನ್ನು ಕುರಿತು ಈ ರೀತಿಯಲ್ಲಿ ಪ್ರಾರ್ಥಿಸಿಕೊಂಡರು. ॥೩೩॥

ದೇವಿ ಜ್ವಾಲಾಮಿಮಾಂ ಕಾಲಾನಲಜ್ವಾಲಾ ಸಮಾಂ ದ್ರುತಂ ।
ವಿಧಮಾನಾಂ ಪ್ರಶಮಯ ಲೋಕಾನ್ ರಕ್ಷ ಚರಾಚರಾನ್ ॥೩೪॥

ಪ್ರಾರ್ಥಿತೈವಂ ಸುರಗಣೈಃ ಸಂಜಹಾರ ಕ್ಷಣೇನ ತಾಂ ।
ಪ್ರಾಹ ದೇವಾನ್ ಪ್ರತಿ ಶಿವಾ ದೇವಾಃ ಶೃಣುತ ಮದ್ವಚಃ ॥೩೫॥

ಏಷಾ ಜ್ವಾಲಾಮುಖೀ ದೇವೀ ಮತ್ಕ್ರೋಧಪ್ರಭವಾ ನನು ।
ಜಗದ್ಭಕ್ಷಯಿತುಂ ಸದ್ಯಃ ಪ್ರವೃತ್ತಾ ಸರ್ವಥಾ ಶಮಂ ॥೩೬॥

ನ ಶಕ್ಯಾ ನೇತುಮಧುನಾ ತಿಷ್ಠತ್ವತ್ರ ನಗೋತ್ತಮೇ ।
ಪೂಜಿತಾ ದೇವಮನುಜೈಃ ಪ್ರೀತೇಷ್ಟಾನ್ ಸಂಪ್ರಯಚ್ಛತು ॥೩೭॥

ಕಲ್ಪಾಂತೇ ಸರ್ವಜಗತಾಂ ಭಕ್ಷಣಾತ್ತುಷ್ಟಿಮೇಷ್ಯತಿ ।
ಇಯಂ ರುದ್ರಸ್ಯ ಸಂಹಾರಶಕ್ತಿರಸ್ಯಾಸ್ತು ಯೋಗತಃ ॥೩೮॥

---

ಓ ದೇವಿಯೇ, ಪ್ರಳಯಕಾಲದ ಬೆಂಕಿಗೆ ಸಮನಾದ ಜ್ವಾಲೆಯುಳ್ಳ, ವೃದ್ಧಿಹೊಂದುತ್ತಿರುವ, ಈ ಜ್ವಾಲೆಯನ್ನು ಅಡಗಿಸಿ, ಚರಾಚರಪ್ರಪಂಚವನ್ನು ದಯವಿಟ್ಟು ಸಂರಕ್ಷಿಸು. ॥೩೪॥

ದೇವತೆಗಳು ದೇವಿಯನ್ನು ಈ ರೀತಿಯಲ್ಲಿ ಪ್ರಾರ್ಥಿಸಲಾಗಿ ಆಕೆಯು ಕ್ಷಣಕಾಲದಲ್ಲಿಯೇ ಆ ಜ್ವಾಲೆಯನ್ನು ಅಡಗಿಸಿದಳು! ಅನಂತರ ಶಿವನ ಪತ್ನಿಯಾದ ಗೌರಿಯು ದೇವತೆಗಳನ್ನು ಕುರಿತು, ಎಲೈ ದೇವತೆಗಳೇ, ನನ್ನ ಮಾತನ್ನು ಕೇಳಿ. ಎಂದು ಹೀಗೆ ಹೇಳಿದಳು. ॥೩೫॥

ಈ ಜ್ವಾಲಾಮುಖಿಯಾದ ಅರುಣಾದೇವಿಯು ನನ್ನ ಕೋಪದಿಂದ ಹುಟ್ಟಿದ ಳಾಗಿರುವಳಷ್ಟೇ? ಇವಳು ಜಗತ್ತನ್ನೇ ಭಕ್ಷಿಸಲು ಈಗ ಹೊರಟಿದ್ದಳು. ಆದರೆ ಕೂಡಲೇ ಇವಳು ಸಂಪೂರ್ಣವಾಗಿ ಶಾಂತಿಯನ್ನು ಹೊಂದಲಾರಳು. ॥೩೬॥

ಆದ್ದರಿಂದ ಇವಳನ್ನು ಸಂಪೂರ್ಣವಾಗಿ ಶಾಂತಿಮಾಡಲು ಸಾಧ್ಯವಿಲ್ಲ. ಈ ದೇವಿಯು ಈ ಪರ್ವತಶ್ರೇಷ್ಠದಲ್ಲಿಯೇ ಇದ್ದು ದೇವತೆಗಳು ಮನುಷ್ಯರು ಮುಂತಾದವರಿಂದ ಪೂಜೆಯನ್ನು ಕೈಗೊಳ್ಳುತ್ತಾ ಸಂತೋಷಪಟ್ಟು ಅವರ ಇಷ್ಟಾರ್ಥಗಳೆಲ್ಲವನ್ನೂ ನೀಡುತ್ತಿರಲಿ! ॥೩೭॥

ಶಿವಃ ಸರ್ವಸ್ಯ ಲೋಕಸ್ಯ ಸಂಹಾರಂ ರಚಯೇತ್ಪರಂ ।
ಇತ್ಯುಕ್ತ್ವಾಽಮೃತವರ್ಷಿಣ್ಯಾ ದೃಷ್ಟ್ಯಾ ವಿಷ್ಣ್ವಾದಿಕಾನ್ ಸುರಾನ್॥೩೯॥

ಗಣಾನಪಿ ಮೃತಾನ್ ವಿಷ್ಣೋರ್ಜೀವಯಾಮಾಸ ಚಾಂಬಿಕಾ ।
ವಿಷ್ಣ್ವಾದಿಭಿಃ ಸ್ತುತಾ ಪಶ್ಚಾತ್ಕನ್ಯಾರೂಪಂ ಸಮಾಸ್ಥಿತಾ ॥೪೦॥

ಪಿತರಂ ಮೋಚಯಾಮಾಸ ಪಾರ್ಷದೈಃ ಬಂಧನಂ ಗತಂ ।
ದೃಷ್ಟ್ವಾಽಪಿ ಗೌರ್ಯಾಸ್ತದ್ರೂಪಂ ಮಹಿಮಾನಮವೇತ್ಯ ಚ ॥೪೧॥

ಮಾಯಯಾ ಮೋಹಿತೋ ಗೌರ್ಯಾಃ ವಿಸ್ಮೃತಸ್ತತ್ಕ್ಷಣೇನ ಹಿ ।
ಮುಕ್ತಂ ಕಥಂಚಿದಾತ್ಮಾನಂ ಮತ್ವಾ ಸ್ವಾಮಾತ್ಮಜಾಂ ಪ್ರತಂ ॥೪೨॥

---

ಪ್ರಳಯಕಾಲದಲ್ಲಿ ಇವಳು ಎಲ್ಲಾ ಲೋಕಗಳನ್ನೂ ನುಂಗಿ ತೃಪ್ತಳಾಗುವಳು. ಇವಳು ರುದ್ರನ ಸಂಹಾರಶಕ್ತಿಯೇ ಆಗಿದ್ದಾಳೆ. ಇವಳ ಸಂಬಂಧದಿಂದಲೇ ಶಿವನು ಲೋಕಗಳ ಉಪಸಂಹಾರಕಾರ್ಯವನ್ನು ನಡೆಸುತ್ತಿರುವನು. ||೩೮||

ಈ ಅರುಣಾದೇವಿಯ ಸಂಬಂಧದಿಂದಲೇ ಶಿವನು ಎಲ್ಲಾ ಲೋಕದ ಸಂಹಾರ ಕಾರ್ಯವನ್ನೂ ಚೆನ್ನಾಗಿ ನೆರವೇರಿಸುವನು. ಎಂಬುದಾಗಿ ಹೇಳಿ ಅಂಬಿಕೆಯಾದ ಗೌರಿಯು ಅಮೃತವನ್ನು ಸುರಿಸುವ ನೋಟದಿಂದ ನೋಡಿ, ವಿಷ್ಣುವೇ ಮೊದಲಾದ ದೇವತೆಗಳನ್ನು ಬದುಕಿಸಿ ಹೇಳಿದಳು. ||೩೯||

ಶ್ರೇಷ್ಠಳಾದ ಅಂಬಿಕೆಯಾದ ಗೌರಿಯು ಈ ರೀತಿಯಾಗಿ ಮೃತರಾಗಿದ್ದ ವಿಷ್ಣುವಿನ ಗಣಗಳನ್ನೂ ಬದುಕಿಸಿದಳು. ಅನಂತರ ವಿಷ್ಣುವೇ ಮೊದಲಾದವರಿಂದ ಸ್ತೋತ್ರಮಾಡಲ್ಪಟ್ಟವಳಾಗಿ ಪುನಃ ಕನ್ಯೆಯ ಸ್ವರೂಪವನ್ನೇ ಧರಿಸಿದಳು. ||೪೦||

ಅಲ್ಲದೇ ವಿಷ್ಣುವಿನ ಪರಿವಾರದವರಿಂದ ಕಟ್ಟಿಹಾಕಲ್ಪಟ್ಟಿದ್ದ ತನ್ನ ತಂದೆ ಯಾದ ಹಿಮವಂತನನ್ನೂ ಬಿಡಿಸಿದಳು. ಹಿಮವಂತನು ಗೌರಿಯ ಆ ದೇವೀಸ್ವರೂಪವನ್ನೂ ಮತ್ತು ಆಕೆಯ ಮಹಿಮೆಯನ್ನೂ ನೋಡಿ ತಿಳಿದನು. ||೪೧||

ಆದರೆ ಹಿಮವಂತನು ತತ್ಕ್ಷಣದಲ್ಲಿಯೇ ಅಜ್ಞಾನವಶನಾಗಿ ಗೌರಿಯ ನಿಜವಾದ ದೇವೀಸ್ವರೂಪವನ್ನು ಮರೆತು, ತಾನು ಕಷ್ಟದಿಂದ ಬಿಡುಗಡೆಮಾಡಲ್ಪಟ್ಟವನೆಂದು ಭಾವಿಸಿ, ತನ್ನ ಮಗಳಾದ ಪಾರ್ವತಿಯನ್ನು ಆಲಿಂಗಿಸಿದನು. ||೪೨||

ಪರಿಷ್ವಜ್ಯ ಸಮಾಘ್ರಾಯ ಪ್ರಣಮ್ಯ ವಿಬುಧೇಶ್ವರಾನ್ ।
ಪ್ರಾಹ ಬದ್ಧಾಂಜಲಿರ್ದೀನೋ ವಿಷ್ಣುಂ ತಂ ತ್ರಿಜಗತ್ಪತಿಂ ॥೪೩॥

ರಮಾಪತೇ ಮೇಽಪಚಿತಿಂ ಕ್ಷಮಸ್ವ ಪ್ರಾರ್ಥಿತೋ ಮಯಾ ।
ಅಹಂ ತುಭ್ಯಂ ದದಾಮ್ಯೇವ ತನುಜಾಂ ನಾಽತ್ರಸಂಶಯಃ ॥೪೪॥

ಸಾ ಸರ್ವಥಾ ಪತಿಂ ಭರ್ಗಂ ವವ್ರೇ ತಸ್ಮಾನ್ಮೃಷೋದಿತಂ ।
ಮಮಾಽಭೂದತ ಏತನ್ಮೇ ಸರ್ವಥಾ ಕ್ಷಂತು ಮರ್ಹಸಿ ॥೪೫॥

ಏಷ ತೇ ತನುಜೋ ಬ್ರಹ್ಮಾ ದೇವಾಶ್ಚೇಮೇ ಸುಸಂಗತಾಃ ।
ಯದತ್ರ ಯುಜ್ಯತೇ ತನ್ಮಾಂ ಶಾಧಿ ತೇ ಶರಣಾಗತಂ ॥೪೬॥

ಶ್ರುತ್ವೈವಂ ಪರ್ವತವಚೋ ವಿಧಿಃ ಪ್ರೋವಾಚ ಸಸ್ಮಯಃ ।
ಧನ್ಯಸ್ತ್ವಂ ಪರ್ವತೇಶೋಽಸಿ ಯತ್ತೇ ಕನ್ಯೇಯಮೀದೃಶೀ ॥೪೭॥

---

ಹಿಮವಂತನು ತನ್ನ ಮಗಳನ್ನು ಆಲಿಂಗಿಸಿ ಅವಳ ತಲೆಯನ್ನು ಮೂಸಿ ದೇವತೆಗಳ ಅಧಿಪತಿಗಳಿಗೂ ನಮಸ್ಕರಿಸಿ, ಮೂರು ಲೋಕಗಳಿಗೂ ಒಡೆಯನಾದ ವಿಷ್ಣುವನ್ನು ಕುರಿತು, ಕೈಜೋಡಿಸಿ ದೀನನಾಗಿ ಈ ರೀತಿಯಲ್ಲಿ ಹೇಳಿದನು. ॥೪೩॥

ಓ ಲಕ್ಷ್ಮೀಪತಿಯಾದ ನಾರಾಯಣನೇ, ನನ್ನ ಪ್ರಾರ್ಥನೆಯನ್ನು ಸ್ವೀಕರಿಸಿ ನನ್ನ ಅಪರಾಧವನ್ನು ಮನ್ನಿಸು. ನಾನು ನನ್ನ ಮಗಳನ್ನು ನಿನಗೆ ಮದುವೆ ಮಾಡಿಕೊಡುವೆನೆಂದ ವಿಷಯದಲ್ಲಿ ಸಂಶಯವಿಲ್ಲ. ॥೪೪॥

ನನ್ನ ಮಗಳಾದ ಪಾರ್ವತಿಯು ಸರ್ವಪ್ರಕಾರದಲ್ಲೂ ಶಿವನನ್ನೇ ಮದುವೆ ಯಾಗುವೆನೆಂದಳು. ಆದ್ದರಿಂದ ನಾನು ಹೇಳಿದ್ದು ಸುಳ್ಳಾಯಿತು! ಆದರೆ ಇವೆಲ್ಲ ವನ್ನೂ ಎಲ್ಲಾ ವಿಧದಲ್ಲೂ ನೀನು ದಯವಿಟ್ಟು ಕ್ಷಮಿಸಬೇಕು. ॥೪೫॥

ನಿನ್ನ ಮಗನಾದ ಬ್ರಹ್ಮನೂ, ಇತರ ದೇವತೆಗಳೂ, ಇಲ್ಲಿ ನೆರೆದಿದ್ದಾರೆ. ಶರಣಾಗತನಾಗಿ ಬಂದಿರುವ ನನ್ನನ್ನು ನೀನು ದಯವಿಟ್ಟು ರಕ್ಷಿಸಬೇಕೆಂದೂ, ಈಗ ನಾನು ಹೇಗೆ ಮಾಡಬೇಕೆಂಬುದನ್ನು ಅಪ್ಪಣೆಮಾಡಬೇಕೆಂದೂ ಬೇಡುತ್ತೇನೆ. ॥೪೬॥

ಹಿಮವಂತನ ಈ ಮಾತನ್ನು ಕೇಳಿ ಬ್ರಹ್ಮನು ಮುಗುಳುನಗೆ ನಗುತ್ತಾ, ಎಲೈ ಪರ್ವತರಾಜನೇ, ನೀನು ಧನ್ಯನಾಗಿದ್ದೀಯೆ. ಏಕೆಂದರೆ, ನಿನಗೆ ಇಂತಹ ಗುಣಗಳಿಂದ ಪೂರ್ಣಳಾಗಿರುವ ಮಗಳು ಹುಟ್ಟಿದ್ದಾಳೆ! ॥೪೭॥.

ಭರ್ತಾರಂ ಶಿವಮೇವಾತ್ರ ಸಮರ್ಹತಿ ಮಹೇಶ್ವರಂ ।
ಸೋಽಪ್ಯೇನಾ ಮರ್ಹತಿ ಶಿವಃ ಪತ್ನೀಂ ಸರ್ವಗುಣಾಶ್ರಯಾಂ ॥೪೮॥

ಕಥಂ ವಿಷ್ಣುರ್ಭವೇದ್ಭರ್ತಾ ತಸ್ಯಾ ಭ್ರಾತೇವ ಸಂಸ್ಥಿತಃ ।
ಯೋಜಯಾಮಿ ಶಿವಂ ಸದ್ಯಃ ಪತಿತ್ವೇಽಸ್ಯಾ ನಗೋತ್ತಮ ॥೪೯॥

ಇತ್ಯುಕ್ತ್ವಾ ಸಮುಭಿವ್ರಜ್ಯ ಶಿವಂ ಪ್ರಾಹ ವಿಧಿಸ್ತದಾ ।
ಸ್ತುತ್ವಾ ಪ್ರಣಮ್ಯ ದೇವೇಶಂ ಶಂಕರಂ ಲೋಕಶಂಕರಂ ॥೫೦॥

ಮಹಾದೇವಂ ಪ್ರಾರ್ಥಯಾಮೋ ವಯಂ ಪರ್ವತನಂದಿನೀಂ ।
ಪ್ರತೀಚ್ಛ ಭಾರ್ಯಾಮಾತ್ಮೀಯಾಂ ಕಾಲೇಽಸ್ಮಿನ್ನೇವ ಶೋಭನೇ ॥೫೧॥

ನೈತದ್ವಚೋ ನಿಷೇಧಾರ್ಹಂ ಪೂರ್ವವೃತ್ತಂ ಚ ಸಂಸ್ಮರ ।
ಇತಿ ಪ್ರೋಕ್ತೋ ಜಗದ್ಧಾತ್ರಾ ಓಮಿತ್ಯೇವಾಹ ವೈ ಶಿವಃ ॥೫೨॥

---

ಇಂಥಾ ನಿನ್ನ ಮಗಳಾದ ಪಾರ್ವತಿಯು ಮಹೇಶ್ವರನಾದ ಶಿವನನ್ನೇ ಮದುವೆಯಾಗಲು ಯೋಗ್ಯಳು. ಶಿವನೂ ಕೂಡ ಎಲ್ಲಾ ಗುಣಗಳಿಗೂ ಆಶ್ರಯ ಳಾಗಿರುವ ಇವಳನ್ನೇ ಪತ್ನಿಯನ್ನಾಗಿ ಪಡೆಯಲು ಯೋಗ್ಯನು. ॥೪೮॥

ಎಲೈ ಪರ್ವತಶ್ರೇಷ್ಠನೇ, ಇವಳ ಅಣ್ಣನಂತಿರುವ ವಿಷ್ಣುವು ಇವಳ ಪತಿಯು ಹೇಗಾದಾನು ? ಆದ್ದರಿಂದ ಈಗಲೇ ಶಿವನು ಇವಳ ಪತಿಯಾಗುವಂತೆ ಮಾಡುವೆನು. ॥೪೯॥

ಈರೀತಿಯಲ್ಲಿ ಹೇಳಿ ಬ್ರಹ್ಮನು ಕೂಡಲೇ ಹೊರಟು ಲೋಕಕ್ಕೆ ಸುಖವ ನ್ನುಂಟುಮಾಡುವ ದೇವೇಶನಾದ ಶಿವನನ್ನು ಪಡೆದು, ಸ್ತೋತ್ರಮಾಡಿ ನಮಸ್ಕರಿಸಿ ಅವನನ್ನು ಕುರಿತು ಹೀಗೆ ಬಿನ್ನೈಸಿದನು. ॥೫೦॥

ಬ್ರಹ್ಮನು ಮಹಾದೇವನಾದ ಶಿವನನ್ನು ಕುರಿತು, ಪರ್ವತರಾಜನಾದ ಹಿಮವಂತನಮಗಳಾದ ಪಾರ್ವತಿಯನ್ನು ನಿನ್ನ ಪತ್ನಿಯನ್ನಾಗಿ ಈ ಮಂಗಳ ಕಾಲದಲ್ಲಿಯೇ ಸ್ವೀಕರಿಸಬೇಕೆಂದು ನಾವೆಲ್ಲರೂ ಪ್ರಾರ್ಥಿಸುವೆವು. ಎಂದನು. ॥೫೧॥

ಓ ಶಿವನೇ, ಈ ನನ್ನ ಪ್ರಾರ್ಥನೆಯು ನಿಷೇಧಕ್ಕೆ ಯೋಗ್ಯವಾದುದಲ್ಲ. ಏಕೆಂದರೆ ಈ ವಿಷಯದಲ್ಲಿ ತಮ್ಮ ಹಿಂದಿನ ವೃತ್ತಾಂತವನ್ನು ಸ್ಮರಿಸಿಕೊಂಡರೆ

ಅಥ ಪರ್ವತರಾಜನ್ಯಂ ಪ್ರಾಹ ಬ್ರಹ್ಮಾ ಚತುರ್ಮುಖಃ ।
ಸಾಧಿತಸ್ತೇ ಮಹೇಶಾನಃ ಕನ್ಯಾ ಪಾಣಿಗ್ರಹಾಯ ವೈ ॥೫೩॥

ಅಸ್ಮಿನ್ನೇವ ಶುಭೇ ಕಾಲೇ ಕನ್ಯಾಂ ದಾತುಂ ತ್ವಮರ್ಹಸಿ ।
ವಾಕ್ಯಂ ವಿಧೇಃ ಸಮಾಕರ್ಣ್ಯ ಚೈತತ್ಪ್ರಾಹ ನಗೇಶ್ವರಃ ॥೫೪॥

ಬ್ರಹ್ಮನ್ನಸಾಧಿತಂ ಕಿಂಚಿದ್ವೈವಾಹಿಕ ಮನುತ್ತಮಂ ।
ಅಸಂಭೃತ್ಯ ಚ ಸಂಭಾರಾನ್ ಅನಿಮಂತ್ರ್ಯ ಕುಲೇಶ್ವರಾನ್ ॥೫೫॥

ಕಥಂ ವಿವಾಹ ಆರಭ್ಯೋ ನ ಕಿಂಚಿತ್ಪ್ರತಿಭಾತಿ ಮೇ ।
ಸಮಾಕರ್ಣ್ಯ ನಗೋಕ್ತಂ ತ ದ್ವಿಧಿಸ್ತ್ವಷ್ಟಾರಮಾಹ್ವಯತ್ ॥೫೬॥

ಆಹೂಯಾಽಽಜ್ಞಾಪಯತ್ತತ್ರ ತಂ ಸಾಮಗ್ರೀ ಪ್ರಸಾಧನೇ ।
ಆಜ್ಞಪ್ತೋ ವಿಧಿನಾ ತ್ವಷ್ಟಾ ಸಸೃಜೇಽರ್ಧಮುಹೂರ್ತತಃ ॥೫೭॥

ತಮಗೂ ಇದು ಸರಿಯೆನ್ನಿಸುವುದು ಎಂದು ಬ್ರಹ್ಮನು ಹೇಳಲಾಗಿ, ಶಿವನು ಹಾಗೆಯೇ ಆಗಲೆಂದು ಒಪ್ಪಿದನು. ॥೫೨॥

ಅನಂತರದಲ್ಲಿ ಚತುರ್ಮುಖನಾದ ಬ್ರಹ್ಮನು ಹಿಮವಂತನನ್ನು ಕುರಿತು ಎಲೈ ಪರ್ವತರಾಜನೇ, ನಿನ್ನ ಇಷ್ಟವನ್ನು ಸಾಧಿಸಿದ್ದೇನೆ. ಶಿವನು ನಿನ್ನ ಮಗಳಾದ ಪಾರ್ವತಿಯನ್ನು ಮದುವೆಯಾಗಲು ಒಪ್ಪಿದ್ದಾನೆ! ಎಂದನು. ॥೫೩॥

ಈ ಮಂಗಳಕಾಲದಲ್ಲಿಯೇ ನೀನು ನಿನ್ನ ಮಗಳನ್ನು ಶಿವನಿಗೆ ಕೊಟ್ಟು ಮದುವೆ ಮಾಡಲು ಯೋಗ್ಯನಾಗಿರುತ್ತೀಯೆ! ಎಂದ ಬ್ರಹ್ಮನ ಮಾತನ್ನು ಕೇಳಿ ಪರ್ವತರಾಜನು ಅವನನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೫೪॥

ಓ ಬ್ರಹ್ಮನೇ, ಶ್ರೇಷ್ಠವಾದ ವಿವಾಹಕ್ಕೆ ಬೇಕಾದ ಸಾಮಗ್ರಿಗಳನ್ನೇ ಶೇಖರಿಸಿಲ್ಲವಲ್ಲಾ! ಸಾಮಗ್ರಿಗಳನ್ನು ಸಿದ್ಧಗೊಳಿಸದೇ, ನಮ್ಮ ವಂಶದ ಮುಖ್ಯರಾದವರನ್ನು ಕರೆಯದೇ, ವಿವಾಹವನ್ನು ಪ್ರಾರಂಭಿಸುವುದು ಹೇಗೆ? ನನಗೊಂದೂ ಹೊಳೆಯುತ್ತಿಲ್ಲ! ಎಂಬುದಾಗಿ ಹಿಮವಂತನು ಹೇಳಿದ ಮಾತುಗಳನ್ನು ಕೇಳಿ ಕೂಡಲೇ ಬ್ರಹ್ಮನು ದೇವಶಿಲ್ಪಿಯನ್ನು ಅಲ್ಲಿಗೆ ಕರೆಯಿಸಿದನು. ॥೫೫-೫೬॥

ಬ್ರಹ್ಮನು ದೇವಶಿಲ್ಪಿಯನ್ನು ಕರೆದು ವಿವಾಹಕಾರ್ಯಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಸಿದ್ಧಪಡಿಸಲು ಅಪ್ಪಣೆಮಾಡಿದನು. ಬ್ರಹ್ಮನ ಅಪ್ಪಣೆಯ ಮೇರೆಗೆ ದೇವ

ವಿವಾಹಶಾಲಾಂ ವೇದೀಶ್ಚ ಪಾತ್ರಾಣ್ಯಗ್ನೀಂಶ್ಚ ಸರ್ವತಃ ।
ವಸ್ತ್ರಭೂಷಣಮಾಲ್ಯಾನಿ ಪ್ರಸ್ತರಾಸ್ತರಣಾನಿ ಚ ॥೫೮॥

ಅನ್ನಪಾನಾದಿಕಂ ಸರ್ವಮಹೀನಂ ಸಮಕಲ್ಪಯತ್ ।
ಪ್ರಾಹ ಸಿದ್ಧಂ ಸರ್ವಮಿತಿ ದೇವಶಿಲ್ಪೀರ್ವಿಧಿಂ ತದಾ ॥೫೯॥

ದೃಷ್ಟ್ವಾ ತದ್ದರ್ಶಯಾಮಾಸ ನಗರಾಜಾಯ ವಿಶ್ವಸೃಟ್ ।
ನಿಶ(ಶಾ)ಮ್ಯ ಹೃಷ್ಟೋ ಹಿಮವಾನ್ ಪ್ರಣನಾಮ ಪಿತಾಮಹಂ ॥೬೦॥

ಅಬ್ರವೀದ್ದೇವದೂತಾಂಶ್ಚ ವಿಮಾನೈಃ ಸಹಿತಾನ್ ದ್ರುತಂ ।
ಭೂಸುರಾನ್ ಭೂಪತೀನನ್ಯಾನ್ನಗವಂಶ್ಯಾನ್ ವಿಶೇಷತಃ ॥೬೧॥

ಸಮಾನಯಂತ್ವಿತಿ ತದಾ ದೇವದೂತಾಃ ಸಹಸ್ರಶಃ ।
ಆದಾಯ ಸರ್ವಾನಾಜಗ್ಮುಃ ಮುಹೂರ್ತಾರ್ಧೇನ ತೇ ದ್ರುತಂ॥೬೨॥

---

ಶಿಲ್ಪಿಯು ಒಂದರ್ಧಮುಹೂರ್ತದಲ್ಲಿಯೇ ವಿವಾಹಮಂದಿರ ಜಗಲಿಗಳು ಪಾತ್ರೆಗಳು ಎಲ್ಲಾ ಕಡೆಯಲ್ಲಿಯೂ ಅಗ್ನಿಗಳು ವಸ್ತ್ರಗಳೂ ಆಭರಣಗಳು ಹೂವು ಹಾರಗಳು ಕಲ್ಲಿನ ಆಸನಗಳು ಇವೆಲ್ಲವನ್ನೂ ಸಿದ್ಧಗೊಳಿಸಿದನು. ||೫೭-೫೮||

ದೇವಶಿಲ್ಪಿಯು ಅನ್ನಪಾನ ಮೊದಲಾದುವುಗಳಿಂದ ತುಂಬಿದ ಮನೆಗಳನ್ನು ಸಿದ್ಧಗೊಳಿಸಿದನು. ಆಗ ಅವನು ಬ್ರಹ್ಮನಿಗೆ ಎಲ್ಲವೂ ಸಿದ್ಧವಾಗಿವೆ! ಎಂದು ವಿಜ್ಞಾಪನೆಮಾಡಿದನು. ||೫೯||

ಬ್ರಹ್ಮನು ನೋಡಿ ಹಿಮವಂತನಿಗೂ ಅವೆಲ್ಲವನ್ನೂ ತೋರಿಸಿದನು. ಹಿಮವಂತನು ಈ ಸಮಾಚಾರವನ್ನು ಕೇಳಿ ನೋಡಿ ಅತ್ಯಂತ ಸಂತೋಷಗೊಂಡು ಬ್ರಹ್ಮನಿಗೆ ನಮಸ್ಕಾರಮಾಡಿದನು. ||೬೦||

ಬ್ರಹ್ಮನು ದೇವದೂತರಿಗೆ ನೀವು ಕೂಡಲೇ ವಿಮಾನಗಳಲ್ಲಿ ಹೋಗಿ ಬ್ರಾಹ್ಮಣರು ವಿಶೇಷವಾಗಿ ಇತರ ಪರ್ವತರಾಜನ ವಂಶೀಯರು, ಇವರುಗಳನ್ನು ಕರೆದುಕೊಂಡು ಬನ್ನಿ. ಎಂದು ಹೇಳಲು, ಅವರು ಕೂಡಲೇ ಸಾವಿರಗಟ್ಟಲೆ ಬ್ರಾಹ್ಮಣರೇ ಮೊದಲಾದ ಎಲ್ಲರನ್ನು ಒಂದು ಅರ್ಧಮುಹೂರ್ತದಲ್ಲಿಯೇ ಕರೆದುಕೊಂಡು ಬಂದರು! ||೬೧-೬೨||

ದೃಷ್ಟ್ವಾ ಸಮಾಗತಾನ್ ಸರ್ವಾನ್ ಪರ್ವತಂ ಪ್ರಾಹ ವಿಶ್ವಸೃಟ್ ।
ನಗೇಶ್ವರಾಽಽಗತಾಃ ಸರ್ವೇ ಸಾಧಿತಂ ಸರ್ವಸಾಧನಂ ॥೬೩॥

ಸಜ್ಜೀಭವ ವಿವಾಹಾಯ ತನುಜಾಂ ಚ ಸಮಾನಯ ।
ಆಜ್ಞಪ್ತಏವಂ ಶೈಲೇಶೋ ಗತ್ವಾ ಸ್ವಭವನಂ ದ್ರುತಂ ॥೬೪॥

ಕನ್ಯಾಯಾ ಮಂಗಲಸ್ನಾನಂ ಕಾರಯಿತ್ವಾ ಯಥಾವಿಧಿ ।
ಕಾಶ್ಯಪೇನ ಸ್ವಗುರುಣಾ ಸರ್ವಂ ವೈವಾಹಿಕಂ ವಿಧಿಂ ॥೬೫॥

ಕೃತ್ವಾ ಕನ್ಯಾಂ ಸಮಾದಾಯ ಪ್ರಿಯಯಾ ಸಹಿತೋ ನಗಃ ।
ಜ್ಞಾತಿಭಿರ್ಜ್ಞಾತಿ ಪತ್ನೀಭಿಃ ಸಂವೃತೋ ನಿರ್ಯಯೌ ಗೃಹಾತ್॥೬೬॥

ವಿವಾಹಶಾಲಾ ಮಾವಿಶ್ಯ ತಸ್ಥೌ ಸ ಸಪರಿಚ್ಛದಃ ।
ಅಥ ಬ್ರಹ್ಮಾ ಶಿವಂ ತತ್ರ ವಿವಾಹವಿಧಿನಾ ತದಾ ॥೬೭॥

---

ಇವರೆಲ್ಲರೂ ಬಂದದ್ದನ್ನು ಕಂಡು ಬ್ರಹ್ಮನು ಹಿಮವಂತನನ್ನು ಕುರಿತು ಎಲೈ ಪರ್ವತರಾಜನೇ, ಎಲ್ಲರೂ ಬಂದಿರುತ್ತಾರೆ. ವಿವಾಹಕ್ಕೆ ಬೇಕಾದ ಸಾಮಗ್ರಿಯೂ ಸಿದ್ಧವಾಯಿತು. ಎಂದನು. ॥೬೩॥

ಪಾರ್ವತಿಯ ವಿವಾಹವನ್ನು ನೆರವೇರಿಸಲು ಸಿದ್ಧನಾಗು. ನಿನ್ನ ಮಗಳನ್ನೂ ಕರೆಯಿಸು. ಎಂದು ಬ್ರಹ್ಮನು ಅಪ್ಪಣೆಮಾಡಲಾಗಿ ಪರ್ವತರಾಜನಾದ ಹಿಮವಂತನು ತನ್ನ ಮನೆಗೆ ಶೀಘ್ರವಾಗಿ ಹೋದನು. ॥೬೪॥

ಹಿಮವಂತನು ತನ್ನ ಮಗಳಿಗೆ ಶಾಸ್ತ್ರೋಕ್ತಕ್ರಮದಲ್ಲಿ ಮಂಗಳಸ್ನಾನವನ್ನು ಮಾಡಿಸಿ, ತಮ್ಮ ಗುರುಗಳಾದ ಕಾಶ್ಯಪರಿಂದ ವಿವಾಹಕಾರ್ಯಕ್ಕೆ ಸಂಬಂಧಪಟ್ಟ ಎಲ್ಲಾ ಉಪಕರಣಗಳನ್ನೂ ಅಣಿಮಾಡಿದನು. ॥೬೫॥

ಹೀಗೆ ಎಲ್ಲವನ್ನೂ ಸಿದ್ಧಮಾಡಿ ಹಿಮವಂತನು ತನ್ನ ಪತ್ನಿಯೊಡನೆ ಪಾರ್ವತಿಯನ್ನು ಕರೆದುಕೊಂಡು ದಾಯಾದಿಗಳೂ ಮತ್ತು ಅವರ ಪತ್ನಿಯರಿಂದಲೂ ಸುತ್ತುವರಿಯಲ್ಪಟ್ಟು ಮನೆಯಿಂದ ಹೊರಟನು. ॥೬೬॥

ಹಿಮವಂತನು ವಿವಾಹಮಂದಿರವನ್ನು ಪ್ರವೇಶಿಸಿ ತನ್ನ ಪರಿವಾರದವರೊಡನೆ ಸಿದ್ಧನಾಗಿದ್ದನು. ಅನಂತರ ಬ್ರಹ್ಮನು ಶಿವನನ್ನು ಶಾಸ್ತ್ರೋಕ್ತವಾದ ಕ್ರಮದಲ್ಲಿ ವಿವಾಹಮಂದಿರಕ್ಕೆ ಪ್ರವೇಶಮಾಡಿಸಿದನು. ॥೬೭॥

ಯೋಜಯಾಮಾಸ ತತ್ಪಶ್ಚಾತ್ಸ್ವಗಣೈಃ ಪರಿವಾರಿತಃ।
ವಿವೇಶ ಶಾಲಾಂ ಭೂತೇಶಃ ಸರ್ವಮಂಗಳ ಸಂಯುತಾಂ ॥೧೮॥

ತಂ ದದರ್ಶಮಹಾದೇವಂ ವಿಕಟಂ ಜಟಿಲಂ ಕೃಶಂ।
ವ್ಯಾಘ್ರಚರ್ಮಾಂಶುಕಧರಂ ನಾಗಚರ್ಮೋತ್ತರೀಯಕಂ ॥೧೯॥

ಕಪಾಲಮಾಲಾ ವಿಲಸದ್ಗಲಂ ಪನ್ನಗಕುಂಡಲಂ।
ಕಾಲಸರ್ಪೋಪವೀತಂ ಚ ವಿರೂಪಾಕ್ಷಂ ತ್ರಿಲೋಚನಂ ॥೨೦॥

ಭೂತಸಂಘೈರ್ವಿರೂಪಾಸ್ಯೈಃ ಉನ್ಮತ್ತಾಚಾರಸಂಕುಲೈಃ।
ಶ್ಮಶಾನನಿಲಯೈಃ ಘೋರೈಃ ಗಣೈಶ್ಚ ಪರಿತೋ ವೃತಂ ॥೨೧॥

---

ಭೂತಗಳಿಗೆ ಅಧಿಪತಿಯಾದ ಶಿವನು ತನ್ನ ಗಣಗಳಿಂದ ಸುತ್ತುವರಿಯಲ್ಪಟ್ಟವನಾಗಿ ಎಲ್ಲಾ ವಿಧವಾದ ಮಂಗಳದ್ರವ್ಯಗಳಿಂದಲೂ ಕೂಡಿರುವ ವಿವಾಹಮಂದಿರವನ್ನು ಪ್ರವೇಶಿಸಿದನು. ॥೧೮॥

ಹಿಮವಂತನು ವಿಚಿತ್ರವಾದ ಆಕಾರವುಳ್ಳ ಜಟೆಗಳನ್ನು ಧರಿಸಿರುವ ತೆಳ್ಳಗಿರುವ ಹುಲಿಯಚರ್ಮವನ್ನೇ ಬಟ್ಟೆಯನ್ನಾಗಿ ಧರಿಸಿರುವ, ಆನೆಯ ಚರ್ಮವನ್ನೇ ಹೊದ್ದಿರುವ ಶಿವನನ್ನು ನೋಡಿದನು. ॥೧೯॥

ಅವನು ರುಂಡಗಳ ಮಾಲಿಕೆಯಿಂದ ಪ್ರಕಾಶಮಾನವಾದ ಕತ್ತುಳ್ಳ, ಸರ್ಪವನ್ನೇ ಕಿವಿಗೆ ಆಭರಣವನ್ನಾಗಿ ಮಾಡಿಕೊಂಡಿರುವ, ಕಾಲಸರ್ಪವನ್ನೇ ಯಜ್ಞೋಪವೀತವನ್ನಾಗಿ ಧರಿಸಿಕೊಂಡಿರುವ ಕುರೂಪವಾದ ಬೆಸನಾದ ಕಣ್ಣುಳ್ಳ ಮುಕ್ಕಣ್ಣನಾದ ಶಿವನನ್ನು ನೋಡಿದನು. ॥೨೦॥

ಅವನು ಕುರೂಪವಾದ ಮುಖವುಳ್ಳ, ಪಿಶಾಚಿಗಳ ಗುಂಪಿನಿಂದಲೂ, ಉನ್ಮತ್ತವಾದ ನಡವಳಿಕೆಗಳಿಂದಲೂ ಕೂಡಿರುವ ಸ್ಮಶಾನವಾಸಿಗಳಾದ ಭಯಂಕರವಾದ ಗಣಗಳಿಂದಲೂ ಸುತ್ತುವರಿಯಲ್ಪಟ್ಟಿರುವ ಆ ಶಿವನನ್ನು ಪರ್ವತರಾಜನು ನೋಡಿದನು. ॥೨೧॥

ದೃಷ್ಟ್ವಾ ಪರ್ವತರಾಜನ್ಯೋ ವಿಷಣ್ಣಾಃ ಸಮಜಾಯತ ।
ದೃಷ್ಟ್ವಾ ವಿಧಿರ್ನಗಂ ಮ್ಲಾನಮುಖಂ ಶೋಕಪರಿಪ್ಲುತಂ ॥೭೨॥

ವಿಜ್ಞಾಯ ಮಾನಸಂ ತಸ್ಯ ಪ್ರೊವಾಚಾಗಂ ವಿಧಿಸ್ತದಾ ।
ಕಿಂ ನಗೇಶ್ವರ ಶೋಕೇನ ಸಂಪ್ಲುತೋಽಸಿ ಶುಭಾಗಮೇ ॥೭೩॥

ಜಾನಾಸಿ ನ ಮಹೇಶಾನ ಮಾಶ್ಚರ್ಯ ಚರಿತಂ ಶಿವಂ ।
ಇತ್ಯುಕ್ತ್ವಾ ವಿಧಿರೀಶಾನಂ ಪ್ರಾರ್ಥಯಾಮಾಸ ಸನ್ನತಃ ॥೭೪॥

ದೇವ ತ್ವಾ ಮೀದೃಶಂ ದೃಷ್ಟ್ವಾ ನಗಃ ಖಿನ್ನೋ ಮಹೇಶ್ವರ ।
ತದ್ದರ್ಶಯ ಸ್ವಮಾತ್ಮಾನಂ ಸರ್ವಲೋಕೈಕಸುಂದರಂ ॥೭೫॥

ಏವಂ ಸಂಪ್ರಾರ್ಥಿತಃ ಶಂಭು ರ್ಯೋಗೈಶ್ವರ್ಯ ಬಲಾನ್ವಿತಃ ।
ಆತ್ಮಾನಂ ದರ್ಶಯಾಮಾಸ ಕೋಟಿಮನ್ಮಥಸುಂದರಂ ॥೭೬॥

---

ಪರ್ವತರಾಜನಾದ ಹಿಮವಂತನು ಇಂತಹ ವಿಲಕ್ಷಣನಾದ ಶಿವನನ್ನು ನೋಡಿ ದುಃಖಾಕ್ರಾಂತನಾದನು. ಬ್ರಹ್ಮನು ಬಾಡಿದ ಮುಖವುಳ್ಳ ದುಃಖದಲ್ಲಿ ಮುಳುಗಿದ ಹಿಮವಂತನನ್ನು ನೋಡಿದನು. ॥೭೨॥

ಆಗ ಬ್ರಹ್ಮನು ಹಿಮವಂತನ ಮನಸ್ಸಿನ ದುಃಖವನ್ನು ಅರಿತು ಅವನನ್ನು ಕುರಿತು ಎಲೈ ಪರ್ವತರಾಜನೇ, ಇಂತಹ ಮಂಗಳಕಾಲದಲ್ಲಿ ಈ ರೀತಿಯಲ್ಲಿ ದುಃಖ ದಲ್ಲಿ ಏಕೆ ಮುಳುಗಿದ್ದೀಯೆ ? ಎಂದನು. ॥೭೩॥

ಎಲೈ ಹಿಮವಂತನೇ, ಆಶ್ಚರ್ಯಕರವಾದ ನಡೆವಳಿಕೆಯುಳ್ಳ ಮಹೇಶ್ವರ ನಾದ ಶಿವನ ಸ್ವಭಾವವು ನಿನಗೆ ಗೊತ್ತಿಲ್ಲ. ಎಂದು ಹೇಳಿ, ಬ್ರಹ್ಮನು ಶಿವನಿಗೆ ಮಣಿದು ಅವನನ್ನು ಕುರಿತು ಈ ರೀತಿಯಲ್ಲಿ ಪ್ರಾರ್ಥಿಸಿದನು. ॥೭೪॥

ಓ ದೇವನಾದ ಮಹೇಶ್ವರನೇ, ಇಂತಹ ವಿಲಕ್ಷಣಸ್ವರೂಪವುಳ್ಳ ನಿನ್ನನ್ನು ಹಿಮವಂತನು ನೋಡಿ, ದುಃಖಗೊಂಡಿದ್ದಾನೆ. ಆದ್ದರಿಂದ ಎಲ್ಲಾ ಲೋಕಗಳ ಲ್ಲಿಯೂ ಅತ್ಯಂತ ಸುಂದರವಾದ ನಿನ್ನ ಸ್ವರೂಪವನ್ನು ದಯವಿಟ್ಟು ತೋರಿಸು. ಎಂದು ಪ್ರಾರ್ಥಿಸಿದನು. ॥೭೫॥

ಹೀಗೆ ಬ್ರಹ್ಮನು ಪ್ರಾರ್ಥಿಸಲಾಗಿ ಶಿವನು ತನ್ನ ಯೋಗಮಹಿಮೆ ಮತ್ತು ಬಲಗಳಿಂದ ಕೂಡಿದವನಾಗಿ ಕೋಟಿಮನ್ಮಥರಷ್ಟು ಸುಂದರವಾದ ತನ್ನ ಸ್ವರೂಪ ವನ್ನು ತೋರಿಸಿದನು. ॥೭೬॥

ತಪ್ತಹೇಮಸಮಾಭಾಸಂ ನೀಲೇಂದೀವರ ಲೋಚನಂ ।
ನಾನಾರತ್ನೌಘ ವಿಲಸನ್ಮುಕುಟೇನ ವಿರಾಜಿತಂ ॥೭೭॥

ರಕ್ತಮಾಲ್ಯಾಂಬರಧರಂ ನಾನಾರತ್ನ ವಿಭೂಷಣಂ ।
ತಾದೃಶೈಃ ಪ್ರಮಥೈಶ್ಚಿತ್ರ ಭೂಷಣಾಂಬರಶೋಭಿತೈಃ ॥೭೮॥

ಸೇವ್ಯಮಾನಂ ಸಮಾಲೋಕ್ಯ ಪರ್ವತಃ ಪ್ರೀತಮಾನಸಃ ।
ಅಹೋ ಧನ್ಯಾ ಮಮ ಸುತಾ ಯಸ್ಯಾ ಭರ್ತಾಽಯಮೀದೃಶಃ ॥೭೯॥

ಸರ್ವಲೋಕಮಹೇಶಾನಃ ಸರ್ವಲೋಕಮನೋಹರಃ ।
ಇತ್ಯುಕ್ತ್ವಾ ತಂ ಮಹಾದೇವಂ ಪ್ರಣನಾಮ ನಗೇಶ್ವರಃ ॥೮೦॥

ನ ಜಾನಾಮಿ ಮಹಾದೇವ ತವ ಮಾಹಾತ್ಮ್ಯಮದ್ಭುತಂ ।
ಜಡಃ ಸ್ಥಾಣುಸ್ವಭಾವೋಽಹಂ ತನ್ಮೇಽಗಃ ಕ್ಷಂತುಮರ್ಹಸಿ ॥೮೧॥

---

ಪುಟಕ್ಕೆ ಹಾಕಿದ ಚಿನ್ನದಂತಹ ಕಾಂತಿಯುಳ್ಳ, ಕನ್ನೈದಿಲೆಗೆ ಸಮಾನವಾದ ಕಣ್ಣುಗಳುಳ್ಳ, ಅನೇಕ ವಿಧವಾದ ರತ್ನಗಳ ಸಮೂಹಗಳಿಂದ ಕೂಡಿದ ಕಿರೀಟದಿಂದ ಶೋಭಿತನಾದ, ಕೆಂಪಗಿರುವ ಹುವ್ವಿನ ಮಾಲಿಕೆಯನ್ನು ಧರಿಸಿರುವ, ಅನೇಕ ವಿಧವಾದ ರತ್ನಗಳಿಂದ ಅಲಂಕರಿಸಲ್ಪಟ್ಟಿರುವ, ಹೀಗೆಯೇ ಮನೋಹರವಾದ ಅಲಂಕಾರ ಮತ್ತು ವಸ್ತ್ರಗಳಿಂದ ಶೋಭಿತರಾದ ಪ್ರಮಥಗಣಗಳಿಂದ ಸೇವಿಸಲ್ಪಡುತ್ತಿರುವ ಶಿವನನ್ನು ಹಿಮವಂತನು ನೋಡಿದನು. ॥೭೭-೭೮॥

ಇಂತಹ ಅತಿ ಸುಂದರವಾದ ಸ್ವರೂಪವುಳ್ಳ ಶಿವನನ್ನು ನೋಡಿ ಹಿಮವಂತನು ಸಂತೋಷಭರಿತನಾಗಿ, ಭೇಷ್ ಇಂಥಾ ಪತಿಯನ್ನು ಪಡೆದ ನನ್ನ ಮಗಳೇ ಧನ್ಯಳು! ಎಂದನು. ॥೭೯॥

ಈತನು ಎಲ್ಲಾ ಲೋಕಗಳಿಗೂ ಮಹೇಶ್ವರನೂ, ಎಲ್ಲಾ ಜನರಿಗಿಂತ ಹೆಚ್ಚು ಮನೋಹರನೂ ಆಗಿದ್ದಾನೆ. ಎಂಬುದಾಗಿ ಹೇಳಿ, ಹಿಮವಂತನು ಶಿವನಿಗೆ ನಮಸ್ಕಾರಮಾಡಿದನು. ॥೮೦॥

ಓ ಮಹಾದೇವನಾದ ಶಿವನೇ, ನಿನ್ನ ಅದ್ಭುತವಾದ ಮಹಿಮೆಯನ್ನು ಜಡನೂ ಅಚಲವಾದ ಸ್ವಭಾವವುಳ್ಳವನೂ ಆದ ನಾನು ತಿಳಿಯಲಾರದೇ ಹೋದೆನು! ಈ ನನ್ನ ಅಪರಾಧವನ್ನು ದಯವಿಟ್ಟು ಕ್ಷಮಿಸು. ॥೮೧॥

ಇತಿ ಕ್ಷಮಾಪ್ಯ ಭೂತೇಶಂ ವಿಧಿಂ ಪ್ರೋವಾಚ ಶೈಲರಾಟ್ ।
ಬ್ರಹ್ಮನ್ನಿಯಂ ಮೇ ತನುಜಾ ಪಾಣಿಂ ಗೃಹ್ಣಾತು ಶಂಕರಃ ॥೮೨॥

ಮನ್ಯಸೇ ಯದಿ ತಚ್ಛೀಘ್ರಂ ನ ಕಾಲೋಽತಿಗತೋ ಭವೇತ್ ।
ಓ ಮಿತ್ಯುಕ್ತ್ವಾ ವಿಧಿಃ ಶೀಘ್ರಂ ಶಿವಂ ಪ್ರಾಹ ಸ್ಮಯನ್ನಿವ ॥೮೩॥

ಪಾಣಿಂ ಶಿವ ಗೃಹಾಣಾಽಸ್ಯಾಃ ಪಾರ್ವತ್ಯಾ ಮಾ ವಿಲಂಬ್ಯತಾಂ ।
ಅತ್ಯೇತಿ ಕಾಲಃ ಸಗುಣಃ ಸರ್ವದೋಷವಿವರ್ಜಿತಃ ॥೮೪॥

ನಿಶಮ್ಯ ಶಂಭುರ್ವಿಧ್ಯುಕ್ತಂ ಪಾಣಿಂ ಗೌರ್ಯಾಃ ಸಮಾದದೇ ।
ಶೈಲಃ ಸಮುತ್ಸೃಜತ್ತೋಯಂ ಮೇನಯಾ ಸಮುಪಾರ್ಜಿತಂ ॥೮೫॥

ಅಥ ಘೋಷೋ ಮಹಾನಾಸೀನ್ಮಂಗಳಧ್ವನಿಮಿಶ್ರಿತಃ ।
ಉಚ್ಚಾವಚಾನ್ಯವಾದ್ಯಂತ ವಾದ್ಯಾನಿ ಪರಿತಸ್ತದಾ ॥೮೬॥

---

ಹೀಗೆ ಶಿವನನ್ನು ಕ್ಷಮೆಬೇಡಿ, ಹಿಮವಂತನು ಬ್ರಹ್ಮನನ್ನು ಕುರಿತು ಓ ಬ್ರಹ್ಮನೇ, ಇವಳೇ ನನ್ನ ಮಗಳು. ಶಿವನು ಇವಳ ಕೈಯ್ಯನ್ನು ಹಿಡಿದು ಮದುವೆಯಾಗಲಿ. ಎಂದು ಹೇಳಿದನು. ॥೮೨॥

ಓ ಬ್ರಹ್ಮನೇ, ಇದಕ್ಕೆ ತಾವು ಸಮ್ಮತಿಸುವ ಪಕ್ಷದಲ್ಲಿ ಕಾಲವಿಳಂಬವಾಗುವುದು ಬೇಡ. ಎಂದು ಹಿಮವಂತನ ಮಾತನ್ನು ಒಪ್ಪಿ ಬ್ರಹ್ಮನು ಮುಗುಳುನಗೆಯನ್ನು ಬೀರುವಂತಿರುತ್ತಾ ಕೂಡಲೇ ಶಿವನನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೮೩॥

ಓ ಶಿವನೇ, ಪಾರ್ವತಿಯ ಕೈಯ್ಯನ್ನು ಹಿಡಿದು ಶೀಘ್ರವಾಗಿ ವಿವಾಹವಾಗು. ಕಾಲವಿಳಂಬವಾಗುವುದು ಬೇಡ. ಹಾಗಿಲ್ಲದಿದ್ದರೆ ಎಲ್ಲಾದೋಷಗಳಿಂದಲೂ ಬಿಡಲ್ಪಟ್ಟ ಪ್ರಶಸ್ತವಾದ ಗುಣಗಳುಳ್ಳ ಈ ಶುಭಲಗ್ನಕಾಲವು ಮೀರಿಹೋಗುವುದು. ॥೮೪॥

ಶಿವನು ಬ್ರಹ್ಮನ ಮಾತನ್ನು ಕೇಳಿ ಗೌರಿಯ ಕೈಯ್ಯನ್ನು ಸ್ವೀಕರಿಸಿದನು. ಆಗ ಪರ್ವತನೂ ಮೇನಕಿಯೂ ಬಿಡುತ್ತಿರುವ ನೀರನ್ನು ಅವರಿಬ್ಬರ ಕೈಗಳ ಮೇಲೆ ಬಿಟ್ಟನು. ॥೮೫॥

ಆ ಕಾಲದಲ್ಲಿ ಮಂಗಳಕರವಾದ ಧ್ವನಿಗಳಿಂದ ಕೂಡಿದ ದೊಡ್ಡ ವಾದ್ಯಗಳನ್ನು ನುಡಿಸಲಾಯಿತು. ಆಗ ಅತ್ಯಂತ ಮಹತ್ತಾದ ವಾದ್ಯಧ್ವನಿಗಳು ಎಲ್ಲಾಕಡೆಯಲ್ಲಿಯೂ ಮೊಳಗಿದವು. ॥೮೬॥

ಜಗುರ್ಗಂಧರ್ವಪತಯೋ ನನೃತುಶ್ಚಾಽಪ್ಸರೋ ಗಣಾಃ ।
ಅಸ್ತುವನ್ ವಂದಿನಸ್ತತ್ರ ಪುಷ್ಪವೃಷ್ಟಿರಭೂದ್ದಿವಃ ॥೮೭॥

ವವೌ ಗಂಧವಹೋ ಮಂದಂ ಚಕ್ರೇ ಸುರಭಿಲಾ ದಿಶಃ ।
ಜೇಪುರ್ವಸಿಷ್ಠಪ್ರಮುಖಾಃ ಶೈವೋಪನಿಷದಾಂ ಗಣಂ ॥೮೮॥

ವಿಧಿರ್ವಿವಾಹ ವಿಧಿನಾ ಯೋಜಯಾಮಾಸ ಶಂಕರಂ ।
ತತ್ರ ಪರ್ವತರಾಜನ್ಯಃ ಸರ್ವಾನ್ ವಿಪ್ರಮುಖಾನ್ ಜನಾನ್ ॥೮೯॥

ರತ್ನಾಭರಣ ವಾಸೋಭಿ ರಸಂಖ್ಯೇಯ ಧನೈರಪಿ ।
ಸಂಭಾವಯಾಮಾಸ ತಥಾ ದೇವಾನ್ ವಿಧಿಮುಖಾನಪಿ ॥೯೦॥

ಪೂಜಯಾಮಾಸ ವಿಧಿನಾ ಸಂಭೃತೈಃ ಸುಸಮರ್ಹಣೈಃ ।
ಭೋಜಯಾಮಾಸ ನಗರಾಟ್ ಸರ್ವಾಂ ಸ್ತತ್ರ ಸಮಾಗತಾನ್ ॥೯೧॥

---

ಗಂಧರ್ವಾಧಿಪತಿಗಳು ಸೊಗಸಾಗಿ ಗಾನಮಾಡಿದರು. ಅಪ್ಸರಸ್ತ್ರೀಯರ ಗುಂಪಿನವರು ನರ್ತನಮಾಡಿದರು. ಹೊಗಳುಭಟರು ಸ್ತೋತ್ರವನ್ನು ಮಾಡಿದರು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ॥೮೭॥

ವಾಯುವು ಮೆಲ್ಲಗೆ ಬೀಸಿತು. ಅದು ದಿಕ್ಕುಗಳೆಲ್ಲಾಕಡೆಯಲ್ಲಿಯೂ ಸುಗಂಧ ವನ್ನು ಬೀರುತ್ತಿತ್ತು. ವಸಿಷ್ಠನೇ ಮೊದಲಾದ ಋಷಿಗಳು ಶಿವನ ಸಂಬಂಧವಾದ ಉಪನಿಷತ್ತುಗಳ ಸಮೂಹಗಳನ್ನೇ ಜಪಿಸಿದರು. ॥೮೮॥

ಬ್ರಹ್ಮನು ಇಂತಹ ಶುಭಸಮಯದಲ್ಲಿ, ಶಿವನಿಗೂ, ಪಾರ್ವತಿಗೂ ವಿವಾಹ ವನ್ನು ನೆರವೇರಿಸಿದನು. ಹಿಮವಂತನು ಅಲ್ಲಿ ನೆರದಿದ್ದ ಬ್ರಾಹ್ಮಣರೇ ಮೊದಲಾದ ಜನರನ್ನು ಯೋಗ್ಯವಾದ ಬಹುಮಾನಗಳಿಂದ ಸತ್ಕರಿಸಿದನು, ॥೮೯॥

ಹಿಮವಂತನು ರತ್ನಾಭರಣಗಳೂ, ಶ್ರೇಷ್ಠವಸ್ತ್ರಗಳೂ, ಲೆಕ್ಕವಿಲ್ಲದಷ್ಟು ಹಣ, ಇವೆಲ್ಲವನ್ನೂ ಕೊಡುವುದರ ಮೂಲಕ ಅಲ್ಲಿದ್ದ ಬ್ರಾಹ್ಮಣರೇ ಮೊದಲಾದವರನ್ನು ಗೌರವಿಸಿದನು. ಹೀಗೆಯೇ ಬ್ರಹ್ಮನೇ ಮೊದಲಾದ ದೇವತೆಗಳನ್ನೂ ಸತ್ಕರಿಸಿದನು. ॥೯೦॥

ಹಿಮವಂತನು ಅವರವರಿಗೆ ಯೋಗ್ಯವಾದ ಸಮೃದ್ಧಿಯಾದ ಪೂಜಾದ್ರವ್ಯ ಗಳಿಂದ ಶಾಸ್ತ್ರೋಕ್ತಕ್ರಮದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳನ್ನೂ ಪೂಜಿಸಿದನು.

ವಿವಿಧೈರನ್ನ ಪಾನಾದ್ಯೈಃ ಷಡ್ರಸಾಢ್ಯೈರ್ಮನೋಹರೈಃ ।
ಭುಕ್ತ್ವಾ ವಿಪ್ರಮುಖಾಸ್ತತ್ರ ಯಥೇಷ್ಟಂ ತರ್ಪಿತಾ ಧನೈಃ ॥೯೨॥

ಆಶಿಷಸ್ತೇ ಪ್ರಯುಂಜಾನಾ ನಿರ್ಯಯುಃ ಸರ್ವತೋ ದಿಶಂ ।
ಏವಂ ವಿವಾಹೇ ಸಂವೃತ್ತೇ ಹಿಮವಾನ್ ಪ್ರದದೌ ಧನಂ ॥೯೩॥

ಅಸಂಖ್ಯಾತಂ ರತ್ನಗಣಂ ವಾಸಾಂಸ್ಯಾಭರಣಾನಿ ಚ ।
ಹಸ್ತ್ಯಶ್ವರಥ ದಾಸೀನಾಂ ಗಣಾನಪಿ ಚ ಕೋಟಿಶಃ ॥೯೪॥

ಪಾರ್ವತ್ಯೈ ಸ್ವತನೂಜಾಯೈ ಪ್ರಿಯಾಯೈ ಪ್ರೀತಮಾನಸಃ ।
ಅಥ ತತ್ಸರ್ವಮಾದಾಯ ಪಾರ್ವತೀ ಸಹಿತಃ ಶಿವಃ ॥೯೫॥

---

ಅಲ್ಲದೇ ಅವನು ಅಲ್ಲಿ ನೆರದಿದ್ದವರಿಗೆಲ್ಲರಿಗೂ ಸೊಗಸಾದ ಭೋಜನವನ್ನು ಮಾಡಿಸಿದನು. ॥೯೧॥

ಹಿಮವಂತನು ಅನೇಕವಿಧವಾದ ರುಚಿಕರವಾದ, ಆರುವಿಧವಾದ ರಸಗಳಿಂದ ಕೂಡಿದ ಅನ್ನಪಾನೀಯ ಮುಂತಾದ ಭೋಜನಸಾಮುಗ್ರಿಗಳಿಂದ ಬ್ರಾಹ್ಮಣರೇ ಮುಂತಾದವರಿಗೆ ಭೋಜನವನ್ನು ಮಾಡಿಸಿದನು. ಅವರು ತೃಪ್ತಿಯಿಂದ ವಿಶೇಷವಾಗಿ ದಕ್ಷಿಣೆಗಳನ್ನೂ ಪಡೆದು, ಹೆಚ್ಚಾಗಿ ಸೌಖ್ಯವನ್ನು ಹೊಂದಿದರು. ॥೯೨॥

ಅವರೆಲ್ಲರೂ ವಧೂವರರನ್ನು ಆಶೀರ್ವದಿಸಿ ಎಲ್ಲಾಕಡೆಗಳಿಗೂ ಹಿಂತಿರುಗಿದರು. ಹೀಗೆ ವಿವಾಹವು ನಡೆದಾಗ ಹಿಮವಂತನು ವಿಶೇಷವಾಗಿ ಧನವನ್ನು ಖರ್ಚು ಮಾಡಿದನು. ॥೯೩॥

ಆಗ ಹಿಮವಂತನು ಲೆಕ್ಕವಿಲ್ಲದಷ್ಟು ರತ್ನಗಳನ್ನೂ, ಬಟ್ಟೆಗಳನ್ನೂ, ಒಡವೆಗಳನ್ನೂ, ಆನೆಗಳು, ಕುದುರೆಗಳು, ರಥಗಳು, ದಾಸಿಯರೂ, ಇವರೆಲ್ಲರನ್ನೂ ಸಹ ಕೋಟಿಗಟ್ಟಲೆಯಾಗಿ ಪಾರ್ವತೀಪರಮೇಶ್ವರರಿಗೆ ಬಳುವಲಿಯಾಗಿ ಕೊಟ್ಟನು. ॥೯೪॥

ಅತ್ಯಂತ ಸಂತೋಷಭರಿತವಾದ ಮನಸ್ಸುಳ್ಳ ಹಿಮವಂತನು ತನಗೆ ಅತಿ ಪ್ರಿಯಳೂ, ಮಗಳೂ ಆದ ಪಾರ್ವತಿಗೆ ಅವೆಲ್ಲವನ್ನೂ ಕೊಟ್ಟನು. ಅನಂತರ ಅವೆಲ್ಲವನ್ನೂ ತೆಗೆದುಕೊಂಡು ಪಾರ್ವತೀಸಮೇತನಾದ ಶಿವನು ಪ್ರಯಾಣಕ್ಕೆ ಸಿದ್ಧನಾದನು. ॥೯೫॥

ಗಂತುಂ ನಿಜಾಲಯಂ ಶೀಘ್ರಂ ಮನೋ ದಧೇ ಮಹೇಶ್ವರಃ ।
ವಿಧಿರ್ವಿಷ್ಣುಮುಖೈರ್ದೇವೈಃ ಸ್ತೂಯಮಾನಾಃ ಪದಾನಕಃ ॥೯೬॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಪಾರ್ವತೀ ಪರಮೇಶ್ವರ
ವಿವಾಹವರ್ಣನಂ ನಾಮ ದ್ವಾತ್ರಿಂಶೋಽಧ್ಯಾಯಃ

---

ಮಹೇಶ್ವರನಾದ ಶಿವನು, ಬ್ರಹ್ಮಾ, ವಿಷ್ಣು ಮುಂತಾದವರಿಂದ ಸ್ತೋತ್ರ ಮಾಡಲ್ಪಡುತ್ತಿರುವ ತನ್ನ ಪೂರ್ವಚರಿತ್ರೆಯುಳ್ಳವನಾಗಿ ಪಾರ್ವತಿಯೊಂದಿಗೆ ತನ್ನ ಸ್ವಗೃಹಕ್ಕೆ ತೆರಳಲು ನಿಶ್ಚಯಮಾಡಿದನು. ॥೯೬॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಮನ್ಮಥೋಪಾಖ್ಯಾನದಲ್ಲಿ
ಪಾರ್ವತೀ ಪರಮೇಶ್ವರರ ವಿವಾಹವನ್ನು ವಿವರಿಸಿರುವ
ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ತ್ರಯಸ್ತ್ರಿಂಶೋಽಧ್ಯಾಯಃ ||

### ಮೂವತ್ತುಮೂರನೆಯ ಅಧ್ಯಾಯವು

ಅಥ ದೇವೈಃ ಸ್ತೂಯಮಾನೋ ಮಹೇಶಃ ಪಾರ್ವತೀಯುತಃ ।
ಹಿಮಾದ್ರಿಣಾಽಭ್ಯನುಜ್ಞಾತೋ ನಿರ್ಯಯೌ ಹಿಮವದ್ವನಾತ್ ॥೧॥

ಕಿಂಚಿದ್ದೂರ ಮನುಯಯೌ ಪರ್ವತಃ ಪ್ರೇಮಕಾತರಃ ।
ತತೋಽನುಜಜ್ಞೇ ಶ್ವಶುರ ಮನುಯಾಂತಂ ಮಹೇಶ್ವರಃ ॥೨॥

ಪ್ರತಿಯಾತುಮನೀಶಂ ತಂ ದುಹಿತೃಪ್ರೇಮಭಾರತಃ ।
ಅಪಶ್ಯತ್ಪಾರ್ವತೀಂ ದೇವಃ ಕಟಾಕ್ಷೇಣ ಸ್ಮಿತಾಽಽನನಃ ॥೩॥

---

ಅನಂತರದಲ್ಲಿ ದೇವತೆಗಳಿಂದ ಸ್ತೋತ್ರಮಾಡಲ್ಪಡುತ್ತಿರುವ ಮಹೇಶ್ವರನು ಪಾರ್ವತಿಯಿಂದ ಕೂಡಿದವನಾಗಿ ಹಿಮವಂತನ ಅಪ್ಪಣೆಯನ್ನು ಪಡೆದು ಆ ನಗರಾಜನ ವನದಿಂದ ಹೊರಟನು. ||೧||

ಪರ್ವತರಾಜನಾದ ಹಿಮವಂತನು ಪ್ರೇಮಕ್ಕೆ ವಶನಾಗಿ ಸ್ವಲ್ಪ ದೂರ ಅವರನ್ನು ಅನುಸರಿಸಿದನು. ಅನಂತರ ಶಿವನು ತನ್ನನ್ನು ಹಿಂಬಾಲಿಸುತ್ತಿರುವ ಅವನನ್ನು ಹಿಂತಿರುಗಲು ಸಮ್ಮತಿಸಿದನು. ||೨||

ಮಗಳ ಮೇಲಿನ ಅತಿಶಯವಾದ ಪ್ರೇಮದಿಂದ ಹಿಂತಿರುಗಲು ಅಸಮರ್ಥನಾದ ಹಿಮವಂತನನ್ನು ನೋಡಿ, ದೇವನಾದ ಶಿವನು ಮುಗುಳುನಗೆ ನಗುತ್ತಾ ತನ್ನ ಕಟಾಕ್ಷದಿಂದ ಪಾರ್ವತಿಯ ಕಡೆಗೆ ನೋಡಿದನು. ||೩||

ಜ್ಞಾತ್ವೇಂಗಿತಂ ಮಹೇಶಸ್ಯ ದೇವೀ ಪರ್ವತನಂದಿನೀ ।
ಪಿತರಂ ಬೋಧಯಾಮಾಸ ಸ್ವಶಾಪಭ್ರಷ್ಟಸಂಸ್ಮೃತಿಂ ॥೪॥

ದರ್ಶಯಾಮಾಸ ವಿಭವಂ ಸ್ವಸ್ಯಾಃ ಪರಮಮುದ್ಭುತಂ ।
ಅಥ ದೃಷ್ಟ್ವಾ ನಗಪತಿಸ್ತನೂಜಾಂ ಪರಮೇಶ್ವರೀಂ ॥೫॥

ಜ್ಞಾತ್ವಾ ಸ್ವರೂಪಂ ತಸ್ಯಾಶ್ಚ ಜಗತ್ತತ್ವಂ ಚ ಸರ್ವಶಃ ।
ನಿವೃತ್ತಮೋಹಃ ಸಂಪ್ರಾಪ್ತ ನಿಜವೈಭವನಿರ್ಭರಃ ॥೬॥

ಅನುಜ್ಞಾತಃ ಶಿವಾಭ್ಯಾಂ ಸ ಪ್ರಯಯೌ ಸ್ವಂ ನಿವೇಶನಂ ।
ಮಹಾದೇವೋಽಪಿ ಪಾರ್ವತ್ಯಾ ಸಹಿತೋ ಧಾತೃಮುಖ್ಯಕಾನ್ ॥೭॥

ಅನುಜ್ಞಾಪ್ಯ ಸ್ವಸ್ವದೇಶಂ ಪ್ರಮಥೈರಭಿಸಂವೃತಃ ।
ರಜತಾಽದ್ರಿಂ ಸಮಾಸಾರ್ಯ ತಪಸ್ಯೇವ ಮನೋ ದಧೇ ॥೮॥

---

ಮಹೇಶ್ವರನ ಅಭಿಪ್ರಾಯವನ್ನು ತಿಳಿದು ಪರ್ವತರಾಜನ ಮಗಳಾದ ಪಾರ್ವತಿಯು ತನ್ನ ಶಾಪದಿಂದ ನಷ್ಟವಾದ ತನ್ನ ಸ್ವರೂಪಜ್ಞಾನವುಳ್ಳ ಹಿಮವಂತನನ್ನು ಎಚ್ಚರಗೊಳಿಸಿದಳು. ॥೪॥

ಪಾರ್ವತಿಯು ಹಿಮವಂತನಿಗೆ ತನ್ನ ಅತ್ಯಾಶ್ಚರ್ಯಕರವಾದ ಮಹಿಮೆಯನ್ನು ತೋರಿಸಿದಳು. ಅನಂತರ ಹಿಮವಂತನು ತನ್ನ ಮಗಳೂ, ಮಹೇಶ್ವರನ ಪತ್ನಿಯೂ ಆದ ಪಾರ್ವತಿಯ ಪರಸ್ವರೂಪವನ್ನು ನೋಡಿದನು. ॥೫॥

ಆಕೆಯ ಸ್ವರೂಪವನ್ನೂ ಜಗತ್ತಿನ ತತ್ವವನ್ನೂ ಎಲ್ಲಾ ವಿಧದಲ್ಲಿಯೂ ಮನಗಂಡು ಅಜ್ಞಾನವು ನಾಶವಾಗಲಾಗಿ, ಹಿಮವಂತನು ತನ್ನ ಸಮಸ್ತ ವೈಭವದೊಡನೆ ಹಿಂದಕ್ಕೆ ತೆರಳಲು ಇಚ್ಛಿಸಿದನು. ॥೬॥

ಪಾರ್ವತೀ ಪರಮೇಶ್ವರರ ಇಬ್ಬರ ಅಪ್ಪಣೆಯನ್ನೂ ಪಡೆದು ಹಿಮವಂತನು ತನ್ನ ಮನೆಗೆ ಹಿಂತಿರುಗಿದನು. ಶಿವನೂ ಪಾರ್ವತಿಯೊಡಗೂಡಿ ಬ್ರಹ್ಮನೇ ಮೊದಲಾದ ದೇವತೆಗಳಿಗೆ ಹಿಂತಿರುಗಲು ಅನುಜ್ಞೆ ಮಾಡಿದನು. ॥೭॥

ಅವರಿಗೆಲ್ಲರಿಗೂ ತಮ್ಮ ತಮ್ಮ ಸ್ಥಳಗಳಿಗೆ ಹೋಗಲು ಅಪ್ಪಣೆಮಾಡಿ, ಶಿವನು ಪ್ರಮಥಗಣಗಳಿಂದ ಕೂಡಿ ಕೈಲಾಸಪರ್ವತಕ್ಕೆ ಬಂದು ತಪಸ್ಸನ್ನು ಆಚರಿಸಲು ಮನೋನಿಶ್ಚಯ ಮಾಡಿದನು. ॥೮॥

ಅಥ ದೇವ ನದೀತೀರೇ ಸಂಶ್ರಯಂ ಗುಣವತ್ತರಂ ।
ಸಮಾಸಾದ್ಯ ಮಹಾದೇವೋ ನ್ಯಗ್ರೋಧ ತರುಮಾಶ್ರಿತಃ ॥೯॥

ತಪಶ್ಚಚಾರ ಪರಮಂ ದಿವ್ಯವರ್ಷ ಸಹಸ್ರಕಂ ।
ತತ್ರ ವಿಘ್ನಕರಂ ಕಾಮಮನಯದ್ಭಸ್ಮಶೇಷತಾಂ ॥೧೦॥

ಭಾರ್ಗವೈವಂ ಮನ್ಮಥೋಽಪಿ ಭಸ್ಮತ್ವಂ ಪ್ರಾಪ್ತವಾನ್ ಶಿವಾತ್ ।
ಏವಂ ಶ್ರುತ್ವಾಽದ್ಭುತಕಥಾಂ ಭಾರ್ಗವಃ ಪರ್ಯಪೃಚ್ಛತ ॥೧೧॥

ದಯಾನಿಧೇಽವಧೂತೇಶ ಕಥಾ ಮಧುರ್ಝರೀ ತವ ।
ಮುಖಪದ್ಮಸ್ರುತಾಽತೀವ ತೃಷಾಂ ಪೀತಾಽಪಿ ಯಚ್ಛತಿ ॥೧೨॥

ತತ್ರ ಮಾದ್ಯತ್ಸ್ವಭಾವೋಽಹಂ ನ ತೃಪ್ಯಾಮಿ ದ್ವಿರೇಫವತ್ ।
ತದಹಂ ಶ್ರುತಿವಕ್ತ್ರೇಣ ಪಾತುಮಿಚ್ಛಾಮಿ ವೈ ಪುನಃ ॥೧೩॥

---

ತರುವಾಯ ಗಂಗಾನದಿಯ ದಡದಲ್ಲಿ ಶ್ರೇಷ್ಠವಾದ ಪ್ರದೇಶವನ್ನು ಹೊಂದಿ ಶಿವನು ಆಲದ ಮರವನ್ನು ಆಶ್ರಯಿಸಿದನು. ॥೯॥

ಆಮೇಲೆ ಶಿವನು ದೇವತೆಗಳಿಗೆ ಸಂಬಂಧಪಟ್ಟ ಸಾವಿರ ವರ್ಷಗಳ ಕಾಲ ಅತ್ಯಂತ ಶ್ರೇಷ್ಠವಾದ ತಪಸ್ಸನ್ನು ಮಾಡಿದನು. ಶಿವನು ಈ ಸಂದರ್ಭದಲ್ಲಿ ವಿಘ್ನ ಮಾಡಲು ಬಂದ ಮನ್ಮಥನನ್ನು ಬೂದಿಯಾಗುವಂತೆ ಮಾಡಿದನು. ॥೧೦॥

ಎಲೈ ಪರಶುರಾಮನೇ, ಶಿವನಿಂದ ಮನ್ಮಥನು ಈರೀತಿಯಲ್ಲಿ ಬೂದಿಯಾಗಿ ಮಾಡಲ್ಪಟ್ಟನು. ಹೀಗೆ ಅತ್ಯಂತ ಆಶ್ಚರ್ಯಕರವಾದ ಕಥೆಯನ್ನು ಕೇಳಿ ಪರಶುರಾಮನು ಗುರುವನ್ನು ಈರೀತಿಯಲ್ಲಿ ಪ್ರಶ್ನೆಮಾಡಿದನು. ॥೧೧॥

ಓ ಕರುಣಾನಿಧಿಗಳೂ, ಜ್ಞಾನಶ್ರೇಷ್ಠರೂ ಆದ ಗುರುಗಳೇ, ನಿಮ್ಮ ಮುಖದಿಂದ ಹೊರಡುತ್ತಿರುವ ಕಥೆಯೆಂಬ ಅಮೃತಪ್ರವಾಹವನ್ನು ಎಷ್ಟು ಪಾನಮಾಡಿದರೂ ಪುನಃ ನನಗೆ ಕೇಳಬೇಕೆಂಬ ದಾಹವು ಹೆಚ್ಚುತ್ತಲೇ ಇದೆ ! ॥೧೨॥

ಈ ವಿಚಾರದಲ್ಲಿ ಮದಿಸುವ ಸ್ವಭಾವವುಳ್ಳ ನಾನು ಜೇನುಹುಳುವಿನಂತೆ ತೃಪ್ತಿಯನ್ನು ಹೊಂದಲಾರೆ. ಆದ್ದರಿಂದ ನಾನು ನನ್ನ ಕಿವಿಯೆಂಬ ಬಾಯಿಂದ ನಿಮ್ಮ ಕಥಾಽಮೃತರಸವನ್ನು ಪುನಃ ಪಾನವನ್ನು ಮಾಡಲು ಬಯಸುತ್ತೇನೆ. ॥೧೩॥

ಕಥಂ ಶಿವೇನ ನಿರ್ದಗ್ಧಃ ಕಾಮೋ ವಿಘ್ನಂ ತಪಸ್ಯತಃ ।
ಕಿಮರ್ಥ ಮಾಚರತ್ಸರ್ವಂ ಶಂಸೈತತ್ಪರಿಪೃಚ್ಛತಃ ॥೧೪॥

ಅಥಾಽಪಿ ವಿಷ್ಣೋರ್ನಿರ್ದಗ್ಧಂ ಜ್ವಾಲಾಮುಖ್ಯಾ ಸುದರ್ಶನಂ ।
ಪ್ರಾಪ್ತಂ ಪುನಃ ಕಥಂ ತೇನ ವದೈತದಪಿ ಮೇ ಗುರೋ ॥೧೫॥

ಏವಂ ಸುಪೃಷ್ಟೋ ಮುನಿರಾಟ್ ದತ್ತಾತ್ರೇಯೋ ಜಗೌ ಕಥಾಂ ।
ಕಥ ಯಾಮಿ ಶೃಣು ಕಥಾಂ ಭೃಗುವಂಶಾಽವತಂಸಕ ॥೧೬॥

ತಥಾ ಸುದರ್ಶನೇ ನಷ್ಟೇ ವಿಷ್ಣು ಸ್ತ್ರಿಜಗತೀ ಪತಿಃ ।
ಕಾಲಾಂತರೇ ಸುರರಿಪು ರ್ಮುರಾಖ್ಯೋ ದೈತ್ಯಪುಂಗವಃ ॥೧೭॥

ಯೋಽದ್ಧು ಮಭ್ಯಾಯಯೌ ವಿಷ್ಣುಂ ಮಹಾಬಲಪರಾಕ್ರಮಃ ।
ಯುಧ್ಯಮಾನಸ್ತೇನ ಹರಿರಭವದ್ದೀನ ವರ್ಚಸಃ ॥೧೮॥

---

ತಪಸ್ಸನ್ನು ಏಕೆ ಮಾಡಿದನು? ಶಿವನಿಗೆ ಮನ್ಮಥನು ಹೇಗೆ ವಿಘ್ನವನ್ನುಂಟು ಮಾಡಿದನು? ಅವನು ಮನ್ಮಥನನ್ನು ಹೇಗೆ ನಾಶಮಾಡಿದನು? ಇವೆಲ್ಲವನ್ನೂ ಕೇಳುತ್ತಿರುವ ನನಗೆ ತಾವು ದಯವಿಟ್ಟು ಇವನ್ನು ತಿಳಿಸಬೇಕು. ಎಂದನು. ॥೧೪॥

ಅಲ್ಲದೇ ಜ್ವಾಲೆಯನ್ನು ಕಾರುತ್ತಿದ್ದ ಅರುಣಾದೇವಿಯಿಂದ ಸುಡಲ್ಪಟ್ಟ ಸುದರ್ಶನಚಕ್ರವನ್ನು ವಿಷ್ಣುವು ಪುನಃ ಪಡೆದುದು ಹೇಗೆ? ಎಂಬ ವಿಷಯವನ್ನೂ ದಯವಿಟ್ಟು ತಿಳಿಸಿರಿ. ॥೧೫॥

ಹೀಗೆ ವಿಶ್ವಾಸಪೂರ್ವಕವಾಗಿ ಪರಶುರಾಮನು ಪ್ರಶ್ನಿಸಲು ಮುನೀಶ್ವರನಾದ ದತ್ತಾತ್ರೇಯನು ಆ ಕಥೆಯನ್ನು ಹೇಳಲು ಇಚ್ಛಿಸಿ, ಅವನನ್ನು ಕುರಿತು ಎಲೈ ಭೃಗು ವಂಶಶ್ರೇಷ್ಠನಾದ ಪರಶುರಾಮನೇ, ಈ ಎಲ್ಲ ವೃತ್ತಾಂತವನ್ನೂ ಹೇಳುವೆನು, ಕೇಳು. ಎಂದನು. ॥೧೬॥

ಹೀಗೆ ಸುದರ್ಶನಚಕ್ರವು ಆಗ ನಷ್ಟವಾಗಲು ಮೂರು ಲೋಕಗಳಿಗೂ ಒಡೆಯನಾದ ವಿಷ್ಣುವಿನೊಂದಿಗೆ ಯುದ್ಧಮಾಡಲು ದೇವತೆಗಳಿಗೆ ಶತ್ರುವೂ ರಾಕ್ಷಸ ಶ್ರೇಷ್ಠನೂ ಆದ ಮುರ ಎಂಬ ರಾಕ್ಷಸನು ಬಂದನು. ॥೧೭॥

ಮುರ ಎಂಬ ಮಹಾಬಲಿಷ್ಠನಾದ ರಾಕ್ಷಸನು ವಿಷ್ಣುವಿನೊಂದಿಗೆ ಯುದ್ಧ ಮಾಡಿದನು. ಅವನೊಂದಿಗೆ ಯುದ್ಧಮಾಡುತ್ತಾ ವಿಷ್ಣುವು ಕಾಂತಿಹೀನನಾದನು! ॥೧೮॥

ಸುದರ್ಶನೇನ ರಹಿತೋ ನಿಶ್ಶೃಂಗಃ ಪುಂಗವೋ ಯಥಾ ।
ಅಥ ಬ್ರಹ್ಮಾ ಪ್ರಾಹ ಹರಿಂ ಹರೇ ಶೃಣು ವಚೋ ಮಮ ॥೧೯॥

ಸುದರ್ಶನೇನ ರಹಿತೋ ನೇಮಂ ಜೇತುಂ ವಿಭುರ್ಭವಾನ್ ।
ಉಪತಿಷ್ಠ ಪರಾಂ ಜ್ವಾಲಾಮುಖೀಂ ದೇವೀಂ ಸಮಾಹಿತಃ ॥೨೦॥

ಪ್ರಾಪ್ಯ ಚಕ್ರಂ ತಯಾ ದತ್ತಂ ಜೇತುಮೇನಂ ಸಮರ್ಹಸಿ ।
ಶ್ರುತ್ವೈವಂ ಬ್ರಹ್ಮಗದಿತಂ ಯುಧ್ಯಮಾನೋ ರಮಾಪತಿಃ ॥೨೧॥

ಅಂತರ್ಧಿಮಾಯಯೌ ತತ್ರ ತತೋ ದೃಷ್ಟ್ವಾ ಮುರಾ ಸುರಃ ।
ಪರಾಜಿತೋ ಹರಿರಿತಿ ಜ್ಞಾತ್ವಾ ಸ್ವಭವನಂ ಯಯೌ ॥೨೨॥

ಅಥ ವಿಷ್ಣುರುಪವ್ರಜ್ಯ ಶೈಲರಾಜಂ ಪರಾಽಶ್ರಯಂ ।
ಯತ್ರ ಸಾಽಹರ್ನಿಶಂ ಜ್ವಾಲಾಮುಖೀ ಪ್ರಜ್ವಲಿತಾಽನನಾ ॥೨೩॥

---

ವಿಷ್ಣುವು ಸುದರ್ಶನಚಕ್ರವಿಲ್ಲದೇ, ಕೊಂಬಿಲ್ಲದ ಗೂಳಿಯಂತೆ, ಇದ್ದನು. ಅನಂತರ ಬ್ರಹ್ಮನು ವಿಷ್ಣುವನ್ನು ಕುರಿತು ಓ ವಿಷ್ಣುವೇ, ನನ್ನ ಮಾತನ್ನು ದಯವಿಟ್ಟು ಕೇಳು, ಎಂದನು. ॥೧೯॥

ಓ ವಿಷ್ಣುವೇ, ನೀನು ಸುದರ್ಶನಚಕ್ರವಿಲ್ಲದೇ ಈ ರಾಕ್ಷಸನನ್ನು ಜಯಿಸಲು ಸಾಧ್ಯವಿಲ್ಲ. ಆದ್ದರಿಂದ ಏಕಾಗ್ರಮನಸ್ಸಿನಿಂದ ಕೂಡಿ ನೀನು ಜ್ವಾಲೆಯನ್ನು ಕಾರುವ ಆ ಅರುಣಾದೇವಿಯನ್ನು ಸೇವಿಸು. ॥೨೦॥

ಆಕೆಯಿಂದ ಸುದರ್ಶನಚಕ್ರವನ್ನು ಪಡೆದು ನೀನು ಈ ರಾಕ್ಷಸನನ್ನು ನಾಶಮಾಡಲು ಸಮರ್ಥನಾಗುತ್ತೀಯೆ. ಎಂದು ಬ್ರಹ್ಮನು ಹೇಳಿದ ಮಾತನ್ನು ಕೇಳಿ ಯುದ್ಧಮಾಡುತ್ತಿರುವ ಲಕ್ಷ್ಮೀಪತಿಯಾದ ನಾರಾಯಣನು ಅಲ್ಲಿಯೇ ಅಂತರ್ಧಾನವಾದನು. ಅನಂತರ ಮುರಾಸುರನು ಇದನ್ನು ಕಂಡು, ವಿಷ್ಣುವು ಸೋತುಹೋದನೆಂದು ಭಾವಿಸಿ, ತನ್ನ ಮನೆಯನ್ನು ಕುರಿತು ಹಿಂತಿರುಗಿದನು. ॥೨೨॥

ಅನಂತರ ವಿಷ್ಣುವು ಶ್ರೇಷ್ಠಳಾದ ದೇವಿಯ ವಾಸಸ್ಥಾನವಾದ, ಉರಿಯುತ್ತಿರುವ ಮುಖವುಳ್ಳ, ಜ್ವಾಲೆಯನ್ನು ಕಾರುತ್ತಿದ್ದ, ಅರುಣಾದೇವಿಯು ಹಗಲಿರುಳೂ ವಾಸಮಾಡುತ್ತಿದ್ದ, ಹಿಮವತ್ಪರ್ವತದ ಪ್ರದೇಶವನ್ನು ಕುರಿತು ತೆರಳಿದನು. ॥೨೩॥

ಸ್ನಾತ್ವಾ ಸಂಯತವಾಕ್ಕಾಯ ಮಾನಸಸ್ತಾಮುಪಸ್ಥಿತಃ ।
ನಿರಾಹಾರೋ ನಿರಾಧಾರ ಸ್ತಪಸ್ತೇಪೇ ಮಹತ್ತರಂ ॥೨೪॥

ಊರ್ಧ್ವಬಾಹು ರ್ನಿಮೀಲಿತಾಽಕ್ಷಃ ಸಹಸ್ರಂ ಪರಿವರ್ತಯನ್ ।
ಅಥ ಸಾ ಸುಪ್ರಸನ್ನಾಽಭೂ ಜ್ಜ್ವಾಲಾವಕ್ತ್ರಾ ಮಹೇಶ್ವರೀ ॥೨೫॥

ಆವಿರ್ಭೂತಾ ಹರಿಪುರಶ್ಚಿ ಕೀರ್ಷಂ ತ್ಯಭಿವಾಂಛಿತಂ ।
ಸೂರ್ಯಕೋಟಿ ಪ್ರತೀಕಾಶಾ ತರುಣಾಽರುಣಸದ್ವಪುಃ ॥೨೬॥

ಮಸ್ತಕತ್ರಯ ಸಂರಾಜತ್ಕಿರೀಟತ್ರಯ ಶೋಭಿನೀ ।
ಖಡ್ಗಂ ತ್ರಿಶೂಲಂ ಬಿಭ್ರಾಣಾ ಮುಂಡಮಾಲಾ ವಿಭೂಷಿತಾ ॥೨೭॥

---

ಅಲ್ಲಿ ವಿಷ್ಣುವು ಸ್ನಾನವನ್ನು ಮಾಡಿ, ಮೌನವ್ರತಧಾರಿಯಾಗಿ, ಶರೀರ ಮತ್ತು ಮನಸ್ಸುಗಳನ್ನೂ ನಿಗ್ರಹಮಾಡಿ, ಆ ದೇವಿಯ ಸೇವೆಯನ್ನು ಕೈಗೊಂಡನು. ಆಗ ಇವನು ಆಹಾರವನ್ನು ಬಿಟ್ಟು, ಆಧಾರವೇ ಇಲ್ಲದೇ ನಿಂತು ಮಹತ್ತರವಾದ ತಪಸ್ಸನ್ನು ಮಾಡಿದನು. ॥೨೪॥

ವಿಷ್ಣುವು ತೋಳುಗಳನ್ನು ಮೇಲಕ್ಕೆತ್ತಿ ಕಣ್ಣುಗಳೆರಡನ್ನೂ ಮುಚ್ಚಿ, ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದನು. ಅನಂತರ ಮಹೇಶ್ವರಿಯಾದ, ಜ್ವಾಲೆಯನ್ನು ಕಾರುತ್ತಿರುವ ಅರುಣಾದೇವಿಯು ವಿಷ್ಣುವಿಗೆ ಪ್ರಸನ್ನಳಾದಳು. ॥೨೫॥

ವಿಷ್ಣುವಿನ ಇಷ್ಟಾರ್ಥವನ್ನು ನೆರವೇರಿಸಲು ಮನಸ್ಸುಮಾಡಿ, ಕೋಟಿಸೂರ್ಯರಷ್ಟು ಪ್ರಕಾಶಮಾನಳಾಗಿ, ಹೊಸದಾಗಿ ಉದಯಿಸಿದ ಅರುಣನಂತೆ ಕೆಂಪಾಗಿರುವ, ಶ್ರೇಷ್ಠವಾದ ಶರೀರವುಳ್ಳವಳಾಗಿ ಅರುಣಾದೇವಿಯು ಅವನ ಮುಂದೆ ಕಾಣಿಸಿಕೊಂಡಳು. ॥೨೬॥

ಅರುಣಾದೇವಿಯು ಮೂರುತಲೆಗಳಲ್ಲಿ ಪ್ರಕಾಶಮಾನವಾದ ಮೂರು ಕಿರೀಟಗಳಿಂದ ಶೋಭಿಸುತ್ತಾ, ಕತ್ತಿ, ತ್ರಿಶೂಲ ಎಂಬ ಆಯುಧಗಳನ್ನೂ, ಹಿಡಿದುಕೊಂಡು ಮುಂಡಗಳ ಹಾರದಿಂದ ಶೋಭಿಸುತ್ತಿದ್ದಳು. ॥೨೭॥

ನೇತ್ರೇಭ್ಯೋ ವದನೇಭ್ಯಶ್ಚ ಶ್ರೋತ್ರೇಭ್ಯೋ ಘ್ರಾಣಮಾರ್ಗತಃ ।
ಸಮಸ್ತರೋಮ ಕೂಪೇಭ್ಯೋ ಮಹಾಜ್ವಾಲಾಂ ಕ್ಷಣೇ ಕ್ಷಣೇ ॥೨೮॥

ಮುಂಚಂತೀ ಭೀಷಣಾಕಾರಾ ಗೌರೀಕ್ರೋಧಸಮುದ್ಭವಾ ।
ಸ್ತೂಯಮಾನಾ ಸುರವರೈರ್ಗಂಧರ್ವೈರಪ್ಸರೋಗಣೈಃ ॥೨೯॥

ನೃತ್ಯದ್ಭಿರ್ಗಾಯಮಾನೈಶ್ಚ ಸಂವೃತಾ ಸ್ವಗಣೈರಪಿ ।
ನಿಶಾಮ್ಯ ವಿಷ್ಣುಸ್ತಾಂ ಜ್ವಾಲಾಮುಖೀಂ ಸನ್ನಿಧಿಮಾಗತಾಂ ॥೩೦॥

ಪ್ರಣಮ್ಯ ದಂಡವದ್ಭಕ್ತ್ಯಾ ಬದ್ಧಾಂಜಲಿಪುಟಃ ಸ್ಥಿತಃ ।
ಸ್ತುತಿಂ ಚಕ್ರೇ ಗುಹ್ಯವಾಗ್ಭಿರ್ವಿಚಿತ್ರಾಭಿರ್ಭೃಗೂದ್ವಹ ॥೩೧॥

ಅಥ ತುಷ್ಟಾ ಸ್ತುತಿಗಣೈರ್ಜ್ವಾಲಾವಕ್ತ್ರಾ ಮಹೇಶ್ವರೀ ।
ಪ್ರಾಹ ವಿಷ್ಣುಂ ಲೋಕಪತಿಂ ಗಂಭೀರವಚಸಾ ತದಾ ॥೩೨॥

---

ದೇವಿಯು ಕಣ್ಣುಗಳಿಂದಲೂ, ಮುಖಗಳಿಂದಲೂ, ಕಿವಿಗಳಿಂದಲೂ, ಮೂಗಿನ ಮೂಲಕವೂ. ಎಲ್ಲಾ ಕೂದಲಿನ ಹಳ್ಳಗಳಿಂದಲೂ ಮಹಾಜ್ವಾಲೆಯನ್ನು ಪ್ರತಿಕ್ಷಣದಲ್ಲಿಯೂ ಬಿಡುತ್ತಿದ್ದಳು. ॥೨೮॥

ಹಾಗೆ ಜ್ವಾಲೆಯನ್ನು. ಕಾರುತ್ತಾ ಭಯಂಕರವಾದ ಸ್ವರೂಪವುಳ್ಳವಳಾಗಿ ಗೌರಿಯ ಕೋಪದಿಂದುಂಟಾದ ಈ ದೇವಿಯು ದೇವಶ್ರೇಷ್ಠರಿಂದಲೂ, ಗಂಧರ್ವರು ಮತ್ತು ಅಪ್ಸರಸ್ತ್ರೀಯರ ಗುಂಪಿನಿಂದಲೂ, ಸ್ತೋತ್ರಮಾಡಲ್ಪಡುತ್ತಿದ್ದಳು. ॥೨೯॥

ಅರುಣಾದೇವಿಯು ನರ್ತನಮಾಡುತ್ತಿರುವ ಮತ್ತು ಗಾನಮಾಡುತ್ತಿರುವ ತನ್ನ ಗುಂಪಿನವರಿಂದ ಕೂಡಿದ್ದಳು. ಜ್ವಾಲಾಮುಖಿಯಾದ ಈಕೆಯು ತನ್ನ ಸಮೀಪಕ್ಕೆ ಬಂದಿದ್ದಾಳೆಂಬುದನ್ನು ವಿಷ್ಣುವು ನೋಡಿದನು. ॥೩೦॥

ಎಲೈ ಪರಶುರಾಮನೇ, ಆಕೆಯನ್ನು ವಿಷ್ಣುವು ನೋಡಿ, ಭೂಮಿಯಮೇಲೆ ದಂಡಾಕಾರವಾಗಿ ಪ್ರಣಾಮವನ್ನು ಮಾಡಿ, ಕೈಜೋಡಿಸಿಕೊಂಡು ನಿಂತು ಆಶ್ಚರ್ಯಕರ ವಾದ ರಹಸ್ಯವಾದ ಮಂತ್ರಗಳಿಂದ ಆಕೆಯನ್ನು ಸ್ತೋತ್ರಮಾಡಿದನು. ॥೩೧॥

ಅನಂತರ ವಿಷ್ಣುವಿನ ಸ್ತೋತ್ರಗಳಿಂದ ಸಂತೋಷಪಟ್ಟ ಜ್ವಾಲಾಮುಖಿಯೂ ಮಹೇಶ್ವರಿಯೂ ಆದ ಅರುಣಾದೇವಿಯು ಲೋಕಕ್ಕೆ ಒಡೆಯನಾದ ವಿಷ್ಣುವನ್ನು ಕುರಿತು ಗಂಭೀರವಾದ ಧ್ವನಿಯಿಂದ ಈ ರೀತಿಯಲ್ಲಿ ಹೇಳಿದಳು. ॥೩೨॥

ವಿಷ್ಣೋ ಲೋಕೇಶ ತುಷ್ಟೋಽಸ್ಮಿ ವರಂ ವೃಣ್ವಭಿವಾಂಛಿತಂ ।
ದದಾಮಿ ತುಭ್ಯಮಖಿಲ ಮನರ್ಹಂ ತೇ ನ ವಿದ್ಯತೇ ॥೩೩॥

ಮಮ ದೇವ್ಯಾ ಯತೋ ಭ್ರಾತಾ ಪೂಜಿತಃ ಸರ್ವತಸ್ತ್ವತಃ ।
ಶ್ರುತ್ವೇತ್ಥಂ ತದ್ವಚೋ ವಿಷ್ಣುಃ ಪ್ರಾಹ ಬದ್ಧಾಂಜಲಿಸ್ತದಾ ॥೩೪॥

ಶೃಣು ಮದ್ವಚನಂ ದೇವಿ ಪುರಾಽಹಂ ಜಗತೀಮಿಮಾಂ ।
ರಕ್ಷಿತುಂ ಶ್ರೀಮಹೇಶಾನ್ಯಾ ಸೃಷ್ಟ ಸ್ತ್ರಿಪುರಯಾ ನನು ॥೩೫॥

ತದಾಜ್ಞಯಾ ಲೋಕರಕ್ಷಾ ವಿಧೌ ಸತತ ಮುದ್ಯತಃ ।
ತತ್ರಾದ್ಯ ದೈತ್ಯರಾಟ್ಕಶ್ಚಿನ್ಮುರ ಇತ್ಯಭಿವಿಶ್ರುತಃ ॥೩೬॥

---

ಓ ಲೋಕೇಶನಾದ ವಿಷ್ಣುವೇ, ನಿನಗೆ ನಾನು ಪ್ರಸನ್ನಳಾಗಿದ್ದೇನೆ. ನಿನಗೆ ಇಷ್ಟವಾದ ವರಗಳನ್ನು ಕೇಳಿಕೋ. ನಿನಗೆ ಏನನ್ನಾದರೂ ಕೊಡುವೆನು. ನೀನು ಹೊಂದಲು ಯೋಗ್ಯವಲ್ಲದ ವಸ್ತುವೇ ಇಲ್ಲ. ॥೩೩॥

ನನ್ನನ್ನು ಸೃಷ್ಟಿಮಾಡಿದ ಗೌರೀದೇವಿಗೆ ನೀನು ಅಣ್ಣನಾಗಿರುವುದರಿಂದ ನೀನು ಸರ್ವವಿಧದಲ್ಲೂ ಪೂಜಿಸಲ್ಪಡಲು ಯೋಗ್ಯನು. ಎಂದು ಅರುಣಾದೇವಿಯು ಹೇಳಿದ ಮಾತನ್ನು ಕೇಳಿ ವಿಷ್ಣುವು ಕೈಜೋಡಿಸಿಕೊಂಡು ಆಕೆಯನ್ನು ಕುರಿತು ಈ ರೀತಿಯಲ್ಲಿ ಪ್ರಾರ್ಥಿಸಿಕೊಂಡನು. ॥೩೪॥

ಓ ದೇವಿಯೇ, ನನ್ನ ಮಾತನ್ನು ದಯವಿಟ್ಟು ಲಾಲಿಸು. ಮಹೇಶ್ವರಿಯಾದ ತ್ರಿಪುರಾದೇವಿಯು ಹಿಂದೆ ನನ್ನನ್ನು ಲೋಕಸಂರಕ್ಷಣೆಮಾಡಲೆಂದು ಸೃಷ್ಟಿಮಾಡಿದಳೆಂಬ ವಿಷಯವು ನಿನಗೆ ಗೊತ್ತೇ ಇದೆ. ॥೩೫॥

ಆಕೆಯ ಅಪ್ಪಣೆಯಂತೆ ನಾನು ಲೋಕದ ಸಂರಕ್ಷಣೆಯನ್ನೇ ಯಾವಾಗಲೂ ಮಾಡುತ್ತಿದ್ದೇನೆ. ಆದರೆ ಈಗಿನ ಸಂದರ್ಭದಲ್ಲಿ ರಾಕ್ಷಸರಾಜನಾದ ಮುರನೆಂದು ಪ್ರಸಿದ್ಧನಾದ ರಾಕ್ಷಸನೊಬ್ಬನು ನನ್ನೊಡನೆ ಯುದ್ಧಮಾಡಲು ಬಂದಿರುತ್ತಾನೆ. ॥೩೬॥

ಜಗತೀನಾಶನೋದ್ಯುಕ್ತೋ ಬಾಧತೇಽಖಿಲದೇವತಾಃ ।
ತಂ ಜೇತುಂ ಪ್ರಾರ್ಥಿತೋ ದೇವೈರಹಂ ಸ್ವಬಲಸಂವೃತಃ ॥೩೭॥

ಯುಧ್ಯಮಾನಸ್ತೇನ ಯುದ್ಧೇ ಹೀನವೀರ್ಯೋಽಭವಂ ನನು ।
ಚಕ್ರೇಣ ರಹಿತಸ್ತೇನ ತದರ್ಥಂ ತ್ವಾಮುಪಸ್ಥಿತಃ ॥೩೮॥

ಚಕ್ರದಾನೇನ ಜಗತೀಂ ರಕ್ಷಾಽದ್ಯ ಸಚರಾಽಚರೀಂ ।
ಅಥವಾ ಜಹಿ ದೈತ್ಯೇಶಂ ತ್ವಮೇವ ಬಲವತ್ತರಾ ॥೩೯॥

ಶ್ರುತ್ವೇತ್ಥಂ ಪ್ರಾರ್ಥಿತಂ ವಿಷ್ಣೋರ್ದೇವೀ ಜ್ವಾಲಾಮುಖೀ ತದಾ ।
ಆಹ ಸಸ್ಮಿತಯಾ ವಾಚಾ ಸಂಬೋಧ್ಯ ಕಮಲಾಪತಿಂ ॥೪೦॥

ನಾರಾಯಣ ತ್ವಂ ದಯಿತಾ(ತೋ)ಭ್ರಾತಾ ಗೌರ್ಯಾಸ್ತ್ರಿವಿಕ್ರಮಃ ।
ಅಹಮಾಜ್ಞಾಕರೀ ತಸ್ಯಾಸ್ತ್ವಂ ತಸ್ಮಾನ್ಮಾನ್ಯ ಏವ ಹಿ ॥೪೧॥

---

ಈ ರಾಕ್ಷಸನು ಲೋಕಗಳ ನಾಶವನ್ನು ಮಾಡುವುದರಲ್ಲಿ ತೊಡಗಿದ್ದಾನೆ. ಅಲ್ಲದೇ ಎಲ್ಲಾ ದೇವತೆಗಳನ್ನೂ ಕಾಡಿಸುತ್ತಿದ್ದಾನೆ. ಅವನನ್ನು ನನ್ನ ಬಲದಿಂದ ಜಯಿಸಬೇಕೆಂದು ದೇವತೆಗಳು ನನ್ನನ್ನು ಪ್ರಾರ್ಥಿಸಿದ್ದಾರೆ. ॥೩೭॥

ಆ ರಾಕ್ಷಸನೊಂದಿಗೆ ಯುದ್ಧಮಾಡುತ್ತಾ ಸುದರ್ಶನಚಕ್ರವಿಲ್ಲದೇ ನಾನು ಶಕ್ತಿಗುಂದಿದ್ದೇನೆ. ಆದ್ದರಿಂದ ಆ ಚಕ್ರವನ್ನು ಪಡೆಯಲು ನಿನ್ನ ಸಮೀಪಕ್ಕೆ ಬಂದಿದ್ದೇನೆ. ॥೩೮॥

ಆದ್ದರಿಂದ ನೀನು ದಯವಿಟ್ಟು ಸುದರ್ಶನಚಕ್ರವನ್ನು ಕೊಟ್ಟು ಅದರ ಮೂಲಕ ಚರಾಚರಜಗತ್ತಿನ ರಕ್ಷಣೆಯಾಗುವಂತೆ ಮಾಡು. ಅಥವಾ ಅತ್ಯಂತ ಬಲಿಷ್ಠಳಾದ ನೀನೇ ಆ ರಾಕ್ಷಸರಾಜನನ್ನು ಕೊಲ್ಲು. ॥೩೯॥

ವಿಷ್ಣುವಿನ ಈ ಪ್ರಾರ್ಥನೆಯನ್ನು ಕೇಳಿ, ಜ್ವಾಲೆಯನ್ನು ಕಾರುವ, ಅರುಣಾ ದೇವಿಯು ಮುಗುಳುನಗೆಯೊಡನೆ ವಿಷ್ಣುವನ್ನು ಸಂಬೋಧಿಸಿ ಈ ರೀತಿಯಲ್ಲಿ ಮಾತನಾಡಿದಳು. ॥೪೦॥

ಓ ನಾರಾಯಣನೇ, ನೀನು ಗೌರಿಗೆ ಬೇಕಾದವನೂ, ಅವಳ ಅಣ್ಣನೂ, ಹಿಂದೆ ವಾಮನಾವತಾರ ಮಾಡಿದ ಸ್ವಾಮಿಯೂ ಆಗಿದ್ದೀಯೆ. ನಾನಾದರೋ ಗೌರೀ

ನಿಗ್ರಹೇ ದೈತ್ಯರಾಜಸ್ಯ ಶಕ್ತಾಽಹಮಪಿ ಸಾಂಪ್ರತಂ ।
ಆಜ್ಞಾ ಶ್ರೀತ್ರಿಪುರೇಶಾನ್ಯಾಃ ಸರ್ವೇಷಾಂ ಮೂರ್ಧ್ನಿ ತಿಷ್ಠತಿ ॥೪೨॥

ವಾಯುರ್ವಾತಿ ಸದಾ ಸೂರ್ಯಃ ಉದೇತೀಂದುಃ ಸ ತಾರಕಃ ।
ಧರಾ ಲೋಕಂ ಧಾರಯತಿ ವಾರಿಧಿರ್ನಾತಿವರ್ತತೇ ॥೪೩॥

ಯದ್ಭಯಾತ್ತದಹಂ ಕಸ್ಮಾನ್ನ ಬಿಭೇಮಿ ನಿರರ್ಗಲಾ ।
ಸಂತುಷ್ಟಾ ಚ ತ್ವತ್ತಪಸಾ ಗೃಹಾಣ ನಿಜಮಾಯುಧಂ ॥೪೪॥

ಇತ್ಯುಕ್ತ್ವಾ ಸ್ವಾಯುಧಾಚ್ಚಕ್ರಂ ಸಹಸ್ರಾರಂ ಸುದರ್ಶನಂ ।
ಸಹಸ್ರ ಜ್ವಾಲಯಾ ಯುಕ್ತಂ ಸರ್ವಶಕ್ತಿಸಮನ್ವಿತಂ ॥೪೫॥

---

ದೇವಿಯ ಅಪ್ಪಣೆಯಂತೆ ನಡೆಯುವ ಸೇವಕಿಯು. ಆದ್ದರಿಂದ ನನಗೆ ನೀನು ಪೂಜ್ಯನೇ ಆಗಿದ್ದೀಯೆ. ॥೪೧॥

ಅಲ್ಲದೆ ರಾಕ್ಷಸರಾಜನಾದ ಮುರನನ್ನು ಕೊಲ್ಲಲು ನಾನು ಸಮರ್ಥಳಾಗಿದ್ದಾಗ್ಯೂ ದೇವಿಯ ಆಜ್ಞೆಯಂತೆಯೇ ನಡೆಸಬೇಕು. ಏಕೆಂದರೆ ತ್ರಿಪುರಾದೇವಿಯ ಅಪ್ಪಣೆಯನ್ನು ನಾವೆಲ್ಲರೂ ಶಿರಸ್ಸಿನಲ್ಲಿ ವಹಿಸಿದ್ದೇವೆ. ॥೪೨॥

ಶ್ರೀತ್ರಿಪುರಾದೇವಿಯ ಭಯದಿಂದಲೇ ಯಾವಾಗಲೂ ವಾಯುವು ಬೀಸುತ್ತದೆ. ಸೂರ್ಯನೂ ಕೂಡ ಉದಯಿಸುತ್ತಾನೆ. ನಕ್ಷತ್ರಗಳೊಂದಿಗೆ ಚಂದ್ರನೂ ಉದಯಿಸುತ್ತಾನೆ. ಭೂಮಿಯು ಲೋಕಗಳನ್ನು ಹೊತ್ತಿದೆ. ಸಮುದ್ರವು ಎಲ್ಲೆಯನ್ನೂ ಮೀರುವುದಿಲ್ಲ. ॥೪೩॥

ಹೀಗೆ ತ್ರಿಪುರಾದೇವಿಯ ಭಯದಿಂದಲೇ ಎಲ್ಲವೂ ತಮ್ಮ ತಮ್ಮ ಕರ್ತವ್ಯಗಳನ್ನು ತಪ್ಪದೇ ನಡೆಸುತ್ತಿರುವಾಗ ನಾನೊಬ್ಬಳು ಸ್ವತಂತ್ರವಾಗಿ ಆಕೆಯ ಆಜ್ಞೆಗೆ ಹೆದರದೇ ಇರುವುದಕ್ಕಾಗುತ್ತದೆಯೆ ? ಆದ್ದರಿಂದ ನಾನು ನಿನ್ನ ತಪಸ್ಸಿಗೆ ಮೆಚ್ಚಿರುವುದರಿಂದಲೂ ನಿನ್ನ ಆಯುಧವಾದ ಈ ಸುದರ್ಶನ ಚಕ್ರವನ್ನು ಕೊಡುವೆನು. ತೆಗೆದುಕೋ. ॥೪೪॥

ಈರೀತಿಯಲ್ಲಿ ಹೇಳಿ ಅರುಣಾದೇವಿಯು ತನ್ನ ಆಯುಧದಿಂದ ಸಾವಿರ ಮೊನೆಯುಳ್ಳ ಸಾವಿರ ವಿಧವಾದ ಜ್ವಾಲೆಯನ್ನು ಕಾರುತ್ತಿರುವ ಎಲ್ಲಾ ವಿಧವಾದ

ನಿಸ್ಸಾರ್ಯ ಪ್ರದದೌ ತಸ್ಮೈ ವಿಷ್ಣವೇ ಪ್ರೀತಮಾನಸಾ ।
ಇದಂ ಸುದರ್ಶನಂ ಚಕ್ರಂ ಮಹಾಸಾರಂ ತತೋಽಧಿಕಂ ॥೪೬॥

ಅಮೋಘಮಪ್ರತೀಕಾರ್ಯಂ ಮಾನಸಂ ತೇ ಭವಿಷ್ಯತಿ ।
ಅನೇನ ಜೇತಾ ಲೋಕಾನಾಂ ನಾಽಜೇಯಸ್ತವ ವಿದ್ಯತೇ ॥೪೭॥

ಗಚ್ಛ ದೈತ್ಯಂ ಜಹಿ ಕ್ಷಿಪ್ರಂ ಲೋಕಂ ಶ್ರೇಯೋಯುತಂ ಕುರು ।
ಇತ್ಯುಕ್ತ್ವಾಽಂತರ್ಹಿತಾ ಸದ್ಯಃ ಸ್ವಪ್ನದೃಷ್ಟೇವ ಸಾ ಶಿವಾ ॥೪೮॥

ಅಥ ಚಕ್ರಂ ಸಮಾಸಾದ್ಯ ಮುರಂ ಸಮರ ಆಹ್ವಯತ್ ।
ದೈತ್ಯಸೇನಾ ಪರಿವೃತಂ ತತ್ಕ್ಷಣೇನೈವ ಶ್ರೀಧರಃ ॥೪೯॥

---

ಶಕ್ತಿಗಳಿಂದಲೂ ಕೂಡಿರುವ ಸುದರ್ಶನ ಚಕ್ರವನ್ನು ಹೊರಹೊಮ್ಮಿಸಿ ತೆಗೆದಳು. ॥೪೫॥

ಹೀಗೆ ಅರುಣಾದೇವಿಯು ಸುದರ್ಶನ ಚಕ್ರವನ್ನು ತೆಗೆದು ವಿಷ್ಣುವಿನ ಮೇಲಿನ ಪ್ರೀತಿಯಿಂದ ಅವನಿಗೆ ಕೊಟ್ಟಳು. ಮತ್ತು ಆಕೆಯು ಅತ್ಯಂತ ಸಾರಭೂತವಾದ ಈ ಚಕ್ರವು ಇನ್ನೂ ಹೆಚ್ಚಾಗಿ ಪ್ರಕಾಶಿಸುತ್ತದೆ ಎಂದೂ ಅನುಗ್ರಹಿಸಿದಳು. ॥೪೬॥

ಈ ಚಕ್ರವು ವ್ಯರ್ಥವಾಗದೇ ಯಾವುದರಿಂದಲೂ ಪ್ರತೀಕಾರಮಾಡಲು ಅಸಾಧ್ಯವಾಗಿರುವುದರಿಂದ ನಿನ್ನ ಮನಸ್ಸಿನಲ್ಲಿರುವ ಇಷ್ಟಾರ್ಥವೂ ನೆರವೇರುವುದು. ನೀನು ಇದರ ಮೂಲಕ ಲೋಕದಲ್ಲಿ ಯಾರನ್ನಾದರೂ ಜಯಿಸುವೆ. ನಿನಗೆ ಜಯಿಸಲು ಅಸಾಧ್ಯನಾದವನು ಯಾವನೂ ಇರುವುದಿಲ್ಲವು. ॥೪೭॥

ಓ ವಿಷ್ಣುವೇ, ನೀನು ಹೋಗಿ ಆ ರಾಕ್ಷಸನನ್ನು ಶೀಘ್ರವಾಗಿ ಸಂಹರಿಸಿ ಲೋಕಕ್ಕೆ ಮಂಗಳವನ್ನುಂಟುಮಾಡು, ಎಂಬುದಾಗಿ ಹೇಳಿ, ಸ್ವಪ್ನದಲ್ಲಿ ಕಾಣಿಸಿಕೊಂಡಳೋ ಎಂಬುವಹಾಗೆ, ಆ ದೇವಿಯ ಅಂಶಭೂತಳಾದ ಅರುಣಾದೇವಿಯು ತತ್ ಕ್ಷಣದಲ್ಲಿಯೇ ಅಂತರ್ಧಾನವಾದಳು. ॥೪೮॥

ಅನಂತರದಲ್ಲಿ ಸುದರ್ಶನ ಚಕ್ರವನ್ನು ಅರುಣಾದೇವಿಯಿಂದ ಪಡೆದು ವಿಷ್ಣುವು ಮುರನೆಂಬ ರಾಕ್ಷಸನನ್ನು ಪುನಃ ಯುದ್ಧಕ್ಕೆ ಕರೆದನು. ರಾಕ್ಷಸಸೇನೆ

ಸುದರ್ಶನೇನ ಭಸ್ಮತ್ವಮನಯಚ್ಛಲಭಂ ಯಥಾ ।
ಇತಿ ತೇ ಕಥಿತಂ ರಾಮ ವಿಷ್ಣೋಶ್ಚಕ್ರಾಽಽಪ್ತಿಕಾರಣಂ ॥೫೦॥

ಅಥ ಕಾಮೋ ಯಥಾ ಭಸ್ಮೀಭೂತಸ್ತಚ್ಛೃಣು ಭಾರ್ಗವ ।
ಪ್ರಣೀಯ ಪಾರ್ವತೀಂ ದೇವಃ ತಪ ಆತಿಷ್ಠದುತ್ತಮಂ ॥೫೧॥

ಅಥ ಕಾಲೇನ ಮಹತಾ ತಾರಕೋ ನಾಮ ದೈತ್ಯರಾಟ್ ।
ಶೂರ ಪದ್ಮಾಽಭಿಧಾನೋಽಪಿ ತಪಸ್ತಪ್ತ್ವಾ ಸುದುಷ್ಕರಂ ॥೫೨॥

ಅಷ್ಟಾದಶಾಽಂಡಾಽಧಿಪತ್ಯಂ ಚಕ್ರತುರ್ಬಲದರ್ಪಿತೌ ।
ಅಥ ತಾಭ್ಯಾಂ ಪರಾಭೂತೋ ಯುಧೀಂದ್ರಃ ಸುರನಾಯಕಃ ॥೫೩॥

---

ಯೊಡಗೂಡಿ ಬಂದ ಮುರನನ್ನು ಲಕ್ಷ್ಮೀಪತಿಯಾದ ನಾರಾಯಣನು ತಕ್ಷಣದಲ್ಲಿಯೇ ನಾಶಮಾಡಿದನು. ॥೪೯॥

ಈ ರೀತಿಯಲ್ಲಿ ವಿಷ್ಣುವು ಸುದರ್ಶನ ಚಕ್ರದ ಸಹಾಯದಿಂದ, ಅಗ್ನಿಯು ಪತಂಗದ ಹುಳುವನ್ನು ನಾಶಮಾಡುವಂತೆ, ತಕ್ಷಣದಲ್ಲಿಯೇ ಮುರನೆಂಬ ರಾಕ್ಷಸನನ್ನು ಬೂದಿಯಾಗುವಂತೆ ಮಾಡಿದನು. ಎಲೈ ಪರಶುರಾಮನೇ, ವಿಷ್ಣುವಿಗೆ ಪುನಃ ಸುದರ್ಶನ ಚಕ್ರವು ಲಭಿಸಿದ ಬಗೆಯನ್ನು ನಾನು ನಿನಗೆ ವಿವರಿಸಿದ್ದೇನೆ. ॥೫೦॥

ಎಲೈ ಪರಶುರಾಮನೇ, ಇದಾದಮೇಲೆ ಮನ್ಮಥನು ಬೂದಿಯಾದದ್ದು ಹೇಗೆ? ಎಂಬ ವಿಷಯವನ್ನು ಹೇಳುವೆನು ಕೇಳು. ಶಿವನು ಪಾರ್ವತಿಯನ್ನು ಮದುವೆಯಾಗಿ ಶ್ರೇಷ್ಠವಾದ ತಪಸ್ಸನ್ನು ಮಾಡಿದನು. ॥೫೧॥

ಅನಂತರದಲ್ಲಿ ಬಹಳ ಕಾಲವಾದಮೇಲೆ ತಾರಕನೆಂಬ ರಾಕ್ಷಸರಾಜನೂ, ಮತ್ತು ಶೂರಪದ್ಮ ಎಂಬ ರಾಕ್ಷಸನೂ, ಇವರಿಬ್ಬರೂ ಬಹಳ ಕಠಿಣವಾದ ತಪಸ್ಸನ್ನು ಮಾಡಿದರು. ॥೫೨॥

ಆಮೇಲೆ ಆ ರಾಕ್ಷಸರಾಜರಿಬ್ಬರೂ ತಪೋಮಹಿಮೆಯ ಬಲದಿಂದ ಕೊಬ್ಬಿದವರಾಗಿ ಹದಿನೆಂಟು ಬ್ರಹ್ಮಾಂಡಗಳಿಗೂ ಕೂಡ ಚಕ್ರವರ್ತಿ ಪದವಿಯನ್ನು ಹೊಂದಿ ಆಳಿದರು. ದೇವತೆಗಳಿಗೆ ಒಡೆಯನಾದ ಇಂದ್ರನೂ ಕೂಡ ಯುದ್ಧದಲ್ಲಿ ಅವರಿಂದ ಸೋಲಿಸಲ್ಪಟ್ಟನು. ॥೫೩॥

ಉಪತಸ್ಥೌ ವಿಧಾತಾರಂ ದೀನೋ ದೇವಗಣೈಃ ವೃತಃ ।
ಸ ದೃಷ್ಟ್ವೇವಂ ವಿಧಂ ಶಕ್ರಂ ನಷ್ಟ ತ್ರಿಭುವನಶ್ರಿಯಂ ॥೫೪॥

ವಿಚಾರ್ಯ ಪ್ರಾಹ ದೇವೇಶಂ ಪ್ರಶ್ರಯಾವನತಂ ಸ್ಥಿತಂ ।
ಶೃಣು ಶಕ್ರ ಮಹಾನೇಷ ದೈತ್ಯರಾಜೋ ಬಲೈರ್ಯುತಃ ॥೫೫॥

ತಾರಕಃ ಶೂರಪದ್ಮಶ್ಚ ಮಯಾಽಗ್ರತಃ ಸಮೀಹಿತೌ ।
ನ ತ್ವಯಾ ವಾ ತಥಾಽನ್ಯೇನ ಜೇತುಂ ಶಕ್ಯೌ ಕಥಂ ಚನ ॥೫೬॥

ವಿನಾ ಮಹಾದೇವಸುತಂ ಸ್ವಾಮಿನಂ ದಿಷ್ಟಮೀದೃಶಂ ।
ತದ್ಗಚ್ಛ ಪ್ರಾರ್ಥಯ ಶಿವಂ ಪುತ್ರೋತ್ಪಾದನ ಕರ್ಮಣಿ ॥೫೭॥

ತತ್ಸುತಸ್ತವಸೇನಾಯಾಃ ಪತಿರ್ಭೂತ್ವಾಽಸುರೇಶ್ವರಂ ।
ಪರಾಜಿತ್ಯ ತ್ರಿಭುವನ ಶ್ರಿಯಂ ದಾಸ್ಯತಿ ಪೂರ್ವವತ್ ॥೫೮॥

---

ಇಂದ್ರನು ದೀನನಾಗಿ ದೇವತೆಗಳ ಸಮೂಹಗಳಿಂದ ಕೂಡಿದವನಾಗಿ ಬ್ರಹ್ಮನನ್ನು ಸಮೀಪಿಸಿದನು. ಬ್ರಹ್ಮನು ನಷ್ಟವಾದ ಮೂರುಲೋಕಗಳ ಸಂಪತ್ತುಳ್ಳವನಾದುದರಿಂದ ಹಾಗೆ ದೀನನಾಗಿರುವ ಇಂದ್ರನನ್ನು ನೋಡಿದನು. ॥೫೪॥

ಬ್ರಹ್ಮನು ಪ್ರಶ್ನಿಸಲು ಎಲ್ಲಾ ವಿಷಯವನ್ನೂ ತಿಳಿಸಿ ವಿನಯದಿಂದ ಬಾಗಿ ನಿಂತಿರುವ ಅವನನ್ನು ಕುರಿತು ಎಲೈ ಇಂದ್ರನೇ, ಕೇಳು. ರಾಕ್ಷಸರಾಜನಾದ ಆ ದೈತ್ಯನು ಬಹಳ ಶಕ್ತಿವಂತನಾಗಿ ದೊಡ್ಡವನಾಗಿದ್ದಾನೆ. ಎಂದನು. ॥೫೫॥
ಹೀಗೆ ನಾನು ಹೇಳಿದ ತಾರಕ, ಮತ್ತು ಶೂರಪದ್ಮ, ಎಂಬ ಇಬ್ಬರು ರಾಕ್ಷಸರು ನಿನ್ನಿಂದಲಾಗಲೀ ಅಥವಾ ಮತ್ತೊಬ್ಬನಿಂದಲಾಗಲೀ ಯಾರಿಂದಲಾಗಲೀ ಅವರನ್ನು ಯಾವರೀತಿಯಿಂದಲೂ ಜಯಿಸುವುದು ಅಸಾಧ್ಯವಾಗಿರುತ್ತದೆ. ॥೫೬॥

ಮಹಾದೇವನಾದ ಶಿವನ ಭಾಗ್ಯವೋ ಎಂಬಂತೆ ಜನಿಸುವ ಮಗನನ್ನು ಬಿಟ್ಟು ಇನ್ನಾರೂ ಈ ಅಸುರನನ್ನು ಜಯಿಸಲು ಸಮರ್ಥರಾಗಲಾರರು. ಆದ್ದರಿಂದ ಶಿವನ ಸಮೀಪಕ್ಕೆ ಹೋಗಿ, ತಾವು ಪುತ್ರನನ್ನು ದಯವಿಟ್ಟು ಪಡೆಯಬೇಕು, ಎಂದು ಪ್ರಾರ್ಥಿಸಿಕೊ. ॥೫೭॥

ಶಿವನ ಮಗನು ನಿನ್ನ ಸೇನೆಗೆ ಅಧಿಪತಿಯಾಗಿ ಆ ರಾಕ್ಷಸರಾಜರನ್ನು ಸೋಲಿಸಿ ಮೂರು ಲೋಕದ ಸಂಪತ್ತನ್ನು ನಿನಗೆ ಪೂರ್ವದಂತೆಯೇ ಕೊಡಿಸುವನು ಎಂದನು. ॥೫೮॥

ಶ್ರುತ್ವಾ ವಿಧಿವಚೋ ದೇವ ಪತಿರ್ದೇವಗಣೈರ್ಯುತಃ ।
ಯಯೌ ತ್ರಿಲೋಚನಂ ದೇವಂ ಪ್ರಾರ್ಥಿತುಂ ಜವತಸ್ತದಾ ॥೫೯॥

ತತ್ರ ಗತ್ವಾ ದೇವದೇವಂ ನೀಲಕಂಠಮುಮಾಪತಿಂ ।
ಅಪಶ್ಯದ್ವಿಬುಧಾಧೀಶಃ ಶಾಂತ ಸರ್ವಾಶ್ರಯಂ ತದಾ ॥೬೦॥

ಸನಕಾದ್ಯೈರ್ಮುನಿಗಣೈಃ ಸತ್ತ್ವೋರ್ಜಿತ ಮಹಾಶಯೈಃ ।
ಶಾರದಾಂಬು ನಿಭಸ್ವಚ್ಛ ಶಾಂತಚಿತ್ತೈರ್ನಿರಂಜನೈಃ ॥೬೧॥

ಪರೀವೃತಂ ಮೀಲಿತಾಕ್ಷಂ ಜ್ವಲಿತಂ ತಪಸಾಂ ಗಣೈಃ ।
ನ ತತ್ರ ಕಶ್ಚಿಚ್ಚಲತಿ ನ ನಿಃಶ್ವಸಿತಿ ನೇಕ್ಷತೇ ॥೬೨॥

---

ಬ್ರಹ್ಮನ ಈ ಮಾತನ್ನು ಕೇಳಿ ದೇವೇಂದ್ರನು ದೇವತೆಗಳ ಗುಂಪಿನಿಂದ ಕೂಡಿದವನಾಗಿ ಮುಕ್ಕಣ್ಣನಾದ ಶಿವನನ್ನು ಈ ವಿಷಯದಲ್ಲಿ ಪ್ರಾರ್ಥಿಸಲು ಶೀಘ್ರನಾಗಿ ಹೊರಟನು. ॥೫೯॥

ಅಲ್ಲಿಗೆ ಹೋಗಿ ಇಂದ್ರನು ಪಾರ್ವತೀಪತಿಯೂ ಕಪ್ಪಾದ ಕತ್ತುಳ್ಳವನೂ, ಆದ, ಶಾಂತರಾಗಿ ಕುಳಿತಿದ್ದ ಅಲ್ಲಿನ ಜನರಿಗೆ ಆಶ್ರಯದಾತನಾದ ಶಿವನನ್ನು ನೋಡಿದನು. ॥೬೦॥

ಸತ್ತ್ವಗುಣದಿಂದ ತುಂಬಿದ ಮನಸ್ಸುಳ್ಳವರಾದ್ದರಿಂದಲೇ ಮಹಾನುಭಾವರಾದ, ಶರತ್ಕಾಲದ ನೀರಿನಂತೆ ಸ್ವಚ್ಛವೂ ಮತ್ತು ಶಾಂತವೂ ಆದ ಮನಸ್ಸುಳ್ಳ, ಕಳಂಕವಿಲ್ಲದ, ಸನಕರೇ ಮೊದಲಾದ ಋಷಿಗಳಿಂದ ಸೇವಿಸಲ್ಪಡುತ್ತಿರುವ ಶಿವನನ್ನು ನೋಡಿದನು. ॥೬೧॥

ಇಂತಹ ಮಹನೀಯರಿಂದ ಸುತ್ತುವರಿಯಲ್ಪಟ್ಟ, ಕಣ್ಣುಗಳನ್ನು ಮುಚ್ಚಿಕೊಂಡಿರುವ, ಪ್ರಕಾಶಮಾನರಾದ ತಪಸ್ವಿಗಳ ಸಮೂಹದಿಂದ ಕೂಡಿರುವ, ಶಿವನನ್ನು ಇಂದ್ರನು ದರ್ಶನಮಾಡಿದನು. ಆ ಸಭೆಯಲ್ಲಿ ಯಾರೂ ಅಲುಗಾಡುತ್ತಿರಲಿಲ್ಲ. ಯಾರೂ ಗಟ್ಟಿಯಾಗಿ ಉಸಿರುಬಿಡುವುದಾಗಲೀ ಅಥವಾ ನೋಡುವುದಾಗಲೀ ಇವು ಯಾವುದೂ ಆ ಸಭೆಯಲ್ಲಿ ಇರಲಿಲ್ಲ. ॥೬೨॥

ಪರಸ್ಪರಂ ನ ಪಶ್ಯಂತಿ ನ ವದಂತ್ಯಪಿ ಕರ್ಹಿಚಿತ್ ।
ನ ಪಕ್ಷಿಣೋಽಪಿ ವಾಶಂತಿ ನ ವಾಯುರ್ವಾತಿ ವೇಗತಃ ॥೬೩॥

ಸೂರ್ಯೋ ನೈವ ಪ್ರತಪತಿ ನ ಸ್ಪಂದಂತೇ ಚ ಶಾಖಿನಃ ।
ಚಿತ್ರಾಽಲಿಖಿತವತ್ತತ್ರ ನಿಷ್ಕ್ರಿಯಂ ಪ್ರತ್ಯಚೇಷ್ಟತ ॥೬೪॥

ತತ್ರ ದೂರೇಽಪಿ ಸಂಸ್ಥಾತುಂ ನಾಽಶಕದ್ದೇವಭೂಪತಿಃ ।
ತಪಸ್ತೇಜಃ........................................................ ॥೬೫॥

ಅಥ ಸಸ್ಮಾರ ವಚಸಾಂ ಪತಿಂ ಗುರು ಮನನ್ಯಧೀಃ ।
ನಾನ್ಯೋಽತ್ರಾಽಲಂ ಮಮತ್ರಾಣ ಇತಿ ಮತ್ವಾ ಶತಕ್ರತುಃ ॥೬೬॥

ಸ್ಮೃತಮಾತ್ರೋ ಯೋಗಿರಾಜಃ ಸಮಾಯಾತಃ ಶತಕ್ರತುಂ ।
ಪ್ರಾಪ್ತಂ ಗುರುಂ ಸಮಾಲೋಕ್ಯ ದೇವೇಶಃ ಸುಖಿತೋ ಬಭೌ ॥೬೭॥

---

ಅಲ್ಲಿ ಒಬ್ಬರನ್ನೊಬ್ಬರು ನೋಡುತ್ತಿರಲಿಲ್ಲ. ಮಾತುಗಳನ್ನೂ ಆಡುತ್ತಿರಲಿಲ್ಲ. ಪಕ್ಷಿಗಳೂ ಧ್ವನಿಮಾಡುತ್ತಿರಲಿಲ್ಲ. ಗಾಳಿಯೂ ಕೂಡ ವೇಗವಾಗಿ ಬೀಸುತ್ತಿರಲಿಲ್ಲ. ॥೬೩॥

ಸೂರ್ಯನೂ ಸುಡುತ್ತಿರಲಿಲ್ಲ. ಮರಗಳು ಅಲ್ಲಾಡುತ್ತಿರಲಿಲ್ಲ. ಎಲ್ಲವೂ ಚಿತ್ರ ದಲ್ಲಿ ಬರೆದ ಬೊಂಬೆಗಳಂತೆ ಕ್ರಿಯೆಯಿಲ್ಲದೇ ನಿಶ್ಚಲವಾಗಿದ್ದವು. ॥೬೪॥
(ಈ ಭಾಗದಲ್ಲಿ ಗ್ರಂಥವು ಬಿಟ್ಟುಹೋಗಿದೆ.)

ಅಲ್ಲಿ ದೇವೇಂದ್ರನು ದೂರದಲ್ಲಿ ನಿಲ್ಲಲೂ ಸಮರ್ಥನಾಗಲಿಲ್ಲ. ಶಿವನ ತಪಸ್ಸು ಅಷ್ಟು ಉಗ್ರವಾಗಿತ್ತು. ॥೬೫॥

ದೇವೇಂದ್ರನೂ ಈ ವಿಷಯವಾಗಿಯೇ ಬಹಳ ಹೊತ್ತು ಯೋಚಿಸಿ ಕೊನೆಗೆ ಹೀಗೆ ನಿಶ್ಚಯವನ್ನು ಮಾಡಿದನು. ॥೬೫॥

ನನಗೆ ಈ ಸಮಯದಲ್ಲಿ ಬೃಹಸ್ಪತಿಯಲ್ಲದೇ ಮತ್ತಾರೂ ರಕ್ಷಕರಿಲ್ಲವೆಂದು ಭಾವಿಸಿ, ಇಂದ್ರನು ಏಕಾಗ್ರಮನಸ್ಸಿನಿಂದ ವಾಕ್ಕಿಗೆ ಅಧಿಪತಿಯಾದ ಗುರುವನ್ನು ಸ್ಮರಿಸಿದನು. ॥೬೬॥

ಯೋಗಿರಾಜನಾದ ಬೃಹಸ್ಪತಿಯು ಇಂದ್ರನು ಸ್ಮರಿಸಿದ ಕೂಡಲೇ ಅಲ್ಲಿಗೆ ಬಂದನು. ದೇವೇಂದ್ರನು ಗುರುವು ಬಂದದ್ದನ್ನು ಕಂಡು ಆನಂದದಿಂದ ಕಳೆಗೊಂಡವ ನಂತೆ ಕಾಣಿಸಿದನು. ॥೬೭॥

ಅಥೇಂದ್ರಸ್ತಸ್ಯ ಚರಣೌ ಪ್ರಪೀಡ್ಯ ಶಿರಸಾ ನತಃ ।
ಬದ್ಧಾಂಜಲಿಃ ಪ್ರತ್ಯುವಾಚ ದೀನೋಽತ್ಯಂತ ಸುದುಃಖಿತಃ ॥೬೮॥

ಮಾಮೇವಂ ಪಶ್ಯಸಿ ಗುರೋ ಹೃತರಾಜ್ಯಂ ಸುದುಃಖಿತಂ ।
ಆಪದ್ವಾರಿಧಿ ನಿರ್ಮಗ್ನ ಮನನ್ಯ ಶರಣಂ ಚಿರಂ ॥೬೯॥

ಆಜ್ಞಪ್ತೋ ಲೋಕಪತಿನಾ ಪ್ರಾರ್ಥಿತುಂ ನೀಲಕಂಧರಂ ।
ಉತ್ಪಾದನಾಯ ಪುತ್ರಸ್ಯ ತದೇವ ಮುಪಸರ್ಪಿತುಂ ॥೭೦॥

ಅಸಮರ್ಥಃ ಕಿಂ ಕರೋಮಿ ಕಥಂ ಮೇ ಸ್ಯಾತ್ಸಮೀಹಿತಂ ।
ಆಚಕ್ಷ್ವಾಽತ್ರೋಚಿತಾಂ ಯುಕ್ತಿಂ ಯಥಾ ಮೇ ಸ್ಯಾತ್ಸಮೀಹಿತಂ ॥೭೧॥

ಶ್ರುತ್ವೇಂದ್ರವಚನಂ ಜೀವಶ್ಚಿಂತಯಿತ್ವಾಽಖಿಲಾಽಽಗಮಂ ।
ಪ್ರಾಹೇಂದ್ರಕಾರ್ಯಸಂಸಿದ್ಧ್ಯೈಹರ್ಷಯ ನ್ನಿವ ವಜ್ರಿಣಂ ॥೭೨॥

---

ಅನಂತರದಲ್ಲಿ ಇಂದ್ರನು ಅವನ ಕಾಲುಗಳನ್ನು ಒತ್ತಿ, ತಲೆಬಾಗಿ ನಮಸ್ಕರಿಸಿ ಕೈಜೋಡಿಸಿ ನಿಂತುಕೊಂಡು ಅತ್ಯಂತ ದುಃಖಗೊಂಡು ದೀನನಾಗಿ ಗುರುವನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೬೮॥

ಓ ಗುರುಗಳೇ, ರಾಜ್ಯವನ್ನು ಕಳೆದುಕೊಂಡು ಅತ್ಯಂತ ದುಃಖಾಕ್ರಾಂತನಾಗಿರುವ, ಸಂಕಟವೆಂಬ ಸಮುದ್ರದಲ್ಲಿ ಮುಳುಗಿ ಇನ್ನಾರೂ ರಕ್ಷಕರಿಲ್ಲದ, ನನ್ನನ್ನು ನೋಡಿದಿರಾ ? ಎಂದು ಬಹಳ ದುಃಖದಿಂದ ಕೂಡಿದವನಾಗಿ ಹೇಳಿದನು. ॥೬೯॥

ಲೋಕಕ್ಕೆ ಒಡೆಯನಾದ ಬ್ರಹ್ಮನು ಈ ವಿಚಾರದಲ್ಲಿ ಶಿವನನ್ನು ಪುತ್ರನನ್ನು ಪಡೆಯುವಂತೆ ಪ್ರಾರ್ಥಿಸೆಂದು ನನಗೆ ಅಪ್ಪಣೆಮಾಡಿದನು. ಆದರೆ ಶಿವನನ್ನು ನಾನು ಸಮೀಪಿಸಲೂ ಅಸಮರ್ಥನಾಗಿದ್ದೇನೆ. ॥೭೦॥

ಹೀಗೆ ಶಿವನನ್ನು ಸಮೀಪಿಸಲು ಅಸಮರ್ಥನಾಗಿರುವ ನಾನು ಈಗೇನನ್ನು ಮಾಡಬೇಕು ? ನನ್ನ ಇಷ್ಟಾರ್ಥಸಿದ್ಧಿಯಾಗುವ ಬಗೆ ಹೇಗೆ ? ಆದ್ದರಿಂದ ನೀವು ನನ್ನ ಅಭಿಲಾಷೆಯನ್ನು ನೆರವೇರಿಸುವುದಕ್ಕೆ ಬೇಕಾದ ಉಪಾಯವನ್ನು ದಯವಿಟ್ಟು ಹೇಳಿ. ॥೭೧॥

ಇಂದ್ರನ ಈ ಮಾತುಗಳನ್ನು ಕೇಳಿ, ಬೃಹಸ್ಪತಿಯು ಶಾಸ್ತ್ರೀಯವಾದ ರೀತಿಯಲ್ಲಿ ಎಲ್ಲವನ್ನೂ ಯೋಚಿಸಿ ಇಂದ್ರನನ್ನು ಸಂತೋಷಪಡಿಸುವ ರೀತಿಯಲ್ಲಿ ಅವನ ಕಾರ್ಯಸಿದ್ಧಿಗಾಗಿ ಹೀಗೆ ಹೇಳಿದನು. ॥೭೨॥

ಶತಕ್ರತೋ ಶೃಣು ವಚೋ ಗೌರೀಂ ತೋಷಯ ಭಕ್ತಿತಃ ।
ಸಾ ತೇ ವಿಧಾಸ್ಯತಿ ಶ್ರೇಯೋ ನಾನ್ಯದತ್ರ ಪರಾಯಣಂ ॥೭೩॥

ಇತ್ಯುಕ್ತ್ವಾಽಂತರ್ಹಿತೋ ಜೀವೋ ವಾಯುನುನ್ನಾಽಭ್ರಲೇಶವತ್ ।
ಅಥ ದೇವೇಶ ಆತಿಷ್ಠದ್ಗೌರೀಂ ತೋಷಯಿತುಂ ತಪಃ ॥೭೪॥

ವರ್ಷಮೇಕಂ ತತಸ್ತುಷ್ಟಾ ಗೌರೀ ಸನ್ನಿಹಿತಾಽಭವತ್ ।
ಶತಕ್ರತೋ ಬ್ರೂಹಿ ಯತ್ತೇ ಮನಸಿ ಹ್ಯಭಿವಾಂಛಿತಂ ॥೭೫॥

ಇತಿ ಪ್ರಾಹ ತದಾ ದೇವಪತಿರ್ದೇವೀ ಮನ್ವೈಕ್ಷತ ।
ಪ್ರಣಮ್ಯ ದಂಡವತ್ ಸ್ತುತ್ವಾ ವಿವಿಧೈಃ ಸ್ತುತಿಭಿಸ್ತದಾ ॥೭೬॥

---

ಎಲೈ ಇಂದ್ರನೇ, ನನ್ನ ಈ ಮಾತನ್ನು ಕೇಳು. ಗೌರಿಯನ್ನು ಭಕ್ತಿಭಾವದಿಂದ ಸಂತೋಷಪಡಿಸು. ಆಕೆಯು ನಿನ್ನ ಮಂಗಳವನ್ನು ಸಾಧಿಸಿಕೊಡುವಳು. ಈ ವಿಚಾರದಲ್ಲಿ ಇದು ಹೊರತು ಬೇರೆ ಯಾವ ಮಾರ್ಗವೂ ಇರುವುದಿಲ್ಲ. ಎಂದನು. ॥೭೩॥

ಹೀಗೆ ಹೇಳಿ ಗಾಳಿಯಿಂದ ಪ್ರೇರಿಸಲ್ಪಟ್ಟ ಸಣ್ಣಮೇಘದಂತೆ ಗುರುವು ಅಂತರ್ಧಾನವಾದನು. ತರುವಾಯ ದೇವೇಂದ್ರನು ಗೌರಿಯನ್ನು ಸಂತೋಷಪಡಿಸಲು ತಪಸ್ಸಿಗೆ ಪ್ರಾರಂಭಿಸಿದನು. ॥೭೪॥

ದೇವೇಂದ್ರನು ಒಂದು ವರ್ಷ ಹೀಗೆ ತಪಸ್ಸನ್ನು ಮಾಡಲು ಸಂತೋಷಗೊಂಡ ಗೌರಿಯು ಅವನ ಹತ್ತಿರಕ್ಕೆ ಬಂದಳು. ಆಕೆಯು ಅವನನ್ನು ಕುರಿತು, ಎಲೈ ಇಂದ್ರನೇ, ನಿನ್ನ ಮನಸ್ಸಿನಲ್ಲಿರುವ ಅಭಿಲಾಷೆಯನ್ನು ಹೇಳು. ಎಂದು ಕೇಳಿದಳು. ॥೭೫॥

ಗೌರಿಯ ಮಾತನ್ನು ಕೇಳಿ ಆಗ ದೇವೇಂದ್ರನು ಆಕೆಯನ್ನು ದರ್ಶನ ಮಾಡಿದನು. ಅವನು ಆಕೆಗೆ ದಂಡಾಕಾರವಾಗಿ ನಮಸ್ಕರಿಸಿ ಅನೇಕ ವಿಧವಾದ ಸ್ತೋತ್ರಗಳಿಂದ ಸ್ತುತಿಸಿದನು. ॥೭೬॥

ಪ್ರಾಹ ಗೌರೀಂ ದೇವಪತಿಃ ಕೃತಾಂಜಲಿ ಪುಟಸ್ತದಾ ।
ದೇವ್ಯಹಂ ಹೃತ ರಾಜ್ಯಶ್ರೀರಸುರೇಣ ಕಿಲಾಽಭವಂ ॥೭೭॥

ತತ್ರ ಪ್ರಾಹ ವಿಧಾತಾ ಮಾಂ ಮಹಾದೇವಸುತಾತ್ತ್ವ ।
ಭವೇದೀಪ್ಸಿತ ಮಿತ್ಯೇವಂ ನಾಽನ್ಯಸ್ತೇ ಕಾರ್ಯಸಾಧಕಃ ॥೭೮॥

ತದಹಂ ಸ್ವಾರ್ಥಸಂಸಿದ್ಧ್ಯೈ ಸಮಾಯಾತಸ್ತ್ವಿಹಾಧುನಾ ।
ದೃಷ್ಟ್ವಾ ತಪಸ್ಯಭಿರತಂ ಮಹಾದೇವಂ ತ್ರಿಲೋಚನಂ ॥೭೯॥

ಸರ್ವಥಾ ನಷ್ಟ ಸರ್ವಾಽಽಶೋ ಗುರುಣಾ ಪ್ರೇರಿತಸ್ತತಃ ।
ತ್ವಾಮೇವಂ ಶರಣಂ ಪ್ರಾಪ್ತಃ ಸಂರಕ್ಷಾಽಽಪನ್ಮಹಾರ್ಣವಾತ್ ।
ಇತ್ಯುಕ್ತ್ವಾ ದಂಡವದ್ಭೂಯಃ ಪಪಾತ ತತ್ಪದಾಂತಿಕೇ ॥೮೦॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಚತುಸ್ತ್ರಿಂಶೋಽಧ್ಯಾಯಃ

---

ದೇವೇಂದ್ರನು ಕೈಮುಗಿದುಕೊಂಡು ಗೌರೀದೇವಿಯನ್ನು ಕುರಿತು " ಓ ದೇವಿಯೇ, ನನ್ನ ರಾಜ್ಯಲಕ್ಷ್ಮಿಯನ್ನೇ ರಾಕ್ಷಸನು ಕಸಿದುಕೊಂಡಿದ್ದಾನೆ. ಎಂದನು. ॥೭೭॥

ಬ್ರಹ್ಮನು ಈ ವಿಷಯದಲ್ಲಿ ಶಿವನಿಗೆ ಪುತ್ರನು ಹುಟ್ಟಿದರೆ ನಿನ್ನ ಇಷ್ಟಾರ್ಥವು ಸಿದ್ಧಿಸುವುದು. ಆವನಲ್ಲದೇ ಬೇರೆ ಯಾರೊಬ್ಬನೂ ನಿನ್ನ ಕಾರ್ಯವನ್ನು ಸಾಧಿಸಿಕೊಡ ಲಾರನು. ಎಂದು ನನಗೆ ಹೇಳಿದನು. ॥೭೮॥

ಆದ್ದರಿಂದ ನನ್ನ ಕಾರ್ಯಸಿದ್ಧಿಗಾಗಿ ನಾನು ಇಲ್ಲಿಗೆ ಬಂದೆನು. ಆದರೆ ನಾನು ಮುಕ್ಕಣ್ಣನಾದ ಮಹಾದೇವನಾದ ಶಿವನು ತಪಸ್ಸಿನಲ್ಲಿ ಮಗ್ನನಾಗಿರುವುದನ್ನು ಕಂಡೆನು. ಅವನ ಸಮೀಪಕ್ಕೂ ಹೋಗಲಾರದವನಾಗಿದೇನೆ! ॥೭೯॥

ಆದ್ದರಿಂದ ನನ್ನ ಎಲ್ಲಾ ಅಭಿಲಾಷೆಯೂ ನಷ್ಟವಾದಂತಾಗಿತ್ತು. ಆದರೆ ಬೃಹಸ್ಪತಿಯ ಪ್ರೇರಣೆಯಂತೆ ಈಗ ನಾನು ನಿನ್ನನ್ನು ರಕ್ಷಕಳನ್ನಾಗಿ ಆಶ್ರಯಿಸಿ

ದ್ದೇನೆ. ಸಂಕಟವೆಂಬ ಈ ಮಹಾಸಮುದ್ರದಿಂದ ನನ್ನನ್ನು ಕಾಪಾಡು ಎಂದು ಹೇಳಿ ಪುನಃ ಆಕೆಯ ಪಾದಗಳಡಿಯಲ್ಲಿ ದಂಡಾಕಾರವಾಗಿ ಪ್ರಣಾಮಮಾಡಿದನು. ॥೮೦॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಮನ್ಮಥೋಪಾಖ್ಯಾನದಲ್ಲಿ ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಚತುಸ್ತ್ರಿಂಶೋಽಧ್ಯಾಯಃ ॥

### ಮೂವತ್ತುನಾಲ್ಕನೆಯ ಅಧ್ಯಾಯವು

ಶ್ರುತ್ವೇತ್ಥ ಮಿಂದ್ರವಚನಮುವಾಚ ತು ಮಹೇಶ್ವರೀ ।
ಶೃಣು ಹರ್ಯಶ್ವ ಮದ್ವಾಕ್ಯಂ ದುರ್ಘಟಂ ಪ್ರತಿಭಾತಿ ಮೇ ॥೧॥

ನ ಮೇ ಸಂತಾನಯೋಗೋಽಸ್ತಿ ಋಷಿಪತ್ನ್ಯಾಸ್ತು ಶಾಪತಃ ।
ಮಹಾದೇವಸ್ಯ ಚ ತಥಾ ಮದನ್ಯತ್ರ ಸುತೋದ್ಭವಃ ॥೨॥

ತತ್ಕಥಂ ಸ್ಯಾತ್ತವ ಹಿತಂ ಸರ್ವಥಾ ಭಾತಿ ದುಷ್ಕರಂ ।
ನಿಶಮ್ಯೈವಂ ವಚೋ ಗೌರ್ಯಾಃ ಶಕ್ರಃ ಪ್ರಾಂಜಲಿರಬ್ರವೀತ್ ॥೩॥

---

ಇಂದ್ರನ ಮಾತನ್ನು ಕೇಳಿ ಮಹೇಶ್ವರನ ಪತ್ನಿಯಾದ ಗೌರಿಯು, ಎಲೈ ಇಂದ್ರನೇ, ನಾನು ಹೇಳುವ ಮಾತನ್ನು ಕೇಳು. ನೀನು ಹೇಳುವುದನ್ನು ನೆರವೇರಿಸುವುದು ಅಸಾಧ್ಯವೆಂದು ನನಗೆ ತೋರುತ್ತದೆ. ಎಂದು ಇಂದ್ರನಿಗೆ ಹೇಳಿದಳು. ॥೧॥

ಋಷಿಪತ್ನಿಯರ ಶಾಪದಿಂದ ನನಗೆ ಮಕ್ಕಳಾಗುವ ಯೋಗವೇ ಇಲ್ಲ. ಶಿವನಿಗೆ ನನ್ನನ್ನು ಬಿಟ್ಟು ಬೇರೊಬ್ಬರಲ್ಲಿ ಮಕ್ಕಳಾಗುವ ಸಂಭವವಿಲ್ಲ. ॥೨॥

ಆದ್ದರಿಂದ ನಿನ್ನ ಇಷ್ಟಾರ್ಥವು ಸಿದ್ಧಿಸುವ ಬಗೆ ಹೇಗೆ? ಎಲ್ಲಾ ವಿಧದಲ್ಲೂ ನಿನ್ನ ಕಾರ್ಯಸಿದ್ಧಿಯು ಅಸಾಧ್ಯವೆಂದೇ ತೋರುತ್ತದೆ. ಎಂದು ಗೌರಿಯು ಹೇಳಿದ ಮಾತನ್ನು ಕೇಳಿ ಇಂದ್ರನು ಕೈಮುಗಿದುಕೊಂಡು ಆಕೆಯನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೩॥

ದೇವಿ ನೂನಂ ತವ ಕಥಂ ಶಾಪಃ ಕೇನ ಕುತಃ ಕಥಂ ।
ತ್ವಂ ಸರ್ವಲೋಕಸಂಪೂಜ್ಯಾ ಮಹಾದೇವೋಪಿವಾ ಕಥಂ ॥೪॥

ಸರ್ವಮೇತದಿತಿ ಚಿತ್ರಂ ಮೇ ಭಾತಿ ಶಂಕರವಲ್ಲಭೇ ।
ಹರಿಣಾ ಪ್ರಾರ್ಥಿತಾ ಸ್ವೈವಂ ಪ್ರವಕ್ತು ಮುಪಚಕ್ರಮೇ ॥೫॥

ಶೃಣು ಶಕ್ರ ಯಥಾ ಶಾಪೋ ಮಯಾ ಪ್ರಾಪ್ತಃ ಶಿವೇನ ಚ ।
ಪುರಾಽಹಂ ಹಿಮಶೈಲಸ್ಯ ಪಿತುರ್ಗೇಹೇ ಸ್ಥಿತಾ ಯದಾ ॥೬॥

ತದಾ ಕದಾಚಿತ್ಸಖಿಭಿಃ ಸಂವೃತಾ ವನಮಭ್ಯಗಾಂ ।
ಶರತ್ಕಾಲೇಽರಣ್ಯಶೋಭಾಂ ದ್ರಷ್ಟುಮುತ್ಸುಕಿತಾ ಸತೀ ॥೭॥

ತದಾ ಪಿತ್ರಾ ಸಮಾದಿಷ್ಟಾಃ ಸಹಸ್ರಂ ವನಚಾರಿಣಃ ।
ಮದ್ರಕ್ಷಣಾಯಾನುಗತಾಃ ವನಾನ್ಯೇವ ಮಹಂ ಗತಾ ॥೮॥

---

ಓ ದೇವಿಯೇ, ನಿನಗೆ ಶಾಪವೆಂದರೇನು? ಅದು ಯಾರಿಂದ ಏತಕ್ಕೆ ಹೇಗೆ ಬಂತು? ಎಲ್ಲಾ ಲೋಕಗಳಲ್ಲೂ ಪೂಜೆಗೆ ಯೋಗ್ಯಳಾದ ನಿನಗೆ ಇದು ಹೇಗೆ ಸಂಭವಿಸಿತು? ಮಹಾದೇವನಾದ ಶಿವನಿಗೂ ಏತಕ್ಕಾಗಿ ಶಾಪವು ಬಂದಿತು? ॥೪॥

ಈ ಎಲ್ಲಾ ವಿಷಯಗಳನ್ನೂ ದಯವಿಟ್ಟು ಹೇಳು. ಓ ಶಂಕರನಪತ್ನಿಯಾದ ದೇವಿಯೇ, ನನಗೆ ಇವೆಲ್ಲವೂ ಆಶ್ಚರ್ಯಕರವಾಗಿ ಕಾಣುತ್ತದೆ. ಎಂಬುದಾಗಿ ಇಂದ್ರನು ದೇವಿಯನ್ನು ಪ್ರಾರ್ಥಿಸಲು ಆಕೆಯು ಎಲ್ಲವನ್ನೂ ಅವನಿಗೆ ಹೇಳಲು ಪ್ರಾರಂಭಿಸಿದಳು. ॥೫॥

ಎಲೈ ಇಂದ್ರನೇ, ಗಮನವಿಟ್ಟು ಕೇಳು. ನನಗೂ ಮತ್ತು ನನ್ನ ಪತಿಯಾದ ಶಿವನಿಗೂ ಶಾಪಬರಲು ಕಾರಣವನ್ನು ಹೇಳುವೆನು. ಹಿಂದೆ ನಾನು ನಮ್ಮ ತಂದೆಯಾದ ಹಿಮವಂತನ ಮನೆಯಲ್ಲಿದ್ದಾಗ ಒಂದು ಸಂದರ್ಭವು ಒದಗಿತು. ॥೬॥

ಆಗ ಒಂದು ದಿನ ನಾನು ಸಖಿಯರೊಂದಿಗೆ ಶರತ್ಕಾಲದ ಅರಣ್ಯದ ಸೌಂದರ್ಯವನ್ನು ನೋಡಬೇಕೆಂಬ ಕುತೂಹಲದಿಂದ ಕಾಡಿಗೆ ಹೋದೆನು. ॥೭॥

ಆಗ ನನ್ನನ್ನು ರಕ್ಷಿಸಲು ಸಾವಿರಾರು ಕಿರಾತರಿಗೆ ನಮ್ಮ ತಂದೆಯು ಅಪ್ಪಣೆ ಮಾಡಿದ್ದನು. ಅದರಂತೆಯೇ ಅವರು ನನ್ನನ್ನು ಹೋದಕಡೆಯಲ್ಲೆಲ್ಲಾ ಅನುಸರಿಸಿದರು. ಹೀಗೆ ನಾನು ವನಗಳಲ್ಲಿ ತಿರುಗಿದೆನು. ॥೮॥

ಅಥ ತತ್ರ ಕದಾಚಿದ್ದೇವಿ ಮಯಾ ಮೃಗೀ ದೃಷ್ಟಾ ಶುಭಾ ।
ಅದೃಷ್ಟಪೂರ್ವಾ ರುಚಿರಾ ಮೃಗೇಣ ಸಹ ಸಂಗತಾ ॥೯॥

ಕ್ರೀಡಾರ್ಥಂ ತಾಂ ಸಮಾನೇತುಮಾದಿಷ್ಟಾ ವನಚಾರಿಣಃ ।
ಮಿಥುನಂ ಮೃಗಯೋಃ ಸರ್ವೇ ಪರಿವವ್ರುಃ ಸಮಂತತಃ ॥೧೦॥

ಮಿಥುನಂ ತತ್ಸಮಾನೀಯ ದದುರ್ಮಹ್ಯಂ ವನೇಚರಾಃ ।
ಅಥ ತತ್ರ ನಿಶ್ವಸಂತೀ ರುದಂತೀ ಹರಿಣೀ ಪುರಃ ॥೧೧॥

ಅಹಂ ದೇವಿ ಸುಹೋತ್ರಾಖ್ಯಃ ಕಾಶ್ಯಪಸ್ತಪಸಿ ಸ್ಥಿತಃ ।
ಪತ್ನ್ಯಾನಯಾ ಭರದ್ವಾಜಸುತಯಾಸ್ಮಿ ಮಹಾವನೇ ॥೧೨॥

ಕುರಂಗ ಮಿಥುನಂ ದೃಷ್ಟ್ವಾ ತದ್ರತಿರ್ಮೇಽಭಿಯಾಚಿತಾ ।
ತತ್ಕುರಂಗ ಶರೀರೇಣ ಸ್ಥಿತಾ ಸ್ವರತಿಕಾರಣಾತ್ ॥೧೩॥

---

ಆಮೇಲೆ ಅಲ್ಲಿ ಒಂದು ಸಲ ನಾನು ಹಿಂದೆಂದೂ ಕಾಣದ ಮನೋಹರವಾದ ಗಂಡು ಜಿಂಕೆಯೊಡನೆ ಕೂಡಿರುವ ಸುಂದರವಾದ ಹೆಣ್ಣು ಜಿಂಕೆಯೊಂದನ್ನು ನೋಡಿದೆನು. ॥೯॥

ನಾನು ನನ್ನ ಆಟಕ್ಕಾಗಿ ಅವುಗಳನ್ನು ಹಿಡಿದು ತರಲು ಕಿರಾತರಿಗೆ ಅಪ್ಪಣೆ ಮಾಡಿದೆನು. ಎಲ್ಲಾ ಕಿರಾತರೂ ಕೂಡಲೇ ಆ ಜಿಂಕೆಗಳ ಜೋಡಿಯನ್ನೇ ಸುತ್ತು ಗಟ್ಟಿದರು. ॥೧೦॥

ಕಿರಾತರು ಆ ಜಿಂಕೆಗಳ ಜೋಡಿಯುನ್ನು ಹಿಡಿದು ನನಗೆ ತಂದು ಕೊಟ್ಟರು. ತರುವಾಯ ಹೆಣ್ಣು ಜಿಂಕೆಯು ನಿಟ್ಟುಸಿರನ್ನು ಬಿಡುತ್ತಾ ಅಳುತ್ತಾ ನನ್ನ ಮುಂದೆ ಬಂದು ನಿಂತಿತ್ತು. ಅದು ಹೀಗೆ ಹೇಳಿತು. ॥೧೧॥

ಓ ದೇವಿಯೇ, ನಾನು ಕಾಶ್ಯಪಕುಲದಲ್ಲಿ ಹುಟ್ಟಿದ ಸುಹೋತ್ರನೆಂಬ ತಪಸ್ವಿಯು ಭರದ್ವಾಜ ಋಷಿಯ ಮಗಳಾದ ಈಕೆಯೊಂದಿಗೆ ಈ ಮಹಾರಣ್ಯದಲ್ಲಿ ವಾಸವಾಗಿದ್ದೆನು. ॥೧೨॥

ಭರದ್ವಾಜ ಋಷಿಯ ಮಗಳಾದ ಈ ನನ್ನ ಪತ್ನಿಯು ಅರಣ್ಯದಲ್ಲಿ ಜಿಂಕೆ ಗಳ ಜೋಡಿಯೊಂದು ಶೃಂಗಾರಸುಖವನ್ನು ಅನುಭವಿಸುತ್ತಿರುವುದನ್ನು ಕಂಡು ಆ ವಿಧವಾದ ಶೃಂಗಾರಸೌಖ್ಯವನ್ನು ನಾನೂ ಅನುಭವಿಸಬೇಕೆಂದು ಬಯಸಿದಳು.

ತತ್ರ ಕ್ಷಮಸ್ವಾಪವೃತ್ತ ಮನಯಾ ಕೃತಮಜ್ಞಯಾ ।
ಇತಿ ಸಂಪ್ರಾರ್ಥಿತಾ ತೇನ ಶಾಪ ಏವಂ ವಿಭೋ ಮಮ ॥೧೪॥

ಮಹಾದೇವಸ್ಯಾಪಿ ಶೃಣು ಶಾಪಹೇತುಂ ಪುರಾತನಂ ।
ಪುರಾ ತ್ರೇತಾಮುಖೇ ವಿಪ್ರಾಃ ಕರ್ಮಣೇಂದ್ರಾದಿಕಾನ್ ಸುರಾನ್॥೧೫॥

ಅತ್ಯವರ್ತಂತ ತಪಸಾ ಮಹತಾ ಸುಸಮೇಧಿತಾಃ ।
ಚಕ್ರುರ್ದೇವಾನ್‌ವಶೇ ಸೇಂದ್ರಾನ್ ಸಸಿದ್ಧಾಸುರರಾಕ್ಷಸಾನ್ ॥೧೬॥

ಆಜ್ಞಾ ಪ್ರತೀಕ್ಷಕಾ ದೇವಾ ವಿಪ್ರಾಣಾಮಭವಂಸ್ತದಾ ।
ಏವಂ ತ್ರಿಲೋಕೀಂ ವಿಪ್ರಾಣಾಂ ವಶಗಾಂ ವೀಕ್ಷ್ಯ ಸರ್ವಥಾ ॥೧೭॥

---

ಆದ್ದರಿಂದ ನನ್ನ ಶೃಂಗಾರಸುಖವನ್ನು ಬಯಸಿ ಈರೀತಿಯಲ್ಲಿ ಹೆಣ್ಣುಜಿಂಕೆಯ ರೂಪವನ್ನು ಧರಿಸಿ ಕ್ರೀಡಿಸುತ್ತಿದ್ದಳು. ಹೀಗೆಂದು ಹೇಳಿ ಸುಖಭಂಗದುಃಖದಿಂದ ಆ ಋಷಿಯು ನನಗೆ ಪತಿಸಂಗಸುಖವಿಲ್ಲದಂತಾಗಲಿ! ಎಂದು ಶಾಪವನ್ನು ಕೊಟ್ಟನು. ॥೧೩॥

ಓ ಋಷಿಯೇ, ವಿವೇಕವಿಲ್ಲದ ನಾನು ಮಾಡಿದ ತಪ್ಪು ಕೆಲಸವನ್ನು ಮನ್ನಿಸು. ಎಂದು ಅವನನ್ನು ಪ್ರಾರ್ಥಿಸಿದರೂ ನನಗೆ ಹಿಂದೆ ಹೇಳಿದ ಶಾಪವನ್ನು ಕೊಟ್ಟನು. ॥೧೪॥

ಇನ್ನು ನನ್ನ ಪತಿಯಾದ ಶಿವನಿಗೆ ಪ್ರಾಪ್ತವಾದ ಹಿಂದಿನ ಶಾಪದ ಕಥೆಯನ್ನು ಹೇಳುವೆನು. ಕೇಳು. ಹಿಂದೆ ತ್ರೇತಾಯುಗದ ಆದಿಭಾಗದಲ್ಲಿ ಬ್ರಾಹ್ಮಣರು ಇಂದ್ರಾದಿ ದೇವತೆಗಳಿಗೆ ಯಾಗವೇ ಮೊದಲಾದ ಕರ್ಮಗಳನ್ನು ಮಾಡದೇ ಇದ್ದರು. ॥೧೫॥

ಬ್ರಾಹ್ಮಣರು ಯಾಗಾದಿ ನಿತ್ಯಕರ್ಮಗಳನ್ನು ಬಿಟ್ಟಿದ್ದರಲ್ಲದೇ ಮಹತ್ತರವಾದ ಕಾಮ್ಯತಪಸ್ಸನ್ನು ಸಾಧಿಸಿ, ಅಭಿವೃದ್ಧಿಯನ್ನು ಹೊಂದಿ, ಇಂದ್ರನೇ ಮೊದಲಾದ ದೇವತೆಗಳು, ಸಿದ್ಧರು, ಅಸುರರು. ರಾಕ್ಷಸರು, ಇವರೆಲ್ಲರನ್ನೂ ತಮಗೆ ಅಧೀನರನ್ನಾಗಿ ಮಾಡಿಕೊಂಡರು. ॥೧೬॥

ಆಗ ದೇವತೆಗಳೂ ಬ್ರಾಹ್ಮಣರ ಆಜ್ಞೆಯಂತೆಯೇ ನಡೆಯುವವರಾದರು. ಇಂದ್ರನು ಈ ರೀತಿಯಲ್ಲಿ ಮೂರು ಲೋಕವೂ ಬ್ರಾಹ್ಮಣರಿಗೆ ಎಲ್ಲಾ ವಿಧದಲ್ಲೂ ಅಧೀನವಾಗಿ ನಡೆಯುತ್ತಿರುವುದನ್ನು ಕಂಡನು. ॥೧೭॥

ಹತಪ್ರಭಾವ ಇಂದ್ರೋಽಭೂದ್ವಿಪ್ರಾಜ್ಞಾಪಾಲಕಃ ಸ್ವತಃ ।
ಅಥ ಶಕ್ರೋ ದೇವಗಣ ವೃತೋ ಬ್ರಹ್ಮಾಣಮಭ್ಯಯೌ ॥೧೮॥

ನಿ(ನ್ಯ)ವೇದಯಚ್ಚ ದೀನಾಽತ್ಮಾ ವಿಪ್ರಾಧೀನತ್ವಮಾತ್ಮನಃ ।
ಶ್ರುತ್ವಾ ವಿಧಿಃ ಪ್ರಾಹ ಹರಿಂ ನೈತತ್ಪ್ರತಿವಿಧಾವಹಂ ॥೧೯॥

ಸಮರ್ಥೋಽಸ್ಮಿ ಯತಸ್ತೇಷಾಂ ಬಿಭೇಮಿ ತಪಸಾಂ ಬಲಾತ್ ।
ಇತ್ಯುಕ್ತ್ವಾ ದೇವಸಹಿತೋ ವಿಷ್ಣುಮಭ್ಯಾಗಮದ್ವಿಧಿಃ ॥೨೦॥

ನಿ(ನ್ಯ)ವೇದಯದ್ದೇವವೃತ್ತಂ ಯಥಾ ವಚ್ಚತುರಾನನಃ ।
ಶ್ರುತ್ವಾ ನಾರಾಯಣಃ ಪ್ರಾಹ ಬ್ರಾಹ್ಮಣಾನಾಂ ತಪೋಬಲಂ ॥೨೧॥

ನಿಶಾಮ್ಯ ವಿಧಿಮಾಮಂತ್ರ್ಯ ಶೃಣು ಬ್ರಹ್ಮನ್ ವಚೋ ಮಮ ।
ಅದ್ಯ ವಿಪ್ರೈರ್ಜಿತಂ ಸರ್ವಂ ದಾರುಕಾವನವಾಸಿಭಿಃ ॥೨೨॥

---

ತಾನೂಕೂಡ ಬ್ರಾಹ್ಮಣರ ಆಜ್ಞೆಯನ್ನು ಪಾಲಿಸುವವನಾಗಿ ಇಂದ್ರನು ನಷ್ಟ ವಾದ ಮಹಿಮೆಯುಳ್ಳವನಾದನು. ಅನಂತರದಲ್ಲಿ ಅವನು ದೇವತೆಗಳ ಸಮೂಹ ದೊಂದಿಗೆ ಕೂಡಿದವನಾಗಿ ಬ್ರಹ್ಮನ ಸಮೀಪಕ್ಕೆ ಹೋದನು. ॥೧೮॥

ದೀನವಾದ ಸ್ವಭಾವವನ್ನು ತೋರ್ಪಡಿಸುವವನಾಗಿ ಇಂದ್ರನು ತಾನು ಬ್ರಾಹ್ಮಣರಿಗೆ ಅಧೀನವಾಗಿರುವ ವಿಷಯವನ್ನು ಬ್ರಹ್ಮನಿಗೆ ವಿಜ್ಞಾಪನೆ ಮಾಡಿ ಕೊಂಡನು. ಬ್ರಹ್ಮನು ಇದನ್ನು ಕೇಳಿ ಅವನನ್ನು ಕುರಿತು, ಇದಕ್ಕೆ ಪ್ರತೀಕಾರ ಮಾಡಲು ನಾನು ಶಕ್ತನಾಗಿಲ್ಲವೆಂದು ಹೇಳಿದನು. ॥೧೯॥

ಬ್ರಾಹ್ಮಣರ ತಪಶ್ಶಕ್ತಿಗೆ ನಾನೂ ಹೆದರಿರುವುದರಿಂದ ಇದಕ್ಕೆ ಪ್ರತೀಕಾರ ವನ್ನು ಮಾಡಲು ಶಕ್ತನಾಗಿಲ್ಲ! ಎಂಬುದಾಗಿ ಬ್ರಹ್ಮನು ಹೇಳಿ ದೇವತೆಗಳೊಡನೆ ವಿಷ್ಣುವನ್ನು ಸಮೀಪಿಸಿದನು. ॥೨೦॥

ಚತುರ್ಮುಖನಾದ ಬ್ರಹ್ಮನು ದೇವತೆಗಳ ಸಮಾಚಾರವನ್ನು ಸ್ವಲ್ಪವೂ ಬಿಡದೇ ನಾರಾಯಣನಿಗೆ ವಿಜ್ಞಾಪನೆ ಮಾಡಿಕೊಂಡನು. ನಾರಾಯಣನು ಇದನ್ನು ಕೇಳಿ ಬ್ರಾಹ್ಮಣರ ತಪಶ್ಶಕ್ತಿಯನ್ನು ತಾನೂ ಅವರಿಗೆ ವಿವರಿಸಿದನು. ॥೨೧॥

ಇವೆಲ್ಲವನ್ನೂ ಕೇಳಿ ವಿಷ್ಣುವು ಬ್ರಹ್ಮನನ್ನು ಕರೆದು ಅವನನ್ನು ಕುರಿತು, ಎಲೈ ಬ್ರಹ್ಮನೇ, ನನ್ನ ಮಾತನ್ನು ಕೇಳು. ದಾರುಕಾವನದಲ್ಲಿ ವಾಸಮಾಡುವ ಬ್ರಾಹ್ಮ ಣರು ತಮ್ಮ ತಪಶ್ಶಕ್ತಿಯಿಂದ ಎಲ್ಲವನ್ನೂ ಜಯಿಸಿದ್ದಾರೆ! ಎಂದನು. ॥೨೨॥

ತಪಸಾಂ ರಾಶಿಭಿಸ್ತಸ್ಮಾದುಪಾಯೋ ನ ಹಿ ದೃಶ್ಯತೇ ।
ತೇಷಾಂ ನಿರೋಧೇ ಕ್ಷಣತೋ ಭಸ್ಮೀಕುರ್ಯುರ್ಜಗತ್ತ್ರಯಂ ॥೨೩॥

ಬ್ರಹ್ಮಾಂಡಾನಾಂ ಶತಸ್ಯಾಽಪಿ ಸ್ರಷ್ಟುಮರ್ಹಾಃ ಪುನಃ ಕ್ಷಣಾತ್ ।
ವ್ಯವಸಾಯೋ ನಾಽತ್ರ ಕಶ್ಚಿತ್ಸಫಲೋ ದೃಶ್ಯತೇ ಮಮ ॥೨೪॥

ತದ್ಗಚ್ಛಾಮೋ ಮಹಾದೇವಂ ಸ ಶ್ರೇಯೋ ನೋ ವಿಧಾಸ್ಯತಿ ।
ಇತ್ಯುಕ್ತ್ವಾ ಸಹಿತೋ ಬ್ರಹ್ಮಮುಖ್ಯೈಃ ಕೈಲಾಸಮಾಗಮತ್ ॥೨೫॥

ನತ್ವಾ ಶಿವಂ ಬದ್ಧಕರಾ ಸ್ತಸ್ಥುರ್ವಿಷ್ಣು ಮುಖಾಸ್ತದಾ ।
ದೃಷ್ಟ್ವಾ ವಿಷ್ಣುಂ ಸುರೈರ್ಯುಕ್ತಂ ವಿಧಿಂ ಚ ಪ್ರಾಹ ಶಂಕರಃ ॥೨೬॥

---

ಬ್ರಾಹ್ಮಣರು ಈ ರೀತಿಯಲ್ಲಿ ತಮ್ಮ ತಪಸ್ಸಾಮರ್ಥ್ಯದಿಂದ ಎಲ್ಲವನ್ನೂ ಜಯಿಸಿರುವುದರಿಂದ ಇವರನ್ನು ತಡೆಯಲು ಯಾವ ಉಪಾಯವೂ ನನಗೆ ತೋರುವುದಿಲ್ಲ. ಏಕೆಂದರೆ ಅವರನ್ನು ತಡೆದರೆ ಕ್ಷಣಕಾಲದಲ್ಲಿಯೇ ಮೂರುಲೋಕಗಳನ್ನೂ ಸುಟ್ಟುಬಿಡುವರು. ॥೨೩॥

ಅವರು ನೂರಾರು ಬ್ರಹ್ಮಾಂಡಗಳನ್ನು ಬೇಕಾದರೂ ಪುನಃ ಕ್ಷಣಕಾಲದದಲ್ಲಿಯೇ ಸೃಷ್ಟಿಮಾಡಬಲ್ಲರು! ಆದ್ದರಿಂದ ಇವರನ್ನು ತಡೆಯಲು ನಾವು ಮಾಡುವ ಪ್ರಯತ್ನವು ಯಾವುದೂ ಸಫಲವಾಗುವಂತೆ ನನಗೆ ತೋರುವುದಿಲ್ಲ. ॥೨೪॥

ಆದ್ದರಿಂದ ನಾವು ಶಿವನಿದ್ದೆಡೆಗೆ ಹೋಗೋಣ. ಆತನು ನಮಗೆ ಶ್ರೇಯಸ್ಸನ್ನುಂಟುಮಾಡುವನು " ಎಂದು ಹೇಳಿ ವಿಷ್ಣುವು ಬ್ರಹ್ಮನೇ ಮೊದಲಾದ ದೇವತೆಗಳೊಡನೆ ಕೈಲಾಸಕ್ಕೆ ಬಂದನು. ॥೨೫॥

ಆಗ ವಿಷ್ಣುವೇ ಮೊದಲಾದವರು ಶಿವನಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ನಿಂತರು. ಶಿವನು ದೇವತೆಗಳೊಡನೆ ಬಂದಿರುವ ವಿಷ್ಣುವನ್ನೂ ಮತ್ತು ಬ್ರಹ್ಮನನ್ನೂ ಕುರಿತು ಈ ರೀತಿಯಲ್ಲಿ ಹೇಳಿದನು. ॥೨೬॥

ಶೃಣ್ವಂತು ವಿಬುಧಾಃ ಸರ್ವೇ ವಾಕ್ಯಮತ್ರ ಯಥಾವಿಧಿಂ ।
ಜಾನಾಮಿ ಭವತಾ ಮತ್ರ ಸಮಾಗಮನ ಕಾರಣಂ ॥೨೭॥

ಅದ್ಯ ವಿಪ್ರಾಸ್ತಪೋರಾಶಿ ಜ್ವಾಲಾಮಾಲಾ ಪರೀವೃತಾಃ ।
ಭಸ್ಮೀಕುರ್ಯುಃ ಪ್ರಾಪ್ತಮಾತ್ರಂ ವಹ್ನಿಜ್ವಾಲಾಸ್ತೃಣಂ ಯಥಾ ॥೨೮॥

ತದತ್ರ ಕೃತ್ಯಂ ನಿರ್ಜೇತುಂ ಮಂತ್ರಯಾಮಃ ಸುಮಂತ್ರಿಭಿಃ ।
ಇತ್ಯುಕ್ತ್ವಾಽನ್ಯಾನ್ ವಿಸೃಜ್ಯಾಥ ಪ್ರಧಾನ ಸುರನಾಯಕೈಃ ॥೨೯॥

ಮಂತ್ರಯಾಮಾಸ ಸುಚಿರಮುಪನ್ಯಸ್ಯ ಪೃಥಕ್ಪೃಥಕ್ ।
ಅಥಾಹ ಪುಂಡರೀಕಾಕ್ಷ ಉಪಾಯೋಽನ್ಯೋ ನ ರೋಚತೇ ॥೩೦॥

ಅನ್ಯತ್ರ ಛದ್ಮನಾ ಜೇತು ಮಶಕ್ಯಾಸ್ತೇ ಮಹೀಸುರಾಃ ।
ತದ್ಗಚ್ಛತು ಭವಸ್ತತ್ರ ಮನೋಹರ ವಪುರ್ಭೃಶಂ ॥೩೧॥

---

ನೀವೆಲ್ಲರೂ ಕ್ರಮಬದ್ಧವಾದ ನನ್ನ ಈ ಮಾತನ್ನು ಕೇಳಿರಿ. ನೀವು ಏತಕ್ಕಾಗಿ ನನ್ನಲ್ಲಿಗೆ ಬಂದಿರುವಿರೆಂಬುದು ನನಗೆ ಗೊತ್ತಾಗಿದೆ. ॥೨೭॥

ಈಗ ತಪಸ್ಸಿನ ರಾಶಿಗಳ ಜ್ವಾಲೆಗಳ ಸಾಲುಗಳಿಂದ ಸುತ್ತುವರಿಯಲ್ಪಟ್ಟ ಬ್ರಾಹ್ಮಣರು ಏನು ಸಿಕ್ಕಿದರೂ ಅವನ್ನು, ಬೆಂಕಿಯ ಜ್ವಾಲೆಯು ಹುಲ್ಲನ್ನು ಹೇಗೋ ಹಾಗೆ, ಬೂದಿಮಾಡಬಲ್ಲರು. ॥೨೮॥

ಆದ್ದರಿಂದ ಈ ವಿಚಾರದಲ್ಲಿ ಏನನ್ನು ಮಾಡಬೇಕೆಂದು ಶ್ರೇಷ್ಠಮಂತ್ರಿಗಳ ಜೊತೆಯಲ್ಲಿ ಕಲೆತು ಆಲೋಚಿಸೋಣ. ಎಂದು ಹೇಳಿ ಇತರರನ್ನು ಹೊರಗೆ ಕಳುಹಿಸಿ, ವಿಷ್ಣುವು ಮುಖ್ಯರಾದ ದೇವತೆಗಳ ಅಧಿಪತಿಗಳೊಂದಿಗೆ ಮಂತ್ರಾಲೋಚನೆಮಾಡಿದನು. ॥೨೯॥

ಹೀಗೆ ಮಂತ್ರಾಲೋಚನೆಯನ್ನು ನಡೆಸಿ ವಿಷ್ಣುವು ಚೆನ್ನಾಗಿ ಪ್ರತಿಯೊಂದು ವಿಷಯವನ್ನೂ ಬೇರೆ ಬೇರೆಯಾಗಿ ವಿಮರ್ಶೆಮಾಡಿದನು. ಅನಂತರ ಪುಂಡರೀಕಾಕ್ಷನಾದ ವಿಷ್ಣುವು ಈ ವಿಷಯದಲ್ಲಿ ಈಗ ಹೇಳುವುದಕ್ಕಿಂತ ಬೇರೆ ಉಪಾಪಾಯವು ನನ್ನ ಮನಸ್ಸಿಗೆ ಹೊಳೆಯುವುದಿಲ್ಲವೆಂದು ಹೇಳಿದನು. ಏನೆಂದರೆ, ॥೩೦॥

ಬ್ರಾಹ್ಮಣರನ್ನು ಕಪಟವಿಲ್ಲದೇ ಬೇರೆ ವಿಧಾನದಿಂದ ಜಯಿಸಲು ಆಗುವುದಿಲ್ಲ. ಆದ್ದರಿಂದ ಶಿವನು ಮನೋಹರವಾದ ಶರೀರವನ್ನು ಧರಿಸಿ ಬ್ರಾಹ್ಮಣರು ಇರುವ ಪ್ರದೇಶಕ್ಕೆ ಹೋಗಲಿ. ॥೩೧॥

ವಿಪ್ರದಾರಾನ್ಮೋಹಯಿತ್ವಾ ಧರ್ಮಾಚ್ಚ್ಯಾವಯತು ದ್ರುತಂ ।
ಧರ್ಮಚ್ಯುತಾ ಯದಾ ವಿಪ್ರಾ ಜೇತುಂ ಶಕ್ಯಾಸ್ತು ಸರ್ವಥಾ ॥೩೨॥

ಏಷ ಮೇಽಭಿಮತಃ ಪಕ್ಷಃ ಸರ್ವಥಾ ಹ್ಯಭಿರೋಚತೇ ।
ಶ್ರುತ್ವೇತ್ಥಂ ಕೇಶವವಚಸ್ತುಷ್ಟಾಃ ವಿಧಿಮುಖಾಃ ಸುರಾಃ ॥೩೩॥

ಸಮೀಡ್ಯ ಶಂಕರಂ ದೇವಂ ಚೋದಯಾಮಾಸುರಾಶಿಷೇ ।
ಶಿವೋಽಪಿ ದೇವಕಾರ್ಯಾರ್ಥಂ ವೃಷಾರೂಢಃ ಸಪಾರ್ಷದಃ ॥೩೪॥

ಜಗಾಮ ತತ್ರ ವಿಪ್ರಾಸ್ತೇ ವನೇ ಯತ್ರ ತಪಃಪರಾಃ ।
ಅಥ ತಾನ್ ಭೂಸುರಾನ್ ಸರ್ವಾನಭಿಲಕ್ಷ್ಯ ವಿನಿರ್ಗತಾನ್ ॥೩೫॥

ಸಮಿತ್ಪುಷ್ಪಾದ್ಯಾಹೃತಯೇ ಪ್ರವಿವೇಶ ತದಾಶ್ರಮಾನ್ ।
ಕೃತ್ವಾ ರೂಪಂ ಸುರುಚಿರಂ ಕೋಟಿಮನ್ಮಥಸುಂದರಂ ॥೩೬॥

---

ಆದ್ದರಿಂದ ಶಿವನು ಸುಂದರರೂಪನಾಗಿ ಹೋಗಿ ಆ ಬ್ರಾಹ್ಮಣರ ಹೆಂಗಸರನ್ನು ಮೋಹಗೊಳ್ಳುವಂತೆಮಾಡಿ, ಬ್ರಾಹ್ಮಣರನ್ನು ಅದರ ಮೂಲಕ ಧರ್ಮಭ್ರಷ್ಟರಾಗುವಂತೆ ಮಾಡಲಿ! ಬ್ರಾಹ್ಮಣರು ಧರ್ಮದಿಂದ ಚ್ಯುತರಾದರೆ ಅವರನ್ನು ಸರ್ವಪ್ರಕಾರದಲ್ಲೂ ಜಯಿಸಬಹುದು. ॥೩೨॥

ಈ ಅಭಿಪ್ರಾಯವು ನನಗೆ ಅತ್ಯಂತ ಇಷ್ಟವಾಗಿ ಮನಸ್ಸಿಗೆ ಪ್ರಿಯವಾದುದಾಗಿದೆ. ಎಂದು ವಿಷ್ಣುವು ಹೇಳಿದ ಮಾತನ್ನು ಕೇಳಿ ಬ್ರಹ್ಮನೇ ಮೊದಲಾದ ದೇವತೆಗಳೂ ಒಪ್ಪಿ ಸಂತೋಷಗೊಂಡರು. ॥೩೩॥

ಎಲ್ಲರೂ ದೇವನಾದ ಶಿವನನ್ನು ಸ್ತೋತ್ರಮಾಡಿ, ಶ್ರೇಯಸ್ಸನ್ನು ಸಾಧಿಸಲು ಪ್ರೇರಿಸಿದರು. ಶಿವನೂ ಕೂಡ ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿ ಗೂಳಿಯ ಮೇಲೇರಿ ತನ್ನ ಪರಿವಾರದೊಂದಿಗೆ ಹೊರಟನು. ॥೩೪॥

ಬ್ರಾಹ್ಮಣರು ಕಾಡಿನಲ್ಲಿ ಎಲ್ಲಿ ತಪಸ್ಸನ್ನು ಮಾಡುತ್ತಿದ್ದರೋ ಅಲ್ಲಿಗೆ ಶಿವನು ಹೋದನು. ತರುವಾಯ ಬ್ರಾಹ್ಮಣರು ಸಮಿತ್ತು ಮುಂತಾದುವನ್ನು ತರಲು ಹೊರಗೆ ಹೋಗಿದ್ದ ಸಮಯದಲ್ಲಿ ಶಿವನು ಅವರ ಆಶ್ರಮಕ್ಕೆ ಹೋದನು. ॥೩೫॥

ಆ ಋಷಿಗಳು ಈರೀತಿಯಲ್ಲಿ ಸಮಿತ್ತು ಹೂಗಳು ಮುಂತಾದುವುಗಳನ್ನು ತರಲು ಹೋಗಿದ್ದ ಸಮಯದಲ್ಲಿ ಶಿವನು ಆಶ್ರಮಕ್ಕೆ ಪ್ರವೇಶಿಸಿ ಕೋಟಿಮನ್ಮಥ

ದರ್ಶಯಾಮಾಸ ದಾರೇಷು ಚಾಽಽತ್ಮಾನಂ ತಾದೃಶಂ ಶಿವಃ ।
ತಂ ತಾದೃಶಂ ಸಮಾಲೋಕ್ಯ ವಿಪ್ರಾಣಾಂ ತಾಃ ಸುಯೋಷಿತಃ ॥೩೭॥

ಕಾಮಬಾಣಾಽಽಹತಾಃ ಸರ್ವಾಃ ಶಿವಮೇವಾಽನ್ವಯುಸ್ತದಾ ।
ನಿರುಧ್ಯಮಾನಾಃ ಪುತ್ರಾದ್ಯೈರ್ವಿಸ್ಮೃತಪ್ರಿಯಬಾಂಧವಾಃ ॥೩೮॥

ಅನ್ವಯುಸ್ತ್ಯಕ್ತ ಸರ್ವಸ್ವಾಃ ಶಿವೇನಾಽತ್ಯಂತಮೋಹಿತಾಃ ।
ಅಥ ತಾಭಿಃ ಪರಿವೃತಃ ಶಿವೋಽಗಚ್ಛದ್ವನಾಂತರಂ ॥೩೯॥

ಕಾಮ(ಮಾ)ಚಾರವಿನೋದೈಸ್ತಾ ಮೋಹಯಾಮಾಸ ಶಂಕರಃ ।
ಸಂಗತಾಃ(ತಾಃ)ಶಿವೇನೈವಂ ಸರ್ವಾ ಗರ್ಭಂ ದಧುಸ್ತದಾ ॥೪೦॥

ಉಪಭುಜ್ಯ ವಿಪ್ರಸತೀಃ ಆಹ ದೇವಃ ಪಿನಾಕಭೃತ್ ।
ಯಾತ ಸ್ವಭವನಾನ್ಯಾಶು ಭರ್ತಾರೋ ಯತ್ನಕೋಪನಾಃ ॥೪೧॥

---

ರಷ್ಟು ಸುಂದರವಾದ ಮತ್ತು ಆ ಸ್ತ್ರೀಯರಿಗೆ ಅತ್ಯಂತ ಮನೋಹರವಾದ ರೂಪವನ್ನು ಧರಿಸಿದನು. ॥೩೬॥

ಶಿವನು ಅಂತಹ ತನ್ನ ಸುಂದರ ರೂಪವನ್ನು ಆ ಬ್ರಾಹ್ಮಣರ ಹೆಂಗಸರಿಗೆ ತೋರಿಸಿದನು. ಆ ಬ್ರಾಹ್ಮಣರ ಪತ್ನಿಯರಾದ ಸುಂದರ ಯುವತಿಯರು ಶಿವನ ಮನೋಹರ ರೂಪವನ್ನು ನೋಡಿ ಮೋಹಗೊಂಡರು. ॥೩೭॥

ಆ ಬ್ರಾಹ್ಮಣರ ಪತ್ನಿಯರೆಲ್ಲರೂ ಆ ಶಿವನ ಮೋಹಕವಾದ ರೂಪವನ್ನು ನೋಡಿದ ಕೂಡಲೇ ತಮ್ಮ ಮಕ್ಕಳು ಮುಂತಾದವರು ತಡೆಯುತ್ತಿದ್ದರೂ ಲೆಕ್ಕಿಸದೇ ತಮ್ಮ ಪ್ರಿಯಬಂಧುಗಳನ್ನೂ ಮರೆತು ಶಿವನನ್ನೇ ಹಿಂಬಾಲಿಸಿದರು. ॥೩೮॥

ಆ ಹೆಂಗಸರು ತಮ್ಮ ಸರ್ವಸ್ವವನ್ನೂ ಬಿಟ್ಟು ಶಿವನಿಂದ ಅತ್ಯಂತ ಮೋಹಕ್ಕೊಳಗಾದವರಾಗಿ ಅವನನ್ನೇ ಅನುಸರಿಸಿದರು. ಆ ಬಳಿಕ ಅವರಿಂದ ಸುತ್ತುವರಿಯಲ್ಪಟ್ಟ ಶಿವನು ಬೇರೇ ಕಾಡಿಗೆ ಹೋದನು. ॥೩೯॥

ಶಿವನು ಅನೇಕ ವಿಧವಾದ ಶೃಂಗಾರ ಚೇಷ್ಟೆಗಳಿಂದ ಮೋಹಗೊಳ್ಳುವಂತೆ ಮಾಡಿದನು. ಈ ರೀತಿಯಲ್ಲಿ ಆ ಸ್ತ್ರೀಯರು ಶಿವನೊಂದಿಗೆ ಸಂಪರ್ಕಮಾಡಿ ಎಲ್ಲರೂ ಗರ್ಭವನ್ನು ಧರಿಸಿದರು. ॥೪೦॥

ಪಿನಾಕಪಾಣಿಯಾದ ಶಿವನು ಬ್ರಾಹ್ಮಣರ ಸ್ತ್ರೀಯರನ್ನು ಅನುಭವಿಸಿದ

ಪುನಃ ಕಾಲೇಽನುಗಚ್ಛಾಮಃ ಪುರಃ ಸಂಧ್ಯಾಽತಿವರ್ತತೇ ।
ಏವಂ ತಾ ಮುನಿಪತ್ನ್ಯಸ್ತು ಶ್ರುತ್ವಾ ಶಂಕರಭಾಷಿತಂ ॥೪೨॥

ಜಗ್ಮುರ್ಗೇಹಾಽಭಿಮುಖತೋ ಭೀತಾ ಭರ್ತ್ರ್ಯಪಚಾರತಃ ।
ತದಂತರೇ ಮುನಿಗಣಾಃ ಫಲಪುಷ್ಪಸಮಿದ್ಗ್ರಹಾಃ ॥೪೩॥

ಪ್ರಾಪ್ತಾ ಗೃಹಾಂ ಸ್ತತ್ರ ದಾರಾನ್ ವೀಕ್ಷ್ಯಾಽತಿ ವಿಕೃತಾಽಕೃತೀನ್ ।
ಅಭಿಲಕ್ಷ್ಯ ಗರ್ಭಯುತಾಃ ಪತ್ನೀಃ ಸ್ವಾಃ ಸರ್ವ ಏವ ತೇ ॥೪೪॥

ಶಂಕಿತಾ ಅಭವನ್ ತತ್ರ ಜ್ಞಾತ್ವಾ ತತ್ತಪಸೋ ಬಲಾತ್ ।
ಮಹಾದೇವಾಽಪಚರಿತಂ ಚುಕ್ರುಧುರ್ಮುನಿಪುಂಗವಾಃ ॥೪೫॥

ಜಗ್ಮುರ್ಯತ್ರ ಮಹಾದೇವೋ ಭಸ್ಮೀಕುರ್ಮ ಇತಿ ಕ್ರುಧಾ ।
ಆಗಚ್ಛತೋ ಮುನೀನ್ ದೃಷ್ಟ್ವಾ ಮಹಾದೇವೋಽತಿಕೋಪನಾನ್ ॥೪೬॥

---

ಬಳಿಕ ಅವರನ್ನೇ ಕುರಿತು ಇನ್ನು ನೀವು ಯಾರ ಯಾರ ಪತ್ನಿಯರೋ ಅಂತಹ ಗಂಡಂದಿರಮನೆಗೆ ಹೊರಡಿ! ನಿಮ್ಮ ಪತಿಗಳು ಕೋಪಗೊಳ್ಳುವರು. ಎಂದನು.॥೪೧॥

ನಾವು ಪುನಃ ಬಂದು ಸೇರೋಣ. ಈಗ ಸಂಧ್ಯಾಕಾಲವು ಮೀರುತ್ತದೆ. ಎಂದು ಶಿವನು ಹೇಳಿದ ಮಾತನ್ನು ಋಷಿಪತ್ನಿಯರು ಕೇಳಿದರು. ॥೪೨॥

ಆ ಮುನಿಪತ್ನಿಯರು ತಮ್ಮ ಪತಿಗಳಿಗೆ ಅಸಮಾಧಾನವಾಗುವ ರೀತಿಯಲ್ಲಿ ತಾವು ನಡೆದಿರುವುದನ್ನು ಯೋಚಿಸಿ ಭಯಪಡುತ್ತಾ ತಮ್ಮ ತಮ್ಮ ಮನೆಗಳ ಕಡೆಗೆ ಹೋದರು. ಈ ಸಂದರ್ಭದಲ್ಲಿ ಋಷಿಗಳ ಗುಂಪಿನವರು ಹಣ್ಣು ಹುವ್ವು ಸಮಿತ್ತುಗಳನ್ನು ಹಿಡಿದುಕೊಂಡು ಹಿಂತಿರುಗಿದರು. ॥೪೩॥

ಆಗ ಋಷಿಗಳೆಲ್ಲರೂ ಮನೆಗೆ ಬಂದು ಅತಿ ವಿಕಾರವಾದ ಆಕಾರವುಳ್ಳವರಾಗಿ ಗರ್ಭಧಾರಣೆ ಮಾಡಿದ್ದ ತಮ್ಮ ಪತ್ನಿಯರನ್ನು ನೋಡಿದರು. ॥೪೪॥

ಆಗ ಆ ಶ್ರೇಷ್ಠಋಷಿಗಳು ಸಂದೇಹಕ್ಕೊಳಗಾಗಿ ಕೊನೆಗೆ ತಮ್ಮ ತಪೋಬಲದಿಂದ ಶಿವನ ಕೆಟ್ಟ ನಡೆವಳಿಕೆಯನ್ನು ತಿಳಿದು ಕೋಪಗೊಂಡರು. ॥೪೫॥

ಅವರು "ಶಿವನನ್ನು ಬೂದಿಮಾಡೋಣ" ಎಂದುಕೊಂಡು ಶಿವನಿದ್ದ ಕಡೆಗೆ ಹೋದರು. ಮಹಾದೇವನಲ್ಲಿ ಬಹಳ ಕೋಪದಿಂದ ಕೂಡಿದವರಾಗಿ ಬರುತ್ತಿದ್ದ ಋಷಿಗಳನ್ನು ಶಿವನು ನೋಡಿದನು. ॥೪೬॥

ಪಲಾಲಯನ ಪರಃ ಶೀಘ್ರಮಭವದ್ವೃಷಕೇತನಃ ।
ಪಲಾಯನಪರಂ ದೇವಂ ನಭೋಮಾರ್ಗಸಮಾಶ್ರಯಂ ॥೪೭॥

ದೃಷ್ಟ್ವಾ ಮುನಿಗಣಾಃ ಕ್ರುದ್ಧಾಃ ಶಾಪಂ ತಸ್ಮಿನ್ನವಾಽಸೃಜುಃ ।
ಪರಕ್ಷೇತ್ರೇ ಸ್ವಯಂ ಯಸ್ಮಾತ್ಕಾಮೀ ಬೀಜಂ ಸ್ವಮುತ್ಸೃಜತ್॥೪೮॥

ತಸ್ಮಾದಿತಃ ಪರಂ ಚಾಽನ್ಯ ಸ್ತ್ರೀಷು ಷಂಡತ್ವ ಮೇಷ್ಯತಿ ।
ಯೇನ ಲಿಂಗೇನ ಚಾಽಸ್ಮಾಕಂ ಪತ್ನ್ಯ ಏತಾಃ ಪ್ರದೂಷಿತಾಃ ॥೪೯॥

ಪತತ್ವಸ್ಮತ್ಸಮಕ್ಷಂ ತಲ್ಲಿಂಗಂ ಜಾರಸ್ಯ ಸರ್ವಥಾ ।
ಏವಂ ವಿಪ್ರೈಃ ಶಿವಃ ಶಪ್ತಸ್ತಸ್ಮಾತ್ತೇ ಕಥಮೀಪ್ಸಿತಂ ॥೫೦॥

ಭವೇದಮರರಾಜಸ್ಯ ನ ಹ್ಯಪತ್ಯಸ್ಯ ಸಂಭವಃ ।
ಶ್ರುತ್ವೇತ್ಥಂ ಪಾರ್ವತೀವಾಕ್ಯಮಿಂದ್ರಃ ಪಪ್ರಚ್ಛ ಸಾದರಂ ॥೫೧॥

---

ಧರ್ಮ(ವೃಷಭ)ವನ್ನೇ ಬಾವುಟವಾಗುಳ್ಳ ಶಿವನು ಶೀಘ್ರವಾಗಿ ಅಲ್ಲಿಂದ ಪಲಾಯನಮಾಡಲು ಪ್ರಯತ್ನಪಟ್ಟನು. ಆಕಾಶ ಮಾರ್ಗವಾಗಿ ಪಲಾಯನಮಾಡುತ್ತಿರುವ ಶಿವನನ್ನು ಋಷಿಗಳು ನೋಡಿದರು. ॥೪೭॥

ಋಷಿಗಳ ಗುಂಪಿನವರು ಅವನನ್ನು ನೋಡಿ ಅತ್ಯಂತ ಕೋಪಗೊಂಡು " ನೀನು ಇತರರ ಸ್ತ್ರೀಯರಲ್ಲಿ ಕಾಮುಕನಾಗಿ।ಬೀಜಾವಾಪವನ್ನು ಮಾಡಬಹುದೇ ? " ಎನ್ನುತ್ತಾ ಅವನ ಮೇಲೆ ಶಾಪವನ್ನು ಕೊಟ್ಟರು. ॥೪೮॥

ಆದ್ದರಿಂದ ನೀನು ಇನ್ನುಮೇಲೆ ಬೇರೇ ಸ್ತ್ರೀಯರ ಸಂಪರ್ಕಕ್ಕೆ ಹೋದ ಕಾಲದಲ್ಲಿ ನಪುಂಸಕನಾಗುವೆ! ಅಲ್ಲದೆ ನೀನು ನಿನ್ನ ಲಿಂಗದಿಂದ ನಮ್ಮ ಪತ್ನಿಯರನ್ನು ಕೆಡಿಸಿದ್ದೀಯೆ. ॥೪೯॥

ಜಾರನಾದ ನಿನ್ನ ಆ ಕೆಡಿಸಿದ ಲಿಂಗವು ನಮ್ಮೆದುರಿಗೆ ಬಿದ್ದುಹೋಗಲಿ! ಎಂದು ಬ್ರಾಹ್ಮಣರು ಶಿವನಿಗೆ ಶಾಪವನ್ನು ಕೊಟ್ಟರು. ಎಲೈ ಇಂದ್ರನೇ, ಆದ್ದರಿಂದ ನಿನ್ನ ಇಷ್ಟಾರ್ಥವು ನೆರವೇರುವುದು ಹೇಗೆ? ಎಂಬುದಾಗಿ ಪಾರ್ವತಿಯು ಹೇಳಿದಳು. ॥೫೦॥

ಎಲೈ ದೇವೇಂದ್ರನೇ, ಈ ರೀತಿಯಲ್ಲಿ ಶಿವನಿಗೆ ಮಕ್ಕಳಾಗುವ ಸಂಭವವೇ ಇಲ್ಲ. ಎಂದು ಪಾರ್ವತಿಯು ಹೇಳಿದ ಮಾತನ್ನು ಕೇಳಿ ಇಂದ್ರನು ಭಕ್ತಿಪೂರ್ವಕವಾಗಿ ಆಕೆಯನ್ನು ಈರೀತಿಯಲ್ಲಿ ಪ್ರಶ್ನಿಸಿದನು. ॥೫೧॥

ದೇವ್ಯಹಂ ಶ್ರೋತುಮಿಚ್ಛಾಮಿ ಶಿವಃ ಕಿಮಕರೋತ್ತತಃ ।
ಕಥಂ ಛಿನ್ನಂ ತಸ್ಯ ಲಿಂಗಂ ಕಿಂ ಭೂತಂ ತತ್ತತಃ ಪರಂ ॥೫೨॥

ಪೃಷ್ಟೈವಂ ದೇವರಾಜೇನ ಪ್ರಾಹ ಗೌರೀ ದಿವಸ್ಪತಿಂ ।
ಏವಂ ಶಾಪೋತ್ತರಂ ತಸ್ಯ ಶಿವಸ್ಯಾಽಽಕಾಶಗಾಮಿನಃ ॥೫೩॥

ಪಪಾತ ಲಿಂಗಂ ಸಂಛಿನ್ನಂ ದೂರಾದಾಕಾಶಮಾರ್ಗತಃ ।
ಪತಲ್ಲಿಂಗಂ ಸಮಾಲೋಕ್ಯ ಬ್ರಹ್ಮಾ ವಿಷ್ಣುಮಚೋದಯತ್ ॥೫೪॥

ಏತಲ್ಲಿಂಗಂ ಯದಿ ಪತೇಚ್ಛೂಲಿನಃ ಪೃಥಿವೀತಲೇ ।
ಶತಧಾ ಪೃಥಿವೀ ಶೀರ್ಣಾ ಭವಿಷ್ಯತಿ ನ ಸಂಶಯಃ ॥೫೫॥

ನಾಽಸ್ತ್ಯನ್ಯೋ ಧಾರಕೋ ಲೋಕೇ ವಿದ್ಯತೇ ತ್ವಾಮೃತೇ ಹರೇ ।
ಯೋನ್ಯಾಕೃತ್ಯಾ ಧಾರಯೈತತ್ಕ್ಷೋಭಶಾಂತ್ಯೈ ನ ಚಾಽನ್ಯಥಾ॥೫೬॥

---

ಓ ದೇವಿಯೇ, ಅನಂತರದಲ್ಲಿ ಶಿವನು ಏನನ್ನು ಮಾಡಿದನು? ಅವನ ಲಿಂಗವು ಕತ್ತರಿಸಿದ ಬಗೆ ಹೇಗೆ? ಆಮೇಲೆ ಆ ಲಿಂಗಕ್ಕೇನು ಸಂಭವಿಸಿತು? ಇವೆಲ್ಲ ವನ್ನೂ ಕೇಳಲು ಇಚ್ಛಿಸುತ್ತೇನೆ. ॥೫೨॥

ದೇವೇಂದ್ರನು ತನ್ನನ್ನು ಹೀಗೆ ಪ್ರಶ್ನಿಸಲಾಗಿ ಗೌರಿಯು ಅವನನ್ನು ಕುರಿತು ಆಕಾಶದಲ್ಲಿ ಹೊರಟಿದ್ದ ಶಿವನಿಗೆ ಶಾಪ ಪ್ರಾಪ್ತಿಯಾದಮೇಲೆ ನಡೆದ ಕಥೆಯನ್ನು ಹೇಳಲು ಪ್ರಾರಂಭಿಸಿದಳು. ॥೫೩॥

ಆಕಾಶಮಾರ್ಗದಿಂದ ದೂರದಿಂದ ಕತ್ತರಿಸಲ್ಪಟ್ಟ ಲಿಂಗವು ಕೆಳಗೆ ಬೀಳು ತ್ತಿತ್ತು. ಹೀಗೆ ಲಿಂಗವು ಬೀಳುತ್ತಿರುವುದನ್ನು ಕಂಡು ಬ್ರಹ್ಮನು ವಿಷ್ಣುವನ್ನು ಪ್ರೇರಿಸಿದನು. ॥೫೪॥

ಶಿವನ ಈ ಲಿಂಗವು ಭೂಮಿಯ ಮೇಲೇನಾದರೂ ಬಿದ್ದರೆ ಭೂಮಿಯು ನೂರಾರು ಚೂರಾಗಿ ಸೀಳಿಹೋಗುವುದರಲ್ಲಿ ಸಂದೇಹವಿಲ್ಲ! ॥೫೫॥

ಓ ವಿಷ್ಣುವೇ, ನಿನ್ನನ್ನು ಬಿಟ್ಟು ಈ ಲಿಂಗವನ್ನು ಬೇರೆ ಯಾರೂ ಧರಿಸಲು ಸಮರ್ಥರಿಲ್ಲ. ಆದ್ದರಿಂದ ಯೋನಿಯ ಆಕಾರದಿಂದ ನೀನೇ, ಜಗತ್ತಿನಲ್ಲಿ ಬರಬಹು ದಾದ ವಿಪತ್ತನ್ನು ನಿವಾರಿಸುವುದಕ್ಕಾಗಿ, ಇದನ್ನು ಧರಿಸು. ಹಾಗಲ್ಲದೇ ಬೇರೆ ಮಾರ್ಗವೇ ಇಲ್ಲ. ॥೫೬॥

ತ್ವಾಮಹಂ ಧಾರಯಿಷ್ಯಾಮಿ ಯೋನಿರೂಪೇಣಸಂಸ್ಥಿತಂ ।
ಇತ್ಯುಕ್ತ್ವಾ ಪೀಠರೂಪೇಣ ಸ್ಥಿತೋ ಬ್ರಹ್ಮಾ ಪ್ರಜಾಪತಿಃ ॥೫೭॥

ಯೋನಿರೂಪೇಣ ತಸ್ಯೋರ್ಧ್ವೇ ಸಂಸ್ಥಿತಃ ಕಮಲೇಕ್ಷಣಃ ।
ಅಥ ಲಿಂಗಂ ಯೋನಿಮಧ್ಯೇ ಪಪಾತ ಕ್ಷಣತಸ್ತದಾ ॥೫೮॥

ಪತತಸ್ತಸ್ಯವೇಗೇನ ಯೋನಿಸ್ತು ನಿರಭಿದ್ಯತ ।
ಭಿತ್ವಾ ಯೋನಿಂ ಪೀಠಮಧ್ಯೇ ಪ್ರಾವಿಶಲ್ಲಿಂಗಮದ್ಭುತಂ ॥೫೯॥

ವಿಷ್ಣುಃ ಬ್ರಹ್ಮಾಽಪಿ ತಲ್ಲಿಂಗಂ ಧಾರಯಾಮಾಸತುರ್ಬಲಾತ್ ।
ತದ್ಭಾರೇಣ ಧರಾಂ ಭೂಯೋ ನಿವಿಶಂತೀಂ ರಸಾತಲಂ ॥೬೦॥

ಕಂಪಮಾನಾಂ ಹರಿಃ ಶೇಷರೂಪೀ ದೃಢಮಧಾರಯತ್ ।
ಏತಸ್ಮಿನ್ನಂತರೇ ದೇವಃ ಶಂಭುಃ ಪ್ರಕುಪಿತೋಽಭವತ್ ॥೬೧॥

---

ಯೋನಿಯ ರೂಪದಲ್ಲಿರುವ ನಿನ್ನನ್ನು ನಾನು ಪೀಠರೂಪದಲ್ಲಿರುತ್ತಾ ಧಾರಣೆ ಮಾಡುತ್ತೇನೆ! ಎಂದು ಬ್ರಹ್ಮನು ವಿಷ್ಣುವಿಗೆ ಹೇಳಿ ಪ್ರಜಾಪತಿಯಾದ ಈತನು ವಿಷ್ಣುವಿಗೆ ಪೀಠರೂಪವಾಗಿದ್ದನು. ॥೫೭॥

ಆ ಪೀಠದ ಮೇಲ್ಭಾಗದಲ್ಲಿ ವಿಷ್ಣುವು ಯೋನಿಯ ಆಕಾರವನ್ನು ಧರಿಸಿದನು. ಅನಂತರ ಆ ಶಿವನ ಲಿಂಗವು ಯೋನಿಯ ಮಧ್ಯಭಾಗದಲ್ಲಿ ಕ್ಷಣಕಾಲದೊಳಗಾಗಿಯೇ ಬಿದ್ದಿತು. ॥೫೮॥

ಬೀಳುತ್ತಿರುವ ಆ ಲಿಂಗದ ವೇಗದಿಂದ ಆ ಯೋನಿಯು ಸೀಳಿತು. ಆ ಯೋನಿಯನ್ನು ಭೇಧಿಸಿ ಲಿಂಗವು ಅದ್ಭುತವಾದ ರೀತಿಯಲ್ಲಿ ಆ ಪೀಠದ ಮಧ್ಯ ಭಾಗಕ್ಕೆ ಸೇರಿತು. ॥೫೯॥

ವಿಷ್ಣು ಮತ್ತು ಬ್ರಹ್ಮಾ ಇವರಿಬ್ಬರೂ ಆ ಲಿಂಗವನ್ನು ತಮ್ಮ ಬಲದಿಂದ ಧರಿಸಿದರು. ಆದರೂ ಅದರ ಭಾರದಿಂದ ಭೂಮಿಯು ಕೂಡ ಪಾತಾಳಕ್ಕೆ ಪ್ರವೇಶಿಸುವುದರಲ್ಲಿತ್ತು. ॥೬೦॥

ಹೀಗೆ ಅಲ್ಲಾಡುತ್ತಿರುವ ಭೂಮಿಯನ್ನು ಹರಿಯ ಶೇಷರೂಪವಾದ ಸರ್ಪವು ಧರಿಸಿತು! ಈ ಸಂಧರ್ಭದಲ್ಲಿ ಶಂಭುವು ಬಹಳ ಕೋಪಗೊಂಡನು. ॥೬೧॥

ತಸ್ಯ ಕ್ರೋಧ ಸಮುದ್ಭೂತಃ ಪಾವಕೋ ನೇತ್ರ ನಿಸ್ಸೃತಃ ।
ಜಗದ್ದಗ್ಧುಂ ಸಮಾರೇಭೇ ತದದ್ಭುತಮಿವಾಭವತ್ ॥೬೨॥

ದಹ್ಯಮಾನೇ ಸರ್ವಲೋಕೇ ಹಾಹಾಕಾರೋ ಮಹಾನಭೂತ್ ।
ಅಥ ದೇವಾಃ ಸ ಗಂಧರ್ವಾ ವಿದ್ಯಾಧರಮಹೋರಗಾಃ ॥೬೩॥

ಸಿದ್ಧಾಃ ಪಿತೃಗಣಾಃ ದೇವಮುನಯೋಽನ್ಯೇಽಪಿ ಸರ್ವತಃ ।
ಅಸ್ತುವನ್ ನೀಲಕಂಠಂ ತಂ ಕ್ರುದ್ಧಂ ಕಾಲಾಂತಕಂ ಶಿವಂ ॥೬೪॥

ಯದಾ ನ ಕ್ಷಮತೇ ದೇವಃ ಶಿವೋ ಲಿಂಗಸ್ಯ ಛೇದನಾತ್ ।
ತದಾ ಬ್ರಹ್ಮಾ ಶಿವೋಪಸ್ಥ ಲಿಂಗಾತ್ಮಾ ಸಮಜಾಯತ ॥೬೫॥

ದೃಷ್ಟ್ವಾ ಲಿಂಗೋದ್ಗಮಂ ತಸ್ಯ ಶಾಂತಪ್ರಾಪನ್ಮಹೇಶ್ವರಂ ।
ವಿಷ್ಣುಃ ಕೃತಾಂಜಲಿಃ ಪ್ರಾಹ ಸ್ತುತ್ವಾನತ್ವಾ ಪುನಃ ಪುನಃ ॥೬೬॥

---

ಶಿವನ ಕೋಪದಿಂದುಂಟಾದ ಅವನ ಕಣ್ಣಿನಿಂದ ಹೊರಟ ಅಗ್ನಿಯು ಪ್ರಪಂಚವೆಲ್ಲವನ್ನೂ ಸುಡಲು ಪ್ರಾರಂಭಿಸಿತು. ಈ ನೋಟವು ಬಹಳ ಆಶ್ಚರ್ಯಕರವಾಗಿತ್ತು. ॥೬೨॥

ಹೀಗೆ ಆ ಅಗ್ನಿಯಿಂದ ಲೋಕವೆಲ್ಲವೂ ಸುಡಲ್ಪಡುತ್ತಿರಲು ಎಲ್ಲೆಲ್ಲಿಯೂ ಹೆಚ್ಚಾದ ಹಾಹಾಕಾರವುಂಟಾಯಿತು. ಅನಂತರದಲ್ಲಿ ದೇವತೆಗಳು ಗಂಧರ್ವರ ಜೊತೆಯಲ್ಲಿ ವಿದ್ಯಾಧರರೂ ಮತ್ತು ದೊಡ್ಡ ದೊಡ್ಡ ಸರ್ಪಗಳೂ ಕೂಡಿ ಶಿವನನ್ನು ಸ್ತೋತ್ರ ಮಾಡಲಾರಂಭಿಸಿದರು. ॥೬೩॥

ಸಿದ್ಧರೂ, ಪಿತೃದೇವತೆಗಳ ಗುಂಪಿನವರೂ, ದೇವರ್ಷಿಗಳೂ ಮತ್ತು ಇತರರೂ, ಎಲ್ಲಾ ಕಡೆಯಲ್ಲಿಯೂ, ಕೋಪಗೊಂಡಿರುವ ಪ್ರಳಯಕಾಲದ ಯಮನಂತಿರುವ, ಕಪ್ಪಾದ ಕತ್ತುಳ್ಳ ಶಿವನನ್ನು ಸ್ತೋತ್ರಮಾಡಲು ತೊಡಗಿದರು. ॥೬೪॥

ದೇವನಾದ ಶಿವನು ತನ್ನ ಲಿಂಗದ ಕತ್ತರಿಸುವಿಕೆಯನ್ನು ಸಹಿಸದಿರಲು ಬ್ರಹ್ಮನು ಶಿವನ ಶರೀರದಲ್ಲಿರುವ ಲಿಂಗಸ್ವರೂಪವನ್ನು ಧಾರಣೆಮಾಡಿದನು. ॥೬೫॥

ಲಿಂಗವುಂಟಾದ್ದನ್ನು ಕಂಡು ಸ್ವಲ್ಪ ಶಾಂತನಾದ ಶಿವನನ್ನು ವಿಷ್ಣುವು ಕೈಜೋಡಿಸಿ ಸ್ತೋತ್ರಮಾಡಿ, ಪುನಃ ಪುನಃ ಸ್ತೋತ್ರದೊಡನೆ ನಮಸ್ಕಾರವನ್ನು ಮಾಡಿ ಈ ರೀತಿಯಲ್ಲಿ ಹೇಳಿದನು. ॥೬೬॥

ಮಹಾದೇವ ಜಗನ್ನಾಥ ತ್ರಾಹಿ ಲೋಕಾಂಶ್ಚರಾಚರಾನ್ ।
ನಶ್ಯಮಾನಾಂ ಸ್ತ್ವತ್ಕ್ರೋಧಾಗ್ನಿನಾ ತಮುಪಸಂಹರ ॥೧೭॥

ತವ ಯತ್ಪತಿತಂ ಲಿಂಗಂ ಪೂಜಯಾಮೋ ವಯಂ ಸದಾ ।
ಇತ್ಯುಕ್ತ್ವಾ ಪುಂಡರೀಕಾಕ್ಷೋ ಲಿಂಗೇ ಪೂಜಾಮಕಲ್ಪಯತ್ ॥೧೮॥

ವಿವಿಧೈರುಪಚಾರಾದ್ಯೈಃ ಪೂಜಯಿತ್ವಾ ಯಥಾವಿಧಿ ।
ಪರಿಕ್ರಮ್ಯ ನಮಸ್ಕೃತ್ಯ ಸ್ತುತಿಂ ಚಕ್ರೇ ವಿಚಿತ್ರಿತಾಂ ॥೧೯॥

ಅಥ ಲಿಂಗಪೂಜನೇನ ಶಾಂತಃ ಸನ್ನಿಹಿತೋ ಭವಃ ।
ಜಗಾದ ವಿಷ್ಣುಂ ಸಂಬೋಧ್ಯ ವಿಷ್ಣೋ ಮದ್ವಚನಂ ಶೃಣು ॥೨೦॥

ಅದ್ಯ ತ್ವಯಾ ಪೂಜಿತೋಽಹಂ ಲಿಂಗೇಽಸ್ಮಿನ್ನಾದಿತಸ್ತತಃ ।
ಅಲೌಕಿಕೀ ಕ್ರಿಯಾ ಚೇಯಂ ಕೃತಾ ಮತ್ಪ್ರೀತಿ ಹೇತವೇ ॥೨೧॥

---

ಓ ಜಗನ್ನಾಥನಾದ ಶಿವನೇ, ನಿನ್ನ ಕೋಪದಿಂದುಂಟಾದ ಬೆಂಕಿಯಿಂದ ನಾಶವಾಗುತ್ತಿರುವ ಚರಾಚರಪ್ರಪಂಚವನ್ನೂ ದಯವಿಟ್ಟು ಕಾಪಾಡು ಮತ್ತು ಆ ಅಗ್ನಿಯು ಶಮನವಾಗುವಂತೆ ಮಾಡು. ॥೧೭॥

ನಿನ್ನ ಬಿದ್ದುಹೋಗಿರುವ ಲಿಂಗವನ್ನು ನಾವು ಯಾವಾಗಲೂ ಪೂಜಿಸುವೆವು! ಎಂದು ಪುಂಡರೀಕಾಕ್ಷನಾದ ವಿಷ್ಣುವು ಲಿಂಗಪೂಜೆಯನ್ನು ಪ್ರಾರಂಭಿಸಿದನು. ॥೧೮॥

ವಿಷ್ಣುವು ಅನೇಕವಿಧವಾದ ಉಪಚಾರದ್ರವ್ಯಗಳಿಂದ ಶಿವಲಿಂಗವನ್ನು ಶಾಸ್ತ್ರೋಕ್ತಕ್ರಮದಲ್ಲಿ ಪೂಜಿಸಿ, ಅದನ್ನು ಸುತ್ತುಗಟ್ಟಿ ನಮಸ್ಕರಿಸಿ, ಅನೇಕ ವಿಧವಾದ ಸ್ತೋತ್ರಗಳಿಂದ ಸ್ತೋತ್ರಮಾಡಿದನು. ॥೧೯॥

ಅನಂತರದಲ್ಲಿ ವಿಷ್ಣುವು ಮಾಡಿದ ಲಿಂಗದ ಪೂಜೆಯಿಂದ ಶಾಂತಿಯನ್ನೈದಿದ ಶಿವನು ಅವನ ಸಮೀಪಕ್ಕೆ ಬಂದನು. ಅವನು ವಿಷ್ಣುವನ್ನು ಸಂಬೋಧಿಸಿ, ಎಲೈ ವಿಷ್ಣುವೇ, ನನ್ನ ಮಾತನ್ನು ಕೇಳು. ಎಂದನು. ॥೨೦॥

ನೀನು ಈ ದಿನ ನನ್ನ ಲಿಂಗಾರ್ಚನೆಯನ್ನು ಮೊತ್ತಮೊದಲನೆಯದಾಗಿ ಪ್ರಾರಂಭಿಸಿ, ನನಗೆ ಸಂತೋಷದಾಯಕವಾದ ಅಸಾಧಾರಣವಾದ ಕಾರ್ಯವನ್ನು ಮಾಡಿದ್ದೀಯೆ! ॥೨೧॥

ಅದ್ಯ ಪ್ರಭೃತ್ಯಹಂ ತಸ್ಮಾಲ್ಲಿಂಗ ಏವ ಪ್ರಪೂಜನಾತ್ ।
ಭವಾಮಿ ನಾಽನ್ಯಥಾ ವಿಷ್ಣೋ ಸಂತುಷ್ಟಃ ಸರ್ವಥಾ ಜನೈಃ ॥೨೨॥

ಸ್ಥಾಪಯಂತು ಚ ಮಾಂ ಲಿಂಗರೂಪಿಣಂ ಸರ್ವದೇವತಾಃ ।
ಮರ್ತ್ಯಾಽಽದ್ಯಾ ಅಪಿ ಸರ್ವತ್ರ ತತ್ರ ಸನ್ನಿಧಿಮೇಮ್ಯಹಂ ॥೨೩॥

ಬ್ರಹ್ಮಾ ಪೀಠಾತ್ಮಕೋ ಯೋನಿರ್ವಿಷ್ಣುರ್ಲಿಂಗಮಹಂ ತ್ರಯಂ ।
ಸಮಷ್ಟ್ಯಾ ಪರಮೇಶಸ್ಯ ರೂಪಂ ಸ್ಯಾತ್ತುರ್ಯಸಂಜ್ಞಿತಂ ॥೨೪॥

ಇತ್ಯುಕ್ತ್ವಾ ಪೂಜಯಾಮಾಸ ಸ್ವಯಂ ಶಂಭು ಸ್ತ್ರಿಲೋಚನಃ ।
ಬ್ರಹ್ಮಾ ದೇವಪತಿರ್ದೇವಾಃ ಸರ್ವೇ ಚಕ್ರುಸ್ತದರ್ಚನಂ ॥೨೫॥

ಏತದ್ದೇವೇಶ ತೇ ಪ್ರೋಕ್ತಂ ಶಿವಸ್ಯ ಚರಿತಂ ಮಹತ್ ।
ಶಾಪಸ್ಯ ಚ ಮಯಾ ಪ್ರೋಕ್ತಂ ಕಾರಣಂ ಸರ್ವಮಾದಿತಃ ॥೨೬॥

---

ಎಲೈ ವಿಷ್ಣುವೇ, ಇನ್ನುಮೇಲೆ ನನ್ನನ್ನು ಜನರು ಸರ್ವವಿಧದಲ್ಲೂ ಲಿಂಗ ಪೂಜೆಯಿಂದ ಆರಾಧನೆಮಾಡಿದರೇ ನಾನು ಸಂತೋಷಗೊಳ್ಳುವೆನೇ ವಿನಾ ಮತ್ತಾವ ವಿಧದಲ್ಲೂ ಅಲ್ಲವು. ॥೨೨॥

ಎಲ್ಲಾ ದೇವತೆಗಳೂ ಮತ್ತು ಮನುಷ್ಯರೇ ಮೊದಲಾದವರೂ ಕೂಡ ನನ್ನನ್ನು ಲಿಂಗಸ್ವರೂಪದಲ್ಲೇ ಸ್ಥಾಪಿಸಲಿ. ನಾನು ಲಿಂಗದಲ್ಲಿ ಯಾವಾಗಲೂ ಸನ್ನಿಧಿಯನ್ನು ಹೊಂದಿರುವೆನು. ॥೨೩॥

ಬ್ರಹ್ಮನು ಪೀಠಸ್ವರೂಪನಾಗಿಯೂ, ವಿಷ್ಣುವು ಯೋನಿಸ್ವರೂಪನಾಗಿಯೂ, ನಾನು ಲಿಂಗಸ್ವರೂಪನಾಗಿಯೂ ಇರುತ್ತಾ, ನಾವು ಮೂವರೂಸೇರಿ ಒಟ್ಟುಗೂಡಿದ ಪರಮೇಶ್ವರನಾದ ನನ್ನ ಸ್ವರೂಪವು ನಾಲ್ಕನೆಯದೆಂದು ಹೆಸರನ್ನು ಹೊಂದುವುದು. ॥೨೪॥

ಹೀಗೆಂದು ಹೇಳಿ ಮುಕ್ಕಣ್ಣನಾದ ಶಿವನು ತಾನೇ ಆ ಲಿಂಗವನ್ನು ಪೂಜಿಸಿದನು. ಆ ಬಳಿಕ ಬ್ರಹ್ಮಾ, ದೇವೇಂದ್ರ, ದೇವತೆಗಳು, ಎಲ್ಲರೂ ಶಿವಲಿಂಗಾರ್ಚನೆಯನ್ನು ಮಾಡಿದರು. ॥೨೫॥

ಎಲೈ ದೇವೇಂದ್ರನೇ, ಮಹತ್ವವುಳ್ಳ ಶಿವನ ಈ ಚರಿತ್ರೆಯನ್ನು ನಾನು ನಿನಗೆ ಹೇಳಿದ್ದೇನೆ. ಶಿವನಿಗೆ ಶಾಪ ಬರಲು ಕಾರಣವನ್ನು ಪ್ರಾರಂಭದಿಂದ ಎಲ್ಲವನ್ನೂ ತಿಳಿಸಿದ್ದೇನೆ. ॥೨೬॥

**ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಮನ್ಮಥೋಽಪಾಖ್ಯಾನೇ**
**ಶಿವಲಿಂಗಸ್ವರೂಪವರ್ಣನಂ ನಾಮ ಚತುಸ್ತ್ರಿಂಶೋಽಧ್ಯಾಯಃ**

---

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಮನ್ಮಥೋಪಾಖ್ಯಾನದಲ್ಲಿ ಶಿವಲಿಂಗಸ್ವರೂಪ, ಪೂಜಾ, ಮಹಿಮೆಗಳನ್ನು ವಿವರಿಸಿರುವ
ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಪಂಚತ್ರಿಂಶೋಽಧ್ಯಾಯಃ ॥

### ಮೂವತ್ತೈದನೆಯ ಅಧ್ಯಾಯವು

ಅಥ ದೇವಪತಿರ್ಗೌರೀಂ ಪುನಃ ಪಪ್ರಚ್ಛ ಸಾದರಂ ।
ಭೂಮಿಲೋಕೇ ಲಿಂಗಪೂಜಾ ಕಥಂ ಮರ್ತ್ಯೈಃ ಕೃತಾಽಭವತ್ ॥೧॥

ಏತದಾಖ್ಯಾಹಿ ಮೇ ಶ್ರೋತುರ್ಯದಿ ಶ್ರೋತವ್ಯಮಸ್ತಿ ವೈ ।
ಅಥ ಪ್ರಾಹ ಸುರೇಶಂ ಸಾ ಗಿರಿಜಾ ಹೃಷ್ಟಮಾನಸಾ ॥೨॥

ಶೃಣು ದೇವೇಶ ವಕ್ಷ್ಯಾಮಿ ಕಥಾಂ ಪಾಪಪ್ರಣಾಶಿನೀಂ ।
ಅಥ ಭೂಮೌ ಜನಾಃ ಶ್ರುತ್ವಾ ದೇವೇಭ್ಯೋ ಲಿಂಗಪೂಜನಂ ॥೩॥

---

ಅನಂತರದಲ್ಲಿ ದೇವೇಂದ್ರನು ಗೌರೀದೇವಿಯನ್ನು ಕುರಿತು “ಓ ದೇವಿಯೇ, ಭೂಲೋಕದಲ್ಲಿ ಮನುಷ್ಯರು ಲಿಂಗಪೂಜೆಯನ್ನು ಹೇಗೆ ಮಾಡಿದರು? ಅದು ಹೇಗೆ ಹರಡಿತು? ॥೧॥

ಇದನ್ನು ನಾನು ಕೇಳಬಹುದಾದರೆ ನನಗೆ ದಯವಿಟ್ಟು ಹೇಳಬೇಕು. ಎಂದು ಕೇಳಿದನು. ಆ ಮೇಲೆ ಪಾರ್ವತಿಯು ಸಂತೋಷಭರಿತವಾದ ಮನಸ್ಸುಳ್ಳವಳಾಗಿ ಇಂದ್ರನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೨॥

ಎಲೈ ದೇವೇಂದ್ರನೇ, ಕೇಳು ಪಾಪವನ್ನು ನಾಶಮಾಡುವ ಈ ಕಥೆಯನ್ನು ಹೇಳುವೆನು:—ಆ ಬಳಿಕ ಜನರು ದೇವತೆಗಳು ಲಿಂಗಪೂಜೆಯನ್ನು ಮಾಡಿದ ವಿಷಯವನ್ನು ಕೇಳಿದರು. ॥೩॥

ನ ಶ್ರದ್ದಧು ರ್ವಚಃ ಪ್ರಾಯೋ ಲೋಕವಿದ್ವಿಷ್ಟ ಮಿತ್ಯುತ ।
ಅಥ ಲಿಂಗಾರ್ಚನಂ ಲೋಕೇ ಲುಪ್ತಂ ಮತ್ವಾ ತ್ರಿಲೋಚನಃ ॥೪॥

ಆಸ್ಥಿತಸ್ತಪ ಅತ್ಯುಗ್ರಂ ತ್ರಿಪುರಾ ಪ್ರೀತಿಹೇತವೇ ।
ದರ್ಶವರ್ಷ ಸಹಸ್ರಾಣಿ ತತಃ ಸಾ ಜಗದೀಶ್ವರೀ ॥೫॥

ಪ್ರಸನ್ನಾ ದರ್ಶಯಾಮಾಸ ಸ್ವಾತ್ಮಾನಂ ಮೂರ್ತಿಮತ್ತಯಾ ।
ದೃಷ್ಟ್ವಾ ಮೂರ್ತಿಂ ಜಗನ್ಮಾತುಃ ಸ್ತುತ್ವಾ ನತ್ವಾ ಪುನಃ ಪುನಃ ॥೬॥

ಪ್ರಣತೋ ದಂಡವದ್ಭೂವೌ ಭಕ್ತಿನಿರ್ಭರಿತಾಂತರಂ ।
ಅಥ ಸಾ ತ್ರಿಪುರೇಶಾನೀ ಲೀಲಾವಿಗ್ರಹಧಾರಿಣೀ ॥೭॥

ಆಹ ಶಂಭುಂ ಶಿವೇತ್ಯೇವ ಮಾಮಂತ್ರ್ಯ ಜಗದೀಶ್ವರೀ ॥೮॥

---

ಈ ವಿಷಯವನ್ನು ಕೇಳಿದರೂ ಅವರು ಇದನ್ನು ನಂಬಲೇ ಇಲ್ಲ. ಏಕೆಂದರೆ ಅವರು ಲಿಂಗಪೂಜೆಯು ಲೋಕಕ್ಕೆ ವಿರೋಧವಾದ ವಿಷಯವೆಂದು ಬಗೆದರು. ಅನಂತರ ಮುಕ್ಕಣ್ಣನಾದ ಶಿವನು ಲಿಂಗಾರ್ಚನೆಯು ಲೋಕದಲ್ಲಿ ನಷ್ಟವಾಗುತ್ತಿರುವುದೆಂದು ಕಂಡನು. ॥೪॥

ಇದಕ್ಕೋಸ್ಕರ ಶಿವನು ತ್ರಿಪುರಾದೇವಿಯ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಹತ್ತು ಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡಿದನು. ಅನಂತರದಲ್ಲಿ ಜಗದೀಶ್ವರಿಯಾದ ದೇವಿಯು ಅವನಿಗೆ ಪ್ರಸನ್ನಳಾದಳು. ॥೫॥

ತ್ರಿಪುರಾದೇವಿಯು ಪ್ರಸನ್ನಳಾಗಿ ಶರೀರಧಾರಣೆಮಾಡಿ, ತನ್ನ ಸ್ವರೂಪವನ್ನು ಶಿವನಿಗೆ ತೋರಿಸಿದಳು. ಲೋಕಮಾತೆಯಾದ ದೇವಿಯ ಮೂರ್ತಿಯನ್ನು ಶಿವನು ನೋಡಿ ಸ್ತೋತ್ರಮಾಡಿ ಪುನಃ ಪುನಃ ನಮಸ್ಕಾರ ಮಾಡಿದನು. ॥೬॥

ಶಿವನು ಆಕೆಗೆ ದಂಡಾಕಾರವಾಗಿ ಪುನಃ ಪುನಃ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ತುಂಬಿದ ಮನಸ್ಸುಳ್ಳವನಾಗಿದ್ದನು. ತರುವಾಯ ಲೀಲೆಯಿಂದ ಶರೀರವನ್ನು ಧರಿಸಿದ್ದ ತ್ರಿಪುರಾದೇವಿಯು ಅವನನ್ನು ನೋಡಿದಳು. ॥೭॥

ಎಲೈ ಶಿವನೇ, ಎಂದು ಕರೆದು, ಜಗದೀಶ್ವರಿಯಾದ ತ್ರಿಪುರಾದೇವಿಯು ಶಿವನನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೮॥

ಶೃಣು ಶಂಕರ ಮದ್ವಾಕ್ಯಂ ಲೋಕವಿದ್ವಿಷ್ಟಮೇವ ತತ್ ।
ಯಲ್ಲಿಂಗ ಪೂಜನಂ ಪ್ರೋಕ್ತಂ ನ ವಾಂಛಂತಿ ಜನಾಸ್ತತಃ ॥೯॥

ತಥಾಽಪ್ಯಹಂ ತೇ ತಪಸಾ ತುಷ್ಟಾ ದಾಸ್ಯಾಮಿ ವಾಂಛಿತಂ ।
ಅದ್ಯ ಪ್ರಭೃತಿ ಲೋಕೇಷು ತವ ಮೂರ್ತಿಸ್ತು ಸರ್ವತಃ ॥೧೦॥

ಲಿಂಗಾಽತ್ಮತಾಂ ಸಮಾಯಾತು ಲಿಂಗೇ ಪೂಜನಮಾತ್ರತಃ ।
ತುಷ್ಟಾಃ ತ್ರಿಮೂರ್ತಯಃ ಸಂತು ತಥಾ ತುರ್ಯೋ ಮಹೇಶ್ವರಃ ॥೧೧॥

ಬ್ರಹ್ಮಣಾ ವಿಷ್ಣುನಾ ಚಾಽಪಿ ತ್ವಯಾ ತುರ್ಯೇಣ ಶಂಭುನಾ ।
ಸದಾ ಶಿವೇನ ಚಾಽಽರಾಧ್ಯಂ ಲಿಂಗಂ ಸರ್ವೈರಪೀಶ್ವರೈಃ ॥೧೨॥

ಯೋ ಲಿಂಗಂ ನಾಽರ್ಚಯೇದ್ಭಕ್ತ್ಯಾ ತಸ್ಯ ತ್ವಂ ವಾ ಹರಿಸ್ತಥಾ ।
ಅನ್ಯೇಽಪಿ ದೇವಾ ವಿಮುಖಾ ಭವಂತು ಮಮ ಶಾಸನಾತ್ ॥೧೩॥

---

ಎಲೈ ಶಿವನೇ, ನನ್ನ ಮಾತನ್ನು ಕೇಳು. ಲೋಕದಲ್ಲಿ ಜನರು ಲಿಂಗಾರ್ಚನೆಯನ್ನು ದ್ವೇಷಿಸುತ್ತಾ ಅದನ್ನು ಅಪೇಕ್ಷಿಸುತ್ತಿಲ್ಲ. ಎಂಬುದೇ ನಿನಗೆ ಉಂಟಾಗಿರುವ ತೊಂದರೆಯಲ್ಲವೇ ? ಎಂದಳು. ॥೯॥

ಆದಾಗ್ಯೂ ನಿನ್ನ ತಪಸ್ಸಿಗೆ ಮೆಚ್ಚಿ ನಿನ್ನ ಇಷ್ಟಾರ್ಥವನ್ನು ನೀಡುವೆನು. ಇವತ್ತು ಮೊದಲು ಮಾಡಿಕೊಂಡು, ಲೋಕಗಳಲ್ಲಿರುವ ನಿನ್ನ ಮೂರ್ತಿಗಳೆಲ್ಲವೂ ಲಿಂಗಸ್ವರೂಪವನ್ನು ಹೊಂದಲಿ. ಲಿಂಗಕ್ಕೆ ಪೂಜಿಸಿದ ಕೂಡಲೇ ತ್ರಿಮೂರ್ತಿಗಳೂ ಸಂತೋಷವನ್ನು ಹೊಂದಲಿ. ಹಾಗೆಯೇ ನಾಲ್ಕನೆಯ ಸ್ವರೂಪವನ್ನು ಧರಿಸಿದ ಮಹೇಶ್ವರನಾದ ನೀನು ಇದರಿಂದ ತೃಪ್ತಿಯನ್ನು ಹೊಂದು. ॥೧೦-೧೧॥

ಬ್ರಹ್ಮಾ, ವಿಷ್ಣು, ರುದ್ರ, ನಾಲ್ಕನೆಯವನಾದ ಶಂಭುವಾದ ನೀನು ಮತ್ತು ಸದಾಶಿವ ಮತ್ತು ಇತರ ಅಧಿದೇವತೆಗಳು ಎಲ್ಲರೂ ಇನ್ನುಮೇಲೆ ಶಿವಲಿಂಗವನ್ನು ಪೂಜಿಸಲಿ. ॥೧೨॥

ಯಾವನು ಭಕ್ತಿಯಿಂದ ಶಿವಲಿಂಗವನ್ನು ಪೂಜಿಸುವುದಿಲ್ಲವೋ ಅವನಿಗೆ ನೀನು ಮತ್ತು ವಿಷ್ಣು ಮತ್ತು ಇತರ ದೇವತೆಗಳೂ ನನ್ನ ಅಪ್ಪಣೆಯ ಪ್ರಕಾರ ಪ್ರತಿಕೂಲರಾಗಿರಿ ! ॥೧೩॥

ಮದ್ಭಕ್ತಸ್ಯಾಽಪಿ ಲಿಂಗಾಽರ್ಚಾ ನಿತ್ಯಮಾವಶ್ಯಕೀ ಭವೇತ್ ।
ಅನಭ್ಯರ್ಚ್ಯ ಲಿಂಗಮೈಶಂ ಮದುಪಾಸ್ತಿಂ ಕರೋತಿ ಯಃ ॥೧೪॥

ತಸ್ಯ ನಿಷ್ಫಲಮೇವಾಽಸ್ತು ಸರ್ವಂ ಕರ್ಮ ಕೃತಂ ಶಿವ ।
ಲಿಂಗಪೂಜನಮಾತ್ರೇಣ ಪ್ರೀತಾಽಹಂ ವಾಂಛಿತಾಽರ್ಥದಾ ॥೧೫॥

ವಿಧಿನಾ ಪೂಜಿತಾ ಲಿಂಗೇ ಯೇನಾಽಹಂ ಭಕ್ತಿಭಾವತಃ ।
ತಸ್ಮೈ ದದಾಮಿ ಸಾಲೋಕ್ಯಮಲಭ್ಯಮನ್ಯಥಾ ಜನೈಃ ॥೧೬॥

ಯಸ್ತು ಲಿಂಗೇ ಯಂತ್ರರಾಜಂ ವಿಲಿಖ್ಯ ಪೂಜಯೇಚ್ಚ ಮಾಂ ।
ತತ್ಫಲಂ ಚಕ್ರರಾಜಾಽರ್ಚಾ ಕೋಟಿಕೋಟಿ ಗುಣಂ ಭವೇತ್ ॥೧೭॥

ಲಿಂಗಮೂರ್ಧ್ನಿ ಕೃತಂ ಯಂತ್ರಂ ಸರ್ವಯಂತ್ರೋತ್ತಮೋತ್ತಮಂ ।
ತತ್ರ ಪೂಜನಮಾತ್ರೇಣ ಪೂಜಿತಾಃ ಸರ್ವದೇವತಾಃ ॥೧೮॥

---

ನನ್ನ ಭಕ್ತರಾದರೂ ಎಲ್ಲರೂ ಲಿಂಗಪೂಜೆಯನ್ನು ಆವಶ್ಯಕವಾಗಿ ಮಾಡಲೇ ಬೇಕು. ಲಿಂಗವನ್ನು ಪೂಜಿಸದೇ ನನ್ನ ಪೂಜೆಯನ್ನು ಮಾಡುವವನ ಕರ್ಮ ವೆಲ್ಲವೂ ವ್ಯರ್ಥವಾಗಲಿ! ॥೧೪॥

ಎಲೈ ಶಿವನೇ, ಹೀಗೆ ಲಿಂಗಪೂಜಕನಲ್ಲದವನ ಕರ್ಮಗಳೆಲ್ಲವೂ ನಿಷ್ಫಲ ವಾಗಲಿ. ಲಿಂಗವನ್ನು ಪೂಜಿಸಿದ ಮಾತ್ರಕ್ಕೆ ನಾನು ಅವನಿಗೆ ಮೆಚ್ಚಿ ಇಷ್ಟಾರ್ಥ ಗಳನ್ನು ಕೊಡುವೆನು. ॥೧೫॥

ಯಾವನು ನನ್ನನ್ನು ಭಕ್ತಿಭಾವದಿಂದ ಲಿಂಗದಲ್ಲಿ ಪೂಜಿಸುತ್ತಾನೋ ಅವನಿಗೆ ಜನಗಳಿಗೆ ಬೇರೆ ವಿಧದಲ್ಲಿ ಸಿಕ್ಕದಿರುವ ನನ್ನ ಸ್ವರೂಪವನ್ನು ನೋಡುವ ಸಾಲೋಕ್ಯವೆಂಬ ಮೋಕ್ಷವನ್ನು ಕೊಡುವೆನು. ॥೧೬॥

ಯಾವನು ಲಿಂಗದಲ್ಲಿ ಯಂತ್ರರಾಜವನ್ನು ಬರೆದು ನನ್ನನ್ನು ಪೂಜಿಸು ವನೋ ಅವನಿಗೆ ಚಕ್ರರಾಜವನ್ನು ಬರೆದು ಪೂಜಿಸಿದ್ದಕ್ಕಿಂತ ಅನೇಕ ಕೋಟಿಯಷ್ಟು ಹೆಚ್ಚಿನ ಪುಣ್ಯವು ಲಭಿಸುವುದು. ॥೧೭॥

ಲಿಂಗದ ತಲೆಯ ಭಾಗದಲ್ಲಿ ಬರೆದ ಯಂತ್ರವು ಎಲ್ಲಾ ಯಂತ್ರಗಳಿಗಿಂತಲೂ ಅತ್ಯಂತ ಶ್ರೇಷ್ಠವು. ಅಲ್ಲಿ ಪೂಜಿಸಿದ ಮಾತ್ರದಿಂದಲೇ ಎಲ್ಲಾ ದೇವತೆಗಳನ್ನೂ ಪೂಜಿಸಿದಂತಾಗುವುದು. ॥೧೮॥

ಯಸ್ಮಾತ್ತ್ರಿಮೂರ್ತಿರೂಪಂ ತದ್ದೇವಾ ಮೂರ್ತಿತ್ರಯೋದ್ಭವಾಃ ।
ಅನ್ಯತ್ತೇ ಸಂಪ್ರವಕ್ಷ್ಯಾಮಿ ರಹಸ್ಯಂ ಶೃಣು ಶಂಕರ ॥೧೯॥

ಲೀಲಾರ್ಥಗಮಕಂ ಯಸ್ಮಾಲ್ಲಿಂಗಂ ಸಾಕ್ಷಾತ್ಪರಃ ಶಿವಃ ।
ಮದ್ರೂಪ ಮಪರಂ ಲಿಂಗಂ ಸರ್ವಕಾರಣಭಾವತಃ ॥೨೦॥

ಇತ್ಯುಕ್ತ್ವಾ ವಿಧಿಮುಖ್ಯಾಂಶ್ಚ ಪ್ರಶಾಸ್ಯ ಲಿಂಗಪೂಜನೇ ।
ಪಶ್ಯತಾಂ ಸರ್ವದೇವಾನಾಂ ತತ್ರೈವಾಂತರಧೀಯತ ॥೨೧॥

ತತಃ ಪ್ರಭೃತಿ ಲೋಕೇಷು ಪ್ರಸೃತಂ ಲಿಂಗಪೂಜನಂ ।
ಏತತ್ತೇಽಭಿಹಿತಂ ಶಕ್ರ ತಸ್ಮಾನ್ನಾಽಪತ್ಯ ಸಂಭವಃ ॥೨೨॥

ತಥಾಽಪಿ ಪಶ್ಯಸಿ ಶಿವಂ ತಪಃ ಪರಮಮಾಸ್ಥಿತಂ ।
ನಿರುಚ್ಛ್ವಾಸಂ ನಿರುನ್ಮೇಷಂ ಕಥಂ ತೇನ ಸಮಾಗಮಃ ॥೨೩॥

---

ಎಲೈ ಶಂಕರನೇ, ಇದಕ್ಕೆ ಕಾರಣವೇನೆಂದರೆ ಲಿಂಗವು ತ್ರಿಮೂರ್ತಿಗಳ ಸ್ವರೂಪವಾದದ್ದು. ಇತರ ಮೂರ್ತಿಗಳೆಲ್ಲರೂ ತ್ರಿಮೂರ್ತಿಗಳಿಂದಲೇ ಹುಟ್ಟಿದವರು. ಇದೂ ಅಲ್ಲದೇ ನಿನಗೆ ಇನ್ನೊಂದು ರಹಸ್ಯವನ್ನು ಹೇಳುವೆನು ಕೇಳು. ॥೧೯॥

ರಹಸ್ಯವಾದ ವಿಷಯಗಳನ್ನೂ ಲಿಂಗವು ಸೂಚಿಸುವುದರಿಂದ ಮತ್ತು ಸಾಕ್ಷಾತ್ಪರಶಿವನೇ ಲಿಂಗಸ್ವರೂಪವನ್ನು ಧರಿಸಿರುವುದರಿಂದಲೂ, ಎಲ್ಲಕ್ಕೂ ಕಾರಣ ಸ್ವರೂಪದಲ್ಲಿ ನನ್ನ ಸ್ವರೂಪದಲ್ಲೇ ಲಿಂಗವು ಇದೆ ಎಂದು ತಿಳಿ. ॥೨೦॥

ಹೀಗೆ ಹೇಳಿ ಬ್ರಹ್ಮನೇ ಮೊದಲಾದವರಿಗೆ ಲಿಂಗಪೂಜೆಯನ್ನು ಮಾಡಬೇಕೆಂದು ಅಪ್ಪಣೆಮಾಡಿ, ಎಲ್ಲಾ ದೇವತೆಗಳೂ ನೋಡುತ್ತಿರುವಾಗಲೇ ತ್ರಿಪುರಾದೇವಿಯು ಅಲ್ಲಿಯೇ ಅಂತರ್ಧಾನವಾದಳು. ॥೨೧॥

ಆ ಹೊತ್ತು ಮೊದಲುಮಾಡಿಕೊಂಡು ಲೋಕದಲ್ಲಿ ಲಿಂಗಪೂಜೆಯು ಹರಡಿತು. ಎಲೈ ಇಂದ್ರನೇ, ನಿನಗೆ ಈ ವಿಷಯವನ್ನು ತಿಳಿಸಿದ್ದೇನೆ. ಆದ್ದರಿಂದ ಶಿವನಿಗೆ ಮಕ್ಕಳಾಗುವ ಸಂಭವವಿಲ್ಲ. ॥೨೨॥

ಅದೂ ಅಲ್ಲದೇ ಶಿವನು ಉಸಿರನ್ನೂ ಸಹ ತಡೆಗಟ್ಟಿ ಕಣ್ಣುಗಳನ್ನೂ ಬಿಡದೇ ದೊಡ್ಡದಾದ ತಪಸ್ಸಿನಲ್ಲಿ ಕುಳಿತಿರುವುದನ್ನು ನೀನೇ ನೋಡಿರುತ್ತೀಯೆ. ಅಂತಹವನೊಂದಿಗೆ ನನಗೆ ಸಂಬಂಧವಾಗುವುದೆಂತು ? ॥೨೩॥

ಗಚ್ಛೇಂದ್ರ ಕಾಮಮತ್ರಾರ್ಥೇ ನಿಯೋಜಯ ರಮಾಸುತಂ ।
ಸ ಜೇಷ್ಯತಿ ಶಿವಂ ದೇವಂ ಕಾಲೇನ ತವ ಸಂಮತಂ ॥೨೪॥

ಭವೇದಿತಿ ಸಮಾದಿಶ್ಯ ಜಗಾಮಾಂತರ್ಧಿಮಂಬಿಕಾ ।
ಅಥ ದೇವಪತಿಃ ಶೀಘ್ರಮಾಗತ್ಯ ಸ್ವರ್ನಿವೇಶನಂ ॥೨೫॥

ಸಸ್ಮಾರ ಮನ್ಮಥಂ ದೇವಂ ಸ್ವಕಾರ್ಯವಶತೋ ದ್ರುತಂ ।
ಅಥ ಸಂಸ್ಮೃತಮಾತ್ರಸ್ತು ಮನ್ಮಥೋ ರತಿಸಂಯುತಃ ॥೨೬॥

ಆವಿರ್ಭೂತಃ ಶಕ್ರಸಭಾಮಧ್ಯೇ ನಿಮೇಷಮಾತ್ರತಃ ।
ತರುಣೋ ಲಾವಣ್ಯನಿಧಿಃ ಪುಷ್ಪಬಾಣೇಕ್ಷುಕಾರ್ಮುಕಃ ॥೨೭॥

ತತೋಽತಿಮಾತ್ರ ಸೌಂದರ್ಯಯುತಾಂ ಸಂಶ್ಲಿಷ್ಯ ವೈ ರತಿಂ ।
ಆಚ್ಛಿಂದನ್ ಸ್ವರ್ನಿವಾಸಾನಾಂ ಚಕ್ಷೂಂಷಿ ಚ ಮನಾಂಸಿ ಚ ॥೨೮॥

---

ಎಲೈ ಇಂದ್ರನೇ, ಆದ್ದರಿಂದ ನೀನು ಹೋಗಿ ಲಕ್ಷ್ಮಿಯ ಮಗನಾದ ಮನ್ಮಥನನ್ನು ಈ ವಿಷಯದಲ್ಲಿ ನಿಯಮಿಸು. ಅವನು ದೇವನಾದ ಶಿವನನ್ನು ಜಯಿಸುವನು. ಅನಂತರ ನಿನಗೆ ಇಷ್ಟಫಲವು ಸಿದ್ಧಿಸುವುದು. ॥೨೪॥

ಈ ರೀತಿಯಲ್ಲಿ ನಿನ್ನ ಇಷ್ಟವು ಸಿದ್ಧಿಸುವುದು. ಎಂದು ಪಾರ್ವತಿಯು ಇಂದ್ರನಿಗೆ ಅಪ್ಪಣೆಯನ್ನು ಮಾಡಿ ಅಂತರ್ಧಾನವನ್ನು ಹೊಂದಿದಳು. ಆ ಮೇಲೆ ದೇವೇಂದ್ರನು ಶೀಘ್ರವಾಗಿ ತನ್ನ ಸ್ವರ್ಗಲೋಕದ ಮನೆಗೆ ಬಂದನು. ॥೨೫॥

ಇಂದ್ರನು ತನ್ನ ಕಾರ್ಯೋದ್ದೇಶದಿಂದ ಶೀಘ್ರವಾಗಿ ದೇವನಾದ ಮನ್ಮಥನನ್ನು ಸ್ಮರಿಸಿದನು. ತರುವಾಯ ಇಂದ್ರನು ಸ್ಮರಿಸಿದ ಕೂಡಲೇ ಮನ್ಮಥನು ರತಿಯೊಂದಿಗೆ ಅಲ್ಲಿ ಕಾಣಿಸಿಕೊಂಡನು. ॥೨೬॥

ಯುವಕನೂ, ಸೌಂದರ್ಯದ ಗಣಿಯಂತಿರುವವನೂ, ಹುವ್ವಿನ ಬಾಣ ಮತ್ತು ಕಬ್ಬಿನ ಜಲ್ಲೆಯ ಬಿಲ್ಲು ಇವುಗಳನ್ನೂ ಹಿಡಿದಿರುವ ಮನ್ಮಥನು ಇಂದ್ರನ ಸಭೆಯ ಮಧ್ಯದಲ್ಲಿ ನಿಮಿಷಮಾತ್ರದಲ್ಲಿಯೇ ದೇವೇಂದ್ರನಿಗೆ ಕಾಣಿಸಿಕೊಂಡನು. ॥೨೭॥

ಆ ಬಳಿಕ ಮನ್ಮಥನು ಅತ್ಯಂತ ಸೌಂದರ್ಯದಿಂದ ಕೂಡಿದ ರತಿಯನ್ನು ಆಲಿಂಗಿಸಿಕೊಂಡು ಅಲ್ಲಿಗೆ ಬಂದು ಸ್ವರ್ಗವಾಸಿಗಳಾದ ಜನರೆಲ್ಲರ ಕಣ್ಣುಗಳನ್ನೂ ಮತ್ತು ಮನಸ್ಸುಗಳನ್ನೂ ಆಕರ್ಷಿಸಿದನು. ॥೨೮॥

ದೃಷ್ಟ್ವಾ ಪ್ರಾಪ್ತಂ ಮನ್ಮಥಂ ತಂ ಪ್ರತ್ಯುದ್ಗಮ್ಯ ದಿವಸ್ಪತಿಃ ।
ಸಮಾನಯತ್ಕರೇ ಧೃತ್ವಾ ಸ್ವಾಽಽಸನೇ ಸನ್ನಿವೇಶಯತ್ ॥೨೯॥

ಅಥಾಽಭ್ಯರ್ಹಣಮಾದಾಯ ಪೂಜಯಾಮಾಸ ಮನ್ಮಥಂ ।
ತಥಾ ಸುಪೂಜಿತಃ ಕಾಮೋ ದೇವೈಃ ಸಂಮಾನಿತೋ ಭೃಶಂ ॥೩೦॥

ಸಂತುಷ್ಟಃ ಪ್ರಾಹ ದೇವೇಶಂ ಶೃಣ್ವತಾಂ ಚ ದಿವೌಕಸಾಂ ।
ಬ್ರೂಹೀಂದ್ರ ಸಂಸ್ಮೃತಃ ಕಸ್ಮಾತ್ ಕಿಂ ತೇ ಕೃತ್ಯಂ ಮಯಾಸ್ಥಿತಂ ॥೩೧॥

ಯಾಸ್ಯಾಮಿ ತತ್ತೇ ಸಂಪಾದ್ಯ ಸರ್ವಥಾ ತೇ ಪ್ರಪೂಜಿತಃ ।
ಸಾಧಯಿಷ್ಯಾಮ್ಯಸಾಧ್ಯಂ ಚ ತ್ವದರ್ಥಂ ಸಂಶಯಂ ಜಹಿ ॥೩೨॥

ಇತಿ ಬ್ರುವಾಣಂ ದೇವೇಶಃ ಪ್ರಾಹ ಹೃಷ್ಟಃ ಕೃತಾಂಜಲಿಃ ।
ನೈತಚ್ಚಿತ್ರಂ ರಮಾಪುತ್ರ ಸದೃಶಂ ವಚನಂ ತವ ॥೩೩॥

---

ಸ್ವರ್ಗಾಧಿಪತಿಯಾದ ಇಂದ್ರನು ಮನ್ಮಥನು ಬಂದದ್ದನ್ನು ಕಂಡು ಅವನನ್ನು ಎದುರ್ಗೊಂಡು ತನ್ನ ಕೈಯ್ಯಲ್ಲಿ ಅವನ ಕೈಯ್ಯನ್ನು ಹಿಡಿದುಕೊಂಡು ಅವನನ್ನು ಕರೆದುಕೊಂಡು ಬಂದು ತನ್ನ ಪೀಠದಲ್ಲಿ ಕುಳ್ಳಿರಿಸಿದನು. ॥೨೯॥

ಅನಂತರದಲ್ಲಿ ಇಂದ್ರನು ಪೂಜಾದ್ರವ್ಯಗಳನ್ನು ತಂದು ಮನ್ಮಥನನ್ನು ಪೂಜಿಸಿದನು. ಹಾಗೆ ಪೂಜಿಸಲ್ಪಟ್ಟ ಮನ್ಮಥನು ದೇವತೆಗಳಿಂದಲೂ ಬಹಳವಾಗಿ ಪೂಜಿಸಲ್ಪಟ್ಟನು. ॥೩೦॥

ಮನ್ಮಥನು ಸಂತೋಷಪಟ್ಟು ದೇವತೆಗಳು ಕೇಳುತ್ತಿರಲು, ದೇವೇಂದ್ರನನ್ನು ಕುರಿತು, ಎಲೈ ಇಂದ್ರನೇ, ನೀನು ನನ್ನನ್ನು ಏತಕ್ಕೆ ಜ್ಞಾಪಿಸಿಕೊಂಡೆ? ನಾನು ಮಾಡಬೇಕಾದ ಕರ್ತವ್ಯವೇನು? ॥೩೧॥

ನಿನ್ನಿಂದ ಗೌರವಿಸಲ್ಪಟ್ಟ ನಾನು ಕೂಡಲೇ ಹೋಗಿ ನೀನು ಬಯಸುವುದನ್ನು ತಂದುಕೊಡುವೆನು. ಅದು ಅಸಾಧ್ಯವಾದರೂ ನಾನೂ ನಿನಗಾಗಿ ಸಾಧಿಸಿ ಕೊಡುವೆನೆಂದು ತಿಳಿ. ಈ ವಿಷಯದಲ್ಲಿ ಸಂಶಯಪಡಬೇಡ. ॥೩೨॥

ಹೀಗೆ ಹೇಳುತ್ತಿರುವ ಮನ್ಮಥನನ್ನು ನೋಡಿ ಇಂದ್ರನು ಅತ್ಯಂತ ಹರ್ಷ ಹೊಂದಿದವನಾಗಿ ಕೈಜೋಡಿಸಿಕೊಂಡು ಅವನನ್ನು ಕುರಿತು, ಎಲೈ ಲಕ್ಷ್ಮಿಯ

ಲೋಕಮಾತ್ರಾ ಮದರ್ಥೇ ತ್ವಂ ಸೃಷ್ಟೋsಜೇಯೋsಖಿಲೈರಪಿ ।
ಯಸ್ತೇ ಶತ್ರುಃ ಶಿವೋ ದೇವಃ ಸದ್ಯಃ ಸ ತಪ ಆಸ್ಥಿತಃ ॥೩೪॥

ತಂ ಜಿತ್ವಾ ಸತ್ವರಂ ಶೈಲಜಾತಾಯಾಂ ಸನ್ನಿಯೋಜಯ ।
ಶ್ರುತ್ವೇತ್ಥಂ ಶಕ್ರವಚನಂ ಮದನೋ ವಿಮನಾ ಭವತ್ ॥೩೫॥

ಸ್ಮೃತ್ವಾ ಪ್ರಾಕ್ ಗಿರಿಜಾಶಾಪಂ ಶಿವಾದಾತ್ಮಪ್ರಣಾಶನಂ ।
ಸ್ಥಿತಸ್ತೂಷ್ಣೀಂ ಕ್ಷಣಂ ತಾದೃಗ್ವಿಧಮಾಲಕ್ಷ್ಯ ವಜ್ರಭೃತ್ ॥೩೬॥

ಆಹ ಕಿಂ ಕಾಮ ವಿಮನಾ ಲಕ್ಷ್ಯಸೇsತ್ರ ವಿಶೇಷತಃ ।
ಇತಿ ಶಕ್ರಾನುಯುಕ್ತಃ ಸ ನಿಶ್ವಸನ್ನಾಹ ಸ್ವಾಂತರಂ ॥೩೭॥

---

ಮಗನಾದ ಮನ್ಮಥನೇ, ನೀನು ಹೇಳಿದ್ದೇನೋ ಆಶ್ಚರ್ಯಕರವಲ್ಲ. ನಿನ್ನ ಯೋಗ್ಯತೆಗೆ ಅನುರೂಪವಾದ ಮಾತನ್ನೇ ಆಡಿದ್ದೀಯೆ! ಎಂದನು. ॥೩೩॥

ಲೋಕಕ್ಕೆ ತಾಯಿಯಾದ ಲಕ್ಷ್ಮೀದೇವಿಯು ನಮ್ಮ ಕಾರ್ಯವನ್ನು ಸಾಧಿಸಿ ಕೊಡುವುದಕ್ಕಾಗಿಯೇ ನಿನ್ನನ್ನು ಸೃಷ್ಟಿಸಿದ್ದಾಳೆ. ಯಾರಿಂದಲೂ ಜಯಿಸಲು ಅಸಾಧ್ಯನಾದ ಮತ್ತು ನಿನ್ನ ಶತ್ರುವಾದ ಶಿವನು ಈಗ ಉಗ್ರತಪಸ್ಸಿನಲ್ಲಿದ್ದಾನೆ.॥೩೪॥

ಎಲೈ ಮನ್ಮಥನೇ, ನೀನು ಅವನನ್ನು ಶೀಘ್ರವಾಗಿ ಜಯಿಸಿ ಪಾರ್ವತಿಯೊಂದಿಗೆ ಸೇರಿಸು. ಎಂದು ಹೇಳಿದ ಇಂದ್ರನ ಮಾತನ್ನು ಕೇಳಿ ಮನ್ಮಥನು ಖೇದಗೊಂಡನು. ॥೩೫॥

ಮನ್ಮಥನು ಹಿಂದಿನ ಪಾರ್ವತಿಯ ಶಾಪವನ್ನೂ, ಶಿವನಿಂದ ತನ್ನ ನಾಶವನ್ನೂ ಸ್ಮರಿಸಿ, ಕ್ಷಣಕಾಲ ಸುಮ್ಮನಿದ್ದನು. ಇಂದ್ರನು ಹೀಗೆ ಖಿನ್ನನಾದ ಮನ್ಮಥನನ್ನು ನೋಡಿದನು. ॥೩೬॥

ಎಲೈ ಮನ್ಮಥನೇ, ಇದೇನು ವಿಶೇಷವಾಗಿ ಖೇದಗೊಂಡಿರುವವನಂತೆ ಕಾಣುವೆಯಲ್ಲಾ? ಎಂಬುದಾಗಿ ಇಂದ್ರನು ಪ್ರಶ್ನಿಸಲು, ಮನ್ಮಥನು ನಿಟ್ಟುಸಿರು ಬಿಡುತ್ತಾ ತನ್ನ ಮನಸ್ಸಿನಲ್ಲಿರುವುದನ್ನು ಬಿಚ್ಚಿ ಈರೀತಿಯಲ್ಲಿ ಇಂದ್ರನನ್ನು ಕುರಿತು ಹೇಳಿದನು. ॥೩೭॥

ವದ ಶಕ್ರ ಕಸ್ಯ ನಾಮ ಪ್ರಿಯಂ ಸ್ಯಾದಾತ್ಮನಾಶನಂ ।
ಶಪ್ತೋಽಸ್ಮಿ ಗೌರ್ಯಾ ಭಸ್ಮತ್ವಂ ಯಾಸ್ಯಸಿ ತ್ರ್ಯಂಬಕಾದಿತಿ ॥೩೮॥

ಸ ಕಾಲಃ ಪ್ರಾಪ್ತ ಇತ್ಯೇವಂ ಮನ್ಯೇ ಕಾಲೋ ದುರತ್ಯಯಃ ।
ತಥಾಽಪ್ಯುಕ್ತ್ವಾ ಕರೋಮೀತಿ ನ ಕುರ್ಯಾನ್ಮಾದೃಶಃ ಕಥಂ ॥೩೯॥

ಗಚ್ಛಾಮಿ ತೇ ಪ್ರಿಯಂ ಕರ್ತುಮಗ್ರೇ ದೈವಂ ಪರಾಯಣಂ ।
ಇತ್ಯುಕ್ತ್ವಾ ನಿರ್ಯಯೌ ಸ್ವರ್ಗಾದ್ರಥಂ ಚೈತ್ರಂ(ಜೈತ್ರಂ) ಸಮಾಸ್ಥಿತಃ ॥೪೦॥

ಅಥ ಕಂಠೇ ಸಮಾಶ್ಲಿಷ್ಯ ರತಿರತ್ಯಂತ ದುಃಖಿತಾ ।
ಪತಿಂ ನಿವಾರಯಾಮಾಸ ರುದಂತೀ ಸರ್ವಯತ್ನತಃ ॥೪೧॥

ನಾಥ ತ್ವಯಿ ಸಮಾಪನ್ನೇ ಕೀರ್ತಿಶೇಷಮಹಂ ಕಥಂ ।
ಜೀವಿಷ್ಯಾಮ್ಯಲಮೇತೇನ ಆತ್ಮನಾಶವ್ರತೇನ ತೇ ॥೪೨॥

---

ಓ ಇಂದ್ರನೇ, ಯಾರಿಗೆ ತಾನೇ ತನ್ನನ್ನು ತಾನೇ ನಾಶಮಾಡಿಕೊಳ್ಳುವುದು ಇಷ್ಟವಾಗಿರುತ್ತದೆ? ಗೌರಿಯು ನೀನು ಶಿವನಿಂದ ಬೂದಿಯಾಗುವೆ. ಎಂದು ನನಗೆ ಶಾಪವನ್ನು ಕೊಟ್ಟಿದ್ದಾಳೆ. ॥೩೮॥

ಅಂತಹ ನನ್ನ ವಿನಾಶಕಾಲವು ಈಗ ಬಂದಿರಬಹುದೆಂದು ನಾನು ಊಹಿಸುತ್ತೇನೆ. ಏನನ್ನು ಮಾಡುವುದು? ಕಾಲವನ್ನು ಮೀರಲು ಸಾಧ್ಯವಿಲ್ಲ. ಹಾಗಾದಾಗ್ಯೂ ಮಾಡಿಕೊಡುತ್ತೇನೆ ಎಂದು ಹೇಳಿ ನನ್ನಂಥವನು ಪ್ರತಿಜ್ಞೆಯನ್ನು ನೆರವೇರಿಸದೇ ಇರುವುದಕ್ಕಾಗುತ್ತದೆಯೇ? ॥೩೯॥

ಆದ್ದರಿಂದ ನಿನಗೆ ಹಿತವನ್ನು ಸಾಧಿಸಲು ಹೊರಡುವೆನು. ಮುಂದಕ್ಕೆ ದೈವವೇ ನನ್ನನ್ನು ರಕ್ಷಿಸಬೇಕು! ಎಂದು ಹೇಳಿ ಚೈತ್ರ ಎಂಬ ಜಯಶಾಲಿಯಾದ ರಥವನ್ನೇರಿ ಮನ್ಮಥನು ಸ್ವರ್ಗದಿಂದ ಹೊರಟನು. ॥೪೦॥

ಅನಂತರ ರತಿಯು ಬಹಳ ದುಃಖಪಡುತ್ತಾ ಮನ್ಮಥನನ್ನು ಕತ್ತಿನಲ್ಲಿ ಆಲಿಂಗಿಸಿ ಅಳುತ್ತಾ ಸರ್ವಪ್ರಯತ್ನದಿಂದಲೂ ಅವನನ್ನು ಹಿಂತಿರುಗಿಸಲು ಆಶಿಸಿ ತಡೆದು ಹೀಗೆ ಹೇಳಿದಳು. ॥೪೧॥

ಓ ಪತಿಯೇ, ನೀನು ಶರೀರವನ್ನು ಕಳೆದುಕೊಂಡು ಕೀರ್ತಿಶೇಷನಾಗುವ ಪಕ್ಷದಲ್ಲಿ ನಾನು ಹೇಗೆ ಜೀವಿಸಬಲ್ಲೆನು? ಆದ್ದರಿಂದ ನಿನ್ನ ಆತ್ಮನಾಶವಾಗುವ ಈ ಪ್ರತಿಜ್ಞೆಯನ್ನು ಸಾಕುಮಾಡು. ॥೪೨॥

ಗಚ್ಛಾವೋ ನಗರಂ ಸ್ವೀಯಂ ಜೀವನ್ ಭದ್ರಾಣಿ ಪಶ್ಯತಿ ।
ಸತ್ಯಂ ತಪಸ್ತಥಾ ವೀರ್ಯಂ ಸರ್ವಂ ಜೀವನ ಹೇತವೇ ॥೪೩॥

ಜೀವನಾ ದ್ವಿಚ್ಯುತೌ ಕಿಂ ಸ್ಯಾತ್ತಪಃ ಸತ್ಯಪರಾಕ್ರಮೈಃ ।
ಮದುಕ್ತಂ ಮನ್ಯಸೇ ನೋ ಚೇದಹಂ ತ್ವತ್ಪುರತೋಽಧುನಾ ॥೪೪॥

ತ್ಯಜಾಮಿ ಜೀವಿತಂ ಚೈತತ್ತತೋ ಗಚ್ಛ ಯಥೇಚ್ಛತಃ ।
ತ್ವಯಾ ವಿನಾ ಕೃಥಾ ಚಾಽಹಂ ಕ್ಷಣಾರ್ಧಮಪಿ ನೋತ್ಸಹೇ ॥೪೫॥

ಪ್ರಾಣಾನ್ ಧಾರಯಿತುಂ ನಾಥ ಸತ್ಯಮೇತದ್ಬ್ರವೀಮಿ ತೇ ।
ನಿಶಮ್ಯ ಸ್ವಪ್ರಿಯಾವಾಕ್ಯಂ ಕಂಠೇ ಸಕ್ತಾಂ ರತಿಂ ತದಾ ॥೪೬॥

---

ಆದ್ದರಿಂದ ನಾವಿಬ್ಬರೂ ನಮ್ಮ ಪಟ್ಟಣಕ್ಕೆ ಹೋಗೋಣ. ಮನುಷ್ಯನು ಜೀವಂತನಾಗಿದ್ದರೆ ಮಂಗಳಗಳನ್ನು ಅನುಭವಿಸುವನು. ಸತ್ಯ, ತಪಸ್ಸು, ವೀರ್ಯ, ಇವೆಲ್ಲವೂ ಮನುಷ್ಯನು ಬದುಕುವುದಕ್ಕಾಗಿಯೇ ಇವೆ. ॥೪೩॥

ಮನುಷ್ಯನು ಬದುಕನ್ನೇ ಹಾಳುಮಾಡಿಕೊಂಡರೆ ಅವನ ತಪಸ್ಸು, ಸತ್ಯ ಮತ್ತು ಪರಾಕ್ರಮಗಳಿಂದ ಏನು ಪ್ರಯೋಜನ? ನಾನು ಹೇಳಿದ್ದನ್ನು ನೀನು ಒಪ್ಪದಿದ್ದರೆ ನಿನ್ನ ಮುಂದುಗಡೆ ನಿನಗಿಂತ ಮುಂಚೆಯೇ ನಾನು ಪ್ರಾಣತ್ಯಾಗವನ್ನು ಮಾಡುವೆನು. ॥೪೪॥

ನಾನು ಮುಂಚೆಯೇ ಪ್ರಾಣವನ್ನು ಬಿಡುವೆನು.' ಅನಂತರ ನೀನು ನಿನಗೆ ಇಷ್ಟಬಂದಕಡೆ ಹೋಗು. ನೀನಿಲ್ಲದೇ ನಾನು ಒಂದರ್ಧಕ್ಷಣವೂ ಬದುಕಲು ಇಚ್ಛಿಸುವುದಿಲ್ಲ. ॥೪೫॥

ಆದ್ದರಿಂದ ನಾನು ನೀನಿಲ್ಲದೇ ಬದುಕಲು ಇಷ್ಟಪಡುವುದಿಲ್ಲ. ಓ ಪತಿಯೇ, ನಾನು ನಿನಗೆ ಹೇಳುತ್ತಿರುವುದು ಸತ್ಯವಾದ ವಿಷಯ. ತನ್ನ ಹೆಂಡತಿಯ ಈ ಮಾತುಗಳನ್ನು ಕೇಳಿ ಮನ್ಮಥನು ತನ್ನ ಕತ್ತಿನಲ್ಲಿ ಆಲಿಂಗಿಸಿಕೊಂಡಿರುವ ಅವಳನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೪೬॥

ಧೈರ್ಯವಾನ್ ಪ್ರಾಹ ಕಂದರ್ಪಃ ಪ್ರಿಯೇ ಶೃಣು ವಚೋ ಮ ।
ಶೋಚಂತ್ಯಾಪತ್ಸು ನೋ ಧೀರಾಃ ಶೋಕಃ ಸರ್ವಾರ್ಥನಾಶನಃ ॥೪೭॥

ಭಾವ್ಯನ್ಯಥಯಿತುಂ ನೈವ ಶಕ್ತಾ ಬ್ರಹ್ಮಮುಖಾ ಅಪಿ ।
ಪುನಸ್ತ್ವಯಾ ಸಮೇಷ್ಯಾಮಿ ಕಾಲೇನ ಪ್ರಾಣನಾಯಿಕೇ ॥೪೮॥

ತಾವತ್ ತ್ವಂ ತ್ರಿಪುರೇಶಾನೀ ಮಾರಾಧಯ ಶುಭಾಂತರಾ ।
ಸಾ ತೇ ಮಹೇಶ್ವರೀ ಸರ್ವಂ ವಾಂಛಿತಂ ಪ್ರವಿಧಾಸ್ಯತಿ ॥೪೯॥

ಇತ್ಥಂ ಬ್ರುವತ್ಯಪಿ ನಿಜಕಾಂತೇ ಕಾಮೇ ರತಿಃ ಪ್ರಿಯಾ ।
ಶೋಕ ಸಂವಿಗ್ನಹೃದಯಾ ಮೂರ್ಛಿತಾ ನ್ಯಪತತ್ಕ್ಷಿತೌ ॥೫೦॥

ಮೂಲಕೃತ್ತೇವ ಕದಳೀ ಹೈಮೀ ಕ್ಷಿತಿತಲಂ ಗತಾ ।
ದೃಷ್ಟ್ವಾ ತಾದೃಗ್ವಿಧಾಂ ಪ್ರಾಣಪ್ರೇಯಸೀಂ ಶೋಕಕಾತರಃ ॥೫೧॥

---

ಧೈರ್ಯಶಾಲಿಯಾದ ಮನ್ಮಥನು ತನ್ನ ಪ್ರಿಯೆಯನ್ನು ಕುರಿತು, ಎಲೌ ರತಿಯೇ, ನನ್ನ ಈ ಮಾತನ್ನು ಕೇಳು. ಧೀರರಾದ ಜನರು ಕಷ್ಟಕಾಲದಲ್ಲಿ ದುಃಖ ಪಡುವುದಿಲ್ಲ. ದುಃಖವು ಎಲ್ಲಾ ಪ್ರಯೋಜನಗಳನ್ನೂ ಹಾಳುಮಾಡುವುದು. ಎಂದನು. ॥೪೭॥

ಅಲ್ಲದೆ ಬ್ರಹ್ಮನೇ ಮೊದಲಾದವರೂ ಕೂಡ ಮನುಷ್ಯನಿಗೆ ಆಗಬೇಕಾದದ್ದನ್ನು ವ್ಯತ್ಯಾಸಮಾಡಲು ಶಕ್ತರಲ್ಲ. ಎಲೌ ಪ್ರಾಣೇಶ್ವರಿಯೇ, ಆದರೂ ನಿನ್ನನ್ನು ನಾನು ಪುನಃ ಸ್ವಲ್ಪಕಾಲದಲ್ಲಿಯೇ ಸೇರುವೆನು. ॥೪೮॥

ಎಲೌ ರತಿಯೇ, ಅಲ್ಲಿಯ ವರೆಗೂ ತ್ರಿಪುರಾದೇವಿಯನ್ನು ಪೂಜಿಸುತ್ತಿರು. ಅತ್ಯಂತ ಮಂಗಳಕರಳಾದ ಮಹೇಶ್ವರಿಯಾದ ಆಕೆಯು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವಳು. ॥೪೯॥

ತನ್ನ ಪತಿಯಾದ ಮನ್ಮಥನು ಹೀಗೆ ಹೇಳುತ್ತಿದ್ದಾಗ್ಯೂ ಪ್ರಿಯೆಯಾದ ರತಿಯು ದುಃಖದಿಂದ ಕಳವಳಹೊಂದಿದ ಮನಸ್ಸುಳ್ಳವಳಾಗಿ ಭೂಮಿಯಮೇಲೆ ಬಿದ್ದುಬಿಟ್ಟಳು. ॥೫೦॥

ಚಿನ್ನದ ಬಣ್ಣವುಳ್ಳ ಬಾಳೇಕಂಬವು ಬುಡದಲ್ಲಿ ಕತ್ತರಿಸಲ್ಪಟ್ಟರೆ ಹೇಗೋ ಹಾಗೆ ರತಿಯು ಭೂಮಿಯ ಮೇಲೆ ಬಿದ್ದಳು. ಹೀಗೆ ಬಿದ್ದ ಪ್ರಾಣಪ್ರಿಯೆಯಾದ ರತಿಯನ್ನು ನೋಡಿ, ಮನ್ಮಥನು ದುಃಖದಿಂದ ಕಳವಳಗೊಂಡನು. ॥೫೧॥

ಉತ್ಥಾಪ್ಯಾಂಕೇ ಸಮಾರೋಪ್ಯ ಮದನಃ ಪರ್ಯದೇವಯತ್ ।
ಅಥ ಸಸ್ಮಾರ ಜನನೀಂ ರಮಾಂ ನಾರಾಯಣಪ್ರಿಯಾಂ ॥೫೨॥

ಸಾಽಪಿ ತತ್ ಸ್ಮೃತಿಮಾತ್ರೇಣ ಸಾನ್ನಿಧ್ಯಂ ಸಮುಪಾಗತಾ ।
ದೃಷ್ಟ್ವಾ ತಾಂ ಜನನೀಂ ಕಾಮೋ ಭುವಿ ನ್ಯಸ್ಯ ಪ್ರಿಯಾಂ ರತಿಂ॥೫೩॥

ಪ್ರಣಾಮಮಕರೋನ್ಮಾತುಃ ಸ್ವವೃತ್ತಂ ಚ ನ್ಯವೇದಯತ್ ।
ಮಾತರ್ಮಯಾ ಪ್ರತಿಶ್ರುತ್ಯ ಕರೋಮೀತಿ ಪ್ರಿಯಂ ಹರೇ ॥೫೪॥

ಕಥಂ ಸ್ಯಾಂ ವಿಮುಖಸ್ತಸ್ಮಾದ್ಯಥಾ ಕಾಪುರುಷೋ ಭುವಿ ।
ತದಹಂ ಜೇತು ಕಾಮೋಽದ್ಯ ಮಾತಃ ಶಿವಮುಪವ್ರಜೇ ॥೫೫॥

---

ಮನ್ಮಥನು ರತಿಯನ್ನು ಎಬ್ಬಿಸಿ ತನ್ನ ತೊಡೆಯಮೇಲಿಟ್ಟುಕೊಂಡು ಅತ್ತನು. ಅನಂತರ ಅವನು ನಾರಾಯಣನ ಪ್ರಿಯೆಯೂ, ತನ್ನ ತಾಯಿಯೂ, ಆದ ಲಕ್ಷ್ಮೀ ದೇವಿಯನ್ನು ಸ್ಮರಿಸಿದನು. ॥೫೨॥

ಲಕ್ಷ್ಮಿಯೂ ಕೂಡ ಮನ್ಮಥನು ತನ್ನನ್ನು ಸ್ಮರಿಸಿದ ಕೂಡಲೇ ಅವನ ಸಮೀಪಕ್ಕೆ ಬಂದಳು. ಮನ್ಮಥನು ತನ್ನ ತಾಯಿಯನ್ನು ನೋಡಿ, ಪ್ರಿಯೆಯಾದ ರತಿಯನ್ನು ಕೆಳಗಿಳಿಸಿ, ಲಕ್ಷ್ಮೀದೇವಿಗೆ ನಮಸ್ಕಾರವನ್ನು ಮಾಡಿದನು. ॥೫೩॥

ಮನ್ಮಥನು ಲಕ್ಷ್ಮೀದೇವಿಗೆ ನಮಸ್ಕಾರವನ್ನು ಮಾಡಿ ತನ್ನ ಸಮಾಚಾರ ಗಳನ್ನು ವಿಜ್ಞಾಪನೆಮಾಡಿಕೊಂಡನು. ಓ ತಾಯಿಯೇ, ಇಂದ್ರನಿಗೆ ಅವನ ಇಷ್ಟ ವನ್ನು ಸಾಧಿಸಿಕೊಡುವೆನೆಂದು ಪ್ರತಿಜ್ಞೆಮಾಡಿ, ಅದಕ್ಕೆ ವಿರುದ್ಧವಾಗಿ ನಾನು ನಡೆ ಯುವುದು ಅಯುಕ್ತವಲ್ಲವೇ ? ಎಂಬುದಾಗಿ ತಾಯಿಯನ್ನು ಕೇಳಿದನು. ॥೫೪॥

ಕೆಟ್ಟ ಮನುಷ್ಯನಂತೆ ನಾನು ಮಾಡಿದ ಪ್ರತಿಜ್ಞೆಗೆ ವಿರುದ್ಧವಾಗಿ ಹೇಗೆ ನಡೆಯಲಿ ? ಆದ್ದರಿಂದ ಓ ತಾಯಿಯೇ, ನಾನು ಆ ಪರಶಿವನನ್ನು ಜಯಿಸಲು ಹೊರಡುವೆನು. ॥೫೫॥

ಏನಾಂ ಪ್ರಿಯಾಂ ಸಮಾಶ್ವಾಸ್ಯ ಸಾನ್ನಿಧ್ಯಂ ನೇತುಮರ್ಹಸಿ ।
ಇತ್ಯುಕ್ತವಂತಂ ಮದನಂ ಪರಿಷ್ವಜ್ಯ ರಮಾ ತದಾ ॥೫೬॥

ಶೋಕಭಾರಪರಿಮ್ಲಾನ ಮುಖೀ ತಂ ಪ್ರಾಹ ಧೈರ್ಯತಃ ।
ವತ್ಸ ಗಚ್ಛ ಮಹೇಶಾನಂ ಕಾಲೇನೈವ ವಿಜೇಷ್ಯತಿ ॥೫೭॥

ಶಾಪೋ ಗೌರ್ಯಾ ನಿರಾಕರ್ತುಮಶಕ್ಯೋ ವಿಧಿನಾಽಪಿ ವೈ ।
ತದ್ಗಚ್ಛ ಶ್ರೀಮಹಾದೇವೀಂ ಸ್ಮರನ್ವಿದ್ಯಾಮಯೀಂ ಜಪನ್ ॥೫೮॥

ಸಾ ತೇ ವಿಧಾಸ್ಯತಿ ಶುಭಂ ಗಚ್ಛ ಶ್ರೇಯಃ ಸಮಾಪ್ನುಹಿ ।
ಇತ್ಯುಕ್ತೋ ಮದನೋ ನತ್ವಾ ಮಾತರಂ ಲೋಕಮಾತರಂ ॥೫೯॥

---

ಓ ತಾಯಿಯೇ, ನೀನು ಅಲ್ಲಿಯವರೆವಿಗೂ ನನ್ನ ಪ್ರಿಯೆಯಾದ ರತಿಯನ್ನು ಬುದ್ಧಿವಾದದಿಂದ ಸಮಾಧಾನಮಾಡಿಕೊಂಡಿದ್ದು ಅನಂತರ ನನ್ನ ಸಮೀಪಕ್ಕೆ ಕರೆದುಕೊಂಡು ಬಂದುಬಿಡಲು ಯೋಗ್ಯಳಾಗುತ್ತೀಯೆ. ಹೀಗೆಂದು ಹೇಳಲು, ಲಕ್ಷ್ಮಿಯು ಆ ಮನ್ಮಥನನ್ನು ಆಲಿಂಗಿಸಿದಳು. ॥೫೬॥

ಲಕ್ಷ್ಮಿಯು ದುಃಖಾತಿಶಯದಿಂದ ಬಾಡಿದ ಮುಖವುಳ್ಳವಳಾದರೂ ಅವನನ್ನು ಕುರಿತು ಧೈರ್ಯವಾಗಿ ಈ ರೀತಿಯಲ್ಲಿ ಹೇಳಿದಳು—ಎಲೈ ಮಗುವೇ, ಮನ್ಮಥನೇ, ನೀನು ಈಶ್ವರನನ್ನು ಸ್ವಲ್ಪಕಾಲದಲ್ಲಿಯೇ ಜಯಿಸುವೆ. ॥೫೭॥

ಆದರೆ ಗೌರಿಯ ಶಾಪವನ್ನು ನಿವಾರಲು ಬ್ರಹ್ಮನಿಗೂ ಅಸಾಧ್ಯವು. ಆದ್ದರಿಂದ ಶ್ರೀತ್ರಿಪುರಾದೇವಿಯನ್ನು ಸ್ಮರಿಸುತ್ತಾ ಶ್ರೀವಿದ್ಯಾಮಂತ್ರವನ್ನು ಜಪಮಾಡುತ್ತಾ ತೆರಳು. ॥೫೮॥

ತ್ರಿಪುರಾದೇವಿಯು ನಿನಗೆ ಮಂಗಳವನ್ನುಂಟುಮಾಡುವಳು. ಆದ್ದರಿಂದ ನೀನು ಹೋಗಿ ಏಳಿಗೆಯನ್ನು ಹೊಂದು! ಎಂದು ಲಕ್ಷ್ಮಿಯು ಹೇಳಲು, ಮನ್ಮಥನು ಲೋಕಮಾತೆಯೂ ತನ್ನ ತಾಯಿಯೂ ಆದ ಆಕೆಯ ಪಾದಗಳಿಗೆ ನಮಸ್ಕಾರ ಮಾಡಿದನು. ॥೫೯॥

ಪ್ರಯಾತಸ್ತ್ರಿಪುರಾಂ ಧ್ಯಾಯನ್ ಭಕ್ತಿಭಾವಸುನಿರ್ಭರಃ ।
ಅಥ ತತ್ರ ರತಿಂ ಪದ್ಮಾ ಅಪಾಂಗೈರಮೃತಸ್ರವೈಃ ॥೬೦॥

ಪ್ರೇಕ್ಷಾಂ ಚಕ್ರೇ ತತಃ ಸಾಽಪಿ ನಿದ್ರಿತೇವ ಸಮುತ್ಥಿತಾ ।
ಅದೃಷ್ಟ್ವಾ ಪ್ರಿಯಮಾತ್ಮೀಯಂ ಶೋಕಾರ್ತಾ ಕರುಣಂ ವಚಃ ॥೬೧॥

ಆಚಚಕ್ಷೇ ರಮಾಂ ದೇವೀಂ ದೃಷ್ಟ್ವಾ ಸ್ವಾಭಿಮುಖೇ ಸ್ಥಿತಾಂ ।
ಆರ್ಯೇ ಕ್ವ ಮೇ ಪ್ರಿಯತಮೋ ಬ್ರೂಹಿ ತೇನ ವಿನಾಕೃತಾ ॥೬೨॥

ನ ಜೀವಿತುಂ ಸಮೀಹಾಮಿ ಕ್ಷಣಾರ್ಧಮಪಿ ನಿಶ್ಚಿತಂ ।
ನಾಥಾಽಹಂ ಕಿಂ ಪರಿತ್ಯಕ್ತಾ ಸರ್ವಥಾ ತ್ವಾಮನುವ್ರತಾ ॥೬೩॥

ತ್ವಾಂ ವಿನಾ ಶೂನ್ಯಮೇವಾಽಹಂ ಪಶ್ಯಾಮಿ ಸಚರಾಽಚರಂ ।
ಇತ್ಯಾದಿ ಪ್ರಲಪಂತೀಂ ತಾಂ ಸಮಾಶ್ವಾಸ್ಯಪ್ರಬೋಧ್ಯ ಚ ॥೬೪॥

---

ಮನ್ಮಥನು ಭಕ್ತಿಭಾವದಿಂದ ತುಂಬಿದ ಮನಸ್ಸುಳ್ಳವನಾಗಿ ಶ್ರೀ ತ್ರಿಪುರಾದೇವಿಯನ್ನು ಧ್ಯಾನಿಸುತ್ತಾ ಹೊರಟನು. ಅನಂತರದಲ್ಲಿ ಲಕ್ಷ್ಮೀಯು ತನ್ನ ಅಮೃತವನ್ನು ಸುರಿಸುವ ಕಟಾಕ್ಷಗಳಿಂದ ಆರತಿಯನ್ನು ನೋಡಿದಳು. ॥೬೦॥

ಲಕ್ಷ್ಮೀಯು ಈ ರೀತಿಯಲ್ಲಿ ನೋಡಿದ ಕೂಡಲೇ ರತಿಯೂ ಕೂಡ ನಿದ್ರೆಯಿಂದ ಎದ್ದವಳಂತೆ ಮೇಲಕ್ಕೆದ್ದಳು. ಅವಳು ತನ್ನ ಪ್ರಿಯನಾದ ಪತಿಯನ್ನು ಕಾಣದೇ ಶೋಕದಿಂದ ಪೀಡಿತಳಾಗಿ ಕರುಣಾಜನಕವಾದ ಈ ಮಾತುಗಳನ್ನಾಡಿದಳು. ॥೬೧॥

ರತಿಯು ತನ್ನ ಎದುರಿಗಿರುವ ಲಕ್ಷ್ಮೀದೇವಿಯನ್ನು ನೋಡಿ ಎಲೌ ಪೂಜ್ಯಳೇ, ನನ್ನ ಪ್ರಿಯತಮನೆಲ್ಲಿ? ನಾನು ಅವನಿಲ್ಲದೇ ಹೇಗೆ ಬದುಕಲಿ? ಎಂದು ಹಲುಬಿದಳು. ॥೬೨॥

ನಾನು ಅವನಿಲ್ಲದೇ ಒಂದು ಕ್ಷಣವೂ ಜೀವಿಸಲು ಇಷ್ಟಪಡುವುದಿಲ್ಲವೆಂಬುದು ನಿಶ್ಚಯ. ಓ ಪತಿಯೇ, ನಿನ್ನನ್ನೇ ಯಾವಾಗಲೂ ಸರ್ವವಿಧದಲ್ಲೂ ಅನುಸರಿಸಿಕೊಂಡಿದ್ದ ನನ್ನನ್ನು ನೀನು ಹೇಗೆ ಬಿಟ್ಟುಬಿಟ್ಟೆ? ॥೬೩॥

ನೀನಿಲ್ಲದೇ ನನಗೆ ಈ ಚರಾಚರಪ್ರಪಂಚವೂ ಶೂನ್ಯವಾಗಿ ತೋರುತ್ತಿದೆ!

ಭವನಂ ಸ್ವಂ ಸಮಾನೀಯ ಪಾರ್ಷದೈರನ್ವರಕ್ಷಯತ್ ।
ಆಶ್ವಸ್ತಾ ಪಾರ್ಷದೈಃ ಸಾಽಪಿ ನಿ(ನ್ಯ)ವಸದಿಷ್ಣುಧಾಮನಿ ॥೬೫॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಪಂಚತ್ರಿಂಶೋಽಧ್ಯಾಯಃ

---

ಎಂದು ಮುಂತಾಗಿ ಪ್ರಲಾಪಮಾಡುತ್ತಿದ್ದ ರತಿಯನ್ನು ಲಕ್ಷ್ಮಿಯು ಸಮಾಧಾನ ಮಾಡಿ ಎಚ್ಚರಗೊಳಿಸಿದಳು. ॥೬೪॥

ಅನಂತರದಲ್ಲಿ ಲಕ್ಷ್ಮೀದೇವಿಯು ರತಿಯನ್ನು ತನ್ನ ಮನೆಗೆ ಕರೆದುಕೊಂಡು ಬಂದು ತನ್ನ ಪರಿವಾರದವರಿಂದ ಅವಳನ್ನು ರಕ್ಷಿಸಿದಳು. ಪರಿವಾರದವರೂ ಕೂಡ ರತಿಯನ್ನು ಸಮಾಧಾನಗೊಳಿಸಲಾಗಿ ಅವಳು ವಿಷ್ಣುವಿನ ಮನೆಯಲ್ಲಿಯೇ ಇದ್ದಳು. ॥೬೫॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಮನ್ಮಥೋಪಾಖ್ಯಾನದಲ್ಲಿ
ಮೂವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಷಟ್ತ್ರಿಂಶೋಽಧ್ಯಾಯಃ ॥

### ಮೂವತ್ತಾರನೆಯ ಅಧ್ಯಾಯವು

ಅಥ ಕಾಮೋ ಜೈತ್ರರಥಂ ಸಮಾಸ್ಥಾಯ ದ್ರುತಂ ಯಯೌ ।
ಚಿಂತಯಂ ಸ್ತ್ರಿಪುರಾಂಬಾಯಾಃ ಪಾದಪದ್ಮಂ ಶುಭೋದಯಂ ॥೧॥

ಅಥ ಮಾರ್ಗೇ ಸುರನದೀ ತೀರಮಾಸಾದ್ಯ ಸುಂದರಂ ।
ಸ್ನಾತ್ವಾ ತತ್ರ ಪರಾಂ ದೇವೀ ಮುಪತಸ್ಥೇ ಯತಾಂತರಃ ॥೨॥

ಯದಾ ಸಾ ಸಂಹೃತಾಽಶೇಷ ಕರಣಸ್ತ್ರಿಪುರಾಪದಂ ।
ಸಮಾಲಂಬ್ಯ ನಿಶ್ಚಲತ್ವಂ ಪ್ರಾಪ ತನ್ಮಾತ್ರರೂಪತಃ ॥೩॥

---

ತರುವಾಯ ಮನ್ಮಥನು ಜೈತ್ರ, ಜಯಶಾಲಿಯಾದುದು, ಜೈತ್ರ ಎಂಬ ರಥ ವನ್ನು ಹತ್ತಿ, ತ್ರಿಪುರಾಮಾತೆಯ ಮಂಗಳವನ್ನುಂಟುಮಾಡುವ ಪಾದಕಮಲವನ್ನು ಧ್ಯಾನಿಸುತ್ತಾ ಶೀಘ್ರವಾಗಿ ಹೊರಟನು. ॥೧॥

ಆ ಬಳಿಕ ಮಾರ್ಗದಲ್ಲಿ ಮನ್ಮಥನು ಸುಂದರವಾದ ದೇವಗಂಗೆಯ ದಡವನ್ನು ಸೇರಿ ನದಿಯಲ್ಲಿ ಸ್ನಾನಮಾಡಿ, ಜಿತೇಂದ್ರಿಯನಾಗಿ ಶ್ರೇಷ್ಠಳಾದ ತ್ರಿಪುರಾದೇವಿ ಯನ್ನು ಉಪಾಸನೆಮಾಡಿದನು. ॥೨॥

ಮನ್ಮಥನು ತನ್ನ ಸಮಸ್ತ ಇಂದ್ರಿಯಗಳನ್ನೂ ನಿಗ್ರಹಿಸಿ ಶ್ರೀ ತ್ರಿಪುರಾದೇ ವಿಯ ಪಾದವನ್ನೇ ಆಶ್ರಯಿಸಿ ನಿಶ್ಚಲವಾದ ಮನಸ್ಸಿನಿಂದಿದ್ದಾಗ ದೇವಿಯು ತನ್ನ ಸ್ವರೂಪದಿಂದ ಅಲ್ಲಿ ಕಾಣಿಸಿಕೊಂಡಳು. ॥೩॥

ತದಾ ಸನ್ನಿಹಿತಾ ದೇವೀ ತ್ರಿಪುರಾ ಪರಮೇಶ್ವರೀ ।
ಅರುಣಾಽರುಣ ಕಲ್ಪಾಭ್ಯಾ ಚಂದ್ರಚೂಡಾ ತ್ರಿಲೋಚನಾ ॥೪॥

ಪಾಶಾಂಕುಶ ಧನುರ್ಬಾಣಾನ್ ದಧಾನಾ ಪಾಣಿಪಂಕಜೈಃ ।
ನವರತ್ನ ಪರಿಕ್ಷಿಪ್ತ ಕಿರೀಟಪ್ರಾಂಶುಮಂಡಿತಾ ॥೫॥

ತಾರುಣ್ಯಪೂರ್ಣ ಲಾವಣ್ಯ ವರೇಣ್ಯಾಽಽಕಾರಮಾಸ್ಥಿತಾ ।
ದೇವಾಽಧಿದೇವ ನಿಕರಸ್ತುತಾ ತ್ರಿಪುರಸುಂದರೀ ॥೬॥

ತಾಂ ದೃಷ್ಟ್ವಾ ದಂಡವತ್ಕಾನೋ ನನಾಮ ಪದಸನ್ನಿಧೌ ।
ನತಸ್ಯ ತಸ್ಯ ಮೂರ್ಧ್ನ್ಯಂಬಾ ಕರಪದ್ಮಂ ನ್ಯಧಾರಯತ್ ॥೭॥

ಸ್ಪೃಷ್ಟಃ ಕರಾಂಬುಜೇನೈಷಃ ಕೃತಾರ್ಥಂ ಸ್ವಮಮನ್ಯತ ।
ಆನಂದಾಽಶ್ರು ಪರೀತಾಕ್ಷಃ ಪುಲಕಾಂಗರುಹೈಃ ಶ್ರಿತಃ ॥೮॥

---

ಆಗ ಪರಮೇಶ್ವರಿಯೂ ಅತ್ಯಂತ ಕೆಂಪಾದ ಸ್ವರೂಪದಿಂದ ಶೋಭಿತಳೂ, ಮೂರು ಕಣ್ಣುಳ್ಳವಳೂ, ಆದ ತ್ರಿಪುರಾದೇವಿಯು ಅಲ್ಲಿಗೆ ಬಂದಳು. ॥೪॥

ಆಕೆಯು ತನ್ನ ಕಮಲದಂತಿರುವ ಕೈಗಳಿಂದ ಪಾಶ, ಅಂಕುಶ, ಧನುಸ್ಸು ಮತ್ತು ಬಾಣಗಳನ್ನು ಧರಿಸಿ ಒಂಬತ್ತು ವಿಧವಾದ ರತ್ನಗಳಿಂದ ಕೆತ್ತಲ್ಪಟ್ಟ ಕಿರೀಟದ ಕಾಂತಿಯಿಂದ ಪ್ರಕಾಶಿಸುತ್ತಿದ್ದಳು. ॥೫॥

ತ್ರಿಪುರಸುಂದರೀದೇವಿಯು ಯೌವ್ವನದಿಂದ ತುಂಬಿದ ಶ್ರೇಷ್ಠಕಾಂತಿಯನ್ನು ಹೊಂದಿದ ಆಕಾರವುಳ್ಳವಳಾಗಿ, ದೇವಾಧಿದೇವತೆಗಳಿಂದ ಯಾವಾಗಲೂ ಸ್ತೋತ್ರ ಮಾಡಲ್ಪಡುವವಳಾಗಿಯೂ ಇದ್ದಳು. ॥೬॥

ಆಕೆಯನ್ನು ಮನ್ಮಥನು ನೋಡಿ, ಆಕೆಯ ಪಾದದಡಿಯಲ್ಲಿ ದಂಡಾಕಾರವಾಗಿ ಪ್ರಣಾಮವನ್ನು ಮಾಡಿದನು. ನಮಸ್ಕಾರಮಾಡುತ್ತಿರುವ ಅವನ ತಲೆಯ ಮೇಲೆ ಲೋಕಮಾತೆಯಾದ ಶ್ರೀತ್ರಿಪುರಾದೇವಿಯು ತನ್ನ ಕಮಲದಂತಿರುವ ಕೈಯನ್ನಿಟ್ಟಳು. ॥೭॥

ದೇವಿಯು ಕಮಲದಂತಿರುವ ಕೈಗಳಿಂದ ಅವನನ್ನು ಮುಟ್ಟಲಾಗಿ ಮನ್ಮಥನು ತಾನು ಧನ್ಯನಾದೆನೆಂದು ಭಾವಿಸಿದನು. ಅಲ್ಲದೇ ಇವನು ಆನಂದಬಾಷ್ಪಗ

ಉತ್ಥಿತೋ ದೇವತಾಂ ವೀಕ್ಷ್ಯಾಽಽನಂದ ಭಾರಾಽತಿಮಂದರಃ ।
ತುಷ್ಟಾವ ಗದ್ಗದರವಃ ತತ್ಪ್ರೀತ್ಯಾಽಪಗತಸ್ಮೃತಿಃ ॥೯॥

ತಂ ತಥಾಭೂತಮಾಲೋಕ್ಯ ಪ್ರಸನ್ನಾ ಪರಮೇಶ್ವರೀ ।
ವಿದಿತ್ವೈತತ್ಸಮಾಯಾತಾ ತತ್ರ ಪದ್ಮಾ ಹರಿಪ್ರಿಯಾ ॥೧೦॥

ನತ್ವಾ ಸ್ತುತ್ವಾ ಪ್ರಾಹ ಪರಾಂ ತ್ರಿಪುರಾಂ ಪರಮೇಶ್ವರೀಂ ।
ಮಾತ ಸ್ತೇ ಭಕ್ತಮೂರ್ಧನ್ಯಃ ಕಾಮೋ ಮೇ ಪ್ರೀತಿವರ್ಧನಃ ॥೧೧॥

ಗೌರೀ ಶಾಪಭರಾಽಕ್ರಾಂತೋ ನಾಽರ್ಹೋ ಭವಿತುಮರ್ಹತಿ ।
ನೈವಮೇತತ್ಸಮುಚಿತಂ ಯತ್ವಜ್ಜನಪರಾಭವಃ ॥೧೨॥

---

ಳಿಂದ ಕೂಡಿದ ಕಣ್ಣುಗಳುಳ್ಳವನಾಗಿ ರೋಮಾಂಚದ ಕೂದಲುಗಳಿಂದಲೂ ಕೂಡಿದವನಾದನು. ॥೮॥

ಮನ್ಮಥನು ಮೇಲಕ್ಕೆದ್ದು ದೇವಿಯನ್ನು ನೋಡಿ, ಹೆಚ್ಚಾದ ಸಂತೋಷದಿಂದ ತುಂಬಿದ ಮನಸ್ಸುಳ್ಳವನಾಗಿ ಆಕೆಯ ಮೇಲಿನ ಭಕ್ತಿಯಿಂದ ತನ್ನ ಸ್ವರೂಪದ ಸ್ಮೃತಿಯೇ ಇಲ್ಲದವನಾಗಿ ತೊದಲುನುಡಿಯಿಂದ ಆಕೆಯನ್ನು ಸ್ತೋತ್ರಮಾಡಿದನು. ॥೯॥

ಹೀಗೆ ಸ್ತೋತ್ರಮಾಡುತ್ತಿರುವ ಮನ್ಮಥನನ್ನು ನೋಡಿ ಪರಮೇಶ್ವರಿಯಾದ ತ್ರಿಪುರಾದೇವಿಯು ಪ್ರಸನ್ನಳಾದಳು. ಈ ವಿಚಾರವನ್ನು ತಿಳಿದು ವಿಷ್ಣುವಿನ ಪತ್ನಿಯಾದ ಲಕ್ಷ್ಮೀದೇವಿಯೂ ಅಲ್ಲಿಗೆ ಬಂದಳು. ॥೧೦॥

ಲಕ್ಷ್ಮಿಯು ಶ್ರೀತ್ರಿಪುರಾದೇವಿಯನ್ನು ನಮಸ್ಕರಿಸಿ ಸ್ತೋತ್ರಮಾಡಿ, ಓ ತಾಯಿಯೇ, ನನಗೆ ಹೆಚ್ಚಾದ ಪ್ರೀತಿಯನ್ನುಂಟುಮಾಡುವ ಈ ಮನ್ಮಥನು ನನ್ನ ಶ್ರೇಷ್ಠಭಕ್ತನಾಗಿದ್ದಾನೆ. ಎಂದಳು. ॥೧೧॥

ಆದ್ದರಿಂದ ಇವನು ಗೌರಿಯ ದಾರುಣವಾದ ಶಾಪಕ್ಕೆ ಪಾತ್ರನಾಗಿರುವುದು ಸರಿಯಲ್ಲ. ಏಕೆಂದರೆ ನಿನ್ನ ಭಕ್ತರಿಗೆ ತಿರಸ್ಕಾರವು ಎಲ್ಲಿಯೂ ಆಗುವುದು ಉಚಿತವಲ್ಲವು! ॥೧೨॥

ಏನಂ ವಿನಾ ಕಥಂ ಲೋಕವ್ಯವಹಾರಃ ಸುನಿರ್ವಹೇತ್ ।
ಪ್ರವೃತ್ತಿರ್ನ ಸ್ಥಿತೇರ್ಭೂಯಾತ್ ಶಾಧಿ ತ್ವಂ ಪಾದಸನ್ನತಂ ॥೧೩॥

ಶ್ರುತ್ವಾ ರಮೋಕ್ತಂ ತ್ರಿಪುರಾ ಪ್ರಾಹ ಗಂಭೀರಯಾ ಗಿರಾ ।
ಪದ್ಮೇ ಶೃಣು ನ ಮೇ ಭಕ್ತೋ ನಾಶಮರ್ಹತಿ ಕುತ್ರಚಿತ್ ॥೧೪॥

ತಾವತ್ತಿಷ್ಠತು ಮದೀಕ್ಷಾಯಾಂ ಯಾವದ್ದೇಹಪುನರ್ಭವಃ ।
ಗೌರೀ ಶಾಪೇನ ದೇಹೋಽಯಂ ಭಸ್ಮೀಭವತು ಶಂಕರಾತ್ ॥೧೫॥

ಪುನಃ ಕಾಲೇನ ದೇಹಂ ಸ್ವಂ ನವಂ ಪ್ರಾಪ್ಯಾತಿಸುಂದರಂ ।
ನಂದಯಿಷ್ಯತ್ಯೇಷ ರತಿಂ ತ್ವಾಂ ಚ ನಾಸ್ತ್ಯತ್ರ ಸಂಶಯಃ ॥೧೬॥

ಇತ್ಯುಕ್ತ್ವಾ ಮನ್ಮಥಂ ವೀಕ್ಷ್ಯ ದೃಶಿ ಸ್ವಸ್ಯಾಂ ಸಮಾಹರತ್ ।
ತತಃ ಸಾ ತ್ರಿಪುರಾ ಲೋಕೇ ಕಾಮಾಕ್ಷೀತ್ಯಭಿವಿಶ್ರುತಾ ॥೧೭॥

---

ಇವನಿಲ್ಲದೇ ಪ್ರಪಂಚದ ವ್ಯವಹಾರಾದಿಗಳು ಹೇಗೆ ನಡೆಯಬಲ್ಲವು? ಲೋಕದ ಸ್ಥಿತಿಗೆ ತೊಂದರೆ ಬರುವುದರಿಂದ ನಿನ್ನ ಪಾದವನ್ನು ನಮಸ್ಕರಿಸುತ್ತಿರುವ ಇವನನ್ನು ಕಾಪಾಡು. ॥೧೩॥

ಲಕ್ಷ್ಮಿಯು ಹೇಳಿದ ಈ ಮಾತನ್ನು ಕೇಳಿ ತ್ರಿಪುರಾದೇವಿಯು ಗಂಭೀರವಾದ ಧ್ವನಿಯಿಂದ ಎಲೌ ಲಕ್ಷ್ಮಿಯೇ, ನನ್ನ ಭಕ್ತನಾದವನು ಎಲ್ಲಿಯೂ ಎಂದಿಗೂ ನಾಶವಾಗಲಾರನು! ಎಂದು ಹೇಳಿದಳು. ಆದರೆ ॥೧೪॥

ನಾನು ನೋಡಿದಕೂಡಲೇ ಪುನಃ ಇವನಿಗೆ ದೇಹವು ಉತ್ಪನ್ನವಾಗುವವರೆಗೆ ಈ ದೇಹವು ನಾಶವಾಗಿರುವುದು. ಆದ್ದರಿಂದ ಗೌರಿಯಶಾಪವನ್ನು ಹೊಂದಿರುವ ಈ ದೇಹವು ಶಿವನ ಕೋಪವೆಂಬ ಅಗ್ನಿಯಿಂದ ಬೂದಿಯಾಗಲಿ, ಎಂದಳು. ॥೧೫॥

ಮನ್ಮಥನು ಸ್ವಲ್ಪಕಾಲದ ಮೇಲೆ ಅತಿಸುಂದರವೂ ಮತ್ತು ಹೊಸದೂ ಆದ ದೇಹವನ್ನು ಹೊಂದಿ ನಿನ್ನನ್ನೂ ಮತ್ತು ರತಿಯನ್ನೂ ಸಂತೋಷಪಡಿಸುವನೆಂಬುವುದರಲ್ಲಿ ಸಂದೇಹವಿಲ್ಲವು. ॥೧೬॥

ಹೀಗೆಂದು ಹೇಳಿ ಶ್ರೀತ್ರಿಪುರಾದೇವಿಯು ಕಾಮನನ್ನು ತನ್ನ ಕಣ್ಣಿನಲ್ಲಿ ಅಡಗಿಸಿಕೊಂಡಳು! ಅನಂತರ ಶ್ರೀತ್ರಿಪುರಾದೇವಿಯು ಲೋಕದಲ್ಲಿ "ಕಾಮಾಕ್ಷೀ" ಎಂದು ಪ್ರಸಿದ್ಧಳಾದಳು. ॥೧೭॥

ವಿಲೀನೋ ಮದನಸ್ತಸ್ಯಾಃ ಸುಷುಪ್ತ ಇವ ಸಂಬಭೌ ।
ಅಥಾಽಪತತ್ಕಾಮದೇಹಸ್ತಯೋಃ ಸಂಮುಖತೋ ಭುವಿ ॥೧೮॥

ಪತಿತಸ್ಯ ತಸ್ಯ ರೋಮಕೂಪೇಭ್ಯಸ್ತಾದೃಶಾಸ್ತತಃ ।
ವಿನಿರ್ಯಯುಃ ಕೋಟಿಕೋಟಿ ಸಂಖ್ಯಾಃ ಕಾಮಾಃ ಸಮಂತತಃ ॥೧೯॥

ತಾನ್ ಸಮಾದಿಶ್ಯ ಲೋಕೇಷು ಪ್ರಾಣಿನಾಂ ಕಾಮನಾವಿಧೌ ।
ಉತ್ಥಾಪಯತ್ ತಚ್ಛರೀರಂ ಮಹಾಮಾಯಾ ಸ್ವಮಾಯಯಾ॥೨೦॥

ಸ ಉತ್ತಸ್ಥೌ ಕಾಮದೇಹಃ ಸುಪ್ತೋತ್ಥ ಇವ ಮರ್ತ್ಯ ಇವ ದ್ರುತಂ ।
ತಮಾಹ್ವಯ ತ್ಕಾಮ ಇತಿ ಸಾ ಪರಾ ಜಗದೀಶ್ವರೀ ॥೨೧॥

ಮಾಯಾಮಯಾನ್ ಪುಷ್ಪಬಾಣಾ ನಿಕ್ಷುಚಾಪಂ ಚ ತಾದೃಶಂ ।
ಜಹಿ ಶೀಘ್ರಂ ಮಹಾದೇವಂ ತಪಸ್ಯಂತಂ ತ್ವಮಿತ್ಯದಾತ್ ॥೨೨॥

---

ಆಕೆಯಲ್ಲಿ ಅಡಗಿದ್ದ ಮನ್ಮಥನು ನಿದ್ದೆಹೋಗುತ್ತಿರುವನೋ ಎಂಬಂತೆ ಕಾಣಿಸಿಕೊಂಡನು. ಅನಂತರ ಮನ್ಮಥನ ದೇಹವು ಅವರಿಬ್ಬರ ಮುಂದೆ ಭೂಮಿಯ ಮೇಲೆ ಬಿದ್ದಿತು. ॥೧೮॥

ಕೆಳಗೆ ಬಿದ್ದ ಮನ್ಮಥನ ದೇಹದಲ್ಲಿದ್ದ ಕೂದಲಿನ ಹಳ್ಳಗಳಿಂದ ಆವನ ಹಾಗೆಯೇ ಇರುವ ಅನೇಕ ಕೋಟಿ ಮನ್ಮಥರು ಎಲ್ಲಾ ಕಡೆಯಲ್ಲಿಯೂ ಹೊರಗೆ ಹೊರಟರು. ॥೧೯॥

ಲೋಕಗಳಲ್ಲಿ ಪ್ರಾಣಿಗಳ ಇಷ್ಟವನ್ನುಂಟುಮಾಡುವುದಕ್ಕಾಗಿಯೇ ಅವರನ್ನು ನಿಯಮಿಸಿ ಮಹಾಮಾಯಾಸ್ವರೂಪಳಾದ ದೇವಿಯು ತನ್ನ ಮಾಯೆಯಿಂದ ಮನ್ಮಥನ ಶರೀರವನ್ನು ಮೇಲಕ್ಕೆತ್ತಿದಳು. ॥೨೦॥

ಮನ್ಮಥನ ದೇಹವು ಮಲಗಿದ್ದ ಮನುಷ್ಯನು ಮೇಲಕ್ಕೇಳುವಂತೆ ಮೇಲಕ್ಕೆದ್ದಿತು. ಶ್ರೇಷ್ಠಳೂ, ಜಗದೀಶ್ವರಿಯೂ ಆದ ಶ್ರೀತ್ರಿಪುರಾದೇವಿಯು ಅವನನ್ನು ಮನ್ಮಥನೆಂದು ಕರೆದಳು. ॥೨೧॥

ಜಗದೀಶ್ವರಿಯಾದ ಶ್ರೀತ್ರಿಪುರಾದೇವಿಯು ಮನ್ಮಥನಿಗೆ ಮಾಯೆಯಿಂದ ಪೂರ್ಣವಾಗಿರುವ ಹುವ್ವಿನ ಬಾಣಗಳನ್ನೂ ಮತ್ತು ಕಬ್ಬಿನ ಜಲ್ಲೆಯ ಬಿಲ್ಲನ್ನೂ

ಅಥ ಕಾಮೋ ರಥಾರೂಢಃ ಪುಷ್ಪಬಾಣೇಕ್ಷುಕಾರ್ಮುಕಃ ।
ಜಗಾಮ ತತ್ರ ಶ್ರೀಕಂಠೋ ಯತ್ರ ಶಂಭುಸ್ತಪೋಮಯಃ ॥೨೩॥

ಅನು ವವ್ರಾಜ ದೇವೇಶಃ ಕಾಮಂ ಸ್ವಾರ್ಥಸ್ಯ ಸಿದ್ಧಯೇ ।
ತಪಸ್ಯತ್ಯೇಷ ದೇವೇಶ ಇತ್ಯಾಲಕ್ಷ್ಯ ದಿವಸ್ಪತಿಃ ॥೨೪॥

ದೇವೈಃ ಪರಿವೃತೋ ದೂರೇ ಪಶ್ಯಂಸ್ತದ್ವಿಜಯಂ ಸ್ಥಿತಃ ।
ಅಥ ಕಾಮಃ ಸಮಾಲಕ್ಷ್ಯ ತಪಸ್ಯಂತಂ ತ್ರಿಲೋಚನಂ ॥೨೫॥

ತಾಡಯುತ್ಪುಷ್ಪಬಾಣೇನ ಹೃದಿ ಸಂಧಾಯ ಕಾರ್ಮುಕೇ ।
ಅಥ ದೇವಃ ಸಮಾಧಿಸ್ಥಃ ಸ್ವಭಾವಂ ಲಕ್ಷ್ಯ ಚಂಚಲಂ ॥೨೬॥

---

ಕೊಟ್ಟು ತಪಸ್ಸನ್ನು ಮಾಡುತ್ತಿರುವ ಮಹಾದೇವನಾದ ಶಿವನನ್ನು ಜಯಿಸು ಎಂದು ಹೇಳಿದಳು. ||೨೨||

ಅನಂತರದಲ್ಲಿ ಮನ್ಮಥನು ರಥವನ್ನೇರಿ ಹುವ್ವಿನಬಾಣ ಮತ್ತು ಕಬ್ಬಿನಜಲ್ಲೆಯ ಬಿಲ್ಲು ಇವುಗಳನ್ನು ಹಿಡಿದುಕೊಂಡು ತಪಸ್ವಿಯಾದ ಶ್ರೀಕಂಠನಾದ ಶಿವನಿದ್ದ ಕಡೆಗೆ ಹೋದನು. ||೨೩||

ದೇವೇಂದ್ರನು ತನ್ನ ಕಾರ್ಯಸಿದ್ಧಿಗಾಗಿ ಮನ್ಮಥನನ್ನು ಅನುಸರಿಸಿದನು. ಸ್ವರ್ಗಾಧಿಪತಿಯಾದ ಇವನು ದೇವಾಧಿದೇವನಾದ ಶಿವನು ತಪಸ್ಸನ್ನು ಮಾಡುತ್ತಿದ್ದುದನ್ನು ನೋಡಿ ದೂರದಲ್ಲಿಯೇ ನಿಂತಿದ್ದನು. ||೨೪||

ದೇವೇಂದ್ರನು ಇತರ ದೇವತೆಗಳೊಡನೆ ಮನ್ಮಥನ ವಿಜಯವನ್ನು ನೋಡುತ್ತಾ ದೂರದಲ್ಲಿಯೇ ನಿಂತಿದ್ದನು. ಆ ಬಳಿಕ ಮನ್ಮಥನು ಮುಕ್ಕಣ್ಣನಾದ ಶಿವನು ತಪಸ್ಸು ಮಾಡುತ್ತಿರುವುದನ್ನು ನೋಡಿದನು. ||೨೫||

ಮನ್ಮಥನು ತನ್ನ ಹುವ್ವಿನ ಬಾಣವನ್ನು ಬಿಲ್ಲಿಗೆ ಜೋಡಿಸಿ ಶಿವನ ಹೃದಯಕ್ಕೆ ಹೊಡೆದನು. ತರುವಾಯ ಸಮಾಧಿಯಲ್ಲಿ ಮಗ್ನನಾಗಿದ್ದ ದೇವನಾದ ಶಿವನು ತನ್ನ ಸ್ವಭಾವವು ಚಂಚಲವಾಗಿದ್ದುದನ್ನು ಮನಗಂಡನು. ||೨೬||

ಕಿಮಿದಂ ಚೇತಿ ಚೋನ್ಮೀಲ್ಯ ನೇತ್ರೇಽಪಶ್ಯದಗಾತ್ಮಜಾಂ ।
ವಿಕೃತಿಂ ಸ್ವಾತ್ಮನೋ ಜ್ಞಾತ್ವಾ ಕ್ರುದ್ಧಶ್ಚಂದ್ರಾರ್ಧಶೇಖರಃ ॥೨೭॥

ಪಾರ್ಶ್ವೇಽಪಶ್ಯದಾತ್ತಚಾಪಂ ಪುಷ್ಪಬಾಣಕರಂ ತದಾ ।
ಕ್ರೋಧೇನ ದೃಷ್ಟಮಾತ್ರೋಽಥ ನೇತ್ರಾಗ್ನಿಜ್ವಾಲಯಾಽಪ್ಲುತಃ ॥೨೮॥

ಸಂವರ್ತವಹ್ನಿನಾ ತೂಲರಾಶಿವತ್ಕ್ಷಣಮಾತ್ರತಃ ।
ಭಸ್ಮೀಭೂತಃ ಶಕ್ರಮುಖಸುರಾಣಾಂ ತತ್ರ ಪಶ್ಯತಾಂ ॥೨೯॥

ಅಥ ಕ್ರೋಧಾಽಗ್ನಿನಾ ತೇನ ದಹ್ಯಮಾನಂ ಚರಾಽಚರಂ ।
ಜ್ಞಾತ್ವಾ ಚತುರ್ಮುಖಃ ಪ್ರಾಪ್ತಃ ಸಿದ್ಧರ್ಷಿಗಣಸಂಸ್ತುತಃ ॥೩೦॥

ಕ್ಷಮಾಪಯ ದ್ದೇವದೇವಂ ಶಂಭುಂ ತ್ರಿಜಗತಾಂ ಗುರುಂ ।
ಇತಿ ತೇ ಸರ್ವಮಾಖ್ಯಾತಂ ಭಾರ್ಗವಾಽತಿ ಸುವಿಸ್ತೃತಂ ॥೩೧॥

---

ಇದೇನಿದು? ಎಂದು ಯೋಚಿಸಿ ಶಿವನು ಕಣ್ಣುಗಳನ್ನು ತೆರೆದು ಪಾರ್ವತಿಯನ್ನು ನೋಡಿದನು. ಅರ್ಧಚಂದ್ರನೇ ಶಿರೋಭೂಷಣವಾಗಿ ಉಳ್ಳ ಶಿವನು ತನ್ನ ಮನಸ್ಸಿನ ವಿಕಾರವನ್ನು ತಿಳಿದು ಕೋಪಗೊಂಡನು. ॥೨೭॥

ಆಗ ಪಕ್ಕದಲ್ಲಿರುವ, ಕಬ್ಬಿನ ಬಿಲ್ಲನ್ನು ಮತ್ತು ಹುವ್ವಿನ ಬಾಣವನ್ನೂ ಕೈಯ್ಯಲ್ಲಿ ಹಿಡಿದಿರುವ ಮನ್ಮಥನನ್ನು ಶಿವನು ನೋಡಿದನು. ಅವನನ್ನು ಕೋಪದಿಂದ ನೋಡಿದ ಕೂಡಲೇ ಶಿವನ ಕಣ್ಣಿನ ಬೆಂಕಿಯ ಜ್ವಾಲೆಯೊಳಗೆ ಅವನು ಸಿಕ್ಕಿಬಿದ್ದನು. ॥೨೮॥

ಇಂದ್ರನೇ ಮೊದಲಾದ ದೇವತೆಗಳು ನೋಡುತ್ತಿರಲು ಶಿವನ ಕಣ್ಣಿನ ಅಗ್ನಿಯಿಂದ ಮನ್ಮಥನು, ಸಂವರ್ತವೆಂಬ ಅಗ್ನಿಯಿಂದ ಹತ್ತಿಯ ರಾಶಿಯಂತೆ, ಕ್ಷಣ ಮಾತ್ರದಲ್ಲಿಯೇ ಬೂದಿಯಾದನು. ॥೨೯॥

ಅನಂತರ ಶಿವನ ಕೋಪದ ಅಗ್ನಿಯಿಂದ ಚರಾಚರ ಪ್ರಪಂಚವೂ ಸುಡಲ್ಪಡುತ್ತಿರುವುದನ್ನು ತಿಳಿದು ಸಿದ್ಧರೂ ಮತ್ತು ಋಷಿಗಳು ಇವರೆಲ್ಲರಿಂದಲೂ ಸ್ತೋತ್ರಮಾಡಲ್ಪಟ್ಟ ಚತುರ್ಮುಖನಾದ ಬ್ರಹ್ಮನು ಅಲ್ಲಿಗೆ ಬಂದನು. ॥೩೦॥

ಬ್ರಹ್ಮನು ಮೂರು ಲೋಕಗಳಿಗೂ ತಂದೆಯಾದ ದೇವದೇವನಾದ ಶಿವನನ್ನು ಕ್ಷಮಿಸುವಂತೆ ಪ್ರಾರ್ಥನೆಮಾಡಿದನು. ಎಲೈ ಪರಶುರಾಮನೇ, ಅತಿ ವಿಸ್ತಾರವಾದ ಈ ಕಥೆಯನ್ನು ಸಂಪೂರ್ಣವಾಗಿ ನಾನು ನಿನಗೆ ಈ ರೀತಿಯಲ್ಲಿ ಹೇಳಿರುತ್ತೇನೆ. ॥೩೧॥

ಗೌರ್ಯಾಃ ಪರ್ವತರಾಜೇನ ಸಂಭವಾಽದಿಕಮುತ್ತಮಂ ।
ಕಾಮಸ್ಯ ಭಸ್ಮೀಭಾವಂ ಚಾಽಸ್ಯತೀತಂ ಸುಮಹಾಽದ್ಭುತಂ ॥೩೨॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಕಾಮೋಪಾಖ್ಯಾನೇ
ಷಟ್ತ್ರಿಂಶೋಽಧ್ಯಾಯಃ

---

ಪರ್ವತರಾಜನಾದ ಹಿಮವಂತನಿಂದ ಪಾರ್ವತಿಯು ಹುಟ್ಟಿದ್ದನ್ನು ತಿಳಿಸುವ ಶ್ರೇಷ್ಠವಾದ ಕಥೆ ಮತ್ತು ಅತ್ಯಂತ ಆಶ್ಚರ್ಯಕರವಾದ ಹಿಂದೆ ಸಂಭವಿಸಿದ ಮನ್ಮಥನು ಬೂದಿಯಾದ ಕಥೆ ಇವೆಲ್ಲವನ್ನೂ ನಾನು ನಿನಗೆ ಅತಿ ವಿಸ್ತಾರವಾಗಿ ಹೇಳಿದ್ದೇನೆ. ॥೩೨॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಮನ್ಮಥೋಪಾಖ್ಯಾನದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಸಪ್ತತ್ರಿಂಶೋಽಧ್ಯಾಯಃ ||

### ಮೂವತ್ತೇಳನೆಯ ಅಧ್ಯಾಯವು

ಭಗವನ್ನದ್ಭುತತಮಂ ಶ್ರುತಮೇತನ್ಮನೋಹರಂ ।
ಗೌರ್ಯಾವಿರ್ಭಾವಮಹಿಮಾ ಕಾಮಭಸ್ಮತ್ವಮೇವ ಚ ॥೧॥

ಇದಾನೀಂ ಶ್ರೋತುಮಿಚ್ಛಾಮಿ ಶಿವಗೌರೀ ಸಮಾಗಮಾತ್ ।
ಯಥಾ ಕುಮಾರ ಉತ್ಪನ್ನಃ ಕಥಂ ದೈತ್ಯಾನ್ ಸಚಾಽಜಯತ್ ॥೨॥

ಕಥಂ ಶ್ರೀತ್ರಿಪುರೇಶಾನ್ಯಾ ನೇತ್ರೇ ಲೀನೋಽಪಿ ಮನ್ಮಥಃ ।
ಉತ್ಪನ್ನೋ ರತಿಶೋಕಾಂತಃ ಪದ್ಮಾ ಹೃದಯನಂದನಃ ॥೩॥

---

ಓ ಪೂಜ್ಯರೇ, ಗೌರಿಯು ಉತ್ಪನ್ನಳಾದುದರಿಂದ ಉಂಟಾದ ಮಹಿಮೆ ಮತ್ತು ಮನ್ಮಥನ ಬೂದಿಯಾದ ಬಗ್ಗೆ, ಎಂಬ ಆಶ್ಚರ್ಯಕರವೂ ಮತ್ತು ಮನೋಹರವೂ ಆದ ಕಥೆಯನ್ನು ತಮ್ಮ ದಯೆಯಿಂದ ನಾನು ಕೇಳಿದೆನು. ||೧||

ಈಗ ನಾನು ಈಶ್ವರ ಮತ್ತು ಪಾರ್ವತಿಯರ ಸಂಬಂಧದಿಂದ ಷಣ್ಮುಖನು ಹುಟ್ಟಿದ ಬಗೆ ಮತ್ತು ಅವನು ರಾಕ್ಷಸನನ್ನು ಹೇಗೆ ಜಯಿಸಿದನು? ಎಂಬ ಕಥೆ ಇವನ್ನು ತಮ್ಮಿಂದ ಕೇಳಲು ಬಯಸುತ್ತೇನೆ. ||೨||

ಮನ್ಮಥನು ಶ್ರೀತ್ರಿಪುರಾದೇವಿಯ ಕಣ್ಣಿನಲ್ಲಿ ಅಡಗಿದವನಾದರೂ ರತಿಯ ದುಃಖವನ್ನು ಕೊನೆಗಾಣಿಸುವವನಾಗಿ, ಲಕ್ಷ್ಮಿಯ ಮನಸ್ಸಿಗೆ ಸಂತೋಷವನ್ನುಂಟು ಮಾಡುವವನಾಗಿ ಹೇಗೆ ಪುನಃ ಹುಟ್ಟಿದನು? ||೩||

ಬ್ರೂಹಿ ಮಹ್ಯಂ ಪ್ರಪನ್ನಾಯ ಶಿಷ್ಯಾಯ ಕೃಪಯಾ ಗುರೋ ।
ಕಸ್ತೃಪ್ಯೇತ್ತವ ವಕ್ತ್ರೇಂದುಪೀಯೂಷ ಪ್ರಸ್ರವಾಽಽತ್ಮಕಂ ॥೪॥

ಶ್ರೀಮಾತುರ್ಜನತಾಪೌಘ ಹರಂ ಶುಭಕಥಾಽಭಿಧಂ ।
ಪಿಬನ್ ರಸಾಯನಂ ಲೋಕೇ ಮೂಢೋಽಪಿ ಸ್ಥಾವರಾದೃತೇ ॥೫॥

ವದೈತನ್ಮೇ ಪುರಾವೃತ್ತಂ ಯಾಚತೇ ಪ್ರಣತಾಯ ಮೇ ।
ಏವಂ ಪೃಷ್ಟೋ ಜಾಮದಗ್ನ್ಯ ರಾಮೇಣಾಽತ್ರಿಸುತೋ ಗುರುಃ ॥೬॥

ಶೃಣು ರಾಮೇತಿ ಚಾಽಮಂತ್ರ್ಯ ಪ್ರವಕ್ತುಮುಪಚಕ್ರಮೇ ।
ಏವಂ ಭಸ್ಮತ್ವಮಾನೀತೇ ಕಾಮೇ ಸುರಪತಿರ್ವೃಷಾ ॥೭॥

---

ಓ ಗುರುಗಳೇ, ತಮಗೆ ಶರಣಾಗತನಾದ ಶಿಷ್ಯನೂ ಆದ ನನ್ನ ಮೇಲೆ ದಯೆಯಿಟ್ಟು ಈ ಕಥೆಯನ್ನು ಹೇಳಿರಿ. ತಮ್ಮ ಮುಖವೆಂಬ ಚಂದ್ರನಿಂದ ಹೊರಡುವ ಅಮೃತಪ್ರವಾಹದಂತಿರುವ ಈ ಶ್ರೇಷ್ಠ ಕಥೆಯನ್ನು ಕೇಳಿ, ಸಾಕೆಂದು ಹೇಳಿ ತೃಪ್ತಿಯನ್ನು ಯಾವನುತಾನೇ ತೋರಿಸುವನು? ॥೪॥

ತಮ್ಮ ಮುಖದಿಂದ ಬರುವ, ಜನಗಳ ಸಂಕಟಗಳನ್ನು ನಿವಾರಣೆಮಾಡುವ ಮತ್ತು ಮಂಗಳಕರಗಳಾದ ಕಥೆಗಳೆಂದು ಪ್ರಸಿದ್ಧಿಪಡೆದಿರುವ ಶ್ರೀತ್ರಿಪುರಾದೇವಿಯ ಕಥೆಯನ್ನು ಕೇಳಿ, ಅವುಗಳ ರಸವನ್ನು ಪಾನಮಾಡಿ, ಜಡವಾದ ವಸ್ತು ಒಂದನ್ನು ಬಿಟ್ಟು ಮೂಢನಾದ ಮನುಷ್ಯನಾದರೂ ಇನ್ನೂ ಬೇಕೆಂದು ಹೇಳುತ್ತಾ ತೃಪ್ತಿಯನ್ನು ಹೊಂದುವುದೇ ಇಲ್ಲ. ॥೫॥

ಓ ಗುರುಗಳೇ, ಆದ್ದರಿಂದ ನಿಮ್ಮ ಭಕ್ತನಾಗಿ ಬೇಡುತ್ತಿರುವ ನನ್ನ ಮೇಲೆ ಕೃಪೆಯಿಟ್ಟು ಹಿಂದೆ ನಡೆದ ಈ ಕಥೆಯನ್ನು ಹೇಳಿ. ಜಮದಗ್ನಿ ಋಷಿಗಳ ಮಗನಾದ ಪರಶುರಾಮನು ಈ ರೀತಿಯಲ್ಲಿ ಕೇಳಲು ಅತ್ರಿಋಷಿಗಳ ಮಗನಾದ ದತ್ತಾತ್ರೇಯಗುರುವು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೬॥

ದತ್ತಾತ್ರೇಯನು ಎಲೈ ಪರಶುರಾಮನೇ, ಕೇಳು. ಎಂದು ಅವನನ್ನು ಕರೆದು ಕಥೆಯನ್ನು ಹೇಳಲು ಉಪಕ್ರಮಿಸಿದನು. ಮನ್ಮಥನು ಈ ರೀತಿಯಲ್ಲಿ ಬೂದಿಯಾಗಲು ದೇವತೆಗಳಿಗೆ ಅಧಿಪತಿಯಾದ ಇಂದ್ರನು ಬಹಳ ದುಃಖಕ್ಕೆ ಈಡಾದನು. ॥೭॥

ದುಃಖಿತೋಽಭೂದಭಿಮತಾಽಲಾಭೇನಾಽತ್ಯಂತತಸ್ತದಾ ।
ಬ್ರಹ್ಮಾಣಂ ಪ್ರಾರ್ಥಯಾಮಾಸ ಸ್ವಾಽಭಿಪ್ರೇತಸ್ಯ ಸಿದ್ಧಯೇ ॥೮॥

ತತೋ ವಿಧಾತಾ ಕಾಮಾರಿಂ ಸ್ತುತ್ವಾ ಸಂಶಾಮ್ಯ ಮನ್ಯುತಃ ।
ಇಂದ್ರಾದಿಭಿಃ ಪರಿವೃತೋ ಭೂಯಸ್ತುಷ್ಟಾವ ಶಂಕರಂ ॥೯॥

ಗುಹ್ಯೈಃ ಪ್ರಸಿದ್ಧೈಶ್ಚರಿತೈಃ ಸ್ತುತೋ ದೇವಸ್ತ್ರಿಲೋಚನಃ ।
ಸಂತುಷ್ಟಃ ಪ್ರಾಹ ದೇವೇಂದ್ರಾಽದೀನ್ ವಿಧಾತೃಮುಖಾಂ ಸ್ತದಾ ॥೧೦॥

ಭೋ ವಿಧಾತೃಮುಖಾ ದೇವಾ ಯದಸ್ಮತ್ತೋಽಭಿವಾಂಛಿತಂ ।
ತದಬ್ರೂತ ಮಾಚಿರಂ ವಸ್ತತ್ಪ್ರದಿಶಾಮಿ ನ ಸಂಶಯಃ ॥೧೧॥

ಶ್ರುತ್ವೇತ್ಥಂ ಶಂಕರವಚಃ ಪ್ರಾಹ ವೇಧಾಃ ಪ್ರಜಾಪತಿಃ ।
ತ್ರಿಲೋಚನೇಮೋ ದೇವಾಽದ್ಯಾ ಸ್ತಾರಕೇಣ ಸುರಾಽರಿಣಾ ॥೧೨॥

---

ಇಂದ್ರನು ತನ್ನ ಇಷ್ಟಾರ್ಥಸಿದ್ಧಿಯಾಗದೇ ಇದ್ದುದರಿಂದ ಅತ್ಯಂತ ದುಃಖ ಪಟ್ಟನು. ಅನಂತರ ಅವನು ತನ್ನ ಇಷ್ಟಾರ್ಥಸಿದ್ಧಿಗಾಗಿ ಬ್ರಹ್ಮನನ್ನು ಪ್ರಾರ್ಥಿಸಿ ಕೊಂಡನು. ॥೮॥

ಆಮೇಲೆ ಬ್ರಹ್ಮನು ಮನ್ಮಥನ ಶತ್ರುವಾದ ಶಿವನನ್ನು ಅವನ ಕೋಪವು ಹೋಗುವಂತೆ ಸ್ತೋತ್ರಗಳಿಂದ ಶಮನಮಾಡಿ ಇಂದ್ರಾದಿ ದೇವತೆಗಳೊಡನೆ ಕೂಡಿ ಪುನಃ ಅವನನ್ನು ಸ್ತೋತ್ರಮಾಡಿದನು. ॥೯॥

ಬ್ರಹ್ಮಾದಿಗಳು ಅತಿ ರಹಸ್ಯವೂ, ಪ್ರಸಿದ್ಧವೂ ಆದ, ಶಿವನ ನಡೆವಳಿಕೆಗಳನ್ನು ತೋರಿಸುವ ಸ್ತೋತ್ರಗಳಿಂದ ದೇವನೂ ಮತ್ತು ಮುಕ್ಕಣ್ಣನೂ ಆದ ಶಿವನನ್ನು ಸ್ತೋತ್ರಮಾಡಲು, ಶಿವನು ಸಂತೋಷಪಟ್ಟು ದೇವೇಂದ್ರನೇ ಮೊದಲಾದವರನ್ನೂ ಮತ್ತು ಬ್ರಹ್ಮನೇ ಮೊದಲಾದವರನ್ನೂ ಕುರಿತು ಈ ರೀತಿಯಲ್ಲಿ ಹೇಳಿದನು. ॥೧೦॥

ಎಲೈ ಬ್ರಹ್ಮನೇ ಮೊದಲಾದ ದೇವತೆಗಳೇ, ನನ್ನಿಂದ ನೀವು ಅಪೇಕ್ಷಿಸ ಬಹುದಾದ ಇಷ್ಟಾರ್ಥವನ್ನು ಕೇಳಿರಿ. ನಾನು ಅದನ್ನು ಕೂಡಲೇ ನಿಮಗೆ ಕೊಡುವೆ ನೆಂಬುದರಲ್ಲಿ ಸಂದೇಹವಿಲ್ಲ. ॥೧೧॥

ಶಿವನ ಈ ಮಾತನ್ನು ಕೇಳಿ ಪ್ರಜೆಗಳಿಗೆ ಒಡೆಯನಾದ ಬ್ರಹ್ಮನು ಅವನನ್ನು

ಕ್ಲೇಶಿತಾ ನಿರ್ಜಿತಾಃ ಸರ್ವೇ ವಿನಾ ಸ್ವಾನೀಕನಾಯಕಂ ।
ತತ್ತ್ವಂ ಸಂಗಚ್ಛ ಪಾರ್ವತ್ಯಾ ಭವಿತಾ ತೇ ತತಃ ಸುತಃ ॥೧೩॥

ಸ ದೇವಸೇನಾಂ ನೀತ್ವಾ ತಾನ್ ವಿಜೇಷ್ಯತಿ ನ ಸಂಶಯಃ ।
ನೋಚೇದಸುರ ಸಂತಪ್ತಂ ಭಸ್ಮೀಭೂತಂ ಜಗದ್ಭವೇತ್ ॥೧೪॥

ಶ್ರುತ್ವಾ ವಿಧಾತೃಪ್ರಮುಖ ಪ್ರಾರ್ಥಿತಂ ಚಂದ್ರಶೇಖರಃ ।
ಅಂಗೀಚಕಾರ ತದ್ದೃಷ್ಟ್ವಾ ನಿಯತ್ಯಾ ನಿಯತಂ ತದಾ ॥೧೫॥

ಅಥ ಪರ್ವತರಾಜಸ್ಯ ಕನ್ಯಯಾ ಸಂಗತಿಂ ಯಯೌ ।
ಪಾರ್ವತ್ಯಾ ಸಂಗತಸ್ಯೈವಂ ಸಹಸ್ರಂ ವತ್ಸರಾ ಯಯುಃ ॥೧೬॥

---

ಕುರಿತು ಓ ಮುಕ್ಕಣ್ಣನಾದ ಶಿವನೇ, ಈ ಇಂದ್ರನೇ ಮೊದಲಾದ ದೇವತೆಗಳು ದೇವ ಶತ್ರುವಾದ ತಾರಕಾಸುರನ ಬಾಧೆಗೊಳಗಾಗಿದ್ದಾರೆ! ಎಂದನು. ॥೧೨॥

ಈ ದೇವತೆಗಳು ತಮಗೆ ಸರಿಯಾದ ಸೇನಾಪತಿಯು ಇಲ್ಲದಿರುವುದರಿಂದ ತಾರಕಾಸುರನು ಇವರನ್ನು ಸಂಕಟಪಡಿಸುತ್ತಾ ಎಲ್ಲರನ್ನೂ ಜಯಿಸಿರುತ್ತಾನೆ. ಆದ್ದರಿಂದ ನೀನು ಪಾರ್ವತಿಯೊಂದಿಗೆ ಸಂಬಂಧವನ್ನು ದಯವಿಟ್ಟು ಮಾಡು. ಆಗ ನಿನಗೆ ಪುತ್ರನು ಹುಟ್ಟುವನು. ॥೧೩॥

ಆ ನಿನ್ನ ಪುತ್ರನು ದೇವಸೈನ್ಯವನ್ನು ನಡೆಸಿ ರಾಕ್ಷಸರನ್ನು ಜಯಿಸುವುದರಲ್ಲಿ ಯಾವ ಸಂದೇಹವೂ ಇಲ್ಲ. ಹಾಗೆ ಮಾಡದಿದ್ದರೆ ರಾಕ್ಷಸನ ಕಾಟಕ್ಕೊಳಗಾದ ಪ್ರಪಂಚವು ಶೀಘ್ರದಲ್ಲಿಯೇ ಬೂದಿಯಾಗುವುದು! ॥೧೪॥

ಚಂದ್ರಶೇಖರನಾದ ಶಿವನು ಬ್ರಹ್ಮನೇ ಮೊದಲಾದವರ ಪ್ರಾರ್ಥನೆಯನ್ನು ಕೇಳಿ, ಇದು ನಡೆಯಲೇಬೇಕೆಂಬ ಹಣೆಯ ಬರೆಹವೂ ವಿಧಿಯ ನಿಯಮವೂ ಇದೆ ಯೆಂದು ತಿಳಿದು ಅವರ ಪ್ರಾರ್ಥನೆಯನ್ನು ಅಂಗೀಕರಿಸಿದನು. ॥೧೫॥

ಅನಂತರ ಶಿವನು ಪರ್ವತರಾಜನಾದ ಹಿಮವಂತನ ಮಗಳಾದ ಪಾರ್ವತಿ ಯೊಂದಿಗೆ ಸಂಬಂಧವನ್ನು ಮಾಡಿದನು. ಹೀಗೆ ಪಾರ್ವತಿಯೊಡನೆ ಸಂಬಂಧ ಮಾಡುತ್ತಿರುವ ಶಿವನಿಗೆ ಒಂದು ಸಾವಿರ ವರ್ಷಗಳು ಕಳೆದವು. ॥೧೬॥

ಅಥ ದೇವಾನ್ ವಿಧಿಃ ಪ್ರಾಹ ಶಕ್ರಾದೀನ್ ಸಂಮುಖಸ್ಥಿತಾನ್ ।
ಶೃಣುಧ್ವಂ ನೋ ಸುರಾ ವಾಕ್ಯಂ ಪಾರ್ವತ್ಯಾ ಸಂಗತಃ ಶಿವಃ ॥೧೭॥

ಅದ್ಯಾಪಿ ನೋ ಮುಂಚತಿ ಸ್ವಂ ವೀರ್ಯಂ ವರ್ಷಸಹಸ್ರತಃ ।
ತಪಸಾ ಚಿರಕಾಲೇನ ಸಂಭೃತಂ ತನ್ನಿಬೋಧತ ॥೧೮॥

ಸಮಗ್ರಂ ಯದಿ ಮುಂಚೇತ್ಸ ಸತ್ತ್ವಂ ಜಾತಂ ತತೋ ಭುವಿ ।
ಭಸ್ಮೀಕುರ್ಯಾದಶೇಷಂ ವೈ ಮಹತ್ತೇಜೋ ಯತೋ ಹಿ ತತ್ ॥೧೯॥

ಕಾರಣೇನಾಽಪಿಗಚ್ಛಾಮಃ ಪುನಸ್ತತ್ರ ಶಿವಾಂತಿಕೇ ।
ಇತ್ಯುಕ್ತ್ವಾ ಪ್ರಯಯೌ ಧಾತಾ ಶಕ್ರಾದ್ಯೈಃ ಪರಿವಾರಿತಃ ॥೨೦॥

ಪ್ರಾರ್ಥಯಾಮಾಸ ತಂ ದೇವಂ ತತ್ರ ಗತ್ವಾ ಸುರೈಃ ಸಹ ।
ವಿರಮ ತ್ವಂ ಮಹಾದೇವ ಮೈಥುನಾಚ್ಚಿರಕಾಲಿಕಾತ್ ॥೨೧॥

---

ತರುವಾಯ ಬ್ರಹ್ಮನು ತನ್ನೆದುರಿಗಿರುವ ಇಂದ್ರನೇ ಮೊದಲಾದ ದೇವತೆಗಳನ್ನು ಕುರಿತು, ಎಲೈ ದೇವತೆಗಳೇ, ನನ್ನ ಈ ಮಾತನ್ನು ಕೇಳಿರಿ. ಶಿವನು ಪಾರ್ವತಿಯೊಂದಿಗೆ ಸಂಬಂಧವನ್ನು ಮಾಡಿದ್ದಾನೆ. ಆದರೆ ॥೧೭॥

ಸಾವಿರ ವರ್ಷಗಳಾದರೂ ಶಿವನು ಬಹಳ ಕಾಲ ತಪಸ್ಸಿನಿಂದ ಗಳಿಸಿದ ತನ್ನ ವೀರ್ಯವನ್ನು ಇನ್ನೂ ಬಿಟ್ಟೇ ಇಲ್ಲವು! ಎಂದು ತಿಳಿಯಿರಿ. ॥೧೮॥

ಅವನು ಈಗ ಗಳಿಸಿರುವ ವೀರ್ಯವೆಲ್ಲವನ್ನೂ ಬಿಟ್ಟುಬಿಡುವುದಾದರೆ ಅದು ಭೂಮಿಯಮೇಲಿರುವ ಸಮಸ್ತ ವಸ್ತುಗಳನ್ನೂ ಸುಟ್ಟುಹಾಕುವುದು! ಏಕೆಂದರೆ ಅದು ಮಹತ್ತಾದ ಅವನ ತೇಜಸ್ಸೇ ಆಗಿದೆ! ॥೧೯॥

ಆದ್ದರಿಂದ ಈ ನಿಮಿತ್ತವಾಗಿ ಶಿವನ ಸಮೀಪಕ್ಕೆ ಪುನಃ ನಾವುಗಳು ಹೋಗೋಣ. ಎಂದು ಬ್ರಹ್ಮನು ಹೇಳಿ, ಇಂದ್ರನೇ ಮೊದಲಾದ ಪರಿವಾರದೊಂದಿಗೆ ಕೂಡಿದವನಾಗಿ ಬ್ರಹ್ಮನು ಶಿವನ ಸಮೀಪಕ್ಕೆ ಹೋದನು. ॥೨೦॥

ಬ್ರಹ್ಮನು ದೇವತೆಗಳೊಂದಿಗೆ ಶಿವನ ಸಮೀಪವನ್ನು ಸೇರಿ ದೇವನಾದ ಆ ಪರಶಿವನನ್ನು ಕುರಿತು ಓ ಮಹಾದೇವನೇ, ನೀನು ದಯುವಿಟ್ಟು ಬಹಳ ಕಾಲದ ಈ ಮೈಥುನವನ್ನು ನಿಲ್ಲಿಸು! ಎಂದು ಪ್ರಾರ್ಥಿಸಿದನು. ॥೨೧॥

ಸಾಕಲ್ಯ ವೀರ್ಯಸಂಭೂತಂ ಕಸ್ತೇ ಧಾರಯಿತುಂ ಕ್ಷಮಃ ।
ರಕ್ಷ ಸರ್ವಾನಿಮಾನ್ ಲೋಕಾನನ್ಯಥಾ ನಾಶಮೇಷ್ಯತಿ ॥೨೨॥

ಇತ್ಯರ್ಥಿತೋ ಮಹಾದೇವೋ ವಿರರಾಮಾಽತಿಮೈಥುನಾತ್ ।
ತತೋ ದೇವಸ್ಯ ಯತ್ಕ್ಷುಬ್ಧಂ ವೀರ್ಯಂ ತತ್ಸ್ಖಲಿತಂ ಭುವಿ ॥೨೩॥

ರಸ ಪರ್ವತತುಲ್ಯಂ ತದ್ಭೂಮಿಃ ಧಾರಯಿತುಂ ತದಾ ।
ನ ಶಕ್ತಾ ತೇಜಸಾ ತಸ್ಯ ದಹ್ಯಮಾನಾ ವಿಧಿಂ ಯಯೌ ॥೨೪॥

ಬ್ರಹ್ಮನ್ನಾಽಹಂ ಸಮರ್ಥಾಽಸ್ಮಿ ಮಹಾದೇವಸ್ಯ ತೇಜಸಾ ।
ಧಾರಣೇ ದಹ್ಯಮಾನಾಽಹಂ ರಕ್ಷ ಮಾಂ ಶರಣಾಗತಾಂ ೨೫॥

---

ಓ ಶಿವನೇ, ನೀನು ಸಮಸ್ತ ವೀರ್ಯವನ್ನೂ ಹೊರಗಡೆಗೆ ಬಿಟ್ಟರೆ ಅದರಿಂದುಂಟಾದ ತೇಜಸ್ಸನ್ನು ಧರಿಸಲು ಪ್ರಪಂಚದಲ್ಲಿ ಯಾರು ತಾನೇ ಸಮರ್ಥರು? ಆದ್ದರಿಂದ ಸಂಭೋಗವನ್ನು ನಿಲ್ಲಿಸುವುದರ ಮೂಲಕ ಈ ಸಮಸ್ತ ಲೋಕಗಳನ್ನೂ ಕಾಪಾಡು! ಹಾಗಿಲ್ಲದಿದ್ದರೆ ಲೋಕಗಳೆಲ್ಲವೂ ನಾಶವಾಗುವುವು. ॥೨೨॥

ಬ್ರಹ್ಮನು ಈ ರೀತಿಯಲ್ಲಿ ಪ್ರಾರ್ಥನೆ ಮಾಡಿಕೊಳ್ಳಲು ಶಿವನು ತನ್ನ ಅತಿ ಸಂಭೋಗವನ್ನು ನಿಲ್ಲಿಸಿದನು. ಅನಂತರ ದೇವನಾದ ಶಿವನ ಚಲಿಸಿದ್ದ ವೀರ್ಯವು ಭೂಮಿಯ ಮೇಲೆ ಜಾರಿ ಬಿದ್ದಿತು. ॥೨೩॥

ಪಾದರಸದ ಪರ್ವತಕ್ಕೆ ಸಮಾನವಾದ ಶಿವನ ಆ ವೀರ್ಯವನ್ನು ಭೂಮಿಯು ಹೊರಲು ಅಶಕ್ತಳಾಗಿ ಅದರ ತೇಜಸ್ಸಿನಿಂದ ಸುಡಲ್ಪಡುತ್ತಾ ಬ್ರಹ್ಮನ ಹತ್ತಿರಕ್ಕೆ ಹೋದಳು. ॥೨೪॥

ಓ ಬ್ರಹ್ಮನೇ, ಮಹಾದೇವನಾದ ಶಿವನ ವೀರ್ಯವನ್ನು ಧರಿಸಲು ನಾನು ಸಮರ್ಥಳಾಗಿಲ್ಲ. ಅದನ್ನು ಧರಿಸಿದ್ದರಿಂದ ನಾನು ಸುಟ್ಟುಹೋಗುತ್ತಿದ್ದೇನೆ. ಆದ್ದರಿಂದ ನಿನಗೆ ಶರಣಾಗತಳಾದ ನನ್ನನ್ನು ದಯವಿಟ್ಟು ಕಾಪಾಡಬೇಕೆಂದು ಪ್ರಾರ್ಥಿಸಿದಳು. ॥೨೫॥

ಆಕರ್ಣ್ಯ ಭೂಮಿವಚನಂ ಪಾವಕಂ ಸಂಮುಖಸ್ಥಿತಂ ।
ಪ್ರಾಹ ವಹ್ನೇ ಧಾರಯೈತಚ್ಛಿವವೀರ್ಯಂ ಭುವಿ ಸ್ಥಿತಂ ॥೨೬॥

ಪರಿಪಾಕಾತ್ಕುಮಾರಃ ಸ್ಯಾ ದ್ಯಾವತ್ತಾವನ್ಮಯೇರಿತಃ ।
ಶ್ರುತ್ವಾ ಪ್ರಾಹ ವಿಧೇರ್ವಾಕ್ಯಂ ವೀತಿಹೋತ್ರಃ ಸಮಾಹಿತಂ ॥೨೭॥

ಭಗವನ್ ಧಾರಯಾಮ್ಯೇತದ್ಯದಿ ಮೇ ಸ ಸುತೋ ಭವೇತ್ ।
ನೋಚೇದಹಂ ಕ್ಲೇಶಭಾಗೀ ವ್ಯರ್ಥಂ ಸ್ಯಾಂ ತತ್ಕಥಂ ಭವೇತ್॥೨೮॥

ಶ್ರುತ್ವಾಽಗ್ನ್ಯಭಿಮತಂ ವೇಧಾಃ ಪ್ರಾಹ ತೇಽಸ್ತು ಸಮಾಹಿತಂ ।
ತತೋಽಗ್ನಿಃ ಪೃಥಿವೀ ಸಂಸ್ಥಂ ಹರವೀರ್ಯಂ ಸಮಾದಧೇ ॥೨೯॥

ಧಾರಯಾಮಾಸ ತದ್ವಹ್ನಿ ರಸಹ್ಯಮಪಿ ತೇಜಸಾ ।
ನಾಶಕತ್ತದ್ಧಾರಯಿತುಂ ಯದಾಽಗ್ನಿಃ ಸರ್ವಥಾ ತದಾ ॥೩೦॥

---

ಬ್ರಹ್ಮನು ಭೂದೇವಿಯ ಮಾತನ್ನು ಕೇಳಿ ತನ್ನೆದುರಿಗಿರುವ ಅಗ್ನಿಯನ್ನು ಕುರಿತು, ಎಲೈ ಅಗ್ನಿಯೇ, ಭೂಮಿಯ ಮೇಲೆ ಬಿದ್ದಿರುವ ಶಿವನ ವೀರ್ಯವನ್ನು ನೀನು ಧರಿಸು ಎಂದನು. ॥೨೬॥

ಈ ವೀರ್ಯವು ಷಣ್ಮುಖನಾಗಿ ರೂಪಾಂತರವನ್ನು ಧರಿಸುವವರೆಗೂ ನೀನು ಈ ವೀರ್ಯವನ್ನು ಧರಿಸಿರು. ಎಂದು ಹೇಳುತ್ತಿರುವ ಆ ಬ್ರಹ್ಮನ ಮಾತನ್ನು ಕೇಳಿ ಅಗ್ನಿಯು ತನ್ನ ಇಷ್ಟವಾದ ಅಭಿಪ್ರಾಯವನ್ನು ಬ್ರಹ್ಮನಿಗೆ ಹೀಗೆ ಹೇಳಿದನು.॥೨೭॥

ಓ ಪೂಜ್ಯನಾದ ಬ್ರಹ್ಮನೇ, ಹುಟ್ಟುವ ಕುಮಾರನು ನನಗೆ ಸಂಬಂಧಪಡುವು ದಾದರೆ, ನಾನೇನೋ ಈ ವೀರ್ಯವನ್ನು ಧರಿಸುವೆನು. ಹಾಗಿಲ್ಲದಿದ್ದರೆ ನಾನು ದುಃಖ ಭಾಗಿಯಾಗಿ ಈ ಭಾರವನ್ನು ವಹಿಸಿದ್ದು ವ್ಯರ್ಥವಾಗುವುದಲ್ಲವೇ ? ॥೨೮॥

ಅಗ್ನಿಯ ಅಭಿಪ್ರಾಯವನ್ನು ಕೇಳಿ ಬ್ರಹ್ಮನು ನಿನ್ನ ಇಷ್ಟವಿದ್ದಂತೆಯೇ ಆಗಲಿ ! ಎಂದನು. ಅನಂತರ ಅಗ್ನಿಯು ಭೂಮಿಯ ಮೇಲಿರುವ ಶಿವನ ವೀರ್ಯವನ್ನು ಧರಿಸಿದನು. ॥೨೯॥

ಅಗ್ನಿಯು ಅಸಹ್ಯವಾದರೂ ಆ ಶಿವನ ವೀರ್ಯವನ್ನು ಧರಿಸಲು ಪ್ರಯತ್ನ ಪಟ್ಟನು. ಆದರೆ ಆ ವೀರ್ಯದ ತೇಜಸ್ಸನ್ನು ತಡೆಯಲಾರದೇ ಅವನು ಅದನ್ನು ಧರಿಸಲು ಸರ್ವವಿಧದಲ್ಲೂ ಸಮರ್ಥನಾಗದೇ ಹೋದನು ! ॥೩೦॥

ವಿಧಾತಾರ ಮುಪವ್ರಜ್ಯ ಲಜ್ಜಿತಃ ಪ್ರಾಹ ಪಾವಕಃ ।
ಬ್ರಹ್ಮನ್ನಾಽಹಂ ಸಮರ್ಥೋಽಸ್ಮಿ ಧಾರಣೇಽಸ್ಯ ಹರೌಜಸಃ ॥೩೧॥

ತದ್ರಕ್ಷ ಮಾಂ ದಹ್ಯಮಾನಂ ಮಯೈತತ್ಕ್ವ ವಿಸೃಜ್ಯತಾಂ ।
ವಿಚಾರ್ಯ ವಿಧಿರಾಹಾಽಗ್ನಿ ಮೇಷಾ ತ್ರಿಪಥಗಾ ನದೀ ॥೩೨॥

ತ್ಯಜಾಸ್ಯಾಂ ತನ್ಮಹಾವೀರ್ಯಂ ಶಾಂಕರಂ ಸಾ ವಹಿಷ್ಯತಿ ।
ಶ್ರುತ್ವಾ ವಿಧಿವಚೋ ಗಂಗಾ ಪ್ರಾಂಜಲಿಃ ಪ್ರಾಹ ಸಾ ವಿಧಿಂ ॥೩೩॥

ದೇವೇಶ ನಾಽಫಲಾ ಜಾತು ಪರವೀರ್ಯಂ ವಿಧಾರಯೇ ।
ಪುತ್ರಃ ಸಪದಿ ಮೇ ಭೂಯಾದ್ಧಾರಯಾಮಿ ನಚಾಽನ್ಯಥಾ ॥೩೪॥

---

ಆಗ ಅಗ್ನಿಯು ಬ್ರಹ್ಮನನ್ನು ಸಮೀಪಿಸಿ ನಾಚಿಕೆಯಿಂದ ಅವನನ್ನು ಕುರಿತು, ಓ ಬ್ರಹ್ಮನೇ, ಶಿವನ ವೀರ್ಯವನ್ನು ಧರಿಸಲು ನಾನು ಅಸಮರ್ಥನಾಗಿದ್ದೇನೆ! ಎಂದನು. ॥೩೧॥

ಆದ್ದರಿಂದ ದಯವಿಟ್ಟು ಸುಡಿಸಿಕೊಳ್ಳುತ್ತಿರುವ ನನ್ನನ್ನು ಕಾಪಾಡು. ಮತ್ತು ನಾನು ಇದನ್ನು ಎಲ್ಲಿ ಬಿಡಲಿ? ಎಂದನು. ಬ್ರಹ್ಮನು ಈ ವಿಷಯದಲ್ಲಿ ಯೋಚಿಸಿ ಅಗ್ನಿಯನ್ನು ಕುರಿತು ಇಲ್ಲಿ ಮೂರು ಮಾರ್ಗದಲ್ಲಿ ಪ್ರವಹಿಸುವ ಗಂಗಾ ನದಿ ಯಲ್ಲಿ ಬಿಡು. ಎಂದನು. ॥೩೨॥

ಶಿವನಿಗೆ ಸಂಬಂಧಪಟ್ಟ ಆ ಮಹಾವೀರ್ಯವನ್ನು ನೀನು ಗಂಗಾ ನದಿಯಲ್ಲಿ ಬಿಡು. ಈಕೆಯು ಅದನ್ನು ಹೊರುವಳು! ಎಂದು ಹೇಳಿದ ಬ್ರಹ್ಮನ ಮಾತನ್ನು ಕೇಳಿ ಗಂಗೆಯು ಕೈಜೋಡಿಸಿಕೊಂಡು ಬ್ರಹ್ಮನನ್ನು ಕುರಿತು ಈ ರೀತಿಯಲ್ಲಿ ವಿಜ್ಞಾಪನೆ ಮಾಡಿಕೊಂಡಳು. ॥೩೩॥

ಓ ದೇವೇಶನಾದ ಬ್ರಹ್ಮನೇ, ನಾನು ಇನ್ನೊಬ್ಬರ ವೀರ್ಯವನ್ನು ಯಾವಾಗಲೂ ಧರಿಸಲಾರೆ! ಆದ್ದರಿಂದ ಆ ವೀರ್ಯವನ್ನು ನನ್ನಲ್ಲಿ ಇಟ್ಟು ವ್ಯರ್ಥಶ್ರಮವಾಗುವಂತೆ ಮಾಡಬೇಡ. ಆದರೆ ಆ ವೀರ್ಯದಿಂದ ಆಗುವ ಮಗನು ಶೀಘ್ರದಲ್ಲೇ ನನ್ನ ಪುತ್ರ ನಾಗುವುದಾದರೆ ಅದನ್ನು ನಾನು ಧರಿಸುವೆನು. ಹಾಗಿಲ್ಲದಿದ್ದರೆ ನಾನು ಅದನ್ನು ಧರಿಸಲಾರೆ! ಎಂದು ಹೇಳಿದಳು. ॥೩೪॥

ಅಸ್ತ್ವಿತ್ಯುಕ್ತ್ವಾ ವಿಧಾತ್ರಾ ಸಾ ದಧಾರಾಗ್ನಿ ವಿಸರ್ಜಿತಂ ।
ವೀರ್ಯಂ ಶೈವಂ ತತೋ ಗಂಗಾ ಕಾಲೇನಾಽಲ್ಪೀಯಸೈವ ಸಾ ॥೩೫॥

ತತ್ತೇಜಸಾ ದಹ್ಯಮಾನಾ ಕ್ವಥಿತಾಽಪಾಂ ವಹಾಽಭವತ್ ।
ಬಾಷ್ಪಧೂಮ ಸಮಾಕ್ರಾಂತಾ ಹತಯಾದೋ ಗಣಾ ತತಃ ॥೩೬॥

ವಿಧಾತಾರಂ ಸಮಭ್ಯೇತ್ಯ ಪ್ರಾಹ ಲಜ್ಜಾ ನತಾಽಽನನಾ ।
ಬ್ರಹ್ಮನ್ನೇತದ್ಧಾರಯಿತು ಮುತ್ಸಹೇ ನ ಕಥಂ ಚ ನ ॥೩೭॥

ಕ್ವಥ್ಯಮಾನ ಶೋಯವಹಾ ಕೃಶೀಭೂತಾಽಸ್ಮಿ ಸಾಂಪ್ರತಂ ।
ವಿಕ್ಲಿನ್ನೋ ಯಾದಸಾಂ ಸಂಘಃ ಪರಿತಃ ಸಾಗರೋಽಪಿ ಚ ॥೩೮॥

ನಾಽನುಮೋದತಿ ಮತ್ಸಂಗಂ ನಿಸ್ತೋಯಾ ಚ ಭವಾಮ್ಯಹಂ ।
ತದ್ಬ್ರೂಹಿ ವಿಸೃಜಾಮಿ ಕ್ವ ಧಾತರ್ಮಯಿ ಕೃಪಾಂ ಕುರು ॥೩೯॥

---

ಹಾಗೆಯೇ ಆಗಲೆಂದು ಬ್ರಹ್ಮನು ಹೇಳಲು, ಗಂಗೆಯು ಅಗ್ನಿಯು ಬಿಟ್ಟಿದ್ದ ಶಿವನ ಸಂಬಂಧವಾದ ವೀರ್ಯವನ್ನು ಧರಿಸಿದಳು. ಆದರೆ ಸ್ವಲ್ಪ ಹೊತ್ತಿನೊಳಗಾಗಿಯೇ ಅದರ ತೇಜಸ್ಸನ್ನು ಸಹಿಸಲಾರದೇ ಆ ವೀರ್ಯವನ್ನು ಬಿಟ್ಟು ಬಿಡಲು ಪ್ರಯತ್ನಪಟ್ಟಳು. ॥೩೫॥

ಗಂಗೆಯು ಆ ವೀರ್ಯದಿಂದ ಸುಡಲ್ಪಟ್ಟು ಕುದಿಯುತ್ತಿದ್ದಳು. ಅವಳು ಆವಿ, ಹೊಗೆ ಮುಂತಾದ್ದರಿಂದ ನಷ್ಟವಾಗುತ್ತಿರುವ ಜಲಚರಗಳಿಂದ ಕೂಡಿದವಳಾಗಿದ್ದಳು. ಮತ್ತು ಆಕೆಯ ನೀರೆಲ್ಲವೂ ಬತ್ತಿಹೋಗುತ್ತಾ ಬಂದಿತು. ॥೩೬॥

ಅವಳು ನಾಚಿಕೆಯಿಂದ ಬಗ್ಗಿದ ಮುಖವುಳ್ಳವಳಾಗಿ ಬ್ರಹ್ಮನನ್ನು ಸಮೀಪಿಸಿ ಓ ಬ್ರಹ್ಮನೇ, ಈ ವೀರ್ಯವನ್ನು ಯಾವ ವಿಧದಲ್ಲೂ ನಾನು ಧರಿಸಲು ಉತ್ಸಾಹ ಪಡುವುದಿಲ್ಲ! ಎಂದಳು. ಏಕೆಂದರೆ, ॥೩೭॥

ಕುದಿಯುತ್ತಿರುವ ನೀರನ್ನು ಧರಿಸಿ ನಾನು ಈಗ ಸಣ್ಣಗಾಗಿ ಹೋಗಿದ್ದೇನೆ. ಪ್ರವಾಹಗಳ ಸಮೂಹವುಳ್ಳ ನದಿಗಳೂ ಮತ್ತು ಸಾಗರವೂ ಕೂಡ ಬತ್ತಿಹೋಗುತ್ತಾ ಇವೆ. ಅಲ್ಲದೆ, ॥೩೮॥

ಗಂಗೆಯು, ಸಮುದ್ರವೂ ನನ್ನ ಸಂಬಂಧವನ್ನು ಅಪೇಕ್ಷಿಸುತ್ತಿಲ್ಲ. ನಾನು ನೀರಿಲ್ಲದವಳಾಗುತ್ತಿದ್ದೇನೆ. ಓ ಬ್ರಹ್ಮನೇ, ಆದ್ದರಿಂದ ದಯವಿಟ್ಟು ಇದನ್ನು ಎಲ್ಲಿ ಬಿಡಲೆಂಬುದನ್ನು ಹೇಳು. ಎಂದಳು. ॥೩೯॥

ಶ್ರುತ್ವಾ ಪಿತಾಮಹೋ ಗಂಗಾವಾಕ್ಯಂ ಕ್ಷಣಮಚಿಂತಯತ್ ।
ತತಃ ಪ್ರಾಹ ತ್ರಿಪಥಗಾಂ ಗಂಗೇ ಶೃಣು ವಚೋ ಮಮ ॥೪೦॥

ಕೈಲಾಸಪರ್ವತಾಧೋ ಯ ಚ್ಛರಾಣಾಂ ಸುಮಹದ್ವನಂ ।
ತತ್ರ ವೀರ್ಯಂ ಶಾಂಕರಂ ತ ದುತ್ಸ್ರಷ್ಟುಂ ತ್ವಂ ಸಮರ್ಹಸಿ ॥೪೧॥

ಶ್ರುತ್ವೈವಂ ಭಾತೃವಚನಂ ಗಂಗಾ ಪಪ್ರಚ್ಛ ಸಾದರಂ ।
ಅತ್ಯಾಶ್ಚರ್ಯಮಿದಂ ಪ್ರೋಕ್ತಂ ಕಥಂ ತತ್ರೋತ್ಸೃಜಾಮ್ಯಹಂ ॥೪೨॥

ಸರ್ವಂ ಸಹಾ ಚಾಽಶ್ರಯಾಶೋ ಗಂಗಾ ಚಾಽಹಂ ಸರಿದ್ವರಾ ।
ನ ಶೇಕುರ್ಧಾರಣೇ ಯಸ್ಯ ತಚ್ಛರಾಣಾಂ ವನಂ ಕಥಂ ॥೪೩॥

ಧಾರಯೇ ದತ್ರ ನೋ ಹೇತುರಲ್ಪಃ ಸ್ಯಾತ್ಸರ್ವಥಾ ವಿಧೇ ।
ವದೈತಚ್ಛ್ರೋತುಮಿಚ್ಛಾಮಿ ಶ್ರವಣಾರ್ಹಂ ಭವೇದ್ಯದಿ ॥೪೪॥

---

ಬ್ರಹ್ಮನು ಗಂಗೆಯ ಮಾತನ್ನು ಕೇಳಿ ಒಂದು ಕ್ಷಣಕಾಲ ಯೋಚಿಸಿದನು. ಆನಂತರ ಅವನು ಗಂಗೆಯನ್ನು ಕುರಿತು, ಎಲೌ ಗಂಗೆಯೇ ; ನನ್ನ ಈ ಮಾತನ್ನು ಕೇಳು ಎಂದನು. ॥೪೦॥

ಕೈಲಾಸಪರ್ವತದ ಕೆಳಭಾಗದಲ್ಲಿ ದರ್ಭೆಗಳ ದೊಡ್ಡ ಕಾಡುಂಟಷ್ಟೇ ? ನೀನು ಶಿವನ ಸಂಬಂಧವಾದ ಈ ವೀರ್ಯವನ್ನು ಅಲ್ಲಿ ಬಿಡಲು ಯೋಗ್ಯಳಾಗಿರುತ್ತೀಯೆ. ಎಂದನು. ॥೪೧॥

ಬ್ರಹ್ಮನ ಈ ಮಾತನ್ನು ಕೇಳಿ ಗಂಗೆಯು ಭಕ್ತಿಪೂರ್ವಕವಾಗಿ ಅವನನ್ನು ಕುರಿತು ತಾವು ಅತ್ಯಾಶ್ಚರ್ಯಕರವಾದ ಈ ವಿಷಯವನ್ನು ಹೇಳಿದ್ದೀರಿ. ಈ ವೀರ್ಯವನ್ನು ನಾನು ಅಲ್ಲಿಗೆ ಹೇಗೆ ಬಿಡಲಿ ? ಎಂದಳು. ॥೪೨॥

ತನ್ನಲ್ಲಿ ಹಾಕಿದ ಎಲ್ಲಾ ಪದಾರ್ಥಗಳನ್ನೂ ತಿನ್ನಬಲ್ಲ ಅಗ್ನಿಯೂ, ಎಲ್ಲವನ್ನೂ ಸಹಿಸಬಲ್ಲವಳಾದ ಭೂದೇವಿಯೂ, ನದಿಗಳೆಲ್ಲಕ್ಕೂ ಶ್ರೇಷ್ಠಳಾದ ಗಂಗೆಯೂ, ಇಂತಹ ನಾವುಗಳೇ ಹೊರಲಾರದ ಈ ವೀರ್ಯವನ್ನು ದರ್ಭೆಗಳ ವನವು ಹೇಗೆ ಹೊರ ಬಲ್ಲದು ? ॥೪೩॥

ಓ ಬ್ರಹ್ಮನೇ, ದರ್ಭೆಯ ವನವು ಈ ವೀರ್ಯವನ್ನು ಧರಿಸಬಲ್ಲದ್ದಾದರೆ ಸರ್ವ ಪ್ರಕಾರ ಅದರಲ್ಲಿ ದೊಡ್ಡದೊಂದು ಕಾರಣವಿರಬೇಕು ! ಇದನ್ನು ಕೇಳಬಯಸುವೆನು. ಈ ವಿಷಯವನ್ನು ನಾನು ಕೇಳಬಹುದಾದರೆ ದಯವಿಟ್ಟು ಹೇಳಿ. ॥೪೪॥

ಪೃಷ್ಟೋ ಧಾತಾ ಗಂಗಯೈವಂ ಪ್ರಾಹ ಸರ್ವಂ ಜಗದ್ವಿಧಿಃ ।
ಶೃಣು ಗಂಗೇ ಶರವಣವೃತ್ತಂ ಯತ್ತತ್ಪುರಾತನಂ ॥೪೫॥

ಪುರಾ ಭಸ್ಮಾಸುರ ಕೃತೇ ವಿಯುಕ್ತಾ ಪತಿನಾ ಶಿವಾ ।
ತದಾ ದುಃಖೇನ ಮಹತಾ ಶೀರ್ಣಂ ತಸ್ಯಾಃ ಕಲೇಬರಂ ॥೪೬॥

ಪಪಾತ ತತ್ರ ಶೋಚಂತ್ಯಾಃ ಶತಧಾ ಚ ಸಹಸ್ರಧಾ ।
ತಸ್ಯಾ ವಿಶೀರ್ಣದೇಹೋತ್ಥ ಮಾಸೀಚ್ಛರವಣಂ ತ್ವಿದಂ ॥೪೭॥

ಯಸ್ಮಾದ್ಗೌರ್ಯಂಶಭೂತಂ ತತ್ತತೋ ವೀರ್ಯವಿಧಾರಣೇ ।
ಸಮರ್ಥಮಿತಿ ಸಂಪ್ರೋಕ್ತಂ ತ್ಯಜ ತತ್ರಾವಿಶಂಕಿತಾ ॥೪೮॥

ಶ್ರುತ್ವೈವಂ ಗಂಗಯಾ ವೀರ್ಯಮುತ್ಸೃಷ್ಟಂ ಶರಕಾನನೇ ।
ಪ್ರಾಪ್ಯ ತದ್ವೀರ್ಯಮಚಿರಾ ದ್ವವೃಧೇ ಶರಕಾನನಂ ॥೪೯॥

---

ಗಂಗೆಯು ಈ ರೀತಿಯಲ್ಲಿ ಬ್ರಹ್ಮನನ್ನು ಕೇಳಲು, ಪ್ರಪಂಚಕ್ಕೆ ಸೃಷ್ಟಿಕರ್ತನಾದ ಇವನು, ಎಲೌ ಗಂಗೆಯೇ, ಹಿಂದೆ ನಡೆದ ದರ್ಭೆಯ ವನದ ಚರಿತ್ರೆಯನ್ನೆಲ್ಲವನ್ನೂ ಹೇಳುವೆನು, ಕೇಳು. ಎಂದು ಅವಳಿಗೆ ಅದೆಲ್ಲವನ್ನೂ ಹೀಗೆ ವಿವರಿಸಿ ಹೇಳಿದನು. ॥೪೫॥

ಹಿಂದೆ ಶಿವನ ಪತ್ನಿಯಾದ ಪಾರ್ವತಿಯು ಭಸ್ಮಾಸುರನೆಂಬ ರಾಕ್ಷಸನ ನಿಮಿತ್ತವಾಗಿ ಶಿವನಿಂದ ವಿರಹಿತಳಾದಳು. ಆಗ ಹೆಚ್ಚಾದ ದುಃಖದಿಂದ ಅವಳ ಶರೀರವು ಸೀಳಿತು. ॥೪೬॥

ದುಃಖಪಡುತ್ತಿರುವ ಪಾರ್ವತಿಯ ಶರೀರವು ನೂರಾರು ಚೂರಾಗಿ ಸಾವಿರ ವಿಧವಾಗಿ ಭೂಮಿಯ ಮೇಲೆ ಬಿದ್ದಿತು. ಅವಳ ಸೀಳಿದ ದೇಹಭಾಗಗಳಿಂದ ಈ ದರ್ಭೆಯ ವನವು ಉಂಟಾಯಿತು. ॥೪೭॥

ಈ ವನವು ಗೌರಿಯ ಅಂಶವನ್ನು ಹೊಂದಿರುವುದರಿಂದ ಶಿವನ ಈ ವೀರ್ಯವನ್ನು ಹೊರಬಲ್ಲದು! ಆದ್ದರಿಂದ ನೀನು ಸ್ವಲ್ಪವೂ ಸಂದೇಹ ಪಡದೇ ಈ ವನದಲ್ಲಿ ಇದನ್ನು ಬಿಡು. ॥೪೮॥

ಬ್ರಹ್ಮನ ಈ ಮಾತನ್ನು ಕೇಳಿ ಗಂಗೆಯು ಆ ವೀರ್ಯವನ್ನು ದರ್ಭೆಯ ವನದಲ್ಲಿ ಬಿಟ್ಟಳು. ಆ ವೀರ್ಯವನ್ನು ಹೊಂದಿ ಶೀಘ್ರದಲ್ಲಿಯೇ ಆ ದರ್ಭೆಯ ವನವು ದೊಡ್ಡದಾಗಿ ಬೆಳೆಯಿತು! ॥೪೯॥

ಅಥ ಕಾಲೇನ ತದ್ವೀರ್ಯಂ ಕುಮಾರಾತ್ಮಕ ಮುತ್ತಮಂ ।
ತಮುಪಶ್ಯ ದ್ವಿಧಿಃ ಪೂರ್ವಂ ತತೋಽನ್ಯೇಽಪಿ ಸಮಾಯಯುಃ ॥೫೦॥

ದದೃಶುಸ್ತತ್ರ ತೇ ಸರ್ವೇ ತಂ ಕುಮಾರಂ ಮಹಾದ್ಭುತಂ ।
ಸ್ವರ್ಣಾಭಂ ಕೋಟಿಸೂರ್ಯಾಣಾಂ ತೇಜಸಾಂ ಪರಿಭಾವಕಂ ॥೫೧॥

ವಿಶಾಲನೇತ್ರಂ ವಿಪುಲದೀರ್ಘವಕ್ಷಃ ಕರಾಂಬುಜಂ ।
ಕೋಟಿಕಂದರ್ಪಲಾವಣ್ಯ ಸಮಾಕ್ಷೇಪಾತಿ ಸುಂದರಂ ॥೫೨॥

ದೃಷ್ಟ್ವಾ ವೈಶ್ವಾನರಃ ಪ್ರಾಹ ಮತ್ಪುತ್ರ ಇತಿ ಭಾರ್ಗವ ।
ಅಥ ಪ್ರೋಕ್ತಂ ಗಂಯಾಽಪಿ ಮಮಾಯಂ ತನುಜಸ್ತ್ವಿತಿ ॥೫೩॥

ಶಿವಃ ಪರ್ವತಜಾಯುಕ್ತ ಸ್ತಮುಪಶ್ಯತ್ಕುಮಾರಕಂ ।
ಮತ್ವಾಽತ್ಮಜಂ ಸುಸಂತುಷ್ಟೌ ಪಾರ್ವತೀ ಪರಮೇಶ್ವರೌ ॥೫೪॥

---

ಅನಂತರವಲ್ಲಿ ಸ್ವಲ್ಪ ಕಾಲವಾದ ಮೇಲೆ ಆ ವೀರ್ಯವು ಶ್ರೇಷ್ಠವಾದ ಕುಮಾರನ ಸ್ವರೂಪವನ್ನು ಹೊಂದಿತು. ಬ್ರಹ್ಮನು ಮೊತ್ತಮೊದಲು ಅವನನ್ನು ನೋಡಿದನು. ಇತರರೂ ಕೂಡ ಅನಂತರ ಅವನನ್ನು ನೋಡಲು ಅಲ್ಲಿಗೆ ಬಂದರು. ॥೫೦॥

ಅಲ್ಲಿ ಎಲ್ಲರೂ ಅತ್ಯಂತ ಆಶ್ಚರ್ಯಕರನಾದ ಚಿನ್ನದ ಕಾಂತಿಯಂತೆ ಕಾಂತಿಯುಳ್ಳ, ಕೋಟಿ ಸೂರ್ಯರ ತೇಜಸ್ಸನ್ನೂ ತಿರಸ್ಕರಿಸುತ್ತಿದ್ದ ಆ ಕುಮಾರನನ್ನು ನೋಡಿದರು! ॥೫೧॥

ಅವರು ವಿಶಾಲವಾದ ಕಣ್ಣುಗಳುಳ್ಳ, ವಿಸ್ತಾರವಾದ ಮತ್ತು ಅಗಲವಾದ ವಕ್ಷಸ್ಥಳ ಮತ್ತು ಕಮಲದಂತಿರುವ ಕೈಗಳುಳ್ಳ, ಕೋಟಿ ಮನ್ಮಥರ ಸೌಂದರ್ಯವನ್ನೂ ತಿರಸ್ಕರಿಸುವಷ್ಟು ಬಹಳ ಸುಂದರನಾಗಿದ್ದ ಆ ಕುಮಾರನನ್ನು ನೋಡಿದರು. ॥೫೨॥

ಎಲೈ ಪರಶುರಾಮನೇ, ಇಂತಹ ಕುಮಾರನನ್ನು ನೋಡಿ, ಅಗ್ನಿಯು ಇವನು ನನ್ನ ಮಗನೆಂದನು! ಅನಂತರ ಗಂಗೆಯೂ ಕೂಡ ಇವನು ನನ್ನ ಮಗನು, ಎಂದು ಕೂಗಿದಳು! ॥೫೩॥

ಶಿವನು ಪಾರ್ವತಿಯೊಂದಿಗೆ ಬಂದು ಆ ಮಗನನ್ನು ನೋಡಿದನು. ಪಾರ್ವತೀ ಪರಮೇಶ್ವರರು ಇವನನ್ನು ತಮ್ಮ ಮಗನೆಂದು ತಿಳಿದು ಬಹಳ ಸಂತೋಷಗೊಂಡರು. ॥೫೪॥

ಚಕ್ರೇ ವಿಧಾತಾ ನಾಮಾನಿ ಕುಮಾರಸ್ಯಾಽಸ್ಯ ಹೇತುತಃ ।
ಅಗ್ನಿಭೂರೇಷ ಗಾಂಗೇಯಃ ಪಾರ್ವತೀ ನಂದನೋಽಪಿ ಚ ॥೫೫॥

ಸ್ಕಂದ ವೀರ್ಯ ಸಮುದ್ಭೂತೋ ಯಸ್ಮಾತ್ಸ್ಕಂದ ಸ್ತತೋ ಭವೇತ್ ।
ಕೃತ್ವೈವಂ ತಸ್ಯ ನಾಮಾನಿ ಧಾತ್ರೀ ಕಾಽಸ್ಯ ಭವಿಷ್ಯತಿ ॥೫೬॥

ವಿಚಾರ್ಯ ಕೃತ್ತಿಕಾ ಸ್ತತ್ರ ಜಗದ್ಧಾತಾ ನ್ಯಯೋಜಯತ್ ।
ಪುತ್ರಂ ಸ್ವಾನಾಂ ತು ತಂ ಕೃತ್ವಾ ಸ್ತನ್ಯಂ ಪಾಯಯಿತುಂ ತದಾ॥೫೭॥

ಅಹಂ ಪೂರ್ವಿಕಯಾಽನ್ಯೋಽನ್ಯ ಮುಪತಸ್ಥುಃ ಕುಮಾರಕಂ ।
ಕುಮಾರಃ ಕೃತ್ತಿಕಾ ದೃಷ್ಟ್ವಾ ಸ್ಪರ್ಶಮಾನಾಃ ಪರಸ್ಪರಂ ॥೫೮॥

ಯುಗಪತ್ ಷಣ್ಮುಖೋ ಭೂತ್ವಾ ಸ್ತನ್ಯಂ ತಾಸಾಂ ದ್ರುತಂ ಪಪೌ ।
ತೇನ ಷಣ್ಮುಖತಾಂ ಯಾತಃ ಕಾರ್ತಿಕೇಯತ್ವಮಪ್ಯುತ ॥೫೯॥

---

ಬ್ರಹ್ಮನು ಈ ಕುಮಾರನಿಗೆ ಅಗ್ನಿಭೂ, ಗಾಂಗೇಯ, ಪಾರ್ವತೀನಂದನ, ಎಂಬುದಾಗಿ ಹೆಸರನ್ನಿಟ್ಟನು. ॥೫೫॥

ಶಿವನ ಜಾರಿದ ವೀರ್ಯದಿಂದ ಹುಟ್ಟಿದ್ದರಿಂದ ಇವನಿಗೆ ಸ್ಕಂದ ಎಂಬ ಹೆಸರೂ ಉಂಟಾಗುವುದು. ಬ್ರಹ್ಮನು ಹೀಗೆ ಹೆಸರುಗಳನ್ನಿಟ್ಟು ಇವನಿಗೆ ದಾದಿಯು ಯಾರಾಗ ಬಲ್ಲಳು ? ಎಂದು ಯೋಚಿಸಿದನು. ॥೫೬॥

ಹೀಗೆ ಯೋಚಿಸಿ ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮನು ಕೃತ್ತಿಕಾ ಎಂಬ ತಾಯಿಯರನ್ನು ದಾದಿಯರನ್ನಾಗಿ ನಿಯಮಿಸಿದನು. ಅವರು ಇವನನ್ನು ತಮ್ಮ ಮಗುವೇಯೋ ಎಂಬಂತೆ ತಿಳಿದು ಸ್ತನ್ಯಪಾನವನ್ನು ಮಾಡಿಸಲು ಅವರು ನಾನು ಮುಂದು ತಾನು ಮುಂದು ಎಂದು ಬಂದರು ! ॥೫೭॥

ಈ ತಾಯಿಯರು ನಾನು ಮುಂದೆ ತಾನು ಮುಂದೆ ಎಂದು ಪರಸ್ಪರ ಸ್ಪರ್ಧಿಸುತ್ತಾ ಇವನಿಗೆ ಹಾಲು ಕೊಡಲು ಬಂದು ಸ್ಪರ್ಶಿಸಿದರು. ಹೀಗೆ ಅನ್ಯೋನ್ಯ ವಾಗಿ ಸ್ಪರ್ಧಿಸುತ್ತಿರುವ ಕೃತ್ತಿಕೆಯರೆಂಬ ಆರು ಜನ ತಾಯಿಯರನ್ನು ಕುಮಾರನನು ನೋಡಿದನು. ॥೫೮॥

ಆದ್ದರಿಂದ ಕುಮಾರನು ಆರು ಮುಖಗಳುಳ್ಳವನಾಗಿ ಅವರೆಲ್ಲರ ಸ್ತನಗಳಲ್ಲಿ ರುವ ಹಾಲನ್ನೂ ಏಕಕಾಲದಲ್ಲಿ ಕುಡಿದನು. ಆದ್ದರಿಂದ ಇವನು ಷಣ್ಮುಖ ಎಂಬು

ಪೀತ್ವಾ ಸ್ತನ್ಯಂ ಕೃತ್ತಿಕಾನಾಂ ವವೃಧೇ ನಿಮಿಷಾರ್ಧತಃ ।
ಪರ್ವತಃ ಷಟ್ಛೃಂಗ ಇವ ತಂ ದೃಷ್ಟ್ವಾ ದೇವತಾದಯಃ ॥೬೦॥

ವಿಸ್ಮಯಂ ಪರಮಂ ಪ್ರಾಪ್ತಾಸ್ತತಃ ಸರ್ವಾನ್ನಿಶಾಮ್ಯ ಸಃ ।
ಸ್ಕಂದಃ ಪ್ರಾಹ ಬಲಂ ಸರ್ವೇ ಮೇಽರ್ಪಯಂತು ಸ್ವಶಕ್ತಿತಃ ॥೬೧॥

ಅಥ ಬ್ರಹ್ಮಾರ್ಪಯತ್ತಸ್ಮೈ ಸ್ವೀಯಾಮಕ್ಷಸ್ರಜಂ ತಥಾ ।
ಶಿವಃ ಶೂಲಂ ಶಕ್ತಿಮಗ್ನಿಶ್ಚಕ್ರಂ ವಿಷ್ಣುಸ್ತಥಾಂಕುಶಂ ॥೬೨॥

ಮಾರುತೋ ವರುಣಃ ಪಾಶಂ ಯಮೋ ದಂಡಂ ಧನೇಶ್ವರಃ ।
ಗದಾಂ ಸಮುದ್ರೋ ರತ್ನಾನಾಂ ಭೂಷಣಾನಿ ಸಮಂತತಃ ॥೬೩॥

---

ದಾಗಿಯೂ, ಕಾರ್ತಿಕೇಯ ಎಂಬುದಾಗಿಯೂ ಲೋಕ, ಶಾಸ್ತ್ರ, ಇವುಗಳಲ್ಲಿ ಕರೆಯಿಸಿಕೊಂಡನು. ॥೫೯॥

ಇವನು ಕೃತ್ತಿಕೆಯರ ಮೊಲೆಹಾಲನ್ನು ಕುಡಿದು ಒಂದರ್ಧನಿಮಿಷದಲ್ಲಿಯೇ ಆರು ಶಿಖರಗಳುಳ್ಳ ಪರ್ವತದಂತೆ ಉದ್ದವಾಗಿ ಬೆಳೆದನು! ಇವನನ್ನು ನೋಡಿ ದೇವತೆಗಳೇ ಮೊದಲಾದವರು ಬಹಳ ಆಶ್ಚರ್ಯಭರಿತರಾದರು. ॥೬೦॥

ದೇವತೆಗಳೇ ಮೊದಲಾದವರು ಅತ್ಯಂತ ಆಶ್ಚರ್ಯಭರಿತರಾಗಿರಲು ಷಣ್ಮುಖನು ಇವರೆಲ್ಲರ ವಿಷಯವನ್ನೂ ಕೇಳಿ, ಅವರನ್ನು ಕುರಿತು ನಿಮ್ಮ ಶಕ್ತ್ಯನುಸಾರವಾಗಿ ನನಗೆ ಬಲದ ಕಾಣಿಕೆಯನ್ನು ಅರ್ಪಿಸಿರಿ! ಎಂದನು. ॥೬೧॥

ಆನಂತರ ಬ್ರಹ್ಮನು ಅವನಿಗೆ ತನ್ನ ಜಪಮಾಲಿಕೆಯನ್ನೂ, ಶಿವನು ಶೂಲವನ್ನೂ, ಅಗ್ನಿಯು ಶಕ್ತ್ಯಾಯುಧವನ್ನೂ, ವಿಷ್ಣುವು ಚಕ್ರವನ್ನೂ ಮತ್ತು ಅಂಕುಶವನ್ನೂ ಅರ್ಪಿಸಿದರು. ॥೬೨॥

ವಾಯುವು ಗದೆಯನ್ನೂ, ವರುಣನು ಪಾಶಾಯುಧವನ್ನೂ ಯಮನು ದಂಡವನ್ನೂ ಕುಬೇರನು ಗದೆಯನ್ನೂ ಸಮುದ್ರವು ಎಲ್ಲ ಕಡೆಗಳಲ್ಲಿರುವ ರತ್ನಗಳ ಒಡವೆಗಳನ್ನೂ ಅರ್ಪಿಸಿದರು. ॥೬೩॥

ಛತ್ರಂ ತ್ವಷ್ಟಾ ಪಾದುಕೇ ಚ ಚಾಮರೇಽತಿಸುನಿರ್ಮಲೇ ।
ದದೌ ಪೂಜಾಂ ಸರ್ವದೇವಾಶ್ಚಕ್ರುಸ್ತಸ್ಯ ನತಾಸ್ತದಾ ॥೬೪॥

ಶಕ್ರಂ ದೃಷ್ಟ್ವಾ ಸ್ತಬ್ಧಧಿಯಮನಮ್ರಂ ಮನ್ಯುನಾವೃತಃ ।
ಸ್ಕಂಧಃ ಸಮಾಹ್ವಯದ್ಯೋದ್ಧುಂ ಧೃಷ್ಟಂ ದೃಷ್ಟ್ವಾ ಪುರಂದರಂ ॥೬೫॥

ಅಥಾಽಭವನ್ಮಹಾಯುದ್ಧಂ ಸ್ಕಂದವಾಸವಯೋಸ್ತದಾ ।
ಶಿವಪಾರ್ಷದ ಸಂಯುಕ್ತಃ ಸ್ಕಂದಃ ಶಕ್ರಃ ಸುರೈರ್ವೃತಃ ॥೬೬॥

ಮಹಾಸತ್ತ್ವಂ ತಮಾಲಕ್ಷ್ಯ ಯುದ್ಧೇ ತೇನ ಪ್ರಪೀಡಿತಃ ।
ಶಕ್ರಃ ಪಲಾಯನಪರಃ ಕ್ರೌಂಚಾಽಭ್ಯಂತರ ಮಾಯಯೌ ॥೬೭॥

ದೃಷ್ಟ್ವಾ ಪುರಃ ಸ್ಥಿತಂ ಕ್ರೌಂಚಗಿರಿಂ ಪರಮಕೋಪನಃ ।
ಶರೈರ್ವಿದಾರಯಾಮಾಸ ಪರ್ವತಂ ಸರ್ವತೋ ದಿಶಂ ॥೬೮॥

---

ದೇವಶಿಲ್ಪಿಯಾದ ವಿಶ್ವಕರ್ಮನು ಛತ್ರಿಯನ್ನೂ ಎರಡು ಸೊಗಸಾದ ಪಾದುಕೆಗಳನ್ನೂ, ಬಹು ಶುಭ್ರವಾದ ಚಾಮರಗಳನ್ನೂ ಕೊಟ್ಟನು. ಆಗ ಎಲ್ಲಾ ದೇವತೆಗಳೂ ಷಣ್ಮುಖನಿಗೆ ನಮಸ್ಕಾರವನ್ನು ಮಾಡಿ ಪೂಜೆಮಾಡಿದರು. ॥೬೪॥

ಇಂದ್ರನು ಮಾತ್ರ ಅಚಲವಾದ ಮನಸ್ಸುಳ್ಳವನಾಗಿ ತನಗೆ ಬಾಗಿ ನಮಸ್ಕರಿಸದೇ ಇದ್ದುದನ್ನು ಕಂಡು ಷಣ್ಮುಖನು ಕೋಪದಿಂದ ಕೂಡಿದವನಾಗಿ ಮದಿಸಿರುವ ಅವನನ್ನು ತನ್ನೊಡನೆ ಯುದ್ಧಮಾಡಲು ಕರೆದನು. ॥೬೫॥

ಅನಂತರದಲ್ಲಿ ಷಣ್ಮುಖ ಮತ್ತು ದೇವೇಂದ್ರರಿಗೆ ದೊಡ್ಡ ಯುದ್ಧವು ಸಂಭವಿಸಿತು. ಆಗ ಷಣ್ಮುಖನು ಶಿವನ ಪರಿವಾರದೊಂದಿಗೂ, ಇಂದ್ರನು ದೇವತೆಗಳೊಂದಿಗೂ ಕೂಡಿ ಯುದ್ಧವನ್ನು ಮಾಡಿದರು. ॥೬೬॥

ಇಂದ್ರನು, ಷಣ್ಮುಖನು ಬಹಳ ಬಲಿಷ್ಠನಾಗಿರುವುದನ್ನು ಕಂಡು, ಯುದ್ಧದಲ್ಲಿ ಅವನಿಂದ ಬಲವಾಗಿ ಹೊಡೆಯಲ್ಪಟ್ಟವನಾಗಿ ಪಲಾಯನ ಮಾಡಿ ಕ್ರೌಂಚವೆಂಬ ಪರ್ವತದ ಒಳಗಡೆಯಲ್ಲಿ ಸೇರಿಕೊಂಡನು. ॥೬೭॥

ಕ್ರೌಂಚಪರ್ವತವು ಎದುರಿಗೆ ಇರುವುದನ್ನು ಕಂಡು ಷಣ್ಮುಖನು ಬಹಳ ಕೋಪಗೊಂಡವನಾಗಿ ಆ ಪರ್ವತವನ್ನು ಎಲ್ಲಾ ಕಡೆಯಿಂದಲೂ ತನ್ನ ಬಾಣಗಳಿಂದ ಛಿದ್ರಿಸುವಂತೆ ಹೊಡೆದನು. ॥೬೮॥

ಅಥ ಸ್ಕಂದಶರೈರ್ನುನ್ನಃ ಕ್ರೌಂಚಃ ಶಿಥಿಲಬಂಧನಃ ।
ಭಗ್ನಾಸಂಖ್ಯಾತ ಶಿಖರೋ ಬ್ರಹ್ಮಾಣಂ ಶರಣಂ ಯಯೌ ॥೬೯॥

ಬ್ರಹ್ಮಣಾ ಸಂಸ್ತುತ್ಯ ತದಾ ಶಮಿತಃ ಶಂಕರಾತ್ಮಜಃ ।
ಪ್ರಪನ್ನಮಿಂದ್ರಂ ಸಂಗಮ್ಯ ಹೃತಾಂ ತ್ರಿಭುವನಶ್ರಿಯಂ ॥೭೦॥

ಪ್ರತ್ಯರ್ಪಯತ್ತೇನ ವೃತಃ ಸೇ(ಸೈ)ನಾಪತ್ಯಮವಿಂದತ ।
ದೇವಸೇನಾಪತಿಃ ಭೂತ್ವಾ ಶಕ್ರಾದ್ಯೈರಭಿ ಸಂವೃತಃ ॥೭೧॥

ಯುಯೋಧ ತಾರಕಾಖ್ಯೇನ ಶೂರಪದ್ಮಾಸುರೇಣ ಚ ।
ಅಷ್ಟಾದಶಾಂಡಾಧಿಪತ್ಯ ಲಕ್ಷ್ಮ್ಯಾ ಪ್ರಖ್ಯಾತ ಕೀರ್ತಿನಾ ॥೭೨॥

---

ಅನಂತರದಲ್ಲಿ ಷಣ್ಮುಖನ ಬಾಣಗಳಿಂದ ಒಡೆಯಲ್ಪಟ್ಟ ಕ್ರೌಂಚಪರ್ವತವು ಸಡಿಲಿಸಿದ ಕಟ್ಟುಳ್ಳದ್ದಾಗಿ ಮುರಿದು ಬಿದ್ದ ಲೆಕ್ಕವಿಲ್ಲದಷ್ಟು ತುದಿಗಳು ಉಳ್ಳದ್ದಾಗಲು, ಆಗ ಅದು ಬ್ರಹ್ಮನನ್ನು ಮರೆಹೊಕ್ಕಿತು. ॥೬೯॥

ಆಗ ಬ್ರಹ್ಮನು ಸ್ತೋತ್ರಮಾಡಿ ಶಿವನ ಮಗನಾದ ಷಣ್ಮುಖನ ಕೋಪವು ಶಮನವಾಗುವಂತೆ ಮಾಡಿದನು. ತರುವಾಯ ಷಣ್ಮುಖನು ಶರಣಾಗತನಾದ ಇಂದ್ರನಿಗೆ ತಾನು ಅಪಹರಿಸಿದ್ದ ಮೂರು ಲೋಕದ ಸಂಪತ್ತನ್ನೂ ಹಿಂದಕ್ಕೆ ಕೊಟ್ಟು ಅವನ ಜೊತೆಗೆ ಸೇರಿದನು. ॥೭೦॥

ಹೀಗೆ ಅವನ ರಾಜ್ಯವನ್ನು ಹಿಂದಕ್ಕೆ ಕೊಟ್ಟು ಅವನೊಂದಿಗೆ ಸೇರಲು, ಇಂದ್ರನು ಷಣ್ಮುಖನನ್ನು ತನ್ನ ಸೇನಾಪತಿಯನ್ನಾಗಿ ಮಾಡಿಕೊಂಡನು. ಷಣ್ಮುಖನು ಈ ರೀತಿಯಲ್ಲಿ ದೇವಸೇನಾನಾಯಕನಾಗಿ ಇಂದ್ರನೇ ಮೊದಲಾದವರೊಂದಿಗೆ ಅವರಿಂದ ಪ್ರಾರ್ಥಿತನಾಗಿ ಸಹಕರಿಸಲು ಸೇರಿದನು. ॥೭೧॥

ಅನಂತರ ಷಣ್ಮುಖನು ಹದಿನೆಂಟು ಬ್ರಹ್ಮಾಂಡಗಳ ರಾಜ್ಯಲಕ್ಷ್ಮಿಯಿಂದ ಕೂಡಿ ಪ್ರಸಿದ್ಧವಾದ ಕೀರ್ತಿಯನ್ನು ಪಡೆದಿದ್ದ ತಾರಕ, ಶೂರಪದ್ಮ, ಎಂಬ ರಾಕ್ಷಸರೊಂದಿಗೆ ಯುದ್ಧಮಾಡಿದನು. ॥೭೨॥

ಅನೇಕಾಸುರ ಸಂಘಾನಾಂ ಕೋಟಿಕೋಟಿಮಹಾರ್ಬುದೈಃ ।
ಯುತೇನ ಯುದ್ಧ್ವಾ ಸುಚಿರಂ ಪ್ರದರ್ಶ್ಯಾತ್ಮ ಪರಾಕ್ರಮಂ ॥೭೩॥

ಜಘಾನ ಸಮರೇಸ್ಕಂದಃ ಶೂರಪದ್ಮಂ ಚ ತಾರಕಂ ।
ತತ್ತ್ರದಂಡೇಷು ಶಕ್ರಾದೀಂ ಸ್ತ್ರೈಲೋಕ್ಯೈಶ್ವರ್ಯಸಂಯುತಾನ್॥೭೪॥

ಕೃತ್ವಾಸುರಾಣಾಂ ನಾಶೇನ ತ್ರೈಲೋಕ್ಯಜ್ವರನಾಶನಃ ।
ಲೋಕಾನಾನಂದಿತಾಂ ಶ್ಚಕ್ರೇ ಸ್ಕಂದಃ ಸ್ವಾಮೀ ಷಡಾನನಃ ॥೭೫॥

ಏವಂ ಶ್ರುತ್ವಾವಧೂತೇಶಮುಖಾತ್ಸ್ಕಂದ ಕಥಾಂ ಶುಭಾಂ ।
ಪಪ್ರಚ್ಛ ಭಾರ್ಗವೋ ರಾಮಃ ಪುನಃ ಕುತುಕಿತಾಂತರಃ ॥೭೬॥

ಭಗವನ್ನದ್ಭುತಮಿದಂ ಶ್ರುತಮೇತತ್ಕಥಾಮೃತಂ ।
ಸಂದೇಹೋ ಮೇ ಮಹಾನ್ಜಾತಃ ಪೃಚ್ಛಾಮಿ ಬ್ರೂಹಿ ತನ್ಮಮ ॥೭೭॥

---

ಕೋಟ್ಯಂತರ ಅಥವಾ ಅತ್ಯಂತ ಹೆಚ್ಚಾದ ಮಹಾರ್ಬುದಸಂಖ್ಯೆಯಲ್ಲಿದ್ದ ರಾಕ್ಷಸರ ಸಮೂಹದಿಂದ ಕೂಡಿದ ಆ ಇಬ್ಬರು ರಾಕ್ಷಸರೊಡನೆ ಷಣ್ಮುಖನು ಯುದ್ಧ ಮಾಡಿ ತನ್ನ ಅಸಾಧಾರಣವಾದ ಶಕ್ತಿಯನ್ನು ತೋರಿಸಿದನು. ॥೭೩॥

ಷಣ್ಮುಖನು ಯುದ್ಧದಲ್ಲಿ ಶೂರ ಪದ್ಮ ಮತ್ತು ತಾರಕ ಎಂಬಿಬ್ಬರು ರಾಕ್ಷಸರನ್ನೂ ಕೊಂದನು. ಮತ್ತು ಅವನು ಆ ಅಸುರರು ಆಳುತ್ತಿದ್ದ ಬ್ರಹ್ಮಾಂಡಗಳನ್ನೂ ಇಂದ್ರನೇ ಮೊದಲಾದವರಿಗೆ ಹಂಚಿಕೊಟ್ಟು ಅವರನ್ನು ಮೂರು ಲೋಕದ ಐಶ್ವರ್ಯದಿಂದ ಕೂಡಿದವರನ್ನಾಗಿ ಮಾಡಿದನು. ॥೭೪॥

ಈ ರೀತಿಯಲ್ಲಿ ರಾಜ್ಯಗಳನ್ನು ಅವರಿಗೆ ಕೊಟ್ಟು ಷಣ್ಮುಖನೂ, ಸ್ವಾಮಿಯೂ ಆದ ಸ್ಕಂದನು ಮೂರು ಲೋಕಗಳ ಸಂಕಟಗಳನ್ನೂ ನಿವಾರಣೆಮಾಡಿ ಲೋಕಕ್ಕೆಲ್ಲಕ್ಕೂ ಆನಂದವನ್ನುಂಟುಮಾಡಿದನು. ॥೭೫॥

ಅವಧೂತರಲ್ಲಿ ಶ್ರೇಷ್ಠನಾದ ದತ್ತಾತ್ರೇಯನ ಮುಖದಿಂದ ಮಂಗಳಕರವಾದ ಷಣ್ಮುಖನ ಕಥೆಯನ್ನು ಕೇಳಿ, ಪುನಃ ಮನಸ್ಸಿನಲ್ಲಿ ಕುತೂಹಲವುಂಟಾಗಲು, ಪರಶುರಾಮನು ದತ್ತಾತ್ರೇಯ ಗುರುವನ್ನು ಈ ರೀತಿಯಲ್ಲಿ ಪ್ರಶ್ನೆಮಾಡಿದನು. ॥೭೬॥

ಓ ಪೂಜ್ಯರೇ, ತಮ್ಮಿಂದ ನಾನು ಅತ್ಯಾಶ್ಚರ್ಯಕರವಾದ ಅಮೃತಕ್ಕೆ ಸಮಾನ

ಕಥಮೇಷ ಮಹಾಭಾಗಃ ಸ್ಕಂದಸ್ತಮಸುರೇಶ್ವರಂ ।
ಜಿತವಾನ್ ಶಿವವಿಷ್ಣ್ವಿಂದ್ರ ದುರ್ಜೇಯಮಪಿ ಸಂಯುಗೇ ॥೨೮॥

ಏತನ್ಮೇ ವದ ಸಂಪ್ರಶ್ನಂ ಶ್ರೋತುಮುತ್ಕಂಠಿತೋಽಸ್ಮ್ಯಹಂ ।
ಅಥ ಪ್ರಾಹ ದತ್ತಗುರುರ್ಭಾರ್ಗವಂ ಪ್ರತಿ ಪ್ರೀತಿತಃ ॥೨೯॥

ಶೃಣು ಭಾರ್ಗವ ಯತ್ಪೃಷ್ಟಂ ಗುಹ್ಯಮೇತತ್ಪುರಾತನಂ ।
ಸನತ್ಕುಮಾರೋ ಭಗವಾನ್ ಸರ್ವಸತ್ತ್ವಾತ್ಮಕಃ ಶುಭಃ ॥೩೦॥

ಪರಾಽವರಜ್ಞಃ ಸರ್ವಸ್ಯ ಸ್ವಾಽತ್ಮಭೂತಃ ಶಮಾಽಶ್ರಯಃ ।
ಪರ್ವತೇ ಋಷಭಾಽಖ್ಯಾನೇ ನಿ(ನ್ಯ)ವಸತ್ಸ್ವಾಽತ್ಮಸಂಪದಃ ॥೩೧॥

---

ವಾದ ಈ ಕಥೆಯನ್ನು ಕೇಳಿದೆನು. ಆದರೂ ನನಗೊಂದು ದೊಡ್ಡ ಸಂದೇಹವುಂಟಾಗಿದೆ. ಅದನ್ನು ಕೇಳುವೆನು. ದಯವಿಟ್ಟು ಸಮಾಧಾನವನ್ನು ಹೇಳಿರಿ. ॥೨೭॥

ಮಹಾಭಾಗ್ಯವಂತನಾದ ಈ ಷಣ್ಮುಖನು ಶಿವ, ವಿಷ್ಣು ಮತ್ತು ಇಂದ್ರ ಇವರಿಂದಲೂ ಯುದ್ಧದಲ್ಲಿ ಜಯಿಸಲಾಗದಿದ್ದ ರಾಕ್ಷಸರಾಜನನ್ನು ಹೇಗೆ ಕೊಲ್ಲಲು ಸಮರ್ಥನಾದನು. ॥೨೮॥

ದಯೆಯಿಟ್ಟು ಈ ಪ್ರಶ್ನೆಗೆ ಸಮಾಧಾನವನ್ನು ಹೇಳಿರಿ. ನನಗೆ ಇದನ್ನು ಕೇಳಲು ಬಹಳ ಕುತೂಹಲವುಂಟಾಗಿದೆ. ಎಂದು ಕೇಳಲು, ಆಗ ಆ ದತ್ತಾತ್ರೇಯ ಗುರುವು ಪರಶುರಾಮನ ಮೇಲಿನ ಪ್ರೀತಿಯಿಂದ ಈ ವಿಷಯವನ್ನು ವಿವರದೊಡನೆ ತಿಳಿಯಹೇಳಲು ಪ್ರಾರಂಭಿಸಿದನು. ॥೨೯॥

ಎಲೈ ಪರಶುರಾಮನೇ, ನೀನು ಕೇಳಿದ ವಿಷಯವು ಬಹಳ ಹಿಂದಿನದೂ ಮತ್ತು ರಹಸ್ಯವೂ ಆಗಿದೆ. ಆದರೂ ಹೇಳುವೆನು. ಕೇಳು. ಪೂಜ್ಯನಾದ ಸನತ್ಕುಮಾರನು ಪರಮಸಾತ್ವಿಕನೂ, ಮತ್ತು ಮಂಗಳಕರನೂ ಆಗಿದ್ದನು. ॥೩೦॥

ಎಲ್ಲಾ ವಸ್ತುಗಳ ಭೂತಭವಿಷ್ಯದ್ವಿಷಯಗಳನ್ನೂ ತಿಳಿದ ಸರ್ವಾತ್ಮನೂ, ಆತ್ಮಜ್ಞಾನಿಯೂ, ಶಾಂತಿಗುಣವುಳ್ಳವನೂ, ಆತ್ಮಜ್ಞಾನದಿಂದ ಸಂತೋಷಪಡುವವನೂ ಆದ ಈ ಋಷಿಯು "ಋಷಭ" ಎಂಬ ಪರ್ವತದಲ್ಲಿ ವಾಸಮಾಡುತ್ತಿದ್ದನು. ॥೩೧॥

ಅಥ ತತ್ರ ಲೋಕಧಾತಾ ಪ್ರಾಪ್ತೋ ದ್ರಷ್ಟುಂ ಸ್ವಮಾತ್ಮಜಂ ।
ದೃಷ್ಟ್ವಾ ಪ್ರಾಪ್ತಂ ಸ್ವಜನಕಂ ಪ್ರತ್ಯುತ್ಥಾಯಾಸನಾದಿಭಿಃ ॥೮೨॥

ಸಂಪೂಜ್ಯ ಪ್ರಹ್ವಭಾವೇನ ಪ್ರಾಹ ಕಿಂಚಿನ್ಮನೋಗತಂ ।
ಬ್ರಹ್ಮನ್ ಮೇ ಹೃದಯೇ ಕಿಂಚಿತ್ಪ್ರಷ್ಟುಂ ವಿಪರಿವರ್ತತೇ ॥೮೩॥

ಪೃಚ್ಛಾಮ್ಯನುಜ್ಞಾಂ ತತ್ಪ್ರಷ್ಟು ಮಿತ್ಯುಕ್ತ್ವಾ ತೇನ ಪ್ರೇರಿತಃ ।
ಪ್ರಾಹ ಬ್ರಹ್ಮನ್ ಮಯಾ ಪೂರ್ವರಾತ್ರೌ ದೃಷ್ಟಂ ಮಹಾದ್ಭುತಂ ॥೮೪॥

ಯುದ್ಧಮಾಸೀನ್ಮಹಾಭೀಮ ಮಸುರಾಣಾಂ ತಥಾಮರೈಃ ।
ತತ್ರ ಸರ್ವೇ ಮಹಾಯುದ್ಧೇ ನಿಹತಾ ಬಲವತ್ತರಾಃ ॥೮೫॥

---

ಹೀಗಿರಲು ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನು ತನ್ನ ಮಗನಾದ ಸನತ್ಕುಮಾರನನ್ನು ನೋಡಲು ಅಲ್ಲಿಗೆ ಬಂದನು. ತಮ್ಮ ತಂದೆಯು ಬಂದದ್ದನ್ನು ಕಂಡು ಖುಷಿಯು ಎದ್ದುನಿಂತು ಆತನಿಗೆ ಪೀಠವೇ ಮೊದಲಾದುವುಗಳನ್ನು ಕೊಟ್ಟನು. ॥೮೨॥

ಸನತ್ಕುಮಾರನು ವಿನಯದಿಂದ ಬ್ರಹ್ಮನಿಗೆ ಪೂಜೆಯನ್ನು ಮಾಡಿ ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನು ಈ ರೀತಿಯಲ್ಲಿ ಹೇಳಿದನು. ಓ ಬ್ರಹ್ಮನೇ, ನನಗೆ ಒಂದು ಪ್ರಶ್ನೆಯನ್ನು ಕೇಳಬೇಕೆನಿಸುತ್ತದೆ. ॥೮೩॥

ಅದನ್ನು ಕೇಳಲು ತಮ್ಮ ಅಪ್ಪಣೆಯನ್ನು ಬೇಡುತ್ತೇನೆ. ಎಂದು ಸನತ್ಕುಮಾರನು ಹೇಳಿ, ಬ್ರಹ್ಮನ ಅಪ್ಪಣೆಯನ್ನು ಪಡೆದು ಆವನನ್ನು ಕುರಿತು, ಓ ತಂದೆಯೇ, ನೆನ್ನೆಯ ರಾತ್ರಿಯಲ್ಲಿ ನಾನೊಂದು ಅತ್ಯಾಶ್ಚರ್ಯಕರವಾದ ಸಂಗತಿಯನ್ನು ಕಂಡೆನು ಎಂದನು. ॥೮೪॥

ಅದೇನೆಂದರೆ ರಾಕ್ಷಸರಿಗೂ ಮತ್ತು ದೇವತೆಗಳಿಗೂ ಬಹಳ ಭಯಂಕರವಾದ ಯುದ್ಧವು ನಡೆಯಿತು. ಆಗ ನಾನು ಬಲಿಷ್ಠರಾದ ರಾಕ್ಷಸರೆಲ್ಲರನ್ನೂ ಯುದ್ಧದಲ್ಲಿ ಕೊಂದೆನು. ॥೮೫॥

ಅಸುರಾಸ್ತತ್ಕಥಮಿದಂ ನಿರ್ಹೇತುಕಮಭೂದ್ವದ ।
ಸನತ್ಕುಮಾರೇಣ ಪೃಷ್ಟಃ ಪ್ರಾಹ ಬ್ರಹ್ಮಾ ಪ್ರಜಾಪತಿಃ ॥೮೬॥

ಶೃಣು ಪುತ್ರ ಪುರಾ ವಿಪ್ರಸ್ತ್ವಂ ಜನ್ಮಾಂತರ ಗೋಚರಃ ।
ಬ್ರಹ್ಮವಿದ್ಯಾಽಭ್ಯಾಸಪರಃ ಶ್ರುತವಾನಸುರೈಃ ಸಹ ॥೮೭॥

ದೇವಾನಾಂ ಯುದ್ಧವೃತ್ತಾಂತಂ ತತ್ರ ಸಂಕಲ್ಪಿತಂ ತ್ವಯಾ ।
ಅಹಂ ಜಿತ್ವಾಽಸುರಾನ್ಸರ್ವಾನ್ ದೇವತಾಭ್ಯಃ ಶ್ರಿಯಂ ಪುನಃ ॥೮೮॥

ದಾಸ್ಯಾಮೀತಿ ತತೋ ವೈಶ್ವಾನರೋಪಾಸನ ತತ್ಪರಃ ।
ಕಾಲಧರ್ಮ ಮನುಪ್ರಾಪ್ತಸ್ತೇನ ಬ್ರಹ್ಮತ್ವಮೇವ ತೇ ॥೮೯॥

ಭವಿತವ್ಯಂ ತಥಾಽಪಿ ತ್ವಂ ಖಂಡೋಪಾಸನ ಕಾರಣಾತ್ ।
ಮತ್ಪುತ್ರತ್ವ ಮನುಪ್ರಾಪ್ತಃ ಸಾ ಜನ್ಮಾಂತರವಾಸನಾ ॥೯೦॥

---

ಈ ರೀತಿಯಲ್ಲಿ ನಾನು ರಾಕ್ಷಸರನ್ನು ಕೊಲ್ಲಲು ಕಾರಣವಿಲ್ಲದೇ ಹೇಗೆ ಸಮರ್ಥನಾದೆನು ? ಎಂಬ ವಿಷಯವನ್ನು ದಯವಿಟ್ಟು ತಿಳಿಸಿ. ಸನತ್ಕುಮಾರನು ಈ ರೀತಿಯಲ್ಲಿ ಪ್ರಶ್ನಿಸಲಾಗಿ ಪ್ರಜಾಪತಿಯಾದ ಬ್ರಹ್ಮನು ಹೀಗೆಂದನು. ॥೮೬॥

ಎಲೈ ಮಗನೇ, ಕೇಳು. ನೀನು ಹಿಂದೆ ಜನ್ಮಾಂತರದಲ್ಲಿ ಬ್ರಾಹ್ಮಣನಾಗಿದ್ದು ಬ್ರಹ್ಮವಿದ್ಯೆಯನ್ನು ಕಲಿಯುವುದರಲ್ಲಿ ನಿರತನಾಗಿದ್ದು ರಾಕ್ಷಸರಿಗೂ ಮತ್ತು ದೇವತೆಗಳಿಗೂ ನಡೆಯುವ ಯುದ್ಧವಿಚಾರವನ್ನು ಕೇಳಿದೆ. ॥೮೭॥

ದೇವಾಸುರರ ಯುದ್ಧದ ಸಮಾಚಾರವನ್ನು ಕೇಳಿದ ನೀನು, ನಾನು ರಾಕ್ಷಸರೆಲ್ಲರನ್ನೂ ಗೆದ್ದು ದೇವತೆಗಳಿಗೆ ಪುನಃ ಅವರ ಐಶ್ವರ್ಯಗಳನ್ನು ಹಿಂದಕ್ಕೆ ಕೊಡುವೆನು !, ಎಂದು ಪ್ರತಿಜ್ಞೆಮಾಡಿದೆ! ॥೮೮॥

ಹೀಗೆ ಕೊಡುವೆನು ಎಂದು ಸಂಕಲ್ಪಿಸಿದ ನೀನು ಅನಂತರದಲ್ಲಿ ಅದಕ್ಕಾಗಿ ಅಗ್ನಿದೇವನ ವೈಶ್ವಾನರನ ಉಪಾಸನೆಯಲ್ಲಿ ಆಸಕ್ತನಾಗಿ ಮತ್ತು ಹಾಗೆಯೇ ಮರಣವನ್ನು ಹೊಂದಿದೆ. ಆದ್ದರಿಂದ ನಿನಗೆ ಬ್ರಾಹ್ಮಣ್ಯವೇನೋ ಪುನಃ ಪ್ರಾಪ್ತವಾಯಿತು. ॥೮೯॥

ಆದಾಗ್ಯೂ ನಿನ್ನ ಉಪಾಸನೆಯು ಮಧ್ಯದಲ್ಲಿಯೇ ನಿಂತಿದ್ದುದರಿಂದ ನೀನು ನನ್ನ ಮಗನಾಗಿ ಹುಟ್ಟಿದೆ. ಆ ಜನ್ಮಾಂತರದ ಸಂಸ್ಕಾರವೇ ನಿನಗೆ ಈ ರೀತಿಯಲ್ಲಿ ಈಗಲೂ ಕಾಣಿಸಿತು. ॥೯೦॥

ಸ್ವಪ್ನಾತ್ಮನಾ ತ್ವಯಾ ದೃಷ್ಟಾ ಭವಿಷ್ಯತಿ ಚ ತತ್ತಥಾ ।
ಶ್ರುತ್ವೇತ್ಥಂ ಬ್ರಹ್ಮವಚನಂ ಪುನಃ ಸಪ್ರಚ್ಛ ಸಾದರಾತ್ ॥೯೧॥

ಭಗವನ್ ತತ್ಕಥಂ ಭಾವಿ ಜನ್ಮ ಮೇ ನಾಸ್ತಿ ಸರ್ವಥಾ ।
ಪರಾವರಜ್ಞಸ್ಯ ಕುತೋ ಭವೇತ್ತದ್ಬ್ರೂಹಿ ಪೃಚ್ಛತೇ ॥೯೨॥

ಅಥ ಬ್ರಹ್ಮಾ ಪ್ರಾಹ ಪುತ್ರಂ ಶೃಣ್ವಿತ್ಯಾಮಂತ್ರ್ಯ ತಂ ಪ್ರತಿ ।
ಸ್ವೇಚ್ಛಯೈವ ಹಿ ತೇ ಜನ್ಮದ್ವಾರಾ ಸರ್ವಮಿದಂ ಭವೇತ್ ॥೯೩॥

ಇತ್ಯುಕ್ತ್ವಾ ಪೂಜಿತಸ್ತೇನ ಯಯೌ ಸ್ವಂ ಭವನಂ ವಿಧಿಃ ।
ಅಥ ಕಾಲಾಂತರೇ ಶಂಭುರ್ವೃಷಾರೂಢಃ ಶಿವಾಯುತಃ ॥೯೪॥

---

ಆ ಸಂಸ್ಕಾರವೇ ನಿನಗೆ ಈ ರೀತಿಯಲ್ಲಿ ಈಗಲೂ ಸ್ವಪ್ನದಲ್ಲಿ ಕಾಣಿಸಿತು. ಅದಲ್ಲದೇ ಮತ್ತೆ ಬೇರೆಯಲ್ಲ. ಬ್ರಹ್ಮನ ಈ ಮಾತನ್ನು ಕೇಳಿ ಸನತ್ಕುಮಾರನು ಅವನನ್ನು ಪುನಃ ಭಕ್ತಿಪೂರ್ವಕವಾಗಿ ಈ ರೀತಿಯಲ್ಲಿ ಕೇಳಿದನು. ॥೯೧॥

ಓ ಪೂಜ್ಯರೇ, ಮುಂದೆ ಇದು ಹೇಗಾದೀತು ? ಪರಾಪರತತ್ವದ ಸಾಕ್ಷಾತ್ಕಾರ ದಿಂದ ಜೀವನ್ಮುಕ್ತನಾಗಿರುವ ನನಗೆ ಸರ್ವವಿಧದಲ್ಲೂ ಮುಂದಕ್ಕೆ ಜನ್ಮವೇ ಇಲ್ಲ ವಲ್ಲವೇ ? ಪೂರ್ವಾಪರಗಳನ್ನು ತಿಳಿದಿರುವ ತಮಗೆ ತಿಳಿಯದ ವಿಷಯವು ಯಾವುದೂ ಇರುವುದಿಲ್ಲ. ಆದ್ದರಿಂದ ಕೇಳುತ್ತಿರುವ ಈ ನನ್ನ ಪ್ರಶ್ನೆಗೆ ದಯವಿಟ್ಟು ಸಮಾಧಾನ ವನ್ನು ಹೇಳಿ. ॥೯೨॥

ಅನಂತರದಲ್ಲಿ ಬ್ರಹ್ಮನು ಮಗನನ್ನು ಕರೆದು ಹೇಳುವೆನು. ಕೇಳು. ಎಂದು ಹೇಳಲು ಉಪಕ್ರಮಿಸಿದನು. ನೀನು ಕರ್ಮಾಧೀನವಾಗಿ ಇತರರ ಹಾಗೆ ಅಲ್ಲದೆ, ಸ್ವೇಚ್ಛೆಯಿಂದಲೇ ಜನ್ಮವನ್ನು ತೆಗೆದುಕೊಳ್ಳುವವನಾದ್ದರಿಂದ ಈ ವಿಚಾರಗಳೆಲ್ಲವೂ ನಡೆಯುತ್ತದೆ. ॥೯೩॥

ಹೀಗೆ ಹೇಳಿ ಬ್ರಹ್ಮನು ಅವನ ಪೂಜೆಯನ್ನು ಸ್ವೀಕರಿಸಿ ತನ್ನ ಮನೆಗೆ ಹಿಂತಿರುಗಿದನು. ಹೀಗಿರಲು ಬೇರೊಂದು ಕಾಲದಲ್ಲಿ ಗೂಳಿಯ ಮೇಲೇರಿದ ಶಿವನು ಪಾರ್ವತಿಯ ಜೊತೆಯಲ್ಲಿ ಅಲ್ಲಿಗೆ ಬಂದನು. ॥೯೪॥

ಪಶ್ಯನ್ ಜಗದ್ವಿಲಾಸಂ ಸಂಪ್ರಾಪ್ತಸ್ತಸ್ಯಾಽಽಶ್ರಮಂ ಪ್ರತಿ ।
ದದರ್ಶ ತತ್ರ ಗಿರಿಜಾ ನಿಷಣ್ಣಂ ವಿಧಿನಂದನಂ ॥೯೫॥

ಪ್ರಸನ್ನವದನಂ ಶಾಂತಂ ಸುಖಂ ಸರ್ವಾಽಂಗಶೀತಲಂ ।
ಉಪಲಕ್ಷ್ಯ ಮುನಿಂ ತಾದೃಗ್ವಿಧಂ ಪಪ್ರಚ್ಛ ಶಂಕರಂ ॥೯೬॥

ಮಹೇಶ ಸರ್ವಲೋಕೇಷು ನೈವ ಕಶ್ಚನ ಲಕ್ಷಿತಃ ।
ನಿಶ್ಚಿಂತಃ ಸರ್ವತಃ ಶೀತಃ ಕೋಽಯಮದ್ಭುತ ದರ್ಶನಃ ॥೯೭॥

ಏವಂ ಪೃಷ್ಟೋಽ ಗಿರಿಜಯಾ ಪ್ರಾಹ ದೇವೋ ವೃಷಧ್ವಜಃ ।
ಸನತ್ಕುಮಾರಖ್ಯಾತೋಽಯಂ ಬ್ರಹ್ಮಪುತ್ರಃ ಸುಶಾಂತಧೀಃ ॥೯೮॥

---

ಪ್ರಪಂಚದ ವಿನೋದಗಳನ್ನು ನೋಡಲು ಬಯಸಿದ ಶಿವನು ದೇಶಾಟನೆಯ ಮಾರ್ಗಕ್ರಮದಲ್ಲಿ ಸನತ್ಕುಮಾರನ ಆಶ್ರಮಕ್ಕೆ ಬಂದನು. ಅಲ್ಲಿ ಕುಳಿತಿದ್ದ ಬ್ರಹ್ಮನ ಮಗನಾದ ಸತ್ಕುಮಾರನನ್ನು ಪಾರ್ವತಿಯು ನೋಡಿದಳು. ॥೯೫॥

ಪ್ರಸನ್ನವಾದ ಮುಖವುಳ್ಳ ಶಾಂತನಾದ, ದೇಹದಲ್ಲೆಲ್ಲವೂ ಸೌಮ್ಯತೆಯುಳ್ಳ, ಇಂತಹ ಋಷಿಯನ್ನು ಪಾರ್ವತಿಯು ನೋಡಿ, ಶಿವನನ್ನು ಈ ರೀತಿಯಲ್ಲಿ ಕೇಳಿದಳು. ॥೯೬॥

ಓ ಮಹೇಶ್ವರನೇ, ಇಂತಹ ಋಷಿಯನ್ನು ನಾನು ಯಾವ ಲೋಕದಲ್ಲಿಯೂ ಕಾಣಲಿಲ್ಲ! ಚಿಂತೆಯಿಲ್ಲದೇ ಶರೀರದ ಎಲ್ಲಾ ಕಡೆಯಲ್ಲಿಯೂ ಸೌಮ್ಯತೆಯನ್ನು ಹೊರಗೆಡಹುತ್ತಿರುವ ಆಶ್ಚರ್ಯಕರವಾದ ನೋಟವುಳ್ಳ ಈತನು ಯಾರು? ಎಂದು ಕೇಳಿದಳು. ॥೯೭॥

ಪಾರ್ವತಿಯು ಹೀಗೆ ಪ್ರಶ್ನಿಸಲು ಧರ್ಮವೇ ಬಾವುಟವಾಗಿ ಉಳ್ಳ ಶಿವನು ಅವಳನ್ನು ಕುರಿತು, ಬ್ರಹ್ಮನ ಮಗನೂ, ಪರಮ ಶಾಂತಸ್ವಭಾವವುಳ್ಳವನೂ, ಆಗಿರುವ ಇವನು ಸನತ್ಕುಮಾರನೆಂಬ ಪ್ರಸಿದ್ಧವಾದ ಋಷಿಯೆಂದು ತಿಳಿ. ಎಂಬುದಾಗಿ ಹೇಳಿದನು. ॥೯೮॥

ಬ್ರಹ್ಮಭೂತಃ ಪರಾಽನಂದಮಗ್ನೋ ನಿತ್ಯಸುನಿರ್ವೃತಃ ।
ಕೃತಕೃತ್ಯ ಸ್ತತೋ ನಾಸ್ತಿ ಕ್ಲೇಶಲೇಶೋಽಪ್ರವೃತ್ತಿತಃ ॥೯೯॥

ಪ್ರವೃತ್ತಿರೇವ ಕ್ಲೇಶಸ್ಯ ಮೂಲಂ ಸರ್ವತ್ರ ಪಾರ್ವತಿ ।
ಇತಿ ಶ್ರುತ್ವಾ ತತಃ ಪ್ರಾಹ ಗೌರೀ ಶಂಕರಮಂಬಿಕಾ ॥೧೦೦॥

ಏವಂ ಚೇತ್ತತ್ರ ಗಚ್ಛಾವ ಸ್ತೇನ ಸಂಭಾಷ್ಯ ವೈ ತತಃ ।
ವ್ರಜಾವೋಽನ್ಯತ್ರ ದೇವೇಶ ಮಮಾಽತ್ರ ಪ್ರೀತಿರುತ್ತಮಾ ॥೧೦೧॥

ಪಾರ್ವತೀಂ ಪ್ರಾಹ ತತ್ಪಶ್ಚಾ ಚ್ಛಿವ ಸ್ತತ್ಕಾಲ ಸಂಮಿತಂ ।
ಪ್ರಿಯೇ ಶೃಣು ನ ಗಂತವ್ಯ ಮಕಾರ್ಯೇ ನ ವಿನಾ ಫಲಂ ॥೧೦೨॥

---

ಈತನು ಬ್ರಹ್ಮರೂಪನಾಗಿ ಅತ್ಯಂತ ಶ್ರೇಷ್ಠವಾದ ಆನಂದದಲ್ಲಿ ಮಗ್ನನಾಗಿ ಯಾವಾಗಲೂ ಸುಖಿಯಾಗಿಯೂ, ಕೃತಾರ್ಥನಾಗಿದ್ದಾನೆ. ಯಾವ ಜಗತ್ತಿನ ವ್ಯಾಪಾರಕ್ಕೂ ಸಿಕ್ಕದಿರುವುದರಿಂದ, ಹೀಗೆ ಯಾವ ಪ್ರವೃತ್ತಿಧರ್ಮದಲ್ಲೂ ಆಸಕ್ತನಾಗದಿರುವುದರಿಂದ ಇವನಿಗೆ ದುಃಖವು ಲೇಶಮಾತ್ರವೂ ಇರುವುದಿಲ್ಲ! ॥೯೯॥

ಎಲೌ ಪಾರ್ವತಿಯೇ, ಜಗತ್ತಿನ ವ್ಯಾಪಾರಗಳಲ್ಲಿ ತೊಡಗುವುದೇ ದುಃಖಕ್ಕೆ ಮೂಲಕಾರಣವು ಎಂದು ಶಿವನು ಹೇಳಿದ ಮಾತನ್ನು ಕೇಳಿ ಅಂಬಿಕೆಯಾದ ಗೌರಿಯು ಶಿವನನ್ನು ಕುರಿತು ಈ ರೀತಿಯಲ್ಲಿ ಕೇಳಿದಳು. ॥೧೦೦॥

ಹಾಗಿದ್ದ ಪಕ್ಷದಲ್ಲಿ ಅವನಲ್ಲಿಗೆ ನಾವು ಹೋಗೋಣ. ಅವನೊಡನೆ ಸಲ್ಲಾಪ ಮಾಡಿದ ಬಳಿಕ ಬೇರೇ ಕಡೆಗೆ ಹೋಗೋಣ! ಇವನನ್ನು ನೋಡಿದರೆ ನನಗೆ ಹೆಚ್ಚಾಗಿ ಸಂತೋಷವಾಗುತ್ತದೆ. ॥೧೦೧॥

ಹೀಗೆನ್ನಲು ಶಿವನು ಪಾರ್ವತಿಯೊಂದಿಗೆ ಆ ಕಾಲಕ್ಕೆ ಯೋಗ್ಯವಾದ ಈ ಮಾತುಗಳನ್ನು ಹೇಳಿದನು. ಎಲೌ ಪ್ರಿಯೆಯೇ, ಕೇಳು. ನಮಗೇನೂ ಕಾರ್ಯವಿಲ್ಲದೇ ವ್ಯರ್ಥವಾಗಿ ಒಂದು ಕಡೆಗೂ ಹೋಗಬಾರದು. ಮತ್ತು ಸತ್ಫಲವಿಲ್ಲದ ಆ ಕಾರ್ಯದಲ್ಲಿ ತೊಡಗಬಾರದು. ॥೧೦೨॥

ಅಕೃತ್ಯೇಷು ತಥಾ ಗರ್ಚ್ಛ ಸರ್ವಥಾ ಪರಿಭೂಯತೇ ।
ಇತ್ಯುಕ್ತ್ವಾಽಪಿ ತತ್ರ ಗಂತು ಮೌತ್ಸುಕ್ಯಂ ವೀಕ್ಷ್ಯ ಶಂಕರಃ ॥೧೧೩॥

ಜಗಾಮ ತತ್ಸನ್ನಿಧಾನಂ ಪಾರ್ವತೀಸಹಿತಃ ಶಿವಃ ।
ಅವತೀರ್ಯ ವೃಷಾತ್ತತ್ರ ಜಗ್ಮತುರ್ಯೋಗಿರಾಟ್ಪುರಃ ॥೧೧೪॥

ಜ್ಞಾತ್ವಾಽಽಶಯಂ ನ ತೌ ತತ್ರ ಪ್ರೇಕ್ಷಾಂ ಚಕ್ರೇಽನಭೀಪ್ಸಿತಃ ।
ಪಾರ್ವತೀ ಶಂಕರೌ ತಸ್ಯ ಸಂಮುಖೇ ಚಿರಮಾಸ್ಥಿತೌ ॥೧೧೫॥

ಅಪ್ರೇಕ್ಷಣಾಽದ್ಯೈಶ್ಚಾಽವಜ್ಞಾಂ ಪ್ರಾಪ್ಯ ದೇವಃ ಪಿನಾಕಭೃತ್ ।
ಪರೀಕ್ಷಿತುಂ ತದ್ಧೃದಯ ಪರಿಪಾಕಂ ಮಹೇಶ್ವರಃ ॥೧೧೬॥

ಕ್ರುದ್ಧಃ ಪ್ರಾಹ ವಿಧೇಃ ಸೂನುಮಾಹೂಯ ಪ್ರತಿಬೋಧ್ಯ ಚ ।
ಅನಾಖ್ಯಾಣಾಮಿದಂ ವೃತ್ತಂ ಪ್ರಾಪ್ತವಾನಸಿ ದುರ್ಮತೇ ॥೧೧೭॥

---

ಹಾಗೆ ನಿಷ್ಫಲಕಾರ್ಯಗಳಲ್ಲಿ ತೊಡಗುವವನು ಸರ್ವಪ್ರಕಾರದಲ್ಲಿಯೂ ತಿರಸ್ಕಾರ ಕ್ಕೊಳಗಾಗುತ್ತಾನೆ. ಹೀಗೆ ಹೇಳಿದಾಗ್ಯೂ ಪಾರ್ವತಿಯು ಅಲ್ಲಿಗೆ ಹೋಗಲು ಕುತೂಹಲಪಡುತ್ತಿದ್ದುದನ್ನು ಶಂಕರನು ಕಂಡನು. ಆದುದರಿಂದ ॥೧೧೩॥

ಶಿವನು ಪಾರ್ವತೀ ಸಮೇತನಾಗಿ ಸನತ್ಕುಮಾರ ಋಷಿಯ ಸಮೀಪಕ್ಕೆ ಹೋದನು. ಅಲ್ಲಿ ಗೂಳಿಯ ಮೇಲಿಂದ ಇಳಿದು ಅವರಿಬ್ಬರೂ ಯೋಗಿಶ್ರೇಷ್ಠನಾದ ಸನತ್ಕುಮಾರನ ಮುಂದುಗಡೆಗೆ ಹೋದರು. ॥೧೧೪॥

ಇವನ ಅಭಿಪ್ರಾಯವನ್ನು ತಿಳಿದರೂ ಫಲವಿಲ್ಲದೇ ಇದ್ದುದರಿಂದ ಸನತ್ಕುಮಾ ರನು ಇವರನ್ನು ನೋಡಲೇ ಇಲ್ಲ! ಆದರೂ ಪಾರ್ವತೀಪರಮೇಶ್ವರರು ಅವನ ಮುಂದುಗಡೆ ಬಹಳ ಹೊತ್ತಿನವರೆಗೆ ಇದ್ದರು. ॥೧೧೫॥

ಪಿನಾಕಾಯುಧಧಾರಿಯಾದ ಶಿವನು ಹೀಗೆ ಸನತ್ಕುಮಾರನು ತನ್ನನ್ನು ನೋಡಿ ಗೌರವಿಸುವುದು ಮುಂತಾದ್ದನ್ನು ಮಾಡದೇ ಇದ್ದುದನ್ನು ಕಂಡು, ಅವನು ತನ್ನನ್ನು ತಿರಸ್ಕರಿಸಿದನೆಂದು ತಿಳಿದನು. ಆದರೂ ಅವನ ಮನೋಧರ್ಮವೇನೆಂಬು ದನ್ನು ಪರೀಕ್ಷಿಸಲು ಇಷ್ಟಪಟ್ಟನು. ॥೧೧೬॥

ಶಿವನು ಕೋಪಗೊಂಡವನಾಗಿ ಬ್ರಹ್ಮನ ಮಗನಾದ ಸನತ್ಕುಮಾರನನ್ನು

ಅವಜ್ಞಾನಂ ಸತಾಂ ಲೋಕೇ ಸದ್ಯೋ ಹಂತಿ ಸ್ವವೈಭವಂ ।
ಬ್ರಹ್ಮಪುತ್ರೋಽಸೀತಿ ಮಯಾ ಸಕೃತ್ಕ್ಷಾಂತ ಸ್ತ್ವನಾಽನಯಃ ॥೧೦೮॥

ಮಾದೃಶೇ ತ್ವಮವಜ್ಞಾಂ ನೋ ಭೂಯಃ ಕರ್ತುಮಿಹಾಽರ್ಹಸಿ ।
ಶ್ರುತ್ವೇತ್ಥಂ ಶಂಭುವಚನಂ ಪ್ರೋವಾಚ ಬ್ರಹ್ಮಣಃ ಸುತಃ ॥೧೦೯॥

ನ ಬಿಭೀಷಯಿತುಂ ಶಕ್ಯಃ ಶಿವೋಽಹಮಕುತೋಭಯಃ ।
ಭಯಹೇತುಂ ಭಕ್ಷಯಿತ್ವಾ ಸ್ವಂ ಸ್ವಕೀಯಾಭಿ ಸಂಮತೌ ॥೧೧೦॥

ಸ್ಥಿತೋಽಸ್ಮಿ ಗತಸಂದೇಹಃ ಕೃತೇ ವಿನ್ಯಸ್ಯ ದೃಶ್ಯಕಂ ।
ಶಾಪಾನಾಂ ಕೋಟಿಭಿರ್ನೋ ಮೇ ವರಾಣಾಂ ವಾಽಪಿ ಕೋಟಿಭಿಃ ॥೧೧೧॥

---

ಕೂಗಿ, ಎಬ್ಬಿಸಿ ಎಲೈ ನೀಚನೇ, ನೀನು ನೀಚರಾದ ಜನರು ನಡೆಯುವಂತೆ ಈಗ ನಡೆದಿದ್ದೀಯೆ ! ಎಂದನು. ॥೧೦೭॥

ಸತ್ಪುರುಷರನ್ನು ತಿರಸ್ಕಾರಮಾಡಿದ ಜನಗಳ ವೈಭವವೆಲ್ಲವೂ ತತ್ಕ್ಷಣವೇ ಹಾಳಾಗುವುದು. ಆದರೆ ನೀನು ಬ್ರಹ್ಮನ ಮಗನೆಂದು ತಿಳಿದು ನಿನ್ನ ಕೆಟ್ಟ ನಡವಳಿಕೆಯನ್ನು ಈಗ ಒಂದುಬಾರಿ ಕ್ಷಮಿಸಿದ್ದೇನೆ. ॥೧೦೮॥

ನನ್ನಂತಹವನ ವಿಷಯದಲ್ಲಿ ನೀನು ಪುನಃ ಈ ರೀತಿಯಲ್ಲಿ ತಿರಸ್ಕಾರವನ್ನು ಮಾಡಬೇಡ. ಎಂದು ಹೇಳಿದ ಶಿವನ ಮಾತುಗಳನ್ನು ಕೇಳಿ ಬ್ರಹ್ಮನ ಮಗನಾದ ಸನತ್ಕುಮಾರನು ಹೀಗೆಂದನು. ॥೧೦೯॥

ಓ ಶಿವನೇ, ನನಗೆ ಯಾವ ವಿಧವಾದ ಭಯವೂ ಇಲ್ಲ. ಭಯಕ್ಕೆ ಕಾರಣವಾದ ವಸ್ತುಗಳನ್ನೇ ನುಂಗಿ ನನ್ನ ಇಷ್ಟಬಂದಂತೆ ನಾನು ಸ್ವತಂತ್ರನಾಗಿದ್ದೇನೆ ಮತ್ತು ನಾನು, ನನ್ನದೆಂಬ ಅಭಿಮಾನವಿಲ್ಲದ ನನಗೆ ನೀನೂ ಭಯವನ್ನುಂಟು ಮಾಡಲಾರೆ! ಅಲ್ಲದೆ ॥೧೧೦॥

ನಾನು ಜ್ಞಾನಮಾರ್ಗದಲ್ಲೇ ತಲ್ಲೀನನಾಗಿ ಎಲ್ಲಾ ವಿಧವಾದ ಸಂದೇಹಗಳಿಂದಲೂ ಬಿಡಲ್ಪಟ್ಟಿದ್ದೇನೆ. ನನಗೆ ಕೋಟಿ ಶಾಪಗಳಿಂದಲಾಗಲೀ ಅಥವಾ ಕೋಟಿ ವರಗಳಿಂದಲಾಗಲಿ ಏನೂ ಆಗಲಾರದು ! ॥೧೧೧॥

ವಿಶೇಷೋ ವಾಽವಿಶೇಷೋ ವಾ ಕದಾಚಿತ್ಕುತ್ರಚಿದ್ಭವೇತ್ ।
ಅಶೇಷಾಣಾಂ ವಿಶೇಷಾಣಾಮಾಶ್ರಯೋ ನ ಹ್ಯುಪಾಶ್ರಯಃ ॥೧೧೩॥

ಏಧಸ್ಯಾಂ ಪಾವಕ ಇವ ವಿಶೇಷಾನುಪಶೇಷಕಃ ।
ಶಾಪೇನ ವಾಽನುಗ್ರಹೇ ವಾ ಸ್ಯಾತ್ತುಷ್ಟಿರ್ಯೇನ ತೇ ಭವ ॥೧೧೪॥

ಅಶಂಕಿತಸ್ತನ್ಮಯಿ ತ್ವಂ ಪ್ರತಿಕ್ಷಿಪ ಸುಸತ್ವರಂ ।
ಅಹೋ ಮಹಾಽನುಗ್ರಹೋಽಯಂ ಮಯಿ ತೇ ಪ್ರಕಟೀಕೃತಃ॥೧೧೫॥

ಅಯತ್ನೇನೈವ ಸಂತುಷ್ಟಃ ಸಂತೋಷ್ಯೋ ಬಹುಸಾಧನೈಃ ।
ಸನತ್ಕುಮಾರ ಉಕ್ತ್ವೈವಂ ವಿರರಾಮ ವಚೋ ವಿಧೇಃ ॥೧೧೬॥

ಶ್ರುತ್ವೈವಂ ತಸ್ಯ ವಚನಂ ದೃಷ್ಟ್ವಾ ಚಾಽವಿಕೃತಾಽತ್ಮತಾಂ ।
ಪ್ರಸನ್ನಃ ಪ್ರಾಹ ಭೂತೇಶೋ ಬ್ರಹ್ಮಪುತ್ರ ನಮೋಽಸ್ತು ತೇ ॥೧೧೭॥

---

ನನಗೆ ವಿಶೇಷವಾಗಲೀ ಅಥವಾ ಅವಿಶೇಷವಾಗಲೀ ಎಲ್ಲಿಂದಲೂ ಯಾವಾಗಲೂ, ಹೇಗೂ ಉಂಟಾಗಲಾರವು. ಸಮಸ್ತ ವಿಶೇಷಗಳಿಗೂ ಆಧಾರನಾದವನು ಯಾವ ವಿಶೇಷವನ್ನೂ ಆಶ್ರಯಿಸುವವನಲ್ಲ. ॥೧೧೩॥

ಓ ಶಿವನೇ, ಕಟ್ಟಿಗೆಗಳಲ್ಲಿ ಬೆಂಕಿಯನ್ನು ಹಾಕಿದರೆ ಹೇಗೋ ಹಾಗೆ ನಾನು ಈ ವಿಶೇಷಗಳನ್ನೆಲ್ಲವನ್ನೂ ನುಂಗಿರುವೆನು. ನನಗೆ ಶಾಪ ಅಥವಾ ಅನುಗ್ರಹಗಳನ್ನುಂಟುಮಾಡುವುದರಿಂದಲೂ ಭೇದವೂ ಉಂಟಾಗುವುದಿಲ್ಲ. ॥೧೧೪॥

ಆದ್ದರಿಂದ ಸ್ವಲ್ಪವೂ ಸಂದೇಹವಿಲ್ಲದೇ ನಿನಗೆ ತೋರಿದಂತೆ ಮಾಡು! ನಾನಿರುವೆಡೆಗೇ ನೀನು ಬಂದು ದರ್ಶನವನ್ನಿತ್ತು ನೀನು ಈಗ ತೋರಿಸಿದ ನನ್ನ ಮೇಲಿನ ಅನುಗ್ರಹವು ನನಗೆ ಅತ್ಯಂತ ಸಂತೋಷದ ಆಶ್ಚರ್ಯವನ್ನುಂಟುಮಾಡುತ್ತಿದೆ. ॥೧೧೫॥

ಹೆಚ್ಚಾದ ಪೂಜಾಸಾಧನವಾದ ಪದಾರ್ಥಗಳ ಸಮರ್ಪಣೆಯಿಂದ ಸಂತೋಷಪಡುವವನೂ ಆಗಿರುವ ನಿನ್ನನ್ನು ನಾನು ಸ್ವಲ್ಪವೂ ಶ್ರಮವಿಲ್ಲದೇ ಸಂತೋಷಪಡಿಸಿರುವೆನು! ಎಂಬುದಾಗಿ ಹೇಳಿ ಬ್ರಹ್ಮನ ಮಗನಾದ ಸನತ್ಕುಮಾರನು ಮಾತನ್ನು ಮುಗಿಸಿದನು. ॥೧೧೬॥

ಸನತ್ಕುಮಾರನು ಹೇಳಿದ ಈ ಮಾತನ್ನು ಕೇಳಿ ಅವನ ಮನಸ್ಸು ಯಾವ ವಿಧವಾದ ವಿಕಾರಕ್ಕೂ ಒಳಗಾಗದಿದ್ದುದನ್ನು ಕಂಡು ಎಲ್ಲ ಭೂತಗಳಿಗೆ ಸ್ವಾಮಿ

ತುಷ್ಟೋಽಸ್ಮಿ ನಿಸ್ಪೃಯಾ ಚಾತಿ ದೃಢಯಾ ತವ ಸುವ್ರತ ।
ಯಾಚಸ್ವಾಽಭಿಮತಂ ಯತ್ತೇ ದಾಸ್ಯಾಮ್ಯಪ್ರಾಪ್ಯ ಮಪ್ಯುತ ॥೧೧೭॥

ಶ್ರುತ್ವಾ ವಿಹಸ್ಯ ವಿಧಿಜಃ ಪ್ರಾಹ ಶಂಭುಮಶಂಕಿತಃ ।
ಸಾಧಯಸ್ವ ಮಹಾದೇವ ಏಷ ಮೇಕಾಂಕ್ಷಿತೋ ವರಃ ॥೧೧೮॥

ಮಾಯಾವಿನಾಂ ಮಹೇಶಾನ ನಾಹಂ ವೇಪಯಿತುಂ ಕ್ಷಮಃ ।
ಮಹಾವಾತೈರಿವಾಽಽಕಾಶೋ ಬ್ರೂಹಿ ತೇ ಯದಿ ವಾಂಛಿತಂ ॥೧೧೯॥

ತಥಾಽಪ್ಯಕಂಪ್ಯಂ ಮತ್ವಾ ತಂ ಓಮಿತ್ಯಾಹ ಮಹೇಶ್ವರಃ ।
ಯದಿ ದಾಸ್ಯಸಿ ಮೇ ಕಾಮಂ ಪ್ರತೀಚ್ಛ ಮಮ ಪುತ್ರತಾಂ ॥೧೨೦॥

---

ಯಾದ ಶಿವನು ಅವನನ್ನು ಮೆಚ್ಚಿ, ಓ ಬ್ರಹ್ಮನ ಮಗನಾದ ಸನತ್ಕುಮಾರನೇ, ನಿನಗೆ ನಮಸ್ಕಾರವು ! ಎಂದನು. ॥೧೧೬॥

ಓ ಶ್ರೇಷ್ಠವ್ರತವನ್ನು ಧರಿಸಿರುವ ಸನತ್ಕುಮಾರನೇ, ನಿನ್ನ ಅತ್ಯಂತ ದೃಢವಾದ ವೈರಾಗ್ಯ ಜೀವನವನ್ನು ನೋಡಿ ನಾನು ಮೆಚ್ಚಿದೆನು. ಆದ್ದರಿಂದ ನಿನಗೆ ಇಷ್ಟವಾದದ್ದನ್ನು ಬೇಡಿಕೋ. ಅದು ದುರ್ಲಭವಾಗಿದ್ದರೂ ಅದನ್ನು ನಾನು ನಿನಗೆ ಸಂಪಾದಿಸಿಕೊಡುವೆನು. ॥೧೧೭॥

ಬ್ರಹ್ಮನ ಮಗನಾದ ಸನತ್ಕುಮಾರನು ಶಿವನ ಮಾತನ್ನು ಕೇಳಿ ನಕ್ಕು ನಿರ್ಭಯವಾಗಿ, ಓ ಶಿವನೇ, ಇಲ್ಲಿಂದ ನೀನು ಹೊರಡು ! ಈ ವರವನ್ನೇ ನಾನು ನಿನ್ನಿಂದ ಅಪೇಕ್ಷಿಸುವೆನು ! ಎಂದನು. ॥೧೧೮॥

ಓ ಮಹೇಶ್ವರನೇ, ಸುಂಟರಗಾಳಿಯಾದರೂ ಆಕಾಶವನ್ನು ಹೇಗೆ ಅಲ್ಲಾಡಿಸಲಾರದೋ ಹಾಗೆ ಮೋಸಗಾರರಾದ ಜನರು ನನ್ನನ್ನು ಅಲ್ಲಾಡಿಸಲು ಸಮರ್ಥರಾಗಲಾರರು. ಆದ್ದರಿಂದ ನಿನಗೆ ಇಷ್ಟವಾದ ವರವನ್ನು ಕೇಳು ! ಎಂದನು. ॥೧೧೯॥

ಏನನ್ನು ಮಾಡಿದರೂ ಆ ಋಷಿಯನ್ನು ಅಲ್ಲಾಡಿಸಲು ಅಸಾಧ್ಯವೆಂದು ಬಗೆದು ಮಹೇಶ್ವರನು ಅವನ ಮಾತಿನಂತೆಯೇ ಆಗಲಿ ಎಂದನು. ನನಗೆ ಇಷ್ಟವಾದದ್ದನ್ನು ನೀನು ಕೊಡಲು ಇಷ್ಟಪಡುವುದಾದರೆ ನನಗೆ ನೀನು ಮಗನಾಗು ! ಎಂದನು. ॥೧೨೦॥

ತಥೇತ್ಯುಕ್ತ್ವಾ ಪುನಃ ಪ್ರಾಹ ನನ್ವಲ್ಪಂ ತವ ಯಾಚಿತಂ ।
ಪುತ್ರೋಽಹಮೇವ ಸರ್ವೇಷಾಂ ಶಿರಶ್ಚಾಮುಪಿ ಶಂಕರ ॥೧೨೧॥

ಕಿಮತ್ರ ದುಷ್ಕರಂ ಯತ್ತೇ ಪುತ್ರಃ ಸ್ಯಾಮಿತಿ ಶಂಸ ಮೇ ।
ತವೈವ ಪುತ್ರೋ ಭವಿತಾ ನ ಪಾರ್ವತ್ಯಾಃ ಕಥಂ ಚನ ॥೧೨೨॥

ತ್ವಯೈವಾಽಹಂ ವೃತೋಽತ್ರಾರ್ಥೇ ತನ್ನಿಸೃಷ್ಟೋ ವರೋ ಮಯಾ ।
ಅಥ ಸಾ ಪಾರ್ವತೀ ದೇವೀ ಪ್ರಾಹ ತಂ ಮುನಿಪುಂಗವಂ ॥೧೨೩॥

ಬ್ರಹ್ಮಪುತ್ರ ಪ್ರಾರ್ಥಿತೋಽಸಿ ಮಯಾಽಪಿ ನನು ಸರ್ವಥಾ ।
ಸಮಾಂಗೌ ದಂಪತೀ ಯಸ್ಮಾತ್ತನ್ಮೇ ಪುತ್ರತ್ವ ಮರ್ಹಸಿ ॥೧೨೪॥

ಅಭ್ಯಾಗತಾನಾಂ ಸಾಮ್ಯೇನ ಪೂಜನಂ ಹಿ ಸತಾಂ ವ್ರತಂ ।
ತತ್ರ ದೇವಃ ಪ್ರಾಪ್ತವರೋ ರಿಕ್ತೋ(ಕ್ತಾ)ಽಹಂ ತತ್ಕಥಂ ವ್ರಜೇ ॥೧೨೫॥

---

ಹಾಗೆಯೇ ಆಗಲೆಂದು ಸನತ್ಕುಮಾರನು ಒಪ್ಪಿಕೊಂಡು ಶಿವನನ್ನು ಕುರಿತು ನೀನು ಬೇಡಿದ್ದು ಅತ್ಯಲ್ಪವಾದ ವಿಷಯ. ಏಕೆಂದರೆ ಎಲ್ಲರಿಗೂ ತಿರ್ಯಗ್ಜಂತುಗಳಿಗೂ ಕೂಡ ನಾನು ಮಗನು! ಎಂದನು. ॥೧೨೧॥

ಓ ಶಿವನೇ, ಹೀಗಿರುವಾಗ ನಿನಗೆ ನಾನು ಮಗನೆಂದು ಒಪ್ಪಲು ನನಗೆ ಕಷ್ಟವೇನಿದೆ? ಎಂಬುದನ್ನು ನೀನೇ ಹೇಳು. ಆದರೂ ನಿನಗೆ ನಾನು ಪುತ್ರನೇ ಹೊರತು ಪಾರ್ವತಿಗೆಂದಿಗೂ ಆಗಲಾರೆನು! ಏಕೆಂದರೆ, ॥೧೨೨॥

ನೀನು ನನ್ನನ್ನು ಈ ರೀತಿಯಾಗಿ ಬೇಡಿದೆಯಾದ್ದರಿಂದ ನಿನಗೆ ಮಾತ್ರ ನಾನು ಮಗನೆಂದು ವರವು ನನ್ನಿಂದ ಕೊಡಲ್ಪಟ್ಟಿತು. ಅನಂತರದಲ್ಲಿ ಪಾರ್ವತೀ ದೇವಿಯು ಆ ಋಷಿಶ್ರೇಷ್ಠನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೧೨೩॥

ಓ ಬ್ರಹ್ಮನ ಮಗನಾದ ಸನತ್ಕುಮಾರನೇ, ನಾನೂ ಕೂಡ ನಿನ್ನನ್ನು ಸರ್ವವಿಧದಲ್ಲೂ ಪ್ರಾರ್ಥಿಸಿಕೊಂಡಂತೆಯೇ ಆಗಿದೆ. ಏಕೆಂದರೆ ದಂಪತಿಗಳಾದ ನಾವಿಬ್ಬರೂ ಒಂದೇ ಶರೀರವನ್ನು ಧರಿಸಿರುವೆವು. ಆದ್ದರಿಂದ ನನಗೂ ನೀನು ಮಗನಾಗಲು ಯೋಗ್ಯನಾಗಿದ್ದೀಯೆ. ॥೧೨೪॥

ಅತಿಥಿಗಳಾಗಿ ಬಂದವರಿಗೆಲ್ಲರಿಗೂ ಸಮಾನವಾಗಿ ಸತ್ಕಾರವನ್ನು ಮಾಡುವುದೇ ಸತ್ಪುರುಷರ ವ್ರತವು! ಈ ಸಂದರ್ಭದಲ್ಲಿ ದೇವನಾದ ಶಿವನು ನಿನ್ನಿಂದ

ವೈಷಮ್ಯಂ ನ ತು ಸದ್ಧರ್ಮ ಇತಿ ಆಹುರ್ಮನೀಷಿಣಃ ।
ಶ್ರುತ್ವೇತ್ಥಂ ಪಾರ್ವತೀವಾಕ್ಯಂ ಪುನರಾಹ ವಿಧಾತೃಜಃ ॥೧೨೬॥

ದೇವಿ ತೇ ಪುತ್ರತಾಂ ಯಾಮಿ ಪ್ರಸಿದ್ಧ್ಯಾನ ತೇ ದೇಹಜಃ ।
ಏತನ್ಮಮ ವ್ರತಂ ಗುಹ್ಯಮಯೋನೌ ಭವನಂ ಕ್ವಚಿತ್ ॥೧೨೭॥

ಇತಿ ಶ್ರುತ್ವಾ ಪುನಃ ಪ್ರಾಹ ಪಾರ್ವತೀ ಮುನಿಪುಂಗವಂ ।
ನ ಸ್ತ್ರೀಣಾಂ ದೇಹಸಂಬಂಧಮೃತೇ ಪುತ್ರಸುಖಂ ಭವೇತ್ ॥೧೨೮॥

ತಸ್ಮಾದ್ದೇಹೇನ ಸಂಬಂಧಂ ಕಾಂಕ್ಷಾಮಿ ತವ ಸರ್ವಥಾ ।
ಇತ್ಯುಕ್ತಃ ಸ ಮುನಿಃ ಕಿಂಚಿದ್ವಿಮೃಶ್ಯೋವಾಚ ಶಂಕರಂ ॥೧೨೯॥

---

ವರವನ್ನು ಹೊಂದಿದನು. ನಾನಾದರೋ ಬರಿಗೈಯ್ಯವಳಾಗಿದ್ದೇನೆ. ಆದ್ದರಿಂದ ನಾನು ಇಲ್ಲಿಂದ ಹೇಗೆ ಹೊರಡಲಿ? ॥೧೨೫॥

ವಿದ್ವಾಂಸರಾದವರು "ಸತ್ಪುರುಷರ ಧರ್ಮವು ಯಾವಾಗಲೂ ಎಲ್ಲರನ್ನೂ ಸಮನಾಗಿ ಕಾಣುವುದು" ಎಂದು ಹೇಳುತ್ತಾರೆ. ಎಂದು ಹೇಳಿದ ಪಾರ್ವತಿಯ ಮಾತನ್ನು ಕೇಳಿ ಬ್ರಹ್ಮನ ಮಗನಾದ ಸನತ್ಕುಮಾರನು ಪಾರ್ವತಿಯನ್ನು ಕುರಿತು ಪುನಃ ಈ ರೀತಿಯಲ್ಲಿ ಹೇಳಿದನು. ॥೧೨೬॥

ಓ ಪಾರ್ವತೀದೇವಿಯೇ, ನಾನು ನಿನ್ನ ಮಗನೆಂದು ಪ್ರಸಿದ್ಧನಾಗುತ್ತೇನೆ. ಆದರೆ ನಿನ್ನ ಶರೀರದಲ್ಲಿ ಹುಟ್ಟುವುದಿಲ್ಲ. ಏಕೆಂದರೆ, ನಾನು ಯಾವ ಸ್ತ್ರೀಯೋನಿಯಲ್ಲಿಯೂ ಹುಟ್ಟುವುದಿಲ್ಲ. ಎಂಬುದೇ ನನ್ನ ನಿಯಮವಾಗಿರುತ್ತದೆ! ॥೧೨೭॥

ಹೀಗೆ ಸನತ್ಕುಮಾರನು ಹೇಳಿದ ಮಾತನ್ನು ಕೇಳಿ ಪಾರ್ವತಿಯು ಅವನನ್ನು ಕುರಿತು, ಓ ಋಷಿಯೇ, ಸ್ತ್ರೀಯರ ಶರೀರದ ಸಂಬಂಧವಿಲ್ಲದೇ ಪುತ್ರಸುಖವು ದೊರೆಯುಲಾರದಷ್ಟೆ? ಎಂದಳು. ॥೧೨೮॥

ಆದ್ದರಿಂದ ಎಲ್ಲಾ ವಿಧದಲ್ಲೂ ದೇಹದಿಂದಲೇ ನೀನು ಜನಿಸಬೇಕೆಂದು ಅಪೇಕ್ಷಿಸುವೆನು, ಎಂದು ಪಾರ್ವತಿಯು ಹೇಳಲು, ಆ ಋಷಿಯು ಸ್ವಲ್ಪಹೊತ್ತು ಯೋಚಿಸಿ, ಪಾರ್ವತಿಯನ್ನು ಕುರಿತು, ಈ ರೀತಿಯಲ್ಲಿ ಹೇಳಿದನು. ॥೧೨೯॥

20

ದೇವಿ ಕಿಂ ಮೋಹಯಸ್ಯೇವಂ ವಚನೈಃ ಪ್ರಾಕೃತೈರಿವ ।
ತ್ವಂ ಸರ್ವಲೋಕ ಜನನೀ ಪ್ರಾಪ್ತಕಾಮಾಽಪಿ ಸರ್ವಥಾ ॥೧೩೦॥

ಶೃಣು ತಥ್ಯಂ ವದಾಮ್ಯಂಬ ವ್ರತಮೇತನ್ಮಮೇಹಿತಂ ।
ತಸ್ಮಾತ್ತ್ವತ್ಪೂರ್ವತನೋ ದೇಹೋ ವಿಶೀರ್ಣಃ ಪರ್ವತಾಂತರೇ ॥೧೩೧॥

ಶರಾತ್ಮನಾ ಸ್ವರ್ಣಮಯಂ ವನಂ ತತ್ರ ಮಹೇಶ್ವರಿ ।
ಭವಾಮಿ ಪೂರ್ವದೇಹೇನ ಸಂಬಂಧಾತ್ತೇ ಸುಖಂ ಚ ತತ್ ॥೧೩೨॥

ಇತ್ಯುಕ್ತ್ವಾ ಪ್ರಣತೌ ದೇವೌ ಜಗ್ಮತುಃ ಸ್ವಮಭೀಪ್ಸಿತಂ ।
ಸನತ್ಕುಮಾರೋಽಪಿ ಮುನಿರ್ಜ್ಞಾನನಿಷ್ಠಾ ಮಹಿತ್ವತಃ ॥೧೩೩॥

---

ಓ ದೇವಿಯೇ, ಪಾಮರಜನಗಳಿಗೆ ಯೋಗ್ಯವಾದ ಮಾತುಗಳಿಂದ ನನ್ನನ್ನು ಏಕೆ ನೀನು ಹೀಗೆ ಮರುಳುಮಾಡುತ್ತಿದ್ದೀಯೆ? ವಾಸ್ತವವಾಗಿ ನೀನು ಎಲ್ಲಾ ಲೋಕಕ್ಕೂ ತಾಯಿಯೂ ಆಗಿರುವುದಲ್ಲದೆ, ಸರ್ವ ವಿಧದಲ್ಲೂ ಸಕಲ ಇಷ್ಟಾರ್ಥಗಳನ್ನು ಹೊಂದಿರುವವಳೂ ಆಗಿದ್ದೀಯೆ! ॥೧೩೦॥

ಓ ಪಾರ್ವತಿಯೇ, ಕೇಳು. ಸತ್ಯವನ್ನು ಹೇಳುತ್ತಿರುವೆನು. ಇದು ನನಗೆ ಪ್ರಿಯವಾದ ವ್ರತವೆಂದು ತಿಳಿ. ಆದರೂ ನಿನ್ನ ಇಚ್ಛೆಯೂ ನೆರವೇರುವುದು! ಹೇಗೆಂದರೆ, ನಿನ್ನ ಹಿಂದಿನ ಶರೀರವು ಆ ಪರ್ವತದಲ್ಲಿ ಚೂರುಚೂರಾಯಿತು. ॥೧೩೧॥

ಓ ಮಹೇಶ್ವರಿಯೇ, ನಿನ್ನ ಹಿಂದಿನ ಶರೀರವು ನಾಶವಾದ ಕಡೆ ಚಿನ್ನದಿಂದ ತುಂಬಿದ ದರ್ಭೆಯ ವನವು ಹುಟ್ಟಿಕೊಂಡಿತು. ಆದ್ದರಿಂದ ಅಲ್ಲಿ ನಾನು ಆ ನಿನ್ನ ಪೂರ್ವದೇಹದ ಸಂಬಂಧವನ್ನು ಮತ್ತೊಮ್ಮೆ ಪಡೆದು ನಿನಗೆ ಸುಖವನ್ನುಂಟು ಮಾಡುವವನಾಗಿ ಹುಟ್ಟುವೆನು. ಎಂದು ಸನತ್ಕುಮಾರನು ಪಾರ್ವತಿಯನ್ನು ಕುರಿತು ಹೇಳಿದನು. ॥೧೩೨॥

ಹೀಗೆ ಸನತ್ಕುಮಾರನು ಪಾರ್ವತೀಪರಮೇಶ್ವರರಿಬ್ಬರಿಗೂ ಹೇಳಿ ನಮಸ್ಕರಿಸಲು, ಅವರಿಬ್ಬರೂ ತಮಗೆ ಇಷ್ಟವಾದ ಸ್ಥಳಕ್ಕೆ ಹೊರಟು ಹೋದರು. ಸನತ್ಕುಮಾರ ಋಷಿಯೂ ಕೂಡ ಜ್ಞಾನನಿಷ್ಠೆಯ ಮಹಿಮೆಯಿಂದ ಕೂಡಿದ್ದನು. ॥೧೩೩॥

ಬ್ರಹ್ಮಾದ್ಯಖಿಲ ದೇವಾನಾಂ ದೈತ್ಯಾದೀನಾಂ ಚ ಸರ್ವತಃ ।
ಪ್ರಾಪ್ತಾತ್ಮಭಾವಃ ಸರ್ವೇಷಾಂ ಬಲೇನ ಪರಿಬೃಂಹಿತಃ ॥೧೩೪॥

ಅಜಯತ್ತಾರಕಾದೀಂಸ್ತಾನಸುರಾನ್ ಸರ್ವತೋಽಧಿಕಾನ್ ।
ಏತತ್ತೇಽಭಿಹಿತಂ ವ್ಯಕ್ತಂ ಕುಮಾರಪ್ರಭವಾಶ್ರಯಂ ॥೧೩೫॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಷಣ್ಮುಖಜನನಂ ನಾಮ ಸಪ್ತತ್ರಿಂಶೋಽಧ್ಯಾಯಃ

---

ಸನತ್ಕುಮಾರನು ತನ್ನ ಜ್ಞಾನನಿಷ್ಠೆಯ ಮಹಿಮೆಯಿಂದ ಬ್ರಹ್ಮಾದಿ ಸಕಲ ದೇವತೆಗಳ ಮತ್ತು ಸಮಸ್ತ ರಾಕ್ಷಸರ ಬಲವನ್ನು ಹೊಂದಿ ಸರ್ವಾತ್ಮಸ್ವರೂಪವನ್ನು ಪಡೆದವನಾಗಿದ್ದನು. ॥೧೩೪॥

ಆದ್ದರಿಂದಲೇ ಇವನು ಬಹಳ ಬಲಿಷ್ಠರಾದ ತಾರಕಾಸುರನೇ ಮುಂತಾದ ರಾಕ್ಷಸರನ್ನು ಜಯಿಸಿದನು. ಎಲೈ ಪರಶುರಾಮನೇ, ಈ ರೀತಿಯಲ್ಲಿ ಷಣ್ಮುಖನು ಹುಟ್ಟಿದ ಕಥೆಯನ್ನು ನಾನು ನಿನಗೆ ಹೇಳಿದ್ದೇನೆ. ॥೧೩೫॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಷಣ್ಮುಖಜನನಪ್ರಕಾರವನ್ನು ವಿವರಿಸಿರುವ ಮೂವತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಅಷ್ಟತ್ರಿಂಶೋಽಧ್ಯಾಯಃ ॥

### ಮೂವತ್ತೆಂಟನೆಯ ಅಧ್ಯಾಯವು

ಶೃಣು ತೇ ಸಂಪ್ರವಕ್ಷ್ಯಾಮಿ ಭೃಗುವಂಶವಿಭೂಷಣ ।
ಭಾರತ್ಯಾಃ ಸತ್ಪ್ರಭಾವಂ ವೈ ಮಹಾಶ್ಚರ್ಯಕರಂ ಪರಂ ॥೧॥

ಭಾರತೀ ಯಾ ಪುರಾ ಪ್ರೋಕ್ತಾ ಶಂಕರಾಽವರಜಾ ಶಿವಾ ।
ವರ್ಣತ್ರಯಂ ತ್ರಾತಿ ಸೂಕ್ಷ್ಮಾ ಸಾವಿತ್ರೀ ತತ ಈರಿತಾ ॥೨॥

ಸಾ ಧಾತೃಪತ್ನೀ ಪ್ರಾಗೇವ ವಿವಾಹಃ ಸುನಿರೂಪಿತಃ ।
ಕದಾಚಿತ್ಸತ್ಯಲೋಕೇ ಸಾ ಬ್ರಹ್ಮಣಃ ಸವಿಧೇ ಸ್ಥಿತಾ ॥೩॥

---

ಎಲೈ ಭೃಗುವಂಶಕ್ಕೆ ಅಲಂಕಾರಪ್ರಾಯನಾದ ಪರಶುರಾಮನೇ, ಅತ್ಯಂತಾಶ್ಚರ್ಯಕರವೂ, ಶ್ರೇಷ್ಠವೂ ಆದ ಸರಸ್ವತೀದೇವಿಯ ಶ್ಲಾಘ್ಯವಾದ ಮಹಿಮೆಯನ್ನು ಮತ್ತು ಮಹಿಮೆಯ ವಿವರಗಳ ವಿಷಯವನ್ನು ಹೇಳುವೆನು ಕೇಳು. ॥೧॥

ಸರಸ್ವತಿಯು ಶಂಕರನ ತಂಗಿಯೂ, ಮಂಗಳ ಸ್ವರೂಪಳೂ ಆಗಿದಾಳೆಂದು ನಿನಗೆ ಹಿಂದೆ ಹೇಳಿದ್ದೆನಷ್ಟೆ? ಈಕೆಯು ಮೂರು ವರ್ಣದವರನ್ನೂ ಎಲ್ಲರನ್ನೂ ಕಾಪಾಡುತ್ತಾಳೆ. ಆದ್ದರಿಂದ ಸೂಕ್ಷ್ಮಸ್ವರೂಪಳಾದ ಈಕೆಯು ಸಾವಿತ್ರೀ ಎಂದು ಕರೆಯಲ್ಪಡುತ್ತಾಳೆ. ॥೨॥

ಆಕೆಯೇ ಬ್ರಹ್ಮನ ಪತ್ನಿಯು. ಅವಳ ವಿವಾಹದ ವಿಷಯವನ್ನೂ ನಿನಗೆ ಹಿಂದೆಯೇ ಹೇಳಿರುತ್ತೇನೆ. ಒಂದು ಸಲ ಆಕೆಯು ಬ್ರಹ್ಮನ ಸಮೀಪದಲ್ಲಿ ಸತ್ಯಲೋಕದಲ್ಲಿದ್ದಳು. ॥೩॥

ಸಭಾಯಾಂ ಸಿದ್ಧದೇವರ್ಷಿ ಸಮೇತಾಯಾಂ ಭೃಗೂದ್ವಹ ।
ಸಂಸ್ತುತಾ ಸಿದ್ಧಋಷಿಭಿ ರ್ವಿವಿಧೈಃ ಸಂಸ್ತವೈಃ ಪೃಥಕ್ ॥೪॥

ಅನಾದರಪರೋ ಧಾತಾ ತತ್ಸ್ತವೇ ಪ್ರಹಸನ್ ಸ್ಥಿತಃ ।
ದೃಷ್ಟ್ವಾ ಸಾ ಬ್ರಹ್ಮಣಃ ಸ್ವಸ್ಮಿನ್ನವಜ್ಞಾನಂ ಚುಕೋಪ ಹಿ ॥೫॥

ಉವಾಚ ಲೋಕಧಾತಾರಂ ರೋಷಾರುಣಿತ ಲೋಚನಾ ।
ನ ತೇ ಯುಕ್ತಮವಜ್ಞಾನಂ ಮಯಿ ಸರ್ವಾತ್ಮನಾ ಯತಃ ॥೬॥

ಅಪಾರಯನ್ ಸೃಷ್ಟಿಕೃತ್ಯೇ ಯತ್ನೇನಾಽಽಸಾದಿತಾ ತ್ವಯಾ ।
ಸ್ಮರ ತತ್ಪ್ರಾಕ್ತನಂ ವೃತ್ತಂ ಯದಾ ನಾಽಹಂ ಸ್ಥಿತಾ ತವ ॥೭॥

---

ಎಲೈ ಭೃಗುವಂಶದಲ್ಲಿ ಶ್ರೇಷ್ಠನಾದ ಪರಶುರಾಮನೇ, ಸಿದ್ಧರು, ದೇವರ್ಷಿಗಳು ಮುಂತಾದವರಿಂದ ತುಂಬಿದ ಈ ಸಭೆಯಲ್ಲಿ ಅನೇಕ ವಿಧರಾದ ಸಿದ್ಧರು ಮತ್ತು ದೇವರ್ಷಿಗಳು ಈಕೆಯನ್ನು ನಾನಾವಿಧಗಳಾದ ಸ್ತೋತ್ರಗಳಿಂದ ಸ್ತೋತ್ರ ಮಾಡಿದರು. ॥೪॥

ಸರಸ್ವತಿಯ ಸ್ತೋತ್ರವನ್ನು ಅವರೆಲ್ಲರೂ ಈ ರೀತಿಯಲ್ಲಿ ಮಾಡುತ್ತಿರಲು ಬ್ರಹ್ಮನು ಅನಾಸಕ್ತಿಯನ್ನು ತೋರುತ್ತಾ ನಗುತ್ತಾ ಇದ್ದನು. ಬ್ರಹ್ಮನು ಹೀಗೆ ತನ್ನ ವಿಷಯದಲ್ಲಿ ತಿರಸ್ಕಾರವನ್ನು ತೋರಿಸಿದ್ದುದನ್ನು ಕಂಡು ಸರಸ್ವತಿಯು ಕೋಪಗೊಂಡಳು ! ॥೫॥

ಸರಸ್ವತಿಯು ಕೋಪದಿಂದ ಕೆಂಪೇರಿದ ಕಣ್ಣುಳ್ಳವಳಾಗಿ ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನನ್ನು ಕುರಿತು ಹೀಗೆಂದಳು.—ಓ ಬ್ರಹ್ಮನೇ, ನೀವು ಹೀಗೆ ಸರ್ವವಿಧದಲ್ಲೂ ನನ್ನನ್ನು ತಿರಸ್ಕರಿಸುವುದು ಸರಿಯಲ್ಲ. ॥೬॥

ಓ ಬ್ರಹ್ಮನೇ, ನೀನೊಬ್ಬನೇ ಲೋಕಸೃಷ್ಟಿಯ ಕಾರ್ಯವನ್ನು ಮಾಡಲು ಪ್ರಯತ್ನಪಟ್ಟು ಅಸಮರ್ಥನಾಗಿ ಕಡೆಗೆ ನನ್ನನ್ನು ಸಂಪಾದಿಸಿದೆ! ನಾನಿಲ್ಲದಿದ್ದ ವೇಳೆಯಲ್ಲಿ ನಿನಗುಂಟಾಗಿದ್ದ ಹಿಂದಿನ ತೊಂದರೆಯ ಸಮಾಚಾರವನ್ನು ಸ್ಮೃತಿಗೆ ತರುವವನಾಗು ! ॥೭॥

ದೀನಃ ಸಾಮರ್ಥ್ಯವಿಕಲಃ ಶರಣಂ ಜನನೀಂ ಗತಃ ।
ಶ್ರುತ್ವಾ ಪ್ರೋಕ್ತಂತು ಸಾವಿತ್ರ್ಯಾ ವಿಧಿಃ ಪ್ರಾಹ ಜ್ವಲನ್ ಕ್ರುಧಾ॥೮॥

ನೈವ ತ್ವಂ ವಕ್ತುಮರ್ಹಾ ಮಾಂ ಸ್ತ್ರೀಣಾಂ ಭರ್ತಾ ಹಿ ದೈವತಂ ।
ಭರ್ತುರಗ್ರೇ ಪೂಜ್ಯಭಾವಃ ಪತ್ನೀನಾಂ ಪ್ರವಿದೂಷಿತಃ ॥೯॥

ಅಜಾನತೀ ಸತೀವೃತ್ತ ಮಧಿಕ್ಷಿಪಸಿ ಮಾಂ ವೃಥಾ ।
ನ ಮೇ ಪತ್ನೀ ತ್ವಯೋಗ್ಯಾಽಸಿ ಸಚ್ಚಾರಿತ್ರ ವಿದೂಷಿಣೀ ॥೧೦॥

ನ ತ್ವಂ ಕ್ರತುವಿಧಾನೇಷು ಮಯಾ ಸಹ ಭವಿಷ್ಯಸಿ ।
ಇತಿ ಶಪ್ತಾ ತು ಸಾವಿತ್ರೀ ಪುನರತ್ಯಂತಕೋಪಿತಾ ॥೧೧॥

ಪ್ರತಿಶಾಪಂ ದದೌ ಧಾತ್ರೇ ಜ್ವಲಂತೀವ ಸುಮನ್ಯುನಾ ।
ಯದಿ ನಾಽರ್ಹಾ ಯಜ್ಞವಿಧೌ ಭವಾಮಿ ಶ್ರುಣು ತರ್ಹಿ ತೇ ॥೧೨॥

---

ಓ ಬ್ರಹ್ಮನೇ, ಆಗ ನೀನು ದೀನನೂ, ಅಶಕ್ತನೂ ಆಗಿ ಲೋಕಮಾತೆಯಾದ ತ್ರಿಪುರಾದೇವಿಯನ್ನು ಇದಕ್ಕಾಗಿ ಮರೆಹೊಕ್ಕೆ! ಸಾವಿತ್ರಿಯು ಹೇಳಿದ ಈ ಮಾತನ್ನು ಕೇಳಿ, ಬ್ರಹ್ಮನು ಕೋಪದಿಂದುರಿಯುತ್ತಾ ಈ ರೀತಿಯಲ್ಲಿ ಹೇಳಿದನು. ॥೮॥

ಎಲೌ ಸರಸ್ವತಿಯೇ, ನೀನು ಹೀಗೆ ನನ್ನ ವಿಷಯದಲ್ಲಿ ಮಾತನಾಡುವುದು ಸರಿಯಲ್ಲ. ಸ್ತ್ರೀಯರಿಗೆ ಗಂಡನೇ ದೇವರು. ಗಂಡಂದಿರೆದುರಿಗೆ ಸ್ತ್ರೀಯರಿಗೆ ಪೂಜ್ಯತೆಯು ದೋಷವೆಂದೆಣಿಸಲ್ಪಟ್ಟಿದೆ. ॥೯॥

ನೀನು ಪತಿವ್ರತಾಧರ್ಮವನ್ನೇ ತಿಳಿಯದೆ ನನ್ನನ್ನು ವ್ಯರ್ಥವಾಗಿ ನಿಂದಿಸುತ್ತಿದ್ದೀಯೆ. ಒಳ್ಳೆಯ ನಡೆವಳಿಕೆ ಇಲ್ಲದಿರುವ ನೀನು ನನ್ನ ಪತ್ನಿಯಾಗಿರಲು ಯೋಗ್ಯಳಾಗಿಲ್ಲ. ॥೧೦॥

ಆದ್ದರಿಂದ ಇನ್ನು ಮುಂದೆ ಯಾಗಾದಿರೂಪಕರ್ಮಗಳನ್ನು ಮಾಡುವಾಗ ನೀನು ನನ್ನ ಜೊತೆಯಲ್ಲಿರಬೇಡ. ಎಂದು ಬ್ರಹ್ಮನು ಅವಳಿಗೆ ಶಾಪವನ್ನು ಕೊಡಲಾಗಿ ಸಾವಿತ್ರಿಯು ಪುನಃ ಅತ್ಯಂತ ಕೋಪಗೊಂಡಳು. ॥೧೧॥

ಸರಸ್ವತಿಯು ಅತಿಕೋಪದಿಂದುರಿಯುತ್ತಾ ಬ್ರಹ್ಮನಿಗೆ ಪ್ರತಿಶಾಪವನ್ನು ಕೊಟ್ಟಳು! ನಿನ್ನ ಜೊತೆಯಲ್ಲಿ ನಾನು ಯಾಗಾದಿಕಾಲಗಳಲ್ಲಿರಲು ಅಯೋಗ್ಯಳಾದರೆ ನಿನಗೆ ನಾನು ಆಗ ಏನಾಗಿರುವೆನೆಂಬುದನ್ನು ಹೇಳುವೆನು. ಕೇಳು. ॥೧೨॥

ಭವಿತ್ರ್ಯಭೀರಕುಲಜಾ ಪತ್ನೀ ಯಜ್ಞವಿಧೌ ತವ।
ಪ್ರತಿಶಾಪಂ ನಿಶಮ್ಯಾಽಜಃ ಪುನಃ ಪ್ರಕುಪಿತೋಽಭವತ್ ॥೧೩॥

ಅಥ ದೇವಾದಯಃ ಸರ್ವೇ ದೃಷ್ಟ್ವಾ ಕ್ರುದ್ಧಪಿತಾಮಹಂ।
ಸಾವಿತ್ರೀಮಪಿ ಸಂಕ್ರುದ್ಧಾಂ ತುಷ್ಟುವುಃ ಪರಿವಾರಿತಾಃ ॥೧೪॥

ತಯೋಃ ಕ್ರೋಧೇನ ಜಗತೀ ಚಕಂಪೇಽತೀವ ಸರ್ವಥಾ।
ತತೋ ನಾರಾಯಣಶಿವೌ ತತ್ರಾಽಽಜಗ್ಮತುರಂಜಸಾ ॥೧೫॥

ಶ್ರುತ್ವಾ ವಿಧಿಂ ಚ ಸಾವಿತ್ರೀಂ ಕ್ಷಾಮಯಾಮಾಸತುಸ್ತದಾ।
ವಿಧೇ ನೈವಂ ಸಮುಚಿತಂ ತ್ರಿಪುರಾಯಾಃ ಕುಲೋದ್ಭವಾ ॥೧೬॥

---

ನೀನು ಯಾಗಮಾಡುವಾಗ "ಅಭೀರ ಎಂಬುವ ನೀಚಜಾತಿಯ ಹೆಂಗಸಾಗಿ ನಿನ್ನ ಜೊತೆಗೆ ಬರುವೆನು." ಎಂದು ಸರಸ್ವತಿಯು ತನಗೆ ಕೊಟ್ಟ ಶಾಪವನ್ನು ಕೇಳಿ ಬ್ರಹ್ಮನು ಪುನಃ ಬಹಳ ಕೋಪಗೊಂಡನು. ॥೧೩॥

ಅನಂತರದಲ್ಲಿ ದೇವತೆಗಳೇ ಮೊದಲಾದವರೆಲ್ಲರೂ ಕೋಪಗೊಂಡ ಬ್ರಹ್ಮನನ್ನೂ ಮತ್ತು ವಿಶೇಷವಾಗಿ ಕೋಪಗೊಂಡ ಸಾವಿತ್ರಿಯನ್ನೂ ನೋಡಿ, ಅವರಿಬ್ಬರನ್ನೂ ಸುತ್ತುಗಟ್ಟಿಕೊಂಡು ಸ್ತೋತ್ರಮಾಡಿದರು. ॥೧೪॥

ಬ್ರಹ್ಮಾ ಮತ್ತು ಸರಸ್ವತಿಯರಿಬ್ಬರೂ ಕೋಪಗೊಂಡಿದ್ದರಿಂದ ಭೂಮಿಯೇ ಬಹಳವಾಗಿ ಸರ್ವಪ್ರಕಾರವಲ್ಲಿಯೂ ನಡುಗಿತು. ಹೀಗಿರಲು ನಾರಾಯಣ ಮತ್ತು ಶಿವ ಇವರಿಬ್ಬರೂ ಅಲ್ಲಿಗೆ ಶೀಘ್ರವಾಗಿ ಬಂದರು. ॥೧೫॥

ಆಗ ಬ್ರಹ್ಮಾ ಮತ್ತು ಸಾವಿತ್ರಿ ಇವರಿಬ್ಬರೂ ಕೋಪಗೊಂಡಿರುವುದನ್ನು ಕೇಳಿ ಅವರು ಇಬ್ಬರೂ ಕ್ಷಮಿಸುವಂತೆ ಮಾಡಿದರು. ಓ ಬ್ರಹ್ಮನೇ, ತ್ರಿಪುರಾದೇವಿಯ ವಂಶದಲ್ಲಿ ಹುಟ್ಟಿದ ಸರಸ್ವತೀದೇವಿಯನ್ನು ನೀನು ಹೀಗೆ ಅವಮಾನಮಾಡಿದ್ದು ಸರಿಯಲ್ಲ, ಎಂದರು. ॥೧೬॥

ಯಾ ತೇಽಪಮಾನಿತಾ ದೇವೀ ಸಾವಿತ್ರೀ ತನ್ನಶೋಭನಂ ।
ಶೃಣು ದೇವಿ ತ್ವಯಾಽಪ್ಯೇತಚ್ಛಾಪದಾನಮಚಿಂತಿತಂ ॥೧೭॥

ನ ತದ್ಯೋಗ್ಯಂ ಪ್ರತಿಕೃತಿರಾವಾಭ್ಯಾಮುಚ್ಯತೇ ಯಥಾ ।
ಯಜ್ಞಾನರ್ಹೇತಿ ಯತ್ಪ್ರೋಕ್ತಂ ಧಾತ್ರಾ ರುಷ್ಟೇನ ಯತ್ತ್ವಯಾ ॥೧೮॥

ಅಭೀರಜಾ ಭವೇತ್ಪತ್ನೀ ಚೇತಿ ತತ್ರ ವಿನಿಶ್ಚಿತಂ ।
ತ್ವಮೇವ ಸ್ವಾಂಶತೋಽಭೀರ ಕುಲಜಾ ಯಜ್ಞಕರ್ಮಣಿ ॥೧೯॥

ಉಪಯೋಕ್ಷ್ಯಸಿ ನಾನೇನ ದೇಹೇನ ಯಜ್ಞಭಾಗಿನೀ ।
ಶ್ರುತ್ವೈವಂ ವಿಷ್ಣುಶಿವಯೋರುಕ್ತಂ ಧಾತಾ ಚ ಭಾರತೀ ॥೨೦॥

---

ಓ ಬ್ರಹ್ಮನೇ, ಇಂತಹ ಸಾವಿತ್ರೀದೇವಿಯನ್ನು ನೀನು ಅವಮಾನಮಾಡಿದ್ದು ಅನುಚಿತವು. ಎಲೌ ಸರಸ್ವತೀದೇವಿಯೇ, ನೀನೂ ಕೂಡ ಬ್ರಹ್ಮನಿಗೆ ಪ್ರತಿಯಾಗಿ ಶಾಪದಾನಮಾಡಿದ್ದು ಅಯುಕ್ತವು! ॥೧೭॥

ಹೀಗೆ ನೀವಿಬ್ಬರೂ ಪರಸ್ಪರವಾಗಿ ಶಾಪವನ್ನು ಕೊಟ್ಟು ತೆಗೆದುಕೊಂಡಿದ್ದು ಯುಕ್ತವಾಗಿಲ್ಲ. ಆದ್ದರಿಂದ ನಾವಿಬ್ಬರೂ ಇದಕ್ಕೆ ಪರಿಹಾರೋಪಾಯವನ್ನು ತಿಳಿಸುವೆವು—ಓ ಬ್ರಹ್ಮನೇ, ನೀನು ಕೋಪಗೊಂಡು ಸರಸ್ವತಿಯು ನೀನು ಮಾಡುವ ಯಾಗಕಾಲಗಳಲ್ಲಿ ಜೊತೆಯಲ್ಲಿರಬಾರದು ಎಂದು ಶಾಪಕೊಟ್ಟೆಯಷ್ಟೆ? ॥೧೮॥

ಮತ್ತು ಸಾವಿತ್ರಿಯೂ ತಾನೂ ಅಭೀರಜಾತಿಯ ಹೆಂಗಸಾಗಿ ನೀನು ಮಾಡುವ ಯಾಗಕಾಲಗಳಲ್ಲಿ ಜೊತೆಯಲ್ಲಿರುವೆನೆಂದು ಹೇಳಿದಳಷ್ಟೆ? ಇವೆರಡು ಶಾಪಗಳೂ ವ್ಯರ್ಥವಾಗಲಾರವು. ಆದರೆ ಅವಕ್ಕೆ ಪರಿಹಾರೋಪಾಯಗಳನ್ನು ತಿಳಿಸುವೆವು. ಎಲೌ ಸರಸ್ವತಿಯೇ, ನಿನ್ನಂಶದಿಂದಲೇ ಅಭೀರಕುಲದವಳಾಗಿ ಇವನು ಮಾಡುವ ಯಾಗಕಾಲಗಳಲ್ಲಿ ಇವನ ಜೊತೆಯಲ್ಲಿರುವೆ. ॥೧೯॥

ಆದರೆ ನಿನ್ನ ಈ ದೇಹದಿಂದಲೇ ಅವನು ಮಾಡುವ ಯಾಗಗಳಲ್ಲಿ ಭಾಗ ವಹಿಸುವುದಿಲ್ಲ. ವಿಷ್ಣು ಮತ್ತು ಶಿವ ಇವರು ಹೇಳಿದ ಮಾತುಗಳನ್ನು ಕೇಳಿ ಬ್ರಹ್ಮನೂ ಮತ್ತು ಭಾರತಿಯೂ ಪುನಃ ಕೋಪಗೊಂಡರು. ॥೨೦॥

ಶೇಪತುಃ ಕೋಪಶೇಷೇಣ ಪುನಸ್ತತ್ರೇತರೇತರಂ ।
ವಿಧಿರಾಹಾಽಭೀರಜೈಷಾ ಭೂಯಾತ್ಪತ್ನೀ ಸವೇ ಮಮ ॥೨೧॥

ಯತೋಽ ವಿಚಾರಪರಮಾ ಮಾಂ ಶಶಾಪ ರುಷಾಽನ್ವಿತಾ ।
ತತೋಽಂಶೇನಾಽಪಿ ಸಂಜಾತಾಂ ಸ್ಮೃತಿರೇನಾಂ ಪ್ರಹಾಸ್ಯತಿ ॥೨೨॥

ಶ್ರುತ್ವಾ ಶಾಪಂ ಪುನರ್ದತ್ತಂ ಭಾರತೀ ಚಾಽತಿಕೋಪಿತಾ ।
ವಿಧಿಂ ಪ್ರತಿ ಶಶಾಪಾಽಶು ಯತಸ್ತೇ ನ ವಿಮರ್ಶನಂ ॥೨೩॥

ತತೋಽ ವಿಮೃಶ್ಯ ಚಾಽಕಾಮ್ಯಾ ಕಾಮುಕಸ್ತ್ವಂ ಭವಿಷ್ಯಸಿ ।
ಪುನರ್ವಿಮೃಷ್ಟ ಶಾಪೌ ತೌ ದೃಷ್ಟ್ವಾ ಕ್ರುದ್ಧೌ ಹರೀಶ್ವರೌ ॥೨೪॥

---

ಅವರಿಬ್ಬರೂ ಕೋಪವಿನ್ನೂ ಉಳಿದಿದ್ದುದರಿಂದ ಪರಸ್ಪರ ಪುನಃ ಶಾಪವನ್ನು ಕೊಟ್ಟು ತೆಗೆದುಕೊಂಡರು! ಇವಳು ಆಭೀರಕುಲದಲ್ಲಿ ಹುಟ್ಟಿದವಳಾಗಿ ಯಾಗಕಾಲಗಳಲ್ಲಿ ತನ್ನ ಜೊತೆಯಲ್ಲಿರಲಿ. ॥೨೧॥

ಇವಳು ವಿವೇಕವಿಲ್ಲದೇ ನನ್ನಮೇಲೆ ಕೋಪಗೊಂಡು ಹೀಗೆ ಶಾಪಕೊಟ್ಟಿದ್ದರಿಂದ ತನ್ನ ಅಂಶದಲ್ಲೇ ಅಭೀರಕುಲದಲ್ಲಿ ಹುಟ್ಟಿದರೂ ಅವಳಿಗೆ ನನ್ನ ನಿಜವಾದ ಸ್ವರೂಪದ ಜ್ಞಾಪಕವಿಲ್ಲದೇ ಹೋಗುವುದು. ॥೨೨॥

ಬ್ರಹ್ಮನು ಪುನಃ ಈ ರೀತಿಯಲ್ಲಿ ಶಾಪವನ್ನು ಕೊಟ್ಟದ್ದನ್ನು ಕೇಳಿ ಸರಸ್ವತಿಯು ಬಹಳ ಕೋಪಗೊಂಡಳು. ಮತ್ತು ಇವಳು ವಿಚಾರಮಾಡದೇ ಬ್ರಹ್ಮನು ತನಗೆ ಶಾಪಕೊಟ್ಟದ್ದನ್ನು ನೋಡಿ ಅವನಿಗೆ ಈ ರೀತಿಯಲ್ಲಿ ಪ್ರತಿಶಾಪವನ್ನು ಕೊಟ್ಟಳು. ॥೨೩॥

ಆದ್ದರಿಂದ ನೀನೂ ಕೂಡ ವಿಚಾರಮಾಡದೇ ಕಾಮಿಸಲು ಯೋಗ್ಯಳಲ್ಲದ ಆ ಅಭೀರಜಾತಿಯ ಹೆಂಗಸಾಗಿ ಹುಟ್ಟುವ ನನ್ನನ್ನೇ ಮೋಹಿಸುವಂತಾಗು! ಹೀಗೆ ಪರಸ್ಪರ ಬ್ರಹ್ಮಾ ಮತ್ತು ಸರಸ್ವತಿಯರಿಬ್ಬರೂ ಪುನಃ ಶಾಪವನ್ನು ಕೊಟ್ಟದ್ದನ್ನು ಕಂಡು ವಿಷ್ಣು ಮತ್ತು ಶಿವ ಇವರಿಬ್ಬರೂ ಬಹಳವಾಗಿ ಕೋಪಗೊಂಡರು. ॥೨೪॥

ಚಕ್ರತುಃ ಸಂಸ್ತವಂ ತತ್ರ ಬಹುಧಾ ಪ್ರಾರ್ಥ್ಯ ಕ್ಷಾಮಿತೌ ।
ಅಥ ಕಾಲೇನ ಮಹತಾ ಬ್ರಹ್ಮಾ ಲೋಕಪಿತಾಮಹಃ ॥೨೫॥

ಪುಷ್ಕರಾಖ್ಯೇ ಮಹಾತೀರ್ಥೇ ಯಷ್ಟುಂ ವ್ಯವಸಿತೋಽಭವತ್ ।
ಆಜ್ಞಾಪಯದ್ಯಜ್ಞಶಾಲಾ ನಿರ್ಮಾಣೇ ದೇವಶಿಲ್ಪಿನಂ ॥೨೬॥

ಸ ಚಕಾರ ಯಜ್ಞಶಾಲಾಂ ಸರ್ವತಃ ಸಮಲಂಕೃತಾಂ ।
ಕ್ಲೃಪ್ತಸಂಭಾರಸರ್ವಸ್ವಾಂ ವೇದೀಕುಂಡಾದಿಮಂಡಿತಾಂ ॥೨೭॥

ನವರತ್ನಸಮಾಕೀರ್ಣಾಂ ಸರ್ವರ್ತುಗುಣಶೋಭಿತಾಂ ।
ಸೌವರ್ಣ ಭಾಂಡನಿಚಯಾ ಮನ್ನಪಾನಸಮಾಕುಲಾಂ ॥೨೮॥

---

ಅವರಿಬ್ಬರೂ ಬ್ರಹ್ಮ ಮತ್ತು ಸರಸ್ವತಿಯರನ್ನು ಅನೇಕವಿಧವಾಗಿ ಸ್ತೋತ್ರ ಮಾಡಿ, ಅವರು ಪರಸ್ಪರ ಕ್ಷಮಿಸುವಂತೆ ಮಾಡಿದರು. ಅನಂತರದಲ್ಲಿ ಬಹಳ ಕಾಲ ವಾದ ಮೇಲೆ ಲೋಕಕ್ಕೆ ತಂದೆಯಾದ ಬ್ರಹ್ಮನು ಪುಷ್ಕರತೀರಕ್ಕೆ ಹೋದನು. ॥೨೫॥

ಬ್ರಹ್ಮನು ಪುಷ್ಕರ ಎಂಬ ಆ ತೀರ್ಥದಲ್ಲಿ ಯಾಗಮಾಡಲು ನಿಶ್ಚಯಿಸಿದನು. ಅದಕ್ಕಾಗಿ ಯಾಗಶಾಲೆಯನ್ನು ಕಟ್ಟಲು ದೇವಶಿಲ್ಪಿಯಾದ ವಿಶ್ವಕರ್ಮನಿಗೆ ಅಪ್ಪಣೆ ಯನ್ನು ಮಾಡಿದನು. ॥೨೬॥

ದೇವಶಿಲ್ಪಿಯು ಎಲ್ಲಾ ಕಡೆಯಲ್ಲಿಯೂ ಚೆನ್ನಾಗಿ ಅಲಂಕಾರಮಾಡಿರುವ ಯಾಗಶಾಲೆಯನ್ನೂ ಮತ್ತು ಎಲ್ಲಾ ಸಾಮಗ್ರಿಗಳಿಂದ ಸಿದ್ಧಪಡಿಸಿದ ಯಾಗ ಕುಂಡವೇ ಮೊದಲಾದುದರಿಂದ ಅಲಂಕರಿಸಲ್ಪಟ್ಟ ಯಾಗದ ಜಗುಲಿಯನ್ನೂ ಸಿದ್ಧ ಗೊಳಿಸಿದನು. ॥೨೭॥

ಅವನು ಒಂಬತ್ತುವಿಧವಾದ ರತ್ನಗಳಿಂದ ಕೆತ್ತಲ್ಪಟ್ಟಿರುವ, ಎಲ್ಲಾ ಋತುಗಳ ಗುಣಗಳಿಂದಲೂ ಶೋಭಿಸುತ್ತಿರುವ, ಚಿನ್ನದ ದೊಡ್ಡ ದೊಡ್ಡ ಪಾತ್ರೆಗಳ ಸಮೂಹ ವುಳ್ಳ, ಅನೇಕವಿಧವಾದ ಅನ್ನಗಳು ಮತ್ತು ಪಾನೀಯಗಳಿಂದ ತುಂಬಿರುವ ಯಾಗ ಶಾಲೆಯನ್ನು ರಚಿಸಿದನು. ॥೨೮॥

ತತ್ರ ವಿಪ್ರಾ ಯಾಜಕಾಗ್ರ್ಯಾ ಭೃಗುಕಶ್ಯಪಕರ್ದಮಾಃ ।
ವಸಿಷ್ಠ ಪುಲಹಾಗಸ್ತ್ಯ ಪುಲಸ್ತ್ಯಕ್ರತು ಮುಖ್ಯಕಾಃ ॥೨೯॥

ಆಜಗ್ಮುಃ ಸರ್ವತಃ ಶ್ರೇಷ್ಠಾಶ್ಚಾನ್ಯೇಽಪಿ ಮುನಿಪುಂಗವಾಃ ।
ಶ್ರೌತವಿದ್ಯಾಸು ಕುಶಲಾಃ ಸರ್ವವಿದ್ಯಾ ವಿಶಾರದಾಃ ॥೩೦॥

ವಾಸವ ಪ್ರಮುಖಾ ದೇವಾ ಗಂಧರ್ವಾಶ್ಚಾಪ್ಸರೋಗಣಾಃ ।
ವಿದ್ಯಾಧರಾಃ ಕಿಂಪುರುಷಾಃ ಸ ಕಿನ್ನರ ಮಹೋರಗಾಃ ॥೩೧॥

ಯಾತುಧಾನಾಸುರಗಣಾಃ ಮನುಷ್ಯಾಶ್ಚ ಸಮಂತತಃ ।
ಅಭ್ಯಾಗಮನ್ ಯಜ್ಞವಾಟಂ ಪುಷ್ಕರೇ ಸರ್ವತೋ ದಿಶಂ ॥೩೨॥

ಜಗುರ್ಗಂಧರ್ವಪತಯೋ ನನಂದುಶ್ಚಾಪ್ಸರೋಗಣಾಃ ।
ವಂದಿನೋ ವಿಧಿಮುಖ್ಯಾನಾ ಮುಪಠನ್ ವಿವಿಧಾಃ ಸ್ತುತೀಃ ॥೩೩॥

---

ಅಲ್ಲಿಗೆ ಯಾಗಮಾಡಿಸುವುದರಲ್ಲಿ ನಿಪುಣರಾದ ಭೃಗು, ಕಶ್ಯಪ, ಕರ್ದಮ, ವಸಿಷ್ಠ, ಪುಲಹ, ಅಗಸ್ತ್ಯ, ಪುಲಸ್ತ್ಯ, ಕ್ರತು ಮುಂತಾದ ಅನೇಕ ಶ್ರೇಷ್ಠ ಋಷಿಗಳು ಬಂದರು. ॥೨೯॥

ಶ್ರೌತಕರ್ಮಗಳ ವಿಷಯದಲ್ಲಿ ವಿಶೇಷ ತಿಳುವಳಿಕೆಯುಳ್ಳ, ಸಮಸ್ತ ವಿದ್ಯಾ ಪಾರಂಗತರಾದ ಶ್ರೇಷ್ಠರಾದ ಇತರ ಋಷಿಶ್ರೇಷ್ಠರು ಎಲ್ಲಾ ಕಡೆಗಳಿಂದಲೂ ಅಲ್ಲಿಗೆ ಬಂದರು. ॥೩೦॥

ಇಂದ್ರನೇ ಮೊದಲಾದ ದೇವತೆಗಳೂ, ಗಂಧರ್ವರೂ, ಅಪ್ಸರೆಯರ ಗುಂಪಿನವರೂ, ವಿದ್ಯಾಧರರೂ, ಕಿಂಪುರುಷರೂ, ಕಿನ್ನರರೊಡನೆ ದೊಡ್ಡ ದೊಡ್ಡ ನಾಗ ದೇವತೆಗಳೂ ಇವರೆಲ್ಲರೂ ಅಲ್ಲಿಗೆ ಬಂದರು. ॥೩೧॥

ದಾನವರು, ರಾಕ್ಷಸರ ಗುಂಪಿನವರೂ, ಮನುಷ್ಯರೂ ಎಲ್ಲಾ ಕಡೆಗಳಿಂದಲೂ ಪುಷ್ಕರತೀರ್ಥದಲ್ಲಿದ್ದ ಆ ಯಾಗಶಾಲೆಗೆ ಬಂದರು. ॥೩೨॥

ಗಂಧರ್ವಪತಿಗಳು ಗಾನಮಾಡಿದರು. ಅಪ್ಸರೆಯರ ಗುಂಪಿನವರು ನರ್ತನ ಮಾಡಿದರು. ಹೊಗಳುಭಟರು ಬ್ರಹ್ಮನೇ ಮೊದಲಾದವರಿಗೆ ಸಂಬಂಧಪಟ್ಟ ಅನೇಕ ವಿಧವಾದ ಸ್ತೋತ್ರಗಳನ್ನು ಹೇಳಿದರು. ॥೩೩॥

ಅಥ ಕಾಲೇಽತಿ ಕಲ್ಯಾಣೇ ಸುನಕ್ಷತ್ರ ಗ್ರಹೈರ್ಯುತೇ ।
ಯಕ್ಷ್ಯಮಾಣಃ ಪ್ರಿಯಾಂ ಪತ್ನೀಮಾಹ್ವಯಜ್ಜಗತೀಪತಿಃ ॥೩೪॥

ಇಂದ್ರಾದಿಭಿಃ ಸಮಾಹೂತಾ ದೇವಿ ದೇವಶ್ಚತುರ್ಮುಖಃ ।
ಯಕ್ಷ್ಯಮಾಣಃ ಶುಭೇ ಕಾಲೇ ಚಿರಾತ್ತ್ವಾಂ ಸಂಪ್ರತೀಕ್ಷತೇ ॥೩೫॥

ವ್ರಜ ತತ್ರಾಽಚಿರಂ ದೇವಿ ಕಾಲೋಽಯಂ ವೀಕ್ಷಿತಃ ಶುಭಃ ।
ನಾತಿಯಾಯಾತ್ಸರ್ವಥೈವ ಪ್ರೋಕ್ತಾಽಪ್ಯೇವಂ ವಿಧೇಃ ಪ್ರಿಯಾ ॥೩೬॥

ಅವಶ್ಯಂ ಭಾವಿ ಭಾವೇನ ಸಾವಿತ್ರೀ ನ ಸಮಾಗತಾ ।
ವಿಲಂಬಯಂತೀ ತಾಂ ಜ್ಞಾತ್ವಾ ಮುಹೂರ್ತಃ ಸಮತಿಕ್ರಮೇತ್ ॥೩೭॥

ಇತಿ ಕ್ರುದ್ಧೋ ವಿಧಿರ್ವಿಷ್ಣುಂ ಪ್ರೋವಾಚ ಪುರತಃ ಸ್ಥಿತಂ ।
ಹರೇ ಪ್ರಯಾಹಿ ಪತ್ನೀಂ ಮೇ ಸರೂಪಾ ಮಪರಾಂ ದ್ರುತಂ ॥೩೮॥

---

ಅನಂತರ ಶುಭನಕ್ಷತ್ರ ಮತ್ತು ಗ್ರಹಗಳಿಂದ ಕೂಡಿದ ಬಹಳ ಮಂಗಳಕರವಾದ ಕಾಲದಲ್ಲಿ ಯಾಗಮಾಡುವ ಲೋಕಕ್ಕೆ ಅಧಿಪತಿಯಾದ ಬ್ರಹ್ಮನು ತನ್ನ ಪ್ರಿಯಪತ್ನಿಯನ್ನು ತನ್ನ ಜೊತೆಗೆ ಕರೆದನು. ॥೩೪॥

ಇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನ ಪತ್ನಿಯನ್ನು ಕುರಿತು, ಎಲೌ ದೇವಿಯೇ, ಚತುರ್ಮುಖನಾದ ಬ್ರಹ್ಮನು ಯಾಗಮಾಡುವವನಾಗಿ ಈ ಮಂಗಳ ಕಾಲದಲ್ಲಿ ಬಹಳ ಹೊತ್ತಿನಿಂದ ನೀನು ಬರುವುದನ್ನು ನಿರೀಕ್ಷಿಸುತ್ತಿರುತ್ತಾನೆ! ಎಂದರು. ॥೩೫॥

ಎಲೌ ದೇವಿಯೇ, ಆದ್ದರಿಂದ ಶೀಘ್ರವಾಗಿ ಅಲ್ಲಿಗೆ ತೆರಳು. ಇದು ಮಂಗಳ ಕಾಲವಾಗಿದೆಯಾದ್ದರಿಂದ ಇದನ್ನು ಸರ್ವವಿಧದಲ್ಲೂ ಮೀರಬಾರದು. ಎಂದು ಅವರೆಲ್ಲರೂ ಹೇಳಿದರೂ ಬ್ರಹ್ಮನ ಪತ್ನಿಯು ಹೊರಡಲೇ ಇಲ್ಲ. ॥೩೬॥

ಮುಂದೆ ಆಗಬೇಕಾದದ್ದು ಆಗಿಯೇ ಆಗುವುದು! ಆದುದರಿಂದಲೇ ಸಾವಿತ್ರಿಯು ಬ್ರಹ್ಮನ ಯಾಗಶಾಲೆಗೆ ಬರಲೇಇಲ್ಲ. ಬ್ರಹ್ಮನು ಇದನ್ನು ತಿಳಿದು ಕಾಲವು ಮೀರುವುದೆಂದು ಶಂಕಿಸಿದನು. ॥೩೭॥

ಮತ್ತೂ ಬ್ರಹ್ಮನು ಕೋಪಿಸಿಕೊಂಡು ತನ್ನ ಮುಂದಿದ್ದ ವಿಷ್ಣುವನ್ನು ಕುರಿತು, ಎಲೈ ವಿಷ್ಣುವೇ, ನೀನು ಹೋಗಿ ನನಗೆ ಯೋಗ್ಯಳಾದ ಮತ್ತೊಬ್ಬಳು ಪತ್ನಿಯನ್ನು ಶೀಘ್ರವಾಗಿ ಕರೆದುಕೊಂಡು ಬಾ. ಎಂದು ಹೇಳಿದನು. ॥೩೮॥

ಸಮಾನಯ ಮುಹೂರ್ತೋಽಯಂ ಯಥಾ ನಾಽತಿವ್ರಜೇತ್ತ್ರಥಾ ।
ಸಮಾದಿಷ್ಟೋ ವಿಧಾತ್ರೈವಂ ಹರಿರನ್ವಿಷ್ಯ ಭೂತಲೇ ।
ದೃಷ್ಟ್ವಾ ಸರೂಪಾಂ ಸಾವಿತ್ರ್ಯಾ ಸಮಾನಯತ ವೈ ಹರಿಃ ॥೩೯॥

ಬ್ರಾಹ್ಮಣಾದಿಷ್ವಲಬ್ಧ್ವಾ ತತ್ಸರೂಪಾಂ ಗೋಪಕನ್ಯಕಾಂ ॥೪೦॥

ತಾಮಾನೀತಾಂ ವಿಲೋಕ್ಯಾಽಹುಃ ಶುಭರೂಪ ಗುಣಾನ್ವಿತಾಂ ।
ಮಹಾನ್ ಶಬ್ದಃ ಸಮಭವತ್ಸಾಧು ಸಾಧ್ವಿತಿ ಸರ್ವತಃ ॥೪೧॥

ಪರಿಣೀಯ ಚ ತಾಂ ಪತ್ನೀಂ ಯಕ್ಷ್ಯಮಾಣೋ ವಿಧಿಸ್ತದಾ ।
ಸಂಕಲ್ಪ್ಯ ಕ್ರತುರಾಜಂ ತಂ ಪ್ರಾವರ್ತಯತ ಲೋಕಪಃ ॥೪೨॥

ಅಥಾಽಜಗಾಮ ಸಾವಿತ್ರೀ ಯಜ್ಞಶಾಲಾಂ ಸಖೀವೃತಾ ।
ದದರ್ಶ ಬ್ರಹ್ಮಣಃ ಪಾರ್ಶ್ವೇ ಗಾಯತ್ರೀಂ ಲೋಕಸುಂದರೀಂ ॥೪೩॥

---

ಎಲೈ ವಿಷ್ಣುವೇ, ಅಂತಹವಳನ್ನು ಕರೆದುಕೊಂಡು ಬಾ! ಈ ಶುಭಮುಹೂರ್ತವು ಮೀರಿದಂತಾಗಬಾರದು. ಎಂದು ಬ್ರಹ್ಮನು ಅಪ್ಪಣೆಮಾಡಲು ವಿಷ್ಣುವು ಭೂಮಿಯಲ್ಲಿ ಅಂಥವಳನ್ನು ಹುಡುಕಿದನು. ॥೩೯॥

ವಿಷ್ಣುವು ಬ್ರಾಹ್ಮಣರೇ ಮೊದಲಾದ ಜನಾಂಗಗಳಲ್ಲಿ ಬ್ರಹ್ಮನಿಗೆ ಯೋಗ್ಯಳಾದ, ಸಾವಿತ್ರಿಗೆ ಸಮಾನಳಾದ, ಕನ್ನಿಕೆಯನ್ನು ಕಾಣದೇ, ಸಾವಿತ್ರಿಗೆ ಸಮಳಾದ ಗೊಲ್ಲರ ಕನ್ಯೆಯೊಬ್ಬಳನ್ನು ಕಂಡು ಅವಳನ್ನು ಕರೆದುಕೊಂಡುಬಂದನು. ॥೪೦॥

ಮಂಗಳಕರವಾದ ರೂಪ ಮತ್ತು ಗುಣಗಳಿಂದ ಕೂಡಿದ ಅವಳನ್ನು ಕರೆದುಕೊಂಡು ಬಂದಿರುವುದನ್ನು ನೋಡಿ ಆ ಶಾಲೆಯಲ್ಲಿದ್ದವರೆಲ್ಲರೂ ಭಲೇ ಭೇಷ್ ಎಂದು ಎಲ್ಲಾ ಕಡೆಯಲ್ಲಿಯೂ ಹೊಗಳಿದರು. ॥೪೧॥

ಆಗ ಲೋಕೇಶನಾದ ಬ್ರಹ್ಮನು ಅವಳನ್ನು ಕೂಡಲೇ ಮದುವೆಯಾಗಿ ಅವಳ ಜೊತೆಯಲ್ಲಿ ಶ್ರೇಷ್ಠವಾದ ಯಾಗವನ್ನು ಪ್ರಾರಂಭಿಸಿದನು. ॥೪೨॥

ತರುವಾಯ ಆ ಸಾವಿತ್ರಿಯು ತನ್ನ ಸಖಿಯರೊಂದಿಗೆ ಆ ಯಾಗಶಾಲೆಗೆ ಬಂದಳು. ಅವಳು ಬ್ರಹ್ಮನ ಪಕ್ಕದಲ್ಲಿದ್ದ ಲೋಕಸುಂದರಿಯಾದ ಗಾಯತ್ರೀದೇವಿಯನ್ನು ನೋಡಿದಳು! ॥೪೩॥

ತಚ್ಛೋಭಾಕ್ಷಿಪ್ತಸೌಂದರ್ಯಾ ತಾರಾ ರಾಕೇಂದುನಾ ಯಥಾ ।
ಆತ್ಮಾನಂ ಜಾನತೀ ಸಭ್ಯೈರ್ಹಸಿತೇವ ವಿಲಜ್ಜಿತಾ ॥೪೪॥

ಪ್ರಾಲೇಯ ದರ್ಶನಾತ್ಪದ್ಮಮಿವ ಶುಷ್ಕನ್ಮುಖಾಂಬುಜಾ ।
ಪ್ರವಿಶಂತೀವ ಸ್ವಾಂಗೇಷು ಲಜ್ಜಾಶೈಲಭರಾವೃತಾ ॥೪೫॥

ಕ್ಷಣಂ ವಿಸಂಜ್ಞೇವ ತತ್ರ ಲೇಖ್ಯ ಕರ್ಮಗತೇವ ಸಾ ।
ಸ್ಥಿತಾ ಸ್ಥಾಣು ಸಮಾಚಾರಾ ತತಃ ಸರ್ವಂ ನಿಶಾಮ್ಯ ತತ್ ॥೪೬॥

ವಿಧೇರ್ವಿಚೇಷ್ಟಿತಂ ಚಾತಿತರಾಂ ಮನ್ಯುಪರೀವೃತಾ ।
ಪ್ರಜಜ್ವಾಲ ತ್ರಿಲೋಕೀಂ ಸಾ ಕುರ್ವಂತೀ ಭಸ್ಮಸಾದಿವ ॥೪೭॥

---

ಪೂರ್ಣಿಮೆಯ ಚಂದ್ರನ ಮುಂದಿರುವ ನಕ್ಷತ್ರವು ಹೇಗೋ ಹಾಗೆ, ಅವಳ ಕಾಂತಿಯನ್ನು ನೋಡಿ ಕುಂದಿದ ಸೌಂದರ್ಯವುಳ್ಳವಳಾಗಿ, ತನ್ನನ್ನು ಸಭಿಕರು ಹಾಸ್ಯ ಮಾಡುತ್ತಿರುವರೋ ಎಂದು ಭಾವಿಸಿ ಸಾವಿತ್ರಿಯು ಬಹಳ ನಾಚಿಕೆಕೊಂಡಳು.॥೪೪॥

ಚಂದ್ರನನ್ನು ನೋಡುವುದರಿಂದ ಕಮಲವು ಹೇಗೋ ಹಾಗೆ, ಸಾವಿತ್ರಿಯು ಅವಳನ್ನು ನೋಡಿ ಒಣಗುತ್ತಿರುವ ತನ್ನ ಮುಖವೆಂಬ ಕಮಲವುಳ್ಳವಳಾಗಿ ನಾಚಿಕೆಯೆಂಬ ಪರ್ವತದೊಳಗೆ ಮುಚ್ಚಿಕೊಂಡಿರುವಳೋ ಎಂಬಂತೆ ಸಾವಿತ್ರಿಯು ತನ್ನ ಅವಯುವಗಳೊಳಗೆ ಮುದಿರುಕೊಂಡಂತೆ ನಿಂತಿದ್ದಳು. ॥೪೫॥

ಸಾವಿತ್ರಿಯು ಒಂದು ಕ್ಷಣಕಾಲ ಮೂರ್ಛೆಹೋದಂತೆಯೂ ಚಿತ್ರದಲ್ಲಿ ಬರೆಯಲ್ಪಟ್ಟವಳೋ ಎಂಬಂತೆಯೂ ಕಂಬದಂತೆ ಸ್ತಬ್ಧಳಾಗಿ ನಿಂತಿದ್ದು ಆ ಮೇಲೆ ಚೇತರಿಸಿಕೊಂಡು ಆ ವಿದ್ಯಮಾನಗಳೆಲ್ಲವನ್ನೂ ತಿಳಿದಳು. ॥೪೬॥

ಬ್ರಹ್ಮನ ಈ ನಡೆವಳಿಕೆಗಳೆಲ್ಲವನ್ನೂ ನೋಡಿ ಸಾವಿತ್ರಿಯು ಬಹಳ ಕೋಪಗೊಂಡವಳಾಗಿ ಮೂರು ಲೋಕಗಳನ್ನೂ ಏಕಕಾಲದಲ್ಲಿ ಬೂದಿಮಾಡುವಳೋ ಎಂಬಂತೆ ಬಹಳ ಕೋಪದಿಂದ ಉರಿಯುತ್ತಿದ್ದಳು ! ॥೪೭॥

ಪ್ರಾಹ ಪ್ರಸ್ಫುರಮಾಣೋಷ್ಠೀ ಸಮಾಚೀರ್ಣಂ ತ್ವಯಾ ವಿಧೇ ।
ಇತ್ಯುಕ್ತ್ವಾ ನಿರ್ಯಯೌ ತಸ್ಮಾತ್ಸಾವಿತ್ರೀ ಯಜ್ಞದೇಶತಃ ॥೪೮॥

ಸಂಸ್ಥಿತಾ ಶೈಲಶೃಂಗಸ್ಯ ಮಧ್ಯೇ ತಸ್ಯಾಃ ವಿದೂರತಃ ।
ಅಥ ತಸ್ಯಾಃ ಕ್ರೋಧವಹ್ನಿ ಜ್ವಾಲಾಮಾಲಾಪರೀವೃತಃ ॥೪೯॥

ಪ್ರಾದುರಾಸೀ ದ್ಯಜ್ಞಶಾಲಾಂ ಸ ಋತ್ವಿಕ್ಸಸಭಾಸದಾಂ ।
ಸ ಯಜ್ಞಪತ್ನೀ ಸಂಭಾರಾಂ ದಿಧಕ್ಷನ್ನಿವ ಸರ್ವತಃ ॥೫೦॥

ವಾಯುನಾಽಪ್ಯೇಧಿತೋ ವಹ್ನಿರ್ಯದಾ ದಗ್ಧುಮುಪಾಕ್ರಮತ್ ।
ತದಾ ಪಲಾಯಿತಾಃ ಸರ್ವೇ ಸದಸ್ಯಾ ಋತ್ವಿಜಸ್ತಥಾ ॥೫೧॥

ದೇವಾ ಗಂಧರ್ವಮುನಯಃ ಸಿದ್ಧಚಾರಣಕಿನ್ನರಾಃ ।
ಅವಿಚಾರ್ಯೈವ ಚಾಽನ್ಯೋನ್ಯಂ ತ್ಯಕ್ತ್ವಸರ್ವಪರಿಗ್ರಹಾಃ ॥೫೨॥

---

ಕೋಪದಿಂದ ಅಲುಗುತ್ತಿರುವ ತುಟಿಗಳುಳ್ಳವಳಾಗಿ ಸಾವಿತ್ರಿಯು, ಓ ಬ್ರಹ್ಮನೇ, ಬಹಳ ಚೆನ್ನಾಗಿದೆ ನಿನ್ನ ನಡವಳಿಕೆ ! ಎಂದು ಹೇಳಿ ಆ ಯಾಗಶಾಲೆಯಿಂದ ತತ್‌ಕ್ಷಣದಲ್ಲಿ ಹೊರಟು ಹೋದಳು. ॥೪೮॥

ಸಾವಿತ್ರಿಯು ಆ ಯಾಗಶಾಲೆಯ ಸಮೀಪದಲ್ಲಿದ್ದ ಪರ್ವತದ ತುದಿಯ ಮಧ್ಯಭಾಗದಲ್ಲಿದ್ದಳು. ಆ ಬಳಿಕ ಆಕೆಯ ಕೋಪದಿಂದುಂಟಾದ ಬೆಂಕಿಯ ಜ್ವಾಲೆಗಳ ಸಾಲು ಅಲ್ಲೆಲ್ಲಾ ಹರಡಿತು. ॥೪೯॥

ಆ ಬೆಂಕಿಯು ಋತ್ವಿಕ್ಕುಗಳೂ, ಸಭಾಸದರೂ ಎಲ್ಲರನ್ನೂ ಯಜಮಾನ, ಅವನ ಪತ್ನೀ, ಯಾಗಸಾಮಗ್ರಿಗಳು ಇವುಗಳನ್ನೂ ಒಳಗೊಂಡಿದ್ದ ಯಾಗಶಾಲೆಯನ್ನು ಎಲ್ಲಾ ಕಡೆಯಲ್ಲಿಯೂ ಸುಟ್ಟುಬಿಡುವುದೋ ಎಂಬಂತೆ ಜ್ವಲಿಸಿತು ! ॥೫೦॥

ಆ ಬೆಂಕಿಯನ್ನು ಗಾಳಿಯೂ ವೃದ್ಧಿಗೊಳಿಸಿತು. ಆಗ ಅದು ಮಹತ್ತರವಾಗಿ ಜ್ವಲಿಸಿ ಅವನ್ನೆಲ್ಲವನ್ನೂ ಸುಡಲು ಪ್ರಾರಂಭಿಸಲು, ಅಲ್ಲಿದ್ದ ಸಭಿಕರು ಋತ್ವಿಕ್ಕುಗಳೂ ಎಲ್ಲರೂ ಪಲಾಯನಮಾಡಲು ಪ್ರಾರಂಭಿಸಿದರು. ॥೫೧॥

ದೇವತೆಗಳು ಗಂಧರ್ವರು, ಋಷಿಗಳು, ಸಿದ್ಧರು, ಚಾರಣರು, ಕಿನ್ನರರು ಒಬ್ಬರಿಗೊಬ್ಬರು ಸ್ವಲ್ಪವೂ ಯೋಚಿಸದೆ ಅವರಿಗೆ ಸಿಕ್ಕಿದ್ದ ಪದಾರ್ಥಗಳನ್ನೆಲ್ಲವನ್ನೂ ಅಲ್ಲಿಯೇ ಬಿಟ್ಟು ಓಡಲು ಪ್ರಾರಂಭಿಸಿದರು. ॥೫೨॥

ದಿಶೋ ದಶಾಃಭಿಪೇತುಸ್ತೇ ಕ್ರೋಂಶಂತೋ ಭಯಕಂಪಿತಾಃ ।
ಭೂಶ್ಚ ಕಂಪೇ ಮಹಾವಾಯುವೇಪಿತಾಽಶ್ವತ್ಥ ಪರ್ಣವತ್ ॥೫೩॥

ಅಂಧಕಾರೈರ್ದಿಶಃ ಕ್ರಾಂತಾ ಉದ್ವೇಲಾಃ ಸರ್ವಸಾಗರಾಃ ।
ರಾಹುಣೇವ ದಿವಾನಾಥ ಸ್ತಮಸಾ ಗ್ರಸಿತೋಽಭವತ್ ॥೫೪॥

ಪರ್ವತಾಶ್ಚ ವಿದೀರ್ಯಂತ ಕಲ್ಪಾಂತ ಸಮಯೇ ಇವ ।
ಏವಂ ಭೂತೇಷು ಲೋಕೇಷು ಚೋಽರ್ಧ್ವಾಧೋ ಭಾಗವರ್ತ್ಮಸು ॥೫೫॥

ಭೀತಾ ಬ್ರಹ್ಮಾದಯಸ್ಸರ್ವೇ ಕರ್ತವ್ಯೇಷ್ವವಿನಿಶ್ಚಯಾಃ ।
ಸಾವಿತ್ರೀ ಮನುಸಂಜಗ್ಮುಃ ಪ್ರಾರ್ಥಿತುಂ ಕ್ರಮಶಸ್ತದಾ ॥೫೬॥

ಆದಾವಿಂದ್ರೋ ದೇವಗಣೈರ್ಯುತಸ್ತತ್ರ ಜಗಾಮ ಹ ।
ಸಾವಿತ್ರೀಂ ಪ್ರಾರ್ಥಿತುಂ ಯತ್ರ ಶೈಲಶೃಂಗೇ ಸ್ಥಿತಾ ಹಿ ಸಾ ॥೫೭॥

---

ಅವರೆಲ್ಲರೂ ಭಯದಿಂದ ನಡುಗುವವರಾಗಿ ಕೂಗುತ್ತಾ ಹತ್ತು ದಿಕ್ಕುಗಳಿಗೂ ಓಡಿದರು. ದೊಡ್ಡ ಗಾಳಿಯಿಂದ ಅಲ್ಲಾಡಿಸಲ್ಪಟ್ಟ ಅರಳಿಮರದ ಎಲೆಯಂತೆ ಆ ಬೆಂಕಿಯಿಂದ ಭೂಮಿಯೂ ನಡುಗಿತು. ॥೫೩॥

ಎಲ್ಲೆಲ್ಲಿಯೂ ಕತ್ತಲೆಯು ಹರಡಿತು. ಎಲ್ಲಾ ಸಾಗರಗಳೂ ದಡವನ್ನು ಮೀರಿದವು. ಸೂರ್ಯನು ರಾಹುವಿನಿಂದ ಹೇಗೋ ಹಾಗೆ ಆ ಕತ್ತಲಿನಿಂದ ನುಂಗಲ್ಪಟ್ಟನು. ॥೫೪॥

ಪ್ರಳಯ ಕಾಲದಲ್ಲಿ ಹೇಗೋ ಹಾಗೆ ಪರ್ವತಗಳೂ ಸೀಳಿಹೋದವು. ಮೇಲಿನ ಮತ್ತು ಕೆಳಗಿನ ಮತ್ತು ಎಲ್ಲಾ ಲೋಕಗಳೂ ಈ ರೀತಿಯಲ್ಲಿ ತೊಂದರೆಗೀಡಾದವು. ॥೫೫॥

ಆಗ ಬ್ರಹ್ಮನೇ ಮೊದಲಾದವರೂ ಭಯಗೊಂಡವರಾಗಿ ಏನು ಮಾಡುವುದಕ್ಕೂ ತೋಚದೆ ಸಾವಿತ್ರಿಯನ್ನು ಪ್ರಾರ್ಥಿಸಲು ಕ್ರಮವಾಗಿ ಆಕೆಯನ್ನೇ ಅನುಸರಿಸಿದರು ! ॥೫೬॥

ಮೊತ್ತ ಮೊದಲು ಇಂದ್ರನು ತಮ್ಮ ದೇವತೆಗಳ ಗುಂಪಿನೊಡನೆ ಕೂಡಿ, ಸಾವಿತ್ರಿಯು ಇದ್ದ ಪರ್ವತದ ತುದಿಗೆ ಹೋದನು. ॥೫೭॥

ತತ್ರ ಗಚ್ಛನ್ನೇವ ಮಾರ್ಗೇ ತಸ್ಯಾಃ ಕ್ರೋಧಸಮುದ್ಭವಾಃ ।
ಶಕ್ತಯಃ ಕೋಟಿಶಃ ಕ್ರೂರಕರವಾಲಧರಾಸ್ತದಾ ॥೫೮॥

ಸರ್ವಾನ್ನಾಶಯಿತುಂ ದಿಕ್ಷು ನಿರ್ಗತಾಸ್ತಾಭಿರೇವ ಸಃ ।
ಗೃಹೀತಃ ಪಾಶನಿರ್ಬದ್ಧಃ ನಿಕ್ಷಿಪ್ತಃ ಶೈಲಕಂದರೇ ॥೫೯॥

ಏವಂ ಯಮೋಽಗ್ನಿರ್ವರುಣಃ ಕುಬೇರೋ ನೈಋತೋ ಮರುತ್ ।
ರುದ್ರಾಶ್ಚ ವಸವೋ ವಿಶ್ವೇದೇವಾಽದ್ಯಾ ಬಂಧನಂ ಗತಾಃ ॥೬೦॥

ಏವಂ ಬದ್ಧೇಷು ದೇವೇಷು ಶಕ್ತಿಸಂಘೈಃ ಸಮಂತತಃ ।
ವಿಷ್ಣುರ್ವಿಚಾರಯಾಮಾಸ ಶಿವೇನ ವಿಧಿಸನ್ನಿಧೌ ॥೬೧॥

ಸಾವಿತ್ರ್ಯಾಃ ಕ್ರೋಧದಾವಾಽಗ್ನಿ ನಿರ್ದಗ್ಧಂ ಸ್ಯಾಜ್ಜಗತ್ರಯಂ ।
ದೇವಾ ಬದ್ಧಾಃ ಸರ್ವ ಏವ ಕಿಂ ಕೃತ್ವಾ ನಃ ಶುಭಂ ಭವೇತ್ ॥೬೨॥

---

ಅವನು ಹೋಗುತ್ತಿರುವಾಗಲೇ ಸಾವಿತ್ರಿಯ ಕೋಪದಿಂದುಂಟಾಗಿದ್ದ, ಕ್ರೂರವಾದ ಕತ್ತಿಯನ್ನು ಹಿಡಿದಿರುವ, ಕೋಟ್ಯಾಂತರ ಶಕ್ತಿಗಳು ಅವನನ್ನು ಮಾರ್ಗದಲ್ಲಿಯೇ ಕಟ್ಟಿಹಾಕಿದರು. ॥೫೮॥

ಅಲ್ಲದೇ ದೇವತೆಗಳನ್ನು ನಾಶಮಾಡಲು ಹೊರಟ ಆ ಶಕ್ತಿಗಳು ಅವರ ಪೈಕಿ ಇಂದ್ರನನ್ನು ಕಟ್ಟಿಹಾಕಿ ಪರ್ವತದ ಗುಹೆಯಲ್ಲಿ ಇಟ್ಟರು. ॥೫೯॥

ಈ ರೀತಿಯಲ್ಲಿ ಯಮ, ಅಗ್ನಿ, ವರುಣ, ಕುಬೇರ ನೈಋತ, ವಾಯು, ರುದ್ರರು, ವಸುಗಳು ವಿಶ್ವೇದೇವತೆಗಳೇ ಮೊದಲಾದವರೂ ಇವರೆಲ್ಲರೂ ಬಂಧನಕ್ಕೆ ಒಳಗಾದರು ! ॥೬೦॥

ಈ ಬಗೆಯಲ್ಲಿ ಶಕ್ತಿಗಳ ಗುಂಪಿನವರು ದೇವತೆಗಳೆಲ್ಲರನ್ನೂ ಎಲ್ಲಾ ಕಡೆಯಲ್ಲಿಯೂ ಕಟ್ಟಿಹಾಕಲು ವಿಷ್ಣುವು ಶಿವನೊಂದಿಗೆ ಬ್ರಹ್ಮನ ಸಮೀಪದಲ್ಲಿ ಈ ವಿಷಯವಾಗಿ ವಿಚಾರಮಾಡಿದನು. ॥೬೧॥

ಸಾವಿತ್ರಿಯು ಕೋಪದಿಂದುಂಟಾದ ಕಾಡುಕಿಚ್ಚಿನಿಂದ ಮೂರು ಲೋಕಗಳೂ ಸುಟ್ಟುಹೋಗುವುವು. ದೇವತೆಗಳೆಲ್ಲರೂ ಬಂಧನಕ್ಕೊಳಗಾದರು. ಈಗೇನನ್ನು ಮಾಡಿದರೆ ನಮಗೆ ಮಂಗಳವಾಗುವುದು ? ॥೬೨॥

ಇತಿ ದೀರ್ಘಂ ವಿಚಿಂತ್ಯಾಽಥ ಪಾರ್ವತೀಂ ಚ ರಮಾಮಪಿ ।
ಪ್ರೇಷಯಾಮಾಸ ಸಾವಿತ್ರ್ಯಾಃ ಸಂಶಮಾಯ ಹರಿಸ್ತದಾ ॥೬೩॥

ತೇ ಗತ್ವಾ ಕ್ರೋಧಶಕ್ತೀಸ್ತಾಃ ಸನ್ನಿವರ್ತ್ಯ ಸಮಂತತಃ ।
ಭಾರತೀಂ ಪ್ರಾಪ್ಯ ಮಧುರವಾಕ್ಯಂ ಪ್ರೋಚತುರಂಜಸಾ ॥೬೪॥

ತಾಭ್ಯಾಂ ಬಹುಪ್ರಾರ್ಥಿತಾಽಪಿ ನ ಶಾಂತಿಮುಗಮದ್ಯದಾ ।
ತದಾ ವಿಧಿಹರೀಶಾನಾ ಜಗ್ಮುರ್ಯತ್ರಾಸ್ತಿ ಭಾರತೀ ॥೬೫॥

ಸಾ ದದರ್ಶ ಪಿಧಾತಾರಂ ಸಾವಿತ್ರೀ ಸಮ್ಮುಖಾಽಗತಂ ।
ಈಷಚ್ಛಾಂತಾಽಪಿ ಚ ಪುನಃ ಪ್ರಜಜ್ವಾಲ ಸುಮನ್ಯುನಾ ॥೬೬॥

ಪ್ರಜ್ವಲಂತ್ಯಾಃ ಕೋಪವಶಾದ್ರೂಪಂ ತಸ್ಯಾ ಮಹಾದ್ಭುತಂ ।
ಭೀಮಂ ಸಮಭವತ್ತಸ್ಯಾ ನೇತ್ರಾಭ್ಯಾಂ ವಹ್ನಿರುದ್ಗತಃ ॥೬೭॥

---

ಈ ರೀತಿಯಲ್ಲಿ ದೀರ್ಘಾಲೋಚನೆ ಮಾಡಿ ಆಗ ವಿಷ್ಣುವು. ಪಾರ್ವತಿಯನ್ನೂ ಮತ್ತು ಲಕ್ಷ್ಮಿಯನ್ನೂ ಸಾವಿತ್ರಿಯ ಕೋಪಶಮನಮಾಡಿಸುವುದಕ್ಕೋಸ್ಕರ ಕಳುಹಿಸಿದನು. ॥೬೩॥

ಅವರಿಬ್ಬರೂ ಹೋಗಿ ಆ ಕೋಪದ ಶಕ್ತಿಗಳನ್ನು ಎಲ್ಲಾ ಕಡೆಯಲ್ಲಿಯೂ ಹಿಂತಿರುಗಿಸಿ ಸರಸ್ವತಿಯನ್ನು ಶೀಘ್ರವಾಗಿ ಸಮೀಪಿಸಿ ಈ ರೀತಿಯಲ್ಲಿ ಆಕೆಗೆ ಹೇಳಿದರು. ॥೬೪॥

ಅವರಿಬ್ಬರೂ ಎಷ್ಟು ಪ್ರಾರ್ಥಿಸಿಕೊಂಡಾಗ್ಯೂ ಸಾವಿತ್ರಿಯು ಶಾಂತಳಾಗದಿರಲು ಬ್ರಹ್ಮ, ವಿಷ್ಣು ಮತ್ತು ಶಿವ ಇವರೇ ಆಕೆಯ ಸಮೀಪಕ್ಕೆ ಹೋದರು. ॥೬೫॥

ಸಾವಿತ್ರಿಯು ತನ್ನೆದುರಿಗೆ ಬಂದಿರುವ ಬ್ರಹ್ಮನನ್ನು ನೋಡಿದಳು. ಮೊದಲು ಅವನನ್ನು ನೋಡಿ ಸ್ವಲ್ಪ ಶಾಂತಳಾದರೂ ಈಕೆಯು ಪುನಃ ಕೋಪದಿಂದುರಿದಳು. ॥೬೬॥

ಹೀಗೆ ಕೋಪದಿಂದುರಿಯುತ್ತಿರುವ ಅತ್ಯಂತ ಆಶ್ಚರ್ಯಕರವಾದ ಸಾವಿತ್ರಿಯ ರೂಪವು ಬಹಳ ಭಯಂಕರವಾಯಿತು. ಮತ್ತು ಈಕೆಯ ಕಣ್ಣುಗಳಿಂದ ಅಗ್ನಿಯು ಹೊರಟಿತು. ॥೬೭॥

ತೇನ ಕಲ್ಪಾಗ್ನಿಕಲ್ಪೇನ ಬ್ರಹ್ಮವಿಷ್ಣುಮಹೇಶ್ವರಾಃ ।
ಸಮಾಕ್ರಾಂತಾ ದಾವವಹ್ನಿನೇವ ಮತ್ತೇಭಯೂಥಪಾಃ ॥೩೮॥

ದಹ್ಯಮಾನಾಂ ಸ್ತು ತಾನ್ ದೃಷ್ಟ್ವಾ ಹರಿಕಾಂತಾ ಚ ಪಾರ್ವತೀ ।
ತುಷ್ಟಾವ ತ್ರಿಪುರಾಮಾದ್ಯಾಂ ನಾಽನ್ಯಸ್ತ್ರಾತೇತಿ ನಿಶ್ಚಯಾತ್ ॥೩೯॥

ಅಥ ಸ್ತುತಾ ಮಹಾದೇವೀ ತತ್ರಾಽವಿರಭವತ್ಪರಾ ।
ಕಾಮಕೋಟ್ಯಧಿಲಾವಣ್ಯ ಸಂದೋಹಾಽನಂದ ಸುಂದರೀ ॥೨೦॥

ರತ್ನ ಚಿತ್ರಾಂಬರಾಕಲ್ಪ ಧರಾಂ ಮುಕುಟಶೋಭಿನೀಂ ।
ಚತುರ್ಭುಜಾತ್ತಸಹಜಾಽಯುಧ ಸಂಬಂಧ(ಧು)ಬಂಧುರಾಂ ॥೨೧॥

---

ಸಾವಿತ್ರಿಯ ಕೋಪದಿಂದುಂಟಾದ ಪ್ರಳಯಕಾಲದ ಅಗ್ನಿಗೆ ಸಮನಾದ ಅಗ್ನಿಯು ಬ್ರಹ್ಮಾ, ವಿಷ್ಣು, ಶಿವ ಇವರನ್ನೂ, ಕಾಡುಗಿಚ್ಚು ಸಲಗಗಳನ್ನು ಹೇಗೋ ಹಾಗೆ, ಮುತ್ತಿತು. ॥೩೮॥

ಹೀಗೆ ಇವರು ಅಗ್ನಿಗೆ ಸಿಕ್ಕಿರುವುದನ್ನು ನೋಡಿ, ಲಕ್ಷ್ಮೀ ಮತ್ತು ಪಾರ್ವತಿಯರು, ಎಲ್ಲಕ್ಕೂ ಮೊದಲಿನವಳಾದ ತ್ರಿಪುರಾದೇವಿಯನ್ನು ಬಿಟ್ಟು ಈಗ ನಮ್ಮನ್ನು ಮತ್ತಾರೂ ಕಾಪಾಡಲಾರರು. ಎಂಬುದಾಗಿ ನಿಶ್ಚಯಿಸಿ, ಆಕೆಯನ್ನೇ ಸ್ತೋತ್ರಮಾಡಲಾರಂಭಿಸಿದರು. ॥೩೯॥

ಅನಂತರದಲ್ಲಿ ಅವರು ಆ ರೀತಿಯಲ್ಲಿ ಸ್ತೋತ್ರಮಾಡುತ್ತಿರಲು, ಮಹಾದೇವಿಯೂ, ಶ್ರೇಷ್ಠಳೂ, ಕೋಟ್ಯಾಂತರ ಮನ್ಮಥರಿಗಿಂತಲೂ ಹೆಚ್ಚಾದ ಲಾವಣ್ಯದಿಂದ ಮನೋಹರಳೂ ಆದ ತ್ರಿಪುರಾದೇವಿಯು ಅಲ್ಲಿ ತತ್‌ಕ್ಷಣವೇ ಕಾಣಿಸಿಕೊಂಡಳು. ॥೨೦॥

ಅವರು ರತ್ನಖಚಿತವಾದ ಬಟ್ಟೆಯನ್ನು ಧರಿಸಿದ್ದ, ಸೊಗಸಾದ ವೇಷವನ್ನು ಧರಿಸಿಕೊಂಡಿದ್ದ ಉತ್ತಮವಾದ ಕಿರೀಟದಿಂದ ಶೋಭಿತಳಾದ, ನಾಲ್ಕು ಕೈಗಳಲ್ಲಿಯೂ ಹಿಡಿದಿರುವ ಸಹಜವಾದ ಆಯುಧಗಳಿಂದ ಮನೋಹರಳಾದ ತ್ರಿಪುರಾದೇವಿಯನ್ನು ನೋಡಿದರು. ॥೨೧॥

ದೃಷ್ಟ್ವಾ ಪ್ರಣಮನಂ ಚಕ್ರುರ್ಗೌರ್ಯಾದ್ಯಾ ಭಕ್ತಿನಿರ್ಭರಾಃ ।
ತಸ್ಯಾಃ ಸನ್ನಿಧಿಮಾತ್ರೇಣ ತಮೋರಾಶಿರಿವಾಽರುಣೇ ॥೭೨॥

ವಿಲಯಂ ಪ್ರೋದಿತೇಽಗಚ್ಛತ್ಕ್ರೋಧಾಗ್ನಿಃ ಸರ್ವತಃ ಸ್ಥಿತಃ ।
ಅಥ ತಾಂ ಭಾರತೀಂ ಪ್ರಾಹ ತ್ರಿಪುರಾ ಹಸಿತಾಽಽನನಾ ॥೭೩॥

ಅಲಂ ವತ್ಸೇಽತಿಕ್ರೋಧೇನ ಲೋಕನಾಶನ ಹೇತುನಾ ।
ಉಪಸಂಹರ ಶಕ್ತೀಸ್ತಾ ಯಾಸ್ತೇ ಕ್ರೋಧ ಸಮುದ್ಭವಾಃ ॥೭೪॥

ಭವಂತು ವಿಜ್ವರಾ ಲೋಕಾಃ ಪಶ್ಯೇಮಾನ್ ಶಾಂತಯಾ ದೃಶಾ ।
ಇತ್ಯುಕ್ತಾ ಭಾರತೀ ದೇವ್ಯಾ ಲಜ್ಜಿತಾ ಕ್ರೋಧಸಂಭವಾಃ ॥೭೫॥

---

ಆಗ ಪಾರ್ವತಿಯೇ ಮೊದಲಾದವರು ಭಕ್ತಿಯಿಂದ ತುಂಬಿದ ಮನಸ್ಸುಳ್ಳವರಾಗಿ ಆಕೆಯನ್ನು ನಮಸ್ಕರಿಸಿದರು. ತ್ರಿಪುರಾದೇವಿಯು ಬಂದ ತತ್‌ಕ್ಷಣವೇ, ಅರುಣೋದಯವಾದ ಕೂಡಲೇ ಕತ್ತಲು ಹೇಗೋ ಹಾಗೆ, ಸಾವಿತ್ರಿಯ ಕೋಪಾಗ್ನಿಯು ಶಮನವಾಯಿತು ! ॥೭೨॥

ಈಕೆಯು ಬಂದಕೂಡಲೇ ಆ ರೀತಿಯಲ್ಲಿ ಎಲ್ಲಾ ಕಡೆಯಲ್ಲಿಯೂ, ಹಬ್ಬಿದ್ದ ಕೋಪಾಗ್ನಿಯು ಶಾಂತವಾಯಿತು. ಆ ಮೇಲೆ ತ್ರಿಪುರಾದೇವಿಯು ನಗುತ್ತಾ, ಸಾವಿತ್ರಿಯನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೭೩॥

ಎಲೌ ಮಗಳೇ, ಲೋಕದ ನಾಶಕ್ಕೆ ಕಾರಣವಾಗುತ್ತಿರುವ ಈ ನಿನ್ನ ಅತಿಯಾದ ಕೋಪವನ್ನು ಸಾಕುಮಾಡು. ಈ ನಿನ್ನ ಕೋಪದಿಂದ ಹುಟ್ಟಿದ ಆ ಶಕ್ತಿಗಳನ್ನೂ ಉಪಸಂಹಾರಮಾಡು. ॥೭೪॥

ಈ ಲೋಕಗಳೆಲ್ಲವೂ ಸಂಕಟದಿಂದ ಬಿಡುಗಡೆಯನ್ನು ಹೊಂದಲಿ. ಇವರನ್ನೆಲ್ಲರನ್ನೂ ಶಾಂತವಾದ ದೃಷ್ಟಿಯಿಂದ ನೋಡು. ಎಂದು ತ್ರಿಪುರಾದೇವಿಯು ತಿಳಿಯಹೇಳಲು, ಸರಸ್ವತಿಯು ನಾಚಿಕೆಗೊಂಡು ಆ ಕೋಪಶಕ್ತಿಗಳನ್ನೆಲ್ಲವನ್ನೂ ಉಪಸಂಹಾರಮಾಡಿದಳು. ॥೭೫॥

ವಿಲಾಪಿತಾಃ ಸ್ವಕೇ ದೇಹೇ ಶಾಂತಿಂ ಪ್ರಾಪ್ತಾ ಚ ಭಾರತೀ ।
ಅಥ ತಾಂ ತ್ರಿಪುರಾಂ ದೇವೀಂ ಸಾವಿತ್ರೀ ಪ್ರಣತಾ ಸತೀ ॥೭೬॥

ವಿವಿಧೈಃ ಸಂಸ್ತವೈಶ್ಚಿತ್ರೈ ಸ್ತುಷ್ಟಾವ ಪರಭಕ್ತಿತಃ ।
ಕ್ಷಮಸ್ವ ಮೇಽನಯಾದ್ದೇವಿ ತ್ರಿಪುರೇ ಕ್ರೋಧಸಂಭವಾತ್ ॥೭೭॥

ಸ್ಥಿತಾಽಸ್ಮಿ ಶಾಸನೇ ಮಾತ ಸ್ತವ ಶಾಧಿ ಸ್ವ ಕಿಂಕರೀಂ ।
ಅಥ ಶ್ರೀಮಾತೃಕರುಣಾಽಽಲೋಕಿತಃ ಸಹಸೋತ್ಥಿತಾಃ ॥೭೮॥

ಧಾತೃ ವಿಷ್ಣು ಶಿವಾಸ್ತದ್ವನ್ಮುಕ್ತಾ ದೇವಾಶ್ಚ ಬಂಧತಃ ।
ಸಾವಿತ್ರೀ ಪುನರಪ್ಯಾಹ ಶಾಂತಿಂ ವತ್ಸೇ ಸಮಾಪ್ನುಹಿ ॥೭೯॥

ಪ್ರವರ್ತಯತು ಭೂತೇಶೋ ಯಜ್ಞಂ ಭೂಯಸ್ತ್ವಯಾ ಯುತಃ ।
ಇತಿ ಶ್ರುತ್ವಾ ವಚೋ ದೇವ್ಯಾಃ ಸಾವಿತ್ರೀ ಪ್ರಣತಾ ಸತೀ ॥೮೦॥

---

ಹೀಗೆ ಆ ಕೋಪದಿಂದುಂಟಾದ ಶಕ್ತಿಗಳನ್ನೆಲ್ಲವನ್ನೂ ತನ್ನ ದೇಹದಲ್ಲಿಯೇ ಅಡಗಿಸಿಕೊಂಡು, ಶಾಂತಳಾಗಿ ಸಾವಿತ್ರಿಯು ತ್ರಿಪುರಾದೇವಿಗೆ ನಮಸ್ಕಾರಮಾಡಿದಳು. ॥೭೬॥

ಅನಂತರ ಸಾವಿತ್ರಿಯು ಬಹಳ ಭಕ್ತಿಯಿಂದ ತ್ರಿಪುರಾದೇವಿಯನ್ನು ಅನೇಕ ವಿಧವಾದ ಸ್ತೋತ್ರಗಳಿಂದ ಸ್ತುತಿಸಿದಳು. ಮತ್ತು ಅವಳು ಓ ದೇವಿಯೇ, ನನ್ನ ಕೋಪದಿಂದುಂಟಾದ ತಪ್ಪನ್ನು ಕ್ಷಮಿಸು. ಎಂದಳು. ॥೭೭॥

ಸಾವಿತ್ರಿಯು ಓ ತಾಯಿಯೇ, ನಿನ್ನ ಅಪ್ಪಣೆಯಂತೆ ನಡೆಯಲು ಸಿದ್ಧಳಾಗಿದ್ದೇನೆ. ನಿನ್ನ ಸೇವಕಿಯಾದ ನನಗೆ ಅಪ್ಪಣೆಕೊಡು. ಎಂದು ಪ್ರಾರ್ಥಿಸಿದಳು. ಅನಂತರದಲ್ಲಿ ಶ್ರೀದೇವಿಯ ಕರುಣಾಪೂರ್ಣವಾದ ನೋಟದಿಂದ ವಿಷ್ಣುವೇ ಮೊದಲಾದವರು ಶೀಘ್ರವಾಗಿ ಎದ್ದರು! ॥೭೮॥

ಮತ್ತು ಬ್ರಹ್ಮಾ, ವಿಷ್ಣು, ಶಿವ ಮುಂತಾದವರೆಲ್ಲರೂ ಬಂಧನದಿಂದ ಪಾರಾದರು. ಆ ಬಳಿಕ ತ್ರಿಪುರಾದೇವಿಯು ಸಾವಿತ್ರಿಯನ್ನು ಕುರಿತು, ಎಲೌ ಮಗಳೇ, ಶಾಂತಳಾಗು. ಎಂದು ಪುನಃ ಹೇಳಿದಳು. ॥೭೯॥

ಭೂತೇಶನಾದ ಬ್ರಹ್ಮನು ಪುನಃ ನಿನ್ನೊಡನೆ ಕೂಡಿದವನಾಗಿ ತನ್ನ ಯಾಗ

ಬದ್ಧಾಂಜಲಿಪುಟಾ ಪ್ರಾಹ ಮಾತರ್ನಾಽಹಂ ಸ್ವಯಂಭುವಾ ।
ಇಚ್ಛಾಮಿ ಸಂಗತಿಂ ಭೂಯಃ ಸ್ಥಾಸ್ಯಾಮ್ಯತ್ರೈವ ಸರ್ವದಾ ॥೮೧॥

ತವ ಪಾದಾಂಬುಜಧ್ಯಾನ ಪರಮಾನಂದ ಸಂಪ್ಲುತಾ ।
ನಾತ್ರ ಮಾ ಮಂಬ ಭೂಯಸ್ತ್ವಂ ಸನ್ನಿರೋದ್ಧುಂ ಸಮರ್ಹಸಿ॥೮೨॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಅಷ್ಟತ್ರಿಂಶೋಽಧ್ಯಾಯಃ

---

ವನ್ನು ನೆರವೇರಿಸಲಿ. ಎಂದು ತ್ರಿಪುರಾದೇವಿಯು ಹೇಳಿದ ಮಾತನ್ನು ಕೇಳಿ ಸಾವಿತ್ರಿಯು ಆಕೆಗೆ ನಮಸ್ಕಾರಮಾಡಿದಳು. ॥೮೦॥

ಅನಂತರ ಸಾವಿತ್ರಿಯು ಕೈಜೋಡಿಸಿಕೊಂಡು, ಓ ತಾಯಿಯೇ, ನಾನು ಪುನಃ ಬ್ರಹ್ಮನ ಜೊತೆಯಲ್ಲಿ ಸೇರಲು ಇಷ್ಟಪಡುವುದಿಲ್ಲ. ನಾನು ಯಾವಾಗಲೂ ಇಲ್ಲಿಯೇ ಇರುವೆನೆಂದಳು. ॥೮೧॥

ನಿನ್ನ ಪಾದಕಮಲಗಳ ಧ್ಯಾನದಿಂದುಂಟಾಗುವ ವಿಶೇಷ ಸಂತೋಷಗಳಲ್ಲಿ ಮುಳುಗಿ ನಾನು ಯಾವಾಗಲೂ ಇಲ್ಲಿಯೇ ಇರುವೆನು ! ಓ ತಾಯಿಯೇ, ಆದ್ದರಿಂದ ದಯವಿಟ್ಟು ಪುನಃ ನನಗೆ ಈ ವಿಷಯದಲ್ಲಿ ಅಡಚಣೆಯನ್ನುಂಟುಮಾಡಬೇಡ ಎಂದಳು. ॥೮೨॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಸಪ್ತತ್ರಿಂಶೋಽಧ್ಯಾಯಃ ||

### ಮೂವತ್ತೊಂಬತ್ತನೆಯ ಅಧ್ಯಾಯವು

ತತಃ ಪ್ರಾಹ ವಿಧಿರ್ದೇವೀಂ ಸ್ತುತ್ವಾ ನತ್ವಾ ಪುನಃ ಪುನಃ ।
ಮಹೇಶ್ವರಿ ತವಾಽಽಜ್ಞಾಯಾಂ ಸ್ಥಿತೋಽಸ್ಮಿ ನಿಖಿಲಾಽತ್ಮನಾ ॥೧॥

ತವಾಽಜ್ಞಾಮಂತರಾ ಲೋಕೇ ಕಃ ಸಮರ್ಥೋಽ ವಿಚೇಷ್ಟಿತುಂ ।
ವಿಜ್ಞಾಪಯಾಮಿ ಕಿಂಚಿತ್ತ್ವಾಂ ಮಾತ ಸ್ತತ್ಕೃಪಯಾ ಶೃಣು ॥೨॥

ಸಾವಿತ್ರೀ ಯದಿ ನ ಶಾಂತಾ ಭವಿಷ್ಯತಿ ತದಾ ಕಥಂ ।
ಭವೇತ್ಕ್ರತು ರ್ಮಮ ಶಿವೇ ಲೋಕಂ ವಾ ನೀರುಜಂ ತಥಾ ॥೩॥

---

ಅನಂತರದಲ್ಲಿ ಬ್ರಹ್ಮನು ತ್ರಿಪುರಾದೇವಿಯನ್ನು ಸ್ತೋತ್ರಮಾಡಿ, ಪುನಃಪುನಃ ನಮಸ್ಕರಿಸಿ, ಓ ಮಹೇಶ್ವರಿಯೇ, ಸರ್ವವಿಧದಲ್ಲೂ ನಿನ್ನ ಆಜ್ಞೆಯಂತೆ ನಡೆಯುವವನಾಗಿದ್ದೇನೆ. ಎಂದನು. ||೧||

ಓ ದೇವಿಯೇ, ನಿನ್ನ ಅಪ್ಪಣೆಯಿಲ್ಲದೇ ಲೋಕದಲ್ಲಿ ಯಾವನುತಾನೇ ಚಲಿಸಲೂ ಸಮರ್ಥನಾಗಿದ್ದಾನೆ? ಓ ತಾಯಿಯೇ, ನಾನೊಂದು ವಿಷಯವನ್ನು ವಿಜ್ಞಾಪನೆಮಾಡಿಕೊಳ್ಳುವೆನು. ಅದನ್ನು ದಯವಿಟ್ಟು ಲಾಲಿಸಬೇಕು. ಎಂದನು. ||೨||

ಸಾವಿತ್ರಿಯು ಶಾಂತಳಾಗದೇ ಇದ್ದರೆ ಆಗ ನನ್ನ ಯಾಗವು ನಡೆಯುವ ಬಗೆ ಹೇಗೆ? ಓ ಮಂಗಳಕರಳಾದ ದೇವಿಯೇ, ಆ ಸಂದರ್ಭದಲ್ಲಿ ಲೋಕವಾದರೂ ತೊಂದರೆಯಿಂದ ಪಾರಾಗುವುದು ಹೇಗೆ? ||೩||

ಪುರಾಽನಯಾ ಮಹಾದೇವ್ಯಾ ಶಪ್ತಃ ಕ್ರೋಧೇನ ಹೇತುನಾ ।
ಅಕಾಮ್ಯಾಂ ಕಾಮಯೇತ್ಯೇವ ಮಥೈಷಾ ಯಜ್ಞಕರ್ಮಣಿ ॥೪॥

ಪತ್ನೀತ್ವೇನ ಕೃತಾ ಯಾ ಸಾ ಹೀನಜಾತಿ ಸಮುದ್ಭವಾ ।
ತತ್ರರ್ಷಿವರ್ಯೈರ್ ಬ್ರಹ್ಮೇಷ್ಟೈಃ ವಾಚ್ಯೋ ಜಾತೋಽಸ್ಮಿ ತತ್ಕಥಂ ॥೫॥

ಪ್ರಸೀದ ಶ್ರೀಮಹಾರಾಜ್ಞಿ ಸರ್ವಮೇತತ್ಸಮಂ ಕುರು ।
ಪ್ರಾರ್ಥಿತಾ ಲೋಕಧಾತ್ರೈವಂ ಶ್ರೀಪರಾ ತ್ರಿಪುರೇಶ್ವರೀ ॥೬॥

ಪ್ರಾಹ ದೇವಾ ಮದ್ವಚನಂ ದೇವ್ಯಃ ಶ್ರುಣುತ ಸಾದರಂ ।
ಯೇಯಂ ವಿಧಾತುರ್ಯಜ್ಞಸ್ಯ ಪತ್ನೀ ಸರ್ವಮನೋಹರಾ ॥೭॥

---

ಹಿಂದೆ ಈ ಮಹಾದೇವಿಯಾದ ಸಾವಿತ್ರಿಯು ಕೋಪನಿಮಿತ್ತವಾಗಿ, ನೀನು ಕಾಮಿಸಲು ಯೋಗ್ಯಳಲ್ಲದವಳನ್ನು ಕಾಮಿಸು. ಎಂದು ನನಗೆ ಶಾಪವನ್ನು ಕೊಟ್ಟಳು. ಅದರಂತೆಯೇ ಈ ಯಾಗಕರ್ಮದಲ್ಲಿ ಸಂಭವಿಸಿತು. ॥೪॥

ನಾನು ಈ ಯಾಗದಲ್ಲಿ ನೀಚ ಜಾತಿಯಲ್ಲಿ ಹುಟ್ಟಿದ ಈ ಹೆಂಗಸನ್ನು ಪತ್ನಿಯನ್ನಾಗಿ ಮಾಡಿಕೊಳ್ಳಬೇಕಾಯಿತು. ಈ ಸಂದರ್ಭದಲ್ಲಿ ಬ್ರಹ್ಮಜ್ಞಾನಿಗಳಾದ ಋಷಿಶ್ರೇಷ್ಠರಿಂದಲೂ ಶ್ಲಾಘಿಸಲ್ಪಟ್ಟಿರುವಾಗ ನಾನು ನಿಂದೆಗೆ ಪಾತ್ರನಾಗಿರುವುದು ತಾನೇ ಹೇಗಾದೀತು ? ಹೇಳು. '॥೫॥

ಓ ಶ್ರೀಮಹಾರಾಣಿಯೇ, ನನ್ನ ವಿಷಯದಲ್ಲಿ ದಯವಿಟ್ಟು ಪ್ರಸನ್ನಳಾಗು ಮತ್ತು ಇವೆಲ್ಲವನ್ನೂ ಸರಿಪಡಿಸು." ಎಂದು ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನು ಪ್ರಾರ್ಥಿಸಲು, ಅತ್ಯಂತ ಶ್ರೇಷ್ಠಳಾದ ತ್ರಿಪುರಾದೇವಿಯು ಹೇಳಿದಳು. ॥೬॥

ಎಲೌ ದೇವತೆಗಳೇ ಮತ್ತು ದೇವಿಯರೇ, ನನ್ನ ಈ ಮಾತನ್ನು ಭಕ್ತಿಪೂರ್ವಕವಾಗಿ ಕೇಳಿರಿ. ಬ್ರಹ್ಮನು ಮಾಡುವ ಈ ಯಾಗಸಂದರ್ಭದಲ್ಲಿ ಅತ್ಯಂತ ಮನೋಹರಳಾದ ಈ ಪತ್ನಿಯ ವ್ಯವಸ್ಥೆಯ ವಿಷಯವನ್ನು ಹೇಳುವೆನು. ॥೭॥

ತಸ್ಯೋತ್ಪತ್ತಿಂ ಪ್ರವಕ್ಷ್ಯಾಮಿ ಮಹಾವಿಭವವಿಸ್ತರಾಂ ।
ಕಶ್ಚಿತ್ಪುರಾ ಬ್ರಾಹ್ಮಣಾಗ್ರ್ಯಃ ಕೌಶಿಕೋ ಲೋಕವಿಶ್ರುತಃ ॥೮॥

ತಪಸಾ ವಿದ್ಯಯಾ ಚೈವ ಹರ್ಯಕ್ಷಾಖ್ಯೋ ಮಹಾಶಯಃ ।
ತಪಸ್ತೇಪೇ ಸುಪಾರ್ಶ್ವಾಖ್ಯ ಪರ್ವತೇ ಲೋಕಪೂಜಿತೇ ॥೯॥

ಅತ್ಯುಗ್ರ ತಪಸಾ ದೇವೀಂ ಸಾವಿತ್ರೀಂ ಸಮತೋಷಯತ್ ।
ಪ್ರಸನ್ನಾ ತಸ್ಯ ಸಾವಿತ್ರೀ ತದ್ದರ್ಶನ ಪಥಂ ಗತಾ ॥೧೦॥

ಬ್ರೂಹಿ ಬ್ರಾಹ್ಮಣ ತುಷ್ಟಾಸ್ಮಿ ತಪಸಾ ಮಹತಾ ತವ ।
ಈಪ್ಸಿತಂ ತೇ ಸಾಧಯಾಮಿ ನಾದೇಯಂ ತವ ವಿದ್ಯತೇ ॥೧೧॥

ಕಿಮಿಂದ್ರತ್ವ ಮುತೇಂದುತ್ವಂ ಧನೇಶತ್ವಂ ತ್ವಮಿಚ್ಛಸಿ ।
ತಪಸಾ ತೇ ಜಿತಂ ಸರ್ವಂ ಪ್ರಾಜಾಪತ್ಯಾಚರಸ್ಥಿತಂ ॥೧೨॥

---

ಈಕೆಯ ಉತ್ಪತ್ತಿಯು ಮಹಾವೈಭವದಿಂದ ಸಂಭವಿಸಿತು. ಹೇಗೆಂದರೆ, ಹಿಂದೆ ಲೋಕಪ್ರಸಿದ್ಧನೂ, ಬ್ರಾಹ್ಮಣನೂ ಆದ ಕೌಶಿಕನೆಂಬುವನು ಇದ್ದನು. ॥೮॥

ಈ ಬ್ರಾಹ್ಮಣಶ್ರೇಷ್ಠನು ತನ್ನ ತಪಸ್ಸು ಮತ್ತು ವಿದ್ಯೆಗಳಿಂದ ಮಹಾಮಹಿಮನಾಗಿದ್ದು ಹರ್ಯಕ್ಷನೆಂದು ಲೋಕದಿಂದ ಪೂಜಿಸಲ್ಪಡುತ್ತಿರುತ್ತಾ ಸುಪಾರ್ಶ್ವ ಎಂಬ ಪರ್ವತದಲ್ಲಿ ತಪಸ್ಸನ್ನು ಮಾಡುತ್ತಿದ್ದನು. ॥೯॥

ಆತನು ಬಹಳ ಭಯಂಕರವಾದ ತಪಸ್ಸಿನಿಂದ ಸಾವಿತ್ರೀದೇವಿಯನ್ನು ಮೆಚ್ಚಿಸಿದನು. ಸಾವಿತ್ರಿಯು ಪ್ರಸನ್ನಳಾಗಿ ಅವನಿಗೆ ದರ್ಶನವನ್ನು ಕೊಟ್ಟಳು. ಮತ್ತು ಅವನನ್ನು ಕುರಿತು ಹೀಗೆ ಹೇಳಿದಳು. ॥೧೦॥

ಎಲೈ ಬ್ರಾಹ್ಮಣನೇ, ನಿನ್ನ ಘೋರವಾದ ತಪಸ್ಸಿಗೆ ನಾನು ಮೆಚ್ಚಿದೆನು. ನಿನಗೆ ಇಷ್ಟವಾದದ್ದನ್ನು ಸಾಧಿಸಿಕೊಡುವೆನು. ನಿನಗೆ ಕೊಡಲಾಗದ ವಸ್ತುವಾವುದೂ ಇರುವುದಿಲ್ಲ. ನಿನ್ನ ಕೋರಿಕೆಯೇನು ? ॥೧೧॥

ನೀನು ಇಂದ್ರಪದವಿಯನ್ನೋ ಚಂದ್ರಪದವಿಯನ್ನೋ ಅಥವಾ ಕುಬೇರನ ಪದವಿಯನ್ನೋ ಯಾವುದನ್ನು ಅಪೇಕ್ಷಿಸುತ್ತಿರುವೆ? ಬ್ರಹ್ಮನನ್ನು ಮೊದಲ್ಗೊಂಡು ಚರಾಚರಪ್ರಪಂಚವೆಲ್ಲವನ್ನೂ ನೀನು ನಿನ್ನ ತಪಸ್ಸಿನಿಂದ ಜಯಿಸಿದ್ದೀಯೆ. ॥೧೨॥

ಸಾವಿತ್ರ್ಯಾ ವಚನಂ ಶ್ರುತ್ವಾ ಹರ್ಯಕ್ಷಃ ಪುನರಾಹ ಯತ್ ।
ತಚ್ಛೃಣುಧ್ವಂ ವಿಧಾತ್ರಾದ್ಯಾಃ ಪ್ರಣಮ್ಯ ಸುಕೃತಾಂಜಲಿಃ ॥೧೩॥

ದೇವಿ ನಾಽಹಂ ವೃಣೇಂದ್ರತ್ವಂ ಚಂದ್ರತ್ವಂ ವಾ ಧನೇಶತಾಂ ।
ಪುರಾಽಹಂ ಸ್ವಾಶ್ರಮೇ ಸ್ಥಾನೇ ಕದಾಚಿತ್ತಪಸಿ ಸ್ಥಿತಃ ॥೧೪॥

ಕಾಚಿದ್ಗೋಪವಧೂಸ್ತತ್ರ ಚಾರಯಂತೀ ಗವಾಂ ಗಣಂ ।
ಮದಕ್ಷಿಪಥ ಮಾಪನ್ನಾ ತಸ್ಯಾಃ ಸೌಂದರ್ಯ ವಿಭ್ರಮಾತ್ ॥೧೫॥

ಮೋಹಿತಸ್ತಾಮನ್ವಗಮ ಮನಂಗ ಶರ ಪೀಡಿತಃ ।
ಪ್ರಾರ್ಥಿತಾ ಸಾ ಮಯಾ ಭೂಯೋ ನಾಽಭ್ಯಮನ್ಯತ ಮದ್ವಚಃ ॥೧೬॥

ತದಾ ಬಲಾತ್ಪರಾಮೃಷ್ಟಾ ಕ್ರೋಶಂತೀ ಗೋಪಕನ್ಯಕಾ ।
ಸಮಾನೀಯಾಽಶ್ರಮವರೇ ಸ್ವಾಂಗೈರಾಕ್ರಮ್ಯ ತಾಂ ಬಲಾತ್ ॥೧೭॥

---

ಬ್ರಹ್ಮನೇ ಮೊದಲಾದ ದೇವತೆಗಳೇ, ಸಾವಿತ್ರಿಯ ಈ ಮಾತನ್ನು ಕೇಳಿ ಹರ್ಯಕ್ಷನು ಕೈಜೋಡಿಸಿಕೊಂಡುನಮಸ್ಕರಿಸಿ ಆಕೆಗೆ ಬಿನ್ನೈಸಿದ ಮಾತುಗಳನ್ನು ನೀವೆಲ್ಲರೂ ಕೇಳಿರಿ. ಹೇಳುವೆನು. ॥೧೩॥

ಓ ದೇವಿಯೇ, ನಾನು ಇಂದ್ರಪದವಿಯನ್ನಾಗಲಿ ಅಥವಾ ಚಂದ್ರಪದವಿಯನ್ನಾಗಲೀ, ಅಥವಾ ಕುಬೇರನ ಪದವಿಯನ್ನಾಗಲೀ ಕುರಿತು ನಿನ್ನನ್ನು ಬೇಡುವುದಿಲ್ಲ. ಆದರೆ ಹಿಂದೆ ನಾನೊಂದುದಿನ ನನ್ನ ಆಶ್ರಮದಲ್ಲಿ ತಪಸ್ಸನ್ನು ಮಾಡುತ್ತಾ ಇದ್ದೆನು. ॥೧೪॥

ಅಲ್ಲಿ ಒಬ್ಬ ಗೊಲ್ಲರ ಹುಡುಗಿಯು ಹಸುಗಳ ಗುಂಪನ್ನು ನಡೆಸುತ್ತಾ ನನ್ನ ಕಣ್ಣಿಗೆ ಬಿದ್ದಳು. ನಾನು ಅವಳ ಸೌಂದರ್ಯಕ್ಕೆ ಮರುಳಾದೆನು. ॥೧೫॥

ಹೀಗೆ ಮೋಹಗೊಂಡು ಕಾಮಬಾಣಗಳಿಂದ ಹೊಡೆಯಲ್ಪಟ್ಟವನಾಗಿ ನಾನು ಅವಳನ್ನು ಒಲಿಸಲು ಅನುಸರಿಸಿದೆನು. ನಾನು ಅವಳನ್ನು ಅನೇಕ ಸಲ ಪ್ರಾರ್ಥಿಸಿದಾಗ್ಯೂ ನನ್ನ ಮಾತನ್ನು ಅವಳು ಒಪ್ಪಲೇಇಲ್ಲ. ॥೧೬॥

ಆಗ ನಾನು ಬಲಾತ್ಕಾರವಾಗಿ ಅವಳನ್ನು ಮುಟ್ಟಲು ಆ ಗೊಲ್ಲರ ಹುಡುಗಿಯು ಕೂಗುತ್ತಿದ್ದಳು. ಹೀಗಾದಾಗ್ಯೂ ನಾನು ನನ್ನ ಅವಯವಗಳಿಂದ ಅವಳನ್ನು ಬಲಾತ್ಕಾರವಾಗಿ ಆಕ್ರಮಿಸಿ ನನ್ನ ಆಶ್ರಮಕ್ಕೆ ಕರೆದೊಯ್ದೆನು. ॥೧೭॥

ದ್ವಂದ್ವ ಧರ್ಮಮನುಪ್ರಾಪ್ತೋ ಮನ್ಮಥೇನ ಪ್ರಪೀಡಿತಃ ।
ಅಥ ತತ್ರಾಭ್ಯಾಜಗಾಮ ನಾರದೋ ಮುನಿಪುಂಗವಃ ॥೧೮॥

ನಿಶಾಮ್ಯ ತಾಂ ಗೋಪವಧೂಂ ಮಯಾಽಽಕ್ರಾಂತಾಂ ಬಲೀಯಸಾ ।
ಕ್ರೋಶಂತೀಂ ಮುಂಚ ಮುಂಚೇತಿ ಪ್ರಾಹ ಮಾಂ ಪ್ರತಿ ರೋಷಿತಃ॥೧೯॥

ಅಹಂ ಕಾಮೇನ ಮೂಢಾತ್ಮಾ ನಾಽಮುಂಚಂ ಮೈಥುನೇ ರತಃ ।
ತದಾ ಕ್ರುದ್ಧೋ ನಾರದೋ ಮಾಂ ಶಶಾಪ ಶೃಣ್ವತೋ ಮಮ ॥೨೦॥

ಬ್ರಾಹ್ಮಣಾಧಮ ದುರ್ಬುದ್ಧೇ ನೈಷಾ ಕಾಮ್ಯಾ ತು ಕಾಮಿನೀ ।
ಯತಃ ಕಾಮವಿಮೂಢಾತ್ಮಾ ಬಲಾದೇನಾಂ ಸಮಾವಿಶಃ ॥೨೧॥

ನೀಚೇನ ಕರ್ಮಣಾಽನೇನ ನೀಚ ತ್ವಂ ಪ್ರಾಪ್ಸ್ಯಸಿ ದ್ರುತಂ ।
ಯತೋ ಗೋಪವಧೂಸಕ್ತ ಸ್ತತೋ ಗೋಪಃ ಭವಿಷ್ಯಸಿ ॥೨೨॥

---

ನಾನು ಮನ್ಮಥನ ಬಾಧೆಗೆ ಒಳಗಾಗಿ ಅವಳೊಂದಿಗೆ ಸಂಬಂಧ ಮಾಡಿದೆನು. ಅದೇ ಸಮಯದಲ್ಲಿ ಋಷಿಶ್ರೇಷ್ಠನಾದ ನಾರದನು ಅಲ್ಲಿಗೆ ಬಂದನು. ॥೧೮॥

ನಾನು ಬಲಾತ್ಕಾರವಾಗಿ ಆ ಗೊಲ್ಲರ ಹುಡುಗಿಯನ್ನು ಆಕ್ರಮಿಸಿದ್ದನ್ನು ಮತ್ತು ಅವಳು ಕೂಗುತ್ತಿದ್ದುದನ್ನು ಕೇಳಿ ನಾರದನು ಕೋಪಗೊಂಡು ನನ್ನನ್ನು ಕುರಿತು "ಅವಳನ್ನು ಬಿಡು, ಬಿಡು." ಎಂಬುದಾಗಿ ಒತ್ತಿ ಹೇಳಿದನು. ॥೧೯॥

ನಾನು ಕಾಮಮೋಹಿತನಾಗಿ ಆಕೆಯ ಸಂಭೋಗಾಸಕ್ತಿಯಿಂದ ಅವಳನ್ನು ನಾನು ಬಿಡಲೇ ಇಲ್ಲ. ಆಗ ಕೋಪಗೊಂಡ ನಾರದನು ನಾನು ಕೇಳುವ ಹಾಗೆಯೇ ಈರೀತಿಯಲ್ಲಿ ನನಗೆ ಶಾಪವನ್ನು ಕೊಟ್ಟನು. ॥೨೦॥

ಎಲೋ ದುರ್ಬುದ್ಧಿಯುಳ್ಳ ನೀಚನಾದ ಬ್ರಾಹ್ಮಣನೇ, ಈ ಹೆಂಗಸನ್ನು ನೀನು ಇಚ್ಛಿಸಬಾರದಾಗಿತ್ತು. ಆದರೂ ಕಾಮದಿಂದ ಮೋಹವುಳ್ಳವನಾಗಿ ಗೊಲ್ಲಿತಿಯಾದ ಈಕೆಯೊಂದಿಗೆ ಬಲಾತ್ಕಾರವಾಗಿ ಸಂಬಂಧವನ್ನು ಮಾಡಿದ್ದೀಯೆ? ॥೨೧॥

ಈ ನಿನ್ನ ನೀಚವಾದ ಕರ್ಮಕ್ಕೆ ತಕ್ಕಂತೆ ನೀನು ನೀಚತನವನ್ನು ಹೊಂದುವೆ. ನೀನು ಗೊಲ್ಲರ ಹುಡುಗಿಯಲ್ಲಿ ಆಸಕ್ತನಾದ್ದರಿಂದ ನೀನು ಗೊಲ್ಲನೇ ಆಗುವೆ! ॥೨೨॥

ತತೋಽಹಂ ಶಾಪಭಯತಃ ಶಾಪಾಂತಂ ನಾರದಂ ಪ್ರತಿ ।
ಜಿಜ್ಞಾಸುರ್ಬಹುಧಾ ನತ್ವಾ ಸಮಪೃಚ್ಛಂ ಪುನಃ ಪುನಃ ॥೨೩॥

ನೋವಾಚ ಕ್ರೋಧವಶತಸ್ತತಃ ಸಂಪ್ರಾರ್ಥಿತೋ ದೃಢಂ ।
ಸಾವಿತ್ರೀ ಶಾಪತಸ್ತ್ವಾಂ ವೈ ಮೋಚಯಿಷ್ಯತಿ ತೋಷಿತಾ ॥೨೪॥

ಉಪತಿಷ್ಠ ಮಹಾದೇವೀಮಿತ್ಯುಕ್ತ್ವಾಂ ತರ್ಹಿ ತೋ ಬಭೌ ।
ತದಹಂ ತ್ವಾಂ ಮಹಾದೇವೀಮುಪಸಂಸ್ಥೋ ಮಹೇಶ್ವರಿ ॥೨೫॥

ಶಾಪಾಽಬ್ಧಿಮಗ್ನಂ ಮಾಂ ಶೀಘ್ರಮಭ್ಯುದ್ಧರ ಮಹೇಶ್ವರಿ ।
ಇತ್ಯುಕ್ತಾ ಸಾ ಬ್ರಾಹ್ಮಣೇನ ಶಾಪಾಽಂತಂ ಪ್ರಾಹ ತಂ ಪ್ರತಿ ॥೨೬॥

ಹರ್ಯಕ್ಷ ಶೃಣು ಮದ್ವಾಕ್ಯಂ ಶಾಪಾಽಂತಂ ಪ್ರಬ್ರವೀಮಿ ತೇ ।
ಗೋಪಯೋನಿಷು ತೇ ಜನ್ಮ ಭವಿಷ್ಯತಿ ನ ಸಂಶಯಃ ॥೨೭॥

---

ಆ ಬಳಿಕ ನಾನು ಈ ಶಾಪದ ಭಯದಿಂದ ನಾರದಮಹರ್ಷಿಯನ್ನು ಕುರಿತು, ಈ ಶಾಪದ ವಿಮೋಚನೆಯನ್ನು ತಿಳಿಯಲು ಆತನನ್ನು ನಮಸ್ಕರಿಸಿ, ಈ ಪ್ರಶ್ನೆಯನ್ನೇ ಪುನಃ ಪುನಃ ಮಾಡಿದೆನು. ॥೨೩॥

ನಾರದನು ಕೋಪದಿಂದ ಈ ವಿಷಯವನ್ನು ಬಹಳ ಹೊತ್ತು ಹೇಳಲೇ ಇಲ್ಲ. ಆಮೇಲೆ ನಾನು ದೃಢವಾಗಿ ಅವನನ್ನು ಪ್ರಾರ್ಥಿಸಲು, ಸಾವಿತ್ರಿಯು ಮೆಚ್ಚಿ ನಿನ್ನ ಶಾಪವನ್ನು ಹೋಗಲಾಡಿಸುವಳು. ಎಂದನು. ॥೨೪॥

ಓ ಮಹೇಶ್ವರಿಯಾದ ಸಾವಿತ್ರಿಯೇ, ಅದ್ದರಿಂದ ನಾನು ಮಹಾದೇವಿಯಾದ ನಿನ್ನನ್ನು ಉಪಾಸನೆ ಮಾಡಿದ್ದೇನೆ. ॥೨೫॥

ಓ ಮಹೇಶ್ವರಿಯೇ, ಶಾಪವೆಂಬ ಸಮುದ್ರದಲ್ಲಿ ಮುಳುಗಿರುವ ನನ್ನನ್ನು ಶೀಘ್ರವಾಗಿ ಉದ್ಧಾರಮಾಡು. ಎಂದು ಹರ್ಯಕ್ಷನು ಬೇಡಲು ತ್ರಿಪುರಾದೇವಿಯು ಅವನ ಶಾಪವಿಮೋಚನೆಯ ಕಾಲವನ್ನು ವಿವರಿಸಿ ಹೀಗೆ ಹೇಳಿದಳು. ॥೨೬॥

ಎಲೈ ಹರ್ಯಕ್ಷನೇ, ನನ್ನ ಈ ಮಾತನ್ನು ಕೇಳು. ನಿನ್ನ ಶಾಪವಿಮೋಚನೆಯ ಕಾಲವನ್ನು ಹೇಳುವೆನು. ನೀನು ಗೊಲ್ಲರ ಜಾತಿಯಲ್ಲಿ ಹುಟ್ಟುವೆಯೆಂಬುದರಲ್ಲಿ ಸಂದೇಹವಿಲ್ಲ. ॥೨೭॥

ತತ್ರೈಕ ಜನ್ಮನಿ ಶೃಣು ಭವಿಷ್ಯಾಮ್ಯಹಮಂಶತಃ ।
ಕನ್ಯಾ ತವ ತತೋ ವಿಷ್ಣೋಃ ಪ್ರಾಪ್ಯ ಶ್ರೇಷ್ಠಂ ವರಂ ಪುನಃ ॥೨೮॥

ಪ್ರಾಪ್ಯ ನಾರಾಯಣಂ ಪುತ್ರಂ ಪ್ರಯಾಸ್ಯಸಿ ಪರಂ ಪದಂ ।
ಉಕ್ತ್ವೈವ ಮಂತರ್ಧಾನಂ ಸಾ ಜಗಾಮೇಯಂ ತವ ಪ್ರಿಯಾ ॥೨೯॥

ಸೇಯಂ ತದಂಶಸಂಭೂತಾ ತವ ಶಾಪಾದಯೋನಿಜಾ ।
ಅನಿಂದ್ಯೇಯಂ ಸರ್ವಜನೈರಗ್ರಜೈಃ ಸಮುಪಾಸಿತಾ ॥೩೦॥

ಛಂದಃ ಪ್ರಸೂತಿರ್ಗಾಯತ್ರೀ ಗಾಯಂತಂ ತ್ರಾತಿ ಸರ್ವತಃ ।
ವೇದಸಾರಮಯೀ ಬ್ರಹ್ಮ ವಿದ್ಯಾಖ್ಯಾತಿಂ ಗಮಿಷ್ಯತಿ ॥೩೧॥

ಸಾವಿತ್ರೀ ಪಶ್ಯ ವತ್ಸೇ ತ್ವಂ ನಿಜಾಂಶಪ್ರಭವಾಮಿಮಾಂ ।
ಶಾಪೇನ ನೈಷಾ ವಿಜ್ಞಾತಾ ತ್ವಮೇವೈಷಾ ದ್ವಿಧಾ ಸ್ಥಿತಾ ॥೩೨॥

---

ಈ ಸಂದರ್ಭದಲ್ಲಿ ಒಂದು ಜನ್ಮದಲ್ಲಿ ನಾನು ನಿನಗೆ ನನ್ನ ಅಂಶದಿಂದ ಮಗಳಾಗಿ ಹುಟ್ಟುವೆನು. ಅನಂತರ ವಿಷ್ಣುವಿನಿಂದ ನೀನು ಶ್ರೇಷ್ಠವಾದ ವರವನ್ನು ಪಡೆಯುವೆ. ಆವರದಿಂದ ॥೨೮॥

ನೀನು ಪುನಃ ನಾರಾಯಣನನ್ನೇ ಮಗನನ್ನಾಗಿ ಪಡೆದು, ಕಡೆಯಲ್ಲಿ ಅವನ ಶ್ರೇಷ್ಠ ಸ್ಥಾನವನ್ನು ಸೇರುವೆ! ಎಂದು ಹೇಳಿ ನಿನಗೆ ಅತ್ಯಂತ ಪ್ರಿಯಳಾದ ತ್ರಿಪುರಾದೇವಿಯು ಅಂತರ್ಧಾನವನ್ನು ಹೊಂದಿದಳು. ॥೨೯॥

ನಿನ್ನ ಶಾಪದಿಂದ ಈ ಶರೀರದಲ್ಲಿ ಹುಟ್ಟಿದೆ. ದೇವಿಯ ಅಂಶಭೂತಳಾದ ಇವಳು ಯಾರ ನಿಂದೆಗೂ ಯೋಗ್ಯಳಾಗಿಲ್ಲ. ಮತ್ತು ಇವಳು ಬ್ರಾಹ್ಮಣರೇ ಮುಂತಾದ ಎಲ್ಲರಿಂದಲೂ ಪೂಜಿಸಲ್ಪಡುತ್ತಾಳೆ. ॥೩೦॥

ಈಕೆಯು ಛಂದಸ್ಸನ್ನು ಸೃಷ್ಟಿಸಿದ ಗಾಯತ್ರಿಯು! ಈಕೆಯನ್ನು ಗಾನ ಮಾಡುವವರನ್ನು ಎಲ್ಲಾ ವಿಧದಲ್ಲೂ ಸಂರಕ್ಷಿಸುತ್ತಾಳೆ. ಈಕೆಯು ವೇದದ ಸಾರಭೂತಳಾಗಿ ಬ್ರಹ್ಮವಿದ್ಯೆಗೆ ಸಮನಾದ ಕೀರ್ತಿಯನ್ನು ಹೊಂದುವಳು. ॥೩೧॥

ಎಲೌ ಮಗಳೇ, ಸಾವಿತ್ರಿಯೇ, ನನ್ನ ಅಂಶದಿಂದ ಹುಟ್ಟಿದ ಇವಳನ್ನು ನೋಡು. ನೀನೇ ಎರಡು ವಿಧವಾಗಿ ಇವಳಾಗಿದ್ದರೂ ಬ್ರಹ್ಮನ ಶಾಪದಿಂದ ನೀನು ಇವಳನ್ನು ತಿಳಿಯಲಾರದೆ ಹೋದೆ! ॥೩೨॥

ಶ್ರುತ್ವೇತ್ಥಂ ತ್ರಿಪುರಾವಾಕ್ಯಂ ಗಾಯತ್ರೀ ಸ್ವಾತ್ಮರೂಪಿಣೀ ।
ಪ್ರತ್ಯ ಚೇಷ್ಟತ ಸಾವಿತ್ರೀ ಪ್ರತಿಬಿಂಬಂ ಯಥಾತ್ಮನಃ ॥೩೩॥

ಅನುಗ್ರಹೇಣ ಶ್ರೀದೇವ್ಯಾ ಲಬ್ಧ್ವಾ ಶಾಪಹತಾಂ ಸ್ಮೃತಿಂ ।
ಸಂತುಷ್ಟಾಽಭವದತ್ಯಂತಂ ಶಾಂತಾಂ ಪ್ರಕೃತಿಮಾಸ್ಥಿತಾ ॥೩೪॥

ಅಥೋವಾಚ ಮಹಾದೇವೀ ತ್ರಿಪುರಾ ವಿಧಿಮುಖ್ಯಕಾನ್ ।
ಗಾಯತ್ರೀಯಂ ಮದುದ್ಭೂತಾ ಮದ್ವಾಗ್ರೂಪಾ ಪರಾ ಯತಃ ॥೩೫॥

ಏನಾಂ ವರ್ಣಮಯೀಂ ಸರ್ವೇ ಮುಖಬಾಹೂರುಜಾ ಜನಾಃ ।
ಪ್ರಾಪ್ಯ ಜಾತಾಃ ಪುನಸ್ತೇನ ಭೂಯಾಸುರ್ದ್ವಿಜಸಂಜ್ಞಯಾ ॥೩೬॥

ಅಥಾಽಹ ಲೋಕಧಾತಾರಂ ಶೃಣು ಬ್ರಹ್ಮನ್ಮಯೇರಿತಂ ।
ಅಕಾಮ್ಯಾ ಕಾಮುಕತ್ವಂ ಯತ್ಸಾವಿತ್ರೀ ಶಾಪತಃ ಸ್ಥಿತಂ ॥೩೭॥

---

ತ್ರಿಪುರಾದೇವಿಯು ಹೇಳಿದ ಈ ಮಾತನ್ನು ಕೇಳಿ, ಸಾವಿತ್ರಿಯು ತನ್ನ ಸ್ವರೂಪಳೇ ಆದ ತನ್ನ ಪ್ರತಿಬಿಂಬದಂತಿರುವ ಅವಳನ್ನು ಗಾಯತ್ರಿಯನ್ನಾಗಿ ತಿಳಿದಳು. ॥೩೩॥

ಶ್ರೀತ್ರಿಪುರಾದೇವಿಯ ಅನುಗ್ರಹದಿಂದ ಶಾಪದಿಂದ ನಾಶವಾಗಿದ್ದ ಜ್ಞಾಪಕ ಶಕ್ತಿಯನ್ನು ಪುನಃ ತಂದುಕೊಂಡು ಸಾವಿತ್ರಿಯು ಶಾಂತವಾದ ಸ್ವಭಾವವನ್ನು ಪುನಃ ಹೊಂದಿ ಅವಳೊಡನೆ ವರ್ತಿಸಿದಳು. ॥೩೪॥

ಅನಂತರ ಮಹಾದೇವಿಯಾದ ತ್ರಿಪುರಾದೇವಿಯು ಬ್ರಹ್ಮನೇ ಮೊದಲಾದವರನ್ನು ಕುರಿತು, ಗಾಯತ್ರಿಯು ನನ್ನಿಂದಲೇ ಹುಟ್ಟಿದವಳೂ, ನನ್ನ ಮಾತಿನ ಸ್ವರೂಪಳೂ, ಲೋಕದಲ್ಲಿ ವಾಗ್ರೂಪಳೂ, ಶ್ರೇಷ್ಠಳೂ ಆಗಿದ್ದಾಳೆ. ಎಂದಳು. ॥೩೫॥

ನನ್ನ ಮುಖ, ತೋಳುಗಳು ಮತ್ತು ತೊಡೆಗಳಿಂದ ಕ್ರಮವಾಗಿ ಹುಟ್ಟಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ತ್ರಿವರ್ಣದವರೂ ಎಲ್ಲರೂ ಅಕ್ಷರಸ್ವರೂಪಳಾದ ಇವಳನ್ನು ಉಪನಯನಪೂರ್ವಕವಾಗಿ ಸೇವಿಸಿ, ದ್ವಿಜರು ಎಂಬ ಹೆಸರನ್ನು ಹೊಂದಲಿ. ॥೩೬॥

ಅನಂತರ ತ್ರಿಪುರಾದೇವಿಯು ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನನ್ನು ಕುರಿತು, ಎಲೈ, ಬ್ರಹ್ಮನೇ, ನಾನು ಹೇಳುವುದನ್ನು ಕೇಳು. ಸಾವಿತ್ರಿಯ ಶಾಪದಿಂದ ನಿನಗೆ ಬಂದಿರುವ, ಕಾಮಿಸಲು ಯೋಗ್ಯಳಲ್ಲದವಳನ್ನು ಕಾಮಿಸಬೇಕೆಂಬ, ಶಾಪದ ಪರಿಹಾರೋಪಾಯವನ್ನು ಹೇಳುವೆನು. ಎಂದು ಹೇಳಿದಳು. ॥೩೭॥

ತತ್ರಾಽಪೀಯಂ ವೇದಮಯೀ ತವ ವಾಚಾ ವಿನಿರ್ಗತಾ ।
ಆತ್ಮಜಾ ತತ್ರ ತೇ ಕಾಮೋ ಭವಿಷ್ಯತ್ಯ ಪದೇ ತತಃ ॥೩೮॥

ವಾಣೀ ರೂಪಾ ಚ ಸಾವಿತ್ರೀ ಸರ್ವಾಽಽರಾಧ್ಯಾ ಭವಿಷ್ಯತಿ ।
ಶ್ರೋತವ್ಯಂ ಮದ್ವಚಃ ಸರ್ವೈರ್ಗಾಯತ್ರೀಯಂ ಮದಾತ್ಮಜಾ॥೩೯॥

ಅಹಮೇವ ನ ಸಂದೇಹೋ ನಿಶಾಮ್ಯೈನಾಂ ಮಮಾತ್ಮಜಾಂ ।
ಚಕ್ಷುಷ್ಮಂತಃ ಪ್ರಪಶ್ಯಂತು ಪ್ರಣಿಗದ್ಯೈವ ಮಂಬಿಕಾ ॥೪೦॥

ಸಮಾ ವಿವೇಶ ಗಾಯತ್ರ್ಯಾಂ ಸ್ವರ್ಧುನೀವ ಯಮಾಽನುಜಾಂ ।
ತದದ್ಭುತಂ ತತ್ರ ವಿಧಿಮುಖಾ ದೃಷ್ಟ್ವಾ ಸಮುಕ್ಷ್ವತಃ ॥೪೧॥

ವಿಸ್ಮಿತಾ ಜಯಶಬ್ದೇನ ವರ್ಧಯಾಮಾಸುರಂಬಿಕಾಂ ।
ಅಥಾಽಪಶ್ಯನ್ ತತ್ರ ಸರ್ವೇ ಗಾಯತ್ರೀಂ ತ್ರಿಪುರಾತ್ಮಿಕಾಂ ॥೪೨॥

---

ಅದರಲ್ಲಿಯೂ ವೇದಸ್ವರೂಪಳಾದ, ನಿನ್ನ ಮಾತಿನಿಂದಲೇ ಹುಟ್ಟಿದ್ದರಿಂದ ನಿನ್ನ ಮಗಳಾದ, ಇವಳನ್ನು ಅನುಚಿತವಾದರೂ ನೀನು ಕಾಮಿಸುವೆ! ॥೩೮॥

ಈಕೆಯು ಎಲ್ಲ ಭಾಷೆಗಳ ಸ್ವರೂಪಳೂ ಸಾವಿತ್ರಿಯೂ ಆದುದರಿಂದ ಎಲ್ಲರಿಗೂ ಪೂಜ್ಯಳಾಗಿರುವಳು. ಗಾಯತ್ರಿಯೂ ನನ್ನ ಮಗಳೇ. ಎಂಬ ನನ್ನ ಮಾತನ್ನು ನೀವೆಲ್ಲರೂ ಮನಗಾಣಬೇಕು. ॥೩೯॥

ಗಾಯತ್ರಿಯು ನನ್ನ ಮಗಳೆಂಬುದರಲ್ಲಿ ಸಂದೇಹವಿಲ್ಲವೆಂದು ತಿಳಿದು ಶ್ರೇಷ್ಠವಾದ ಕಣ್ಣುಗಳಿಂದ ಈಕೆಯನ್ನು ನೋಡಿರಿ. ಮೇಲಾದ ದೃಷ್ಟಿಯುಳ್ಳವರು ಮಾತ್ರ ಇದನ್ನು ತಿಳಿಯುತ್ತಾರೆ. ಎಂದು ಅಂಬಿಕೆಯಾದ ತ್ರಿಪುರಾದೇವಿಯು ಹೇಳಿದಳು. ॥೪೦॥

ಅನಂತರ ತ್ರಿಪುರಾದೇವಿಯು ಗಾಯತ್ರಿಯಲ್ಲಿ, ಗಂಗಾನದಿಯು ಯಮುನಾ ನದಿಯಲ್ಲಿ ಹೇಗೋ ಹಾಗೆ, ಸೇರಿದಳು. ಬ್ರಹ್ಮನೇ ಮೊದಲಾದವರು ತಮ್ಮೆದುರಿಗೆ ಈ ರೀತಿಯಲ್ಲಿ ಆಶ್ಚರ್ಯಕರವಾದ ವಿಷಯವು ನಡೆದುದನ್ನು ನೋಡಿದರು! ॥೪೧॥

ಆಗ ಅವರೆಲ್ಲರೂ ಜಯಜಯಾ ಕಾರಗಳಿಂದ ದೇವಿಯನ್ನು ಹೊಗಳಿದರು. ಆಮೇಲೆ ಎಲ್ಲರೂ ತ್ರಿಪುರಾಸ್ವರೂಪಳೇ ಆದ ಗಾಯತ್ರೀದೇವಿಯನ್ನು ಗೌರವಾದರಗಳಿಂದ ನೋಡಿದರು. ॥೪೨॥

ಚತುರ್ಭುಜಾಂ ಚಂದ್ರಚೂಡಾಂ ತ್ರಿನೇತ್ರಾಂ ಕುಂಕುಮಪ್ರಭಾಂ ।
ಪಾಶಾಂಕುಶಧನುರ್ಬಾಣ ಪ್ರಸೂನ ಶರಸಂಯುತಾಂ ॥೪೩॥

ತ್ರೈಲೋಕ್ಯಸುಂದರೀಂ ತುರ್ಯಾಂ ಸರ್ವಭೂಷಣಭೂಷಿತಾಂ ।
ಪ್ರಣೇಮುರ್ವಿಧಿಮುಖ್ಯಾಸ್ತೇ ಜಯಶಬ್ದಪ್ರಪೂರ್ವಕಂ ॥೪೪॥

ತದಾ ಪ್ರಾಹ ಪುನರ್ದೇವೀ ಸರ್ವೇ ಶೃಣ್ವಂತು ಮದ್ವಚಃ ।
ಅಹಮೇವ ಹಿ ಗಾಯತ್ರೀ ನ ಮತ್ತೋಽನ್ಯಾ ಕಥಂಚನ ॥೪೫॥

ವಾಕ್ಸಮಷ್ಟಿಮಯೀಂ ಚಾಽಹಂ ಸರ್ವೇ ಪಶ್ಯಂತು ಮಾಂ ತಥಾ ।
ದರ್ಶನಂ ದಿವ್ಯ ಮಾಸಾದ್ಯ ಪ್ರಸನ್ನಾ ವೋ ದಿಶಾಮಿ ತತ್ ॥೪೬॥

ಇತ್ಯುಕ್ತ್ವಾ ಪ್ರಾದಿಶತ್ತೇಷಾಂ ದಿವ್ಯಂ ಲೋಚನಮಂಬಿಕಾ ।
ದದೃಶುಃ ಸರ್ವ ಏವೈತೇ ಗಾಯತ್ರೀಂ ತ್ರಿಪುರಾಂಬಿಕಾಂ ॥೪೭॥

---

ಆಗ ಅವರೆಲ್ಲರೂ ನಾಲ್ಕು ತೋಳುಗಳುಳ್ಳ, ಚಂದ್ರಶೇಖರಳಾದ, ಮುಕ್ಕಣ್ಣಳಾದ, ಪಾಶ, ಅಂಕುಶ, ಧನುರ್ಬಾಣ, ಹುವ್ವಿನ ಬಾಣಗಳನ್ನು ಧರಿಸಿರುವ ಗಾಯತ್ರೀದೇವಿಯನ್ನು ನೋಡಿದರು. ॥೪೩॥

ಬ್ರಹ್ಮನೇ ಮೊದಲಾದವರೆಲ್ಲರೂ ಮೂರು ಲೋಕಗಳಲ್ಲಿಯೂ ಅತ್ಯಂತ ಸುಂದರಿಯಾದ, ನಾಲ್ಕನೆಯ ಸ್ವರೂಪವನ್ನು ಧರಿಸಿರುವ, ಎಲ್ಲಾ ಅಲಂಕಾರಗಳಿಂದಲೂ ಶೋಭಿತಳಾದ ಗಾಯತ್ರೀದೇವಿಯನ್ನು ನೋಡಿ ಜಯಜಯಾಕಾರಗಳೊಂದಿಗೆ ನಮಸ್ಕಾರಮಾಡಿದರು. ॥೪೪॥

ಆಗ ತ್ರಿಪುರಾದೇವಿಯು ಅಲ್ಲಿದ್ದವರೆಲ್ಲರನ್ನೂ ಕುರಿತು, ಎಲೈ ಬ್ರಹ್ಮಾದಿ ದೇವತೆಗಳೇ, ನಾನೇ ಗಾಯತ್ರೀರೂಪಳು. ಇವಳು ನನಗಿಂತ ಬೇರೆಯವಳೆಂದಿಗೂ ಅಲ್ಲ. ಎಂದು ಪುನಃ ಹೇಳಿದಳು. ಅಲ್ಲದೆ ॥೪೫॥

ಇವಳು ಮಾತಿನಸ್ವರೂಪಳಾದ ಎಲ್ಲ ವರ್ಣಮಾಲಾರೂಪಳೆಂದೂ, ಗಾಯತ್ರಿಯೆಂದೂ, ತಿಳಿದು ನೀವೆಲ್ಲರೂ, ಉಪಾಸನೆಮಾಡಿ, ನನ್ನ ದಿವ್ಯವಾದ ದರ್ಶನವನ್ನು ಪಡೆಯುವಿರಿ. ನಿಮ್ಮನ್ನು ಮೆಚ್ಚಿ ನಿಮ್ಮ ಇಷ್ಟಾರ್ಥಗಳನ್ನೂ ಕೊಡುವೆನು ! ॥೪೬॥

ಈರೀತಿಯಲ್ಲಿ ಹೇಳಿ ಲೋಕಕ್ಕೆ ತಾಯಿಯಾದ ತ್ರಿಪುರಾದೇವಿಯು ಅವರಿಗೆ ಶ್ರೇಷ್ಠವಾದ ಕಣ್ಣನ್ನು ಕೊಟ್ಟಳು. ಅವರೆಲ್ಲರೂ ಅದರ ಮೂಲಕ ಶ್ರೀತ್ರಿಪುರಾಂಬಿಕಾದೇವಿಯ ಸ್ವರೂಪಳೇ ಆದ ಶ್ರೀಗಾಯತ್ರೀದೇವಿಯನ್ನು ದರ್ಶನಮಾಡಿದರು. ॥೪೭॥

ಆಕಾಶರೂಪಿಣೀಂ ಯತ್ರ ವ್ಯಾಪ್ಯ ಸರ್ವಂ ಸಮಾಸ್ಥಿತಾಂ ।
ಮಾತೃಕಾರ್ಣ ಕ್ಲೃಪ್ತದೇಹಾಂ ಪರಾಮಾದ್ಯಾ ಸುಧಾಮಯೀಂ ॥೪೮॥

ಸ್ವರವಕ್ತ್ರಾಂ ಪಂಚವರ್ಗ ಕ್ಲೃಪ್ತಬಾಹು ಪದೋದರಾಂ ।
ಅಂತಃ ಸ್ಥಾತ್ಮ ತದೂರ್ಧ್ವಾಂಗ ಹೃನ್ಮೂಲ ಪರಿಶೇಷಿಕಾಂ ॥೪೯॥

ಪಶ್ಯಂತೀ ಮಧ್ಯಮಾ ನಾಭಿ ಹೃದಯಾಂ ವಕ್ತ್ರವೈಖರೀಂ ।
ಮಾಧ್ಯಮಾ ಬುದ್ಧಿಸಹಿತಾಂ ಪಶ್ಯಂತೀ ಹೃದಯಾನ್ವಿತಾಂ ॥೫೦॥

ವೈಖರೀ ವಚನಾಂ ವರ್ಣ ವಕ್ತ್ರಾಂ ಪದ ಹೃದಾತ್ಮಿಕಾಂ ।
ವಾಕ್ಯೋದರಾಂ ಘೋಷಸೂಕ್ಷ್ಮಾಂ ವರ್ಣಸ್ಥೂಲ ಸ್ವರೂಪಿಣೀಂ॥೫೧॥

---

ಅವರು ಆಕಾಶಸ್ವರೂಪಳಾದ, ಎಲ್ಲವನ್ನೂ ವ್ಯಾಪಿಸಿಕೊಂಡಿರುವ, ಮಾತೃಕಾ ವರ್ಣಮಾಲಾ ಎಂಬ ಅಕ್ಷರರೂಪವಾದ ಶರೀರವನ್ನು ಧರಿಸಿರುವ, ಪರಾಸ್ವರೂಪಳೂ ಶ್ರೇಷ್ಠಳೂ ಮತ್ತು ಅಮೃತಸ್ವರೂಪಳೂ ಆದ ಗಾಯತ್ರಿಯನ್ನು ನೋಡಿದರು. ॥೪೮॥

ಅವರು ಸ್ವರಸ್ವರೂಪವಾದ ಮುಖವುಳ್ಳ, ವ್ಯಂಜನವರ್ಣಗಳ ಐದು ವರ್ಗಗಳಿಂದ ಏರ್ಪಟ್ಟ ತೋಳುಗಳೂ, ಕಾಲುಗಳೂ, ಮತ್ತು ಹೊಟ್ಟೆ ಇವುಗಳುಳ್ಳ, ಅಂತಸ್ಥವರ್ಣಗಳು ಊಷ್ಮವರ್ಣಗಳು ಇವುಗಳಿಂದ ಏರ್ಪಟ್ಟ ಶಿರಸ್ಸುಳ್ಳ, ಶಕ್ತಿಯ ಬೀಜಾಕ್ಷರಮೂಲವಾದ ಹೃದಯವುಳ್ಳ ಗಾಯತ್ರೀದೇವಿಯನ್ನು ನೋಡಿದರು. ॥೪೯॥

ಅವರು ಪಶ್ಯಂತೀ, ಮತ್ತು ಮಧ್ಯಮಾ, ಎಂಬ ನಾಭಿ ಮತ್ತು ಹೃದಯ ಸ್ವರೂಪವುಳ್ಳ, ಮುಖದಲ್ಲಿ ವ್ಯಕ್ತವಾದ ವೈಖರೀರೂಪವುಳ್ಳ, ಮಧ್ಯಮಾ ಎಂಬ ನಾದಸ್ವರೂಪವಾದ ಬುದ್ಧಿಯಿಂದ ಕೂಡಿರುವ, ಪಶ್ಯಂತೀ ಎಂಬ ನಾದಸ್ವರೂಪವಾದ ಹೃದಯದಿಂದ ಕೂಡಿರುವ ಗಾಯತ್ರೀದೇವಿಯನ್ನು ದರ್ಶನಮಾಡಿದರು. ಹೆಚ್ಚಿನ ವಿವರಗಳನ್ನು ಪಂಚೋಪನಿಷತ್ತಿನ ಪುಟ (೧೨-೧೬) ಗಳಲ್ಲಿ ನೋಡಿ. ॥೫೦॥

ಅವರು ವೈಖರೀ ಎಂಬ ಅಕ್ಷರಸ್ವರೂಪವಾದ ಮಾತುಳ್ಳ, ಮುಖವುಳ್ಳ, ಪದ ಸ್ವರೂಪವಾದ ಹೃದಯವನ್ನು ಹೊಂದಿರುವ, ವಾಕ್ಯಸ್ವರೂಪವಾದ ಹೊಟ್ಟೆಯುಳ್ಳ,

ಅಶೇಷಾಽಽಗಮ ಮೂರ್ಧಾಢ್ಯಾಂ ಜ್ಯೋತಿರ್ನೇತ್ರಾಂ ಮಹೇಶ್ವರೀಂ ।
ವಕ್ತ್ರವ್ಯಾಕರಣಾಂ ಛಂದೋವಾಣೀಂ ಶಿಕ್ಷಾದಿ ಕಂಧರಾಂ ॥೫೨॥

ಕಲ್ಪ ಕರ್ಣಾಂ ಸಾಮಹೃದಂ ಋಗ್ಯಜೂ ರೂಪಸುಸ್ತನೀಂ ।
ಅಥರ್ವಣೋದರಾಂ ಸಾಂಖ್ಯ 'ಯೋಗಪಾರ್ಶ್ವಯುತಾಂ ಶುಭಾಂ ॥೫೩॥

ಕರ್ಮಾಽಽಗಮಕರಾಂ ತರ್ಕ ಜಘನ್ಯಾಂಗೀಂ ಪರಾತ್ಪರಾಂ ।
ಉಪವೇದ ಪೃಷ್ಠದೇಶಾಂ ಪುರಾಣಾಽಽಲೋಕ ಶೋಭಿನೀಂ ॥೫೪॥

ಕಾವ್ಯಾಲಂಕಾರಹಸಿತಾ ಮಾತ್ಮವಿದ್ಯಾಽಽತ್ಮಕಾಽಽಶಯಾಂ ।
ಬೌದ್ಧಜೈನಾಽದ್ಯಾಗಮಾಽಽತ್ಮ ನಖಲೋಮ ವಿರಾಜಿತಾಂ ॥೫೫॥

---

ಘೋಷಸ್ವರೂಪವಾದ ಸೂಕ್ಷ್ಮಧ್ವನಿಯುಳ್ಳ, ವರ್ಣಸ್ವರೂಪವಾದ ಸ್ಥೂಲರೂಪವನ್ನು ಹೊಂದಿರುವ, ಗಾಯತ್ರೀದೇವಿಯನ್ನು ದರ್ಶನಮಾಡಿದರು. ॥೫೧॥

ಅವರು ಸಮಸ್ತ ಆಗಮಗಳೆಂಬ ಶಿರಸ್ಸಿನಿಂದ ಪ್ರಕಾಶಿಸುವ, ಜ್ಯೋತಿಶ್ಶಾಸ್ತ್ರ ರೂಪವಾದ ಕಣ್ಣುಗಳುಳ್ಳ, ಮಹೇಶ್ವರೀ ಸ್ವರೂಪಳಾದ, ವ್ಯಾಕರಣಸ್ವರೂಪವಾದ ಮುಖವುಳ್ಳ, ಶಿಕ್ಷಾ ಮುಂತಾದ್ದರ ಸ್ವರೂಪವಾದ ಕತ್ತುಳ್ಳ ಛಂದಸ್ಸಿನಸ್ವರೂಪವಾದ ಮಾತುಳ್ಳ ಗಾಯತ್ರಿಯನ್ನು ನೋಡಿದರು. ॥೫೨॥

ಅವರು ಕಲ್ಪಸ್ವರೂಪವಾದ ಕಿವಿಗಳುಳ್ಳ, ಋಗ್ವೇದ ಮತ್ತು ಯಜುರ್ವೇದ ಸ್ವರೂಪವಾದ ಶ್ರೇಷ್ಠ ಸ್ತನಗಳುಳ್ಳ, ಮತ್ತು ಅಥರ್ವೇವಸ್ವರೂಪವಾದ ಹೊಟ್ಟೆಯನ್ನು ಹೊಂದಿರುವ, ಸಾಂಖ್ಯ, ಮತ್ತು ಯೋಗಗಳೆಂಬ ಎರಡು ಪಕ್ಕೆಗಳನ್ನು ಹೊಂದಿರುವ, ಮಂಗಳಕರಳಾದ ಗಾಯತ್ರೀದೇವಿಯನ್ನು ದರ್ಶನಮಾಡಿದರು. ॥೫೩॥

ಅವರು ಉದ್ಯೋಗಕಲೆಯ ವೇದಸ್ವರೂಪವಾದ ಕೈಗಳುಳ್ಳ, ತರ್ಕಶಾಸ್ತ್ರವೆಂಬ ಕಿಬ್ಬೊಟ್ಟೆಯುಳ್ಳ, ಪರಾತ್ಪರಸ್ವರೂಪಳಾದ, ಉಪವೇದಗಳೆಂಬ ಹಿಂಭಾಗವುಳ್ಳ, ಪುರಾಣಗಳೆಂಬ ನೋಟಗಳಿಂದ ಪ್ರಕಾಶಿಸುತ್ತಿರುವ ಗಾಯತ್ರೀದೇವಿಯನ್ನು ನೋಡಿದರು. ॥೫೪॥

ಅವರು ಕಾವ್ಯಗಳು ಮತ್ತು ಅಲಂಕಾರಶಾಸ್ತ್ರಗಳೆಂಬ ನಗುವುಳ್ಳ, ಆತ್ಮವಿದ್ಯಾ ಸ್ವರೂಪವಾದ ಅಭಿಪ್ರಾಯವುಳ್ಳ, ಬೌದ್ಧ, ಜೈನ ಮುಂತಾದ ಶಾಸ್ತ್ರಗಳೆಂಬ ಉಗುರುಗಳು ಮತ್ತು ಕೂದಲಿನಿಂದ ಪ್ರಕಾಶಿಸುತ್ತಿರುವ, ಗಾಯತ್ರೀದೇವಿಯನ್ನು ನೋಡಿದರು. ॥೫೫॥

ದೃಷ್ಟ್ವೈವಂ ತ್ರಿದಶಾದ್ಯಾಸ್ತೇ ಪ್ರಣೇಮುರ್ದಂಡವದ್ಭುವಿ ।
ಅಥ ಬದ್ಧಾಂಜಲಿಪುಟಾಸ್ತುಷ್ಟುವುಃ ಪರಮೇಶ್ವರೀಂ ॥೫೬॥

ಅಥ ತುಷ್ಟಾ ಜಗನ್ಮಾತಾ ಪೂಜಿತಾ ಸುರಮುಖ್ಯಕೈಃ ।
ಏತಸ್ಮಿನ್ನಂತರೇ ತತ್ರ ಸಮಾಜಗ್ಮುಃ ಸಹಸ್ರಶಃ ॥೫೭॥

ಆಭೀರಾ ಧೃತದಂಡಾಸ್ತೇ ನತ್ವಾ ಪ್ರೋಚುರ್ವಿಧಿಂ ತದಾ ।
ಬ್ರಹ್ಮನ್ನಃ ಶೃಣು ವಾಕ್ಯಾನಿ ಲೋಕಾ ಬ್ರಹ್ಮವಿನಿರ್ಮಿತಾಃ ॥೫೮॥

ನಿಯತ್ಯಾ ನಿಯತಾಸ್ತತ್ರ ತವ ವಾಗ್ರೂಪಯಾ ನನು ।
ತತ್ರ ಸ್ತ್ರೀ ನ ಸ್ವತಂತ್ರಾಽಸ್ತಿ ತ್ರಿಷು ಸ್ಥಾನೇಷ್ವಪೀಶ್ವರೀ ॥೫೯॥

---

ಈ ರೀತಿಯಲ್ಲಿ ದೇವಿಯ ದರ್ಶನವನ್ನು ಪಡೆದು ದೇವತೆಗಳೇ ಮೊದಲಾದವರು ಆಕೆಗೆ ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕಾರಮಾಡಿದರು. ಆಮೇಲೆ ಅವರು ಕೈಜೋಡಿಸಿಕೊಂಡು ಪರಮೇಶ್ವರಿಯಾದ ಆಕೆಯನ್ನು ಸ್ತೋತ್ರಮಾಡಿದರು. ॥೫೬॥

ತರುವಾಯ ದೇವತೆಗಳೇ ಮೊದಲಾದವರು ಪೂಜೆಯನ್ನು ಮಾಡಲಾಗಿ ಲೋಕಮಾತೆಯಾದ ಗಾಯತ್ರಿಯು ಅವರನ್ನು ಮೆಚ್ಚಿದಳು. ಈ ಸಂದರ್ಭದಲ್ಲಿ ಅಲ್ಲಿಗೆ ಸಾವಿರಾರು ಮಂದಿ ಗೊಲ್ಲರು ಗುಂಪುಗುಂಪಾಗಿ ಬಂದು ನೆರೆದರು. ॥೫೭॥

ಆಗ ದಂಡಗಳನ್ನು ಹಿಡಿದುಕೊಂಡು ಬಂದಿದ್ದ ಆ ಗೊಲ್ಲರು ಬ್ರಹ್ಮನಿಗೆ ನಮಸ್ಕರಿಸಿ, ಓ ಬ್ರಹ್ಮನೇ, ನಮ್ಮ ಮಾತುಗಳನ್ನು ದಯವಿಟ್ಟು ಲಾಲಿಸು. ಲೋಕಗಳೆಲ್ಲವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟಿವೆ. ಎಂದರು. ॥೫೮॥

ಮತ್ತು ನಿಮ್ಮ ಆಜ್ಞೆಯರೂಪವಾದ ದೈವಶಕ್ತಿಯಿಂದ ಈ ಲೋಕಗಳೆಲ್ಲವೂ ನಿಯಮಬದ್ಧವಾಗಿವೆ. ಆದ್ದರಿಂದ ಮೂರು ಲೋಕಗಳಿಗೂ ಈಶ್ವರಿಯಾದರೂ ನೀನು ಹೆಂಗಸಾದುದರಿಂದ ಸ್ವತಂತ್ರಳಲ್ಲವೆಂಬ ನಿಯಮವೂ ಇದ್ದೇ ಇದೆ. ॥೫೯॥

ಕನ್ಯಾಃಽಪ್ತೌ ಜನಕೋ ದ್ವಾರಮಥವಾ ಭ್ರಾತೃಮುಖ್ಯಕಾಃ ।
ನ ಸ್ವತಂತ್ರಸ್ತತೋ ಭೋಕ್ತಾ ಚೈವಂ ಸರ್ಗಾತ್ಪ್ರವರ್ತಿತಂ ॥೬೦॥

ತದೇಷ ಸೇತುರ್ಭಗ್ನೋಽದ್ಯ ಬಲೀ ತಾಂ ಭಜತೇ ಯದಿ ।
ಪರಸ್ಪರಂ ನಾಶಮೀಯುಃ ಸಾಽಮಿಷಶ್ಯೇನ ಪಕ್ಷಿವತ್ ॥೬೧॥

ತದ್ಬ್ರೂಹ್ಯತ್ರ ಸಮಾಧಾನಂ ನಶ್ಯೇದತ್ರ ಜಗತ್ತ್ರಯಂ ।
ಶ್ರುತ್ವೇತ್ಥಂ ಗೋಪಭೂಪಾಲವಚನಂ ಪ್ರಾಹ ಲೋಕಸೃಟ್ ॥೬೨॥

ನಿಯತಿರ್ನ ವಿಲಂಘ್ಯಾಽಸ್ತಿ ದೈವೀ ಸರ್ವೋಽಪರಿ ಸ್ಥಿತಾ ।
ದೃಷ್ಟ ಏವಂ ವಿಧಿರಪಿ ತಸ್ಮಾತ್ತ್ವಂ ಶಾಂತಿಮಾಪ್ನುಹಿ ॥೬೩॥

ಪಶ್ಯಾಽಽತ್ಮಜಾಂ ತವ ಪರಾಶಕ್ತಿರೂಪಾ ಮಿಮಾಂ ಪುರಃ ।
ದೃಷ್ಟ್ವಾ ವಿಧಿವಚೋ ಗೋಪಪತಿಸ್ತಾಂ ಸಮುವೈಕ್ಷತ ॥೬೪॥

---

ಹೆಣ್ಣುಮಗುವು ಹುಟ್ಟಲು ಅವಳ ತಂದೆಯು ಕಾರಣನು. ಅಲ್ಲದೆ ಅಣ್ಣನೇ ಮೊದಲಾದವರು ಅವಳ ರಕ್ಷಕರು. ಆದ್ದರಿಂದ ಹೆಣ್ಣುಮಗಳು ಸ್ವತಂತ್ರಳಲ್ಲವು. ಎಂಬ ವಿಷಯವು ಸೃಷ್ಟಿಯ ಪ್ರಾರಂಭದಿಂದಲೂ ಇದ್ದೇ ಇದೆ. ಇಂಥಾ ಕನ್ಯೆಯನ್ನು ಪಡೆಯಲು ಇವರೆಲ್ಲರ ಸಮ್ಮತಿಯು ಆವಶ್ಯಕವು. ॥೬೦॥

ಹೀಗಿರಲು ಬಲಿಷ್ಠರಾದ ನೀವೇ ಸ್ತ್ರೀಯರನ್ನು ಸ್ವತಂತ್ರವಾಗಿ ಹೊಂದಿರುವುದರಿಂದ ಆ ಧರ್ಮನಿಯಮವೆಂಬ ಸೇತುವೆಯನ್ನು ಭಂಗಮಾಡಿದಂತಾಯಿತು. ಹೀಗಾದರೆ ಜನಗಳು ಸ್ತ್ರೀಯರಿಗಾಗಿ ಸ್ವತಂತ್ರವಾಗಿ ಕಾದಾಡಿ, ಮಾಂಸದ ತುಂಡಿಗಾಗಿ ಕಾದಾಡುವ ಪಕ್ಷಿಗಳಂತೆ, ನಾಶವಾಗುವರು ! ॥೬೧॥

ಆದ್ದರಿಂದ ಈ ವಿಷಯಕ್ಕೆ ಸಮಾಧಾನವನ್ನು ಕೊಡಿರಿ. ಹೀಗಾದರೆ ಮೂರು ಲೋಕಗಳೂ ನಾಶವಾಗುವುದಿಲ್ಲವೆ? ಎಂದು ಹೇಳಿದ ಗೊಲ್ಲರ ದೊರೆಯ ಮಾತನ್ನು ಕೇಳಿ ಬ್ರಹ್ಮನು ಹೀಗೆಂದನು. ॥೬೨॥

ದೈವನಿಯಮವನ್ನು ಮೀರಲಾಗುವುದಿಲ್ಲ. ಹಣೆಯಬರಹವು ಎಲ್ಲಕ್ಕಿಂತಲೂ ಮೇಲಿದೆ. ಬ್ರಹ್ಮನಿಗಾದರೂ ಅದು ತಪ್ಪುವುದಿಲ್ಲ. ಆದ್ದರಿಂದ ನೀನು ಶಾಂತಿಯನ್ನು ಹೊಂದು. ॥೬೩॥

ಪರಾಶಕ್ತಿಸ್ವರೂಪಳಾಗಿರುವ, ಎದುರಿಗೆ ಇರುವ ನಿನ್ನ ಈ ಮಗಳನ್ನು ನೋಡು! ಬ್ರಹ್ಮನ ಮಾತಿನಂತೆ ಗೊಲ್ಲರ ದೊರೆಯು ಅವಳನ್ನು ನೋಡಿದನು. ॥೬೪॥

ಆತ್ಮಜಾಮೇವ ತಾಂ ದೃಷ್ಟ್ವಾ ಸರ್ವದೇವ ಪ್ರಪೂಜಿತಾಂ ।
ಪರಾಶಕ್ತಿಂ ವಿದಿತ್ವಾಽಥ ನತ್ವಾ ಸಂಪ್ರಾರ್ಥಯತ್ತದಾ ॥೬೫॥

ದೇವ್ಯಹಂ ವಂಚಿತೋ ಮೂಢೋ ಮಾಯಯಾ ತವ ಶಂಕರಿ ।
ನಾಽವಿದಂ ತ್ವಾಂ ಮದ್ಗೃಹಸ್ಥಾಂ ಪರಾಶಕ್ತಿಂ ಮಹೇಶ್ವರೀಂ ॥೬೬॥

ತತ್ಕೃಪಾಂ ಕುರು ದೇವೇಶಿ ಪುನರ್ಮದ್ಗೃಹ ಮಾವಿಶ ।
ಪ್ರಾರ್ಥಿತೈವಂ ಪರಾಶಕ್ತಿಃ ಪ್ರೋವಾಚಾಽಭೀರಭೂಪತಿಂ ॥೬೭॥

ಶೃಣು ಗೋಪಕುಲಾಽಧೀಶ ಮಾಂ ಪರಾಽಕಾಶರೂಪಿಣೀಂ ।
ಜಾನೀಹಿ ತ್ರಿವಿಧಾಽಕಾರಾಂ ಸಾವಿತ್ರ್ಯಾದ್ಯಾತ್ಮನಾ ಸ್ಥಿತಾಂ ॥೬೮॥

ತತ್ರಾಽಹಂ ಭಾರತೀರೂಪಾ ತೋಷಿತಾ ತವ ವೇಶ್ಮನಿ ।
ಸಂಭೂತಾಽಸ್ಮಿ ಪುನಶ್ಚಾಽಪಿ ಗೌರ್ಯಂಶೇನ ಸಮುದ್ಭವಾ ॥೬೯॥

---

ಗೊಲ್ಲರ ದೊರೆಯು ಆ ತನ್ನ ಮಗಳು ಎಲ್ಲಾ ದೇವತೆಗಳಿಗಿಂತಲೂ ವಿಶೇಷವಾಗಿ ಪೂಜಿಸಲ್ಪಟ್ಟ ಪರಾಶಕ್ತಿಸ್ವರೂಪಳು. ಎಂದು ತಿಳಿದು, ಆಕೆಗೆ ನಮಸ್ಕರಿಸಿ ಹೀಗೆ ಪ್ರಾರ್ಥನೆಮಾಡಿಕೊಂಡನು. ॥೬೫॥

ಎಲೌ ಮಂಗಳಕರಳಾದ ದೇವಿಯೇ, ನಿನ್ನ ಮಾಯೆಯಿಂದ ಮೂಢನಾಗಿ ನನ್ನ ಮನೆಯಲ್ಲಿಯೇ ಇದ್ದಾಗ ನಿನ್ನ ಸ್ವರೂಪವನ್ನು ಮಹೇಶ್ವರೀಸ್ವರೂಪಳೆಂದೂ, ಪರಾಶಕ್ತಿಸ್ವರೂಪಳೆಂದೂ ತಿಳಿಯಲಾರದೇ ಹೋದೆನು! ॥೬೬॥

ಎಲೌ ದೇವೇಶ್ವರಿಯೇ, ನನ್ನ ಮೇಲೆ ಕೃಪೆಯಿಟ್ಟು ಪುನಃ ನಮ್ಮ ಮನೆಗೆ ಪ್ರವೇಶಿಸು. ಹೀಗೆ ಗೊಲ್ಲರ ದೊರೆಯು ಪ್ರಾರ್ಥಿಸಲು ಪರಾಶಕ್ತಿಸ್ವರೂಪಳಾದ ಗಾಯತ್ರಿಯು ಅವನನ್ನು ಕುರಿತು ಈ ಮುಂದೆ ಹೇಳುವ ರೀತಿಯಲ್ಲಿ ಹೇಳಿದಳು. ॥೬೭॥

ಎಲೈ ಗೊಲ್ಲರ ದೊರೆಯೇ, ಕೇಳು. ನಾನು ಶ್ರೇಷ್ಠ ಆಕಾಶಸ್ವರೂಪಳಾಗಿ ಸಾವಿತ್ರೀ, ಗಾಯತ್ರೀ, ಸರಸ್ವತೀ, ಎಂಬ ಮೂರು ವಿಧವಾದ ಸ್ವರೂಪವಾಗಿ ಇದ್ದೇನೆಂದು ತಿಳಿಯುವವನಾಗು. ॥೬೮॥

ನಾನು ನಿನ್ನ ಮನೆಯಲ್ಲಿ ಸರಸ್ವತೀರೂಪದಲ್ಲಿದ್ದು ನಿನ್ನನ್ನು ಸಂತೋಷಪಡಿಸಿದೆನು. ಪುನಃ ಗೌರಿಯು ಅಂಶದಿಂದ ಕೂಡಿ ಈಗ ಹುಟ್ಟಿದೇನೆ! ॥೬೯॥

ಸೃಷ್ಟ್ಯಂತರೇ ಭವಿಷ್ಯಾಮಿ ಸಹ ಭ್ರಾತ್ರಾ ಚ ವಿಷ್ಣುನಾ ।
ನಂದಗೋಪಸ್ತ್ವಂ ಭವಿತಾ ಸರ್ವೋತ್ತಮ ಮಹೀಪತಿಃ ॥೨೦॥

ತತ್ರಾಽಹಂ ಭವಿತಾ ಕನ್ಯಾ ಕಾತ್ಯಾಯನ್ಯಭಿವಿಶ್ರುತಾ ।
ಏಷೋಽನುಜೋ ಮಮ ಭವೇತ್ಸಾಕ್ಷಾನ್ನಾರಾಯಣಃ ಪರಃ ॥೨೧॥

ಆಹರಿಷ್ಯತಿ ತೇ ಕೀರ್ತಿಂ ತ್ರಿಲೋಕವಿತತಾಂ ಶಿವಾಂ ।
ಅಹಂ ವಿಂಧ್ಯಾಽದ್ರಿನಿಲಯಾ ಭೂತ್ವಾ ಕಲಿಯುಗೇ ತತಃ ॥೨೨॥

ಜನಾನ್ ದುಃಖಪರಾನ್ ಸರ್ವಾನುದ್ಧರಾಮಿ ಪುನಃ ಪುನಃ ।
ಗೋಪೀಭಿಃ ಪೂಜಿತಾ ತತ್ರ ಮಾಸಂ ತೇ ವಿಷಯೇ ಶಿವಾ ॥೨೩॥

ಅಭೀಷ್ಟಂ ಸರ್ವಲೋಕಾನಾಂ ದುರ್ಲಭಂ ಪ್ರದಿಶಾಮ್ಯಹಂ ।
ಇತಿ ಪ್ರಾಪ್ಯ ವರಂ ತಸ್ಯಾ ಸ್ತುಷ್ಟಾ ಗೋಪಾ ಅಶೇಷತಃ ॥೨೪॥

---

ನಾನು ಪುನಃ ಮುಂದಿನ ಜನ್ಮದಲ್ಲಿ ನನ್ನ ತಮ್ಮನಾದ ವಿಷ್ಣುವಿನೊಡನೆ ಹುಟ್ಟುವೆನು. ಆಗ ನೀನೂ ಎಲ್ಲರಿಗಿಂತಲೂ ಅತ್ಯಂತ ಶ್ರೇಷ್ಠನಾದ ಗೊಲ್ಲರ ದೊರೆಯಾದ ನಂದಗೋಪನಾಗುವೆ. ॥೨೦॥

ಆ ನಿನ್ನ ಮನೆಯಲ್ಲಿ ಕಾತ್ಯಾಯನೀ ಎಂದು ಪ್ರಸಿದ್ಧಳಾಗುವ ಕನ್ಯೆಯಾಗಿ ನಾನು ಹುಟ್ಟುವೆನು. ಅತ್ಯಂತ ಶ್ರೇಷ್ಠನಾದ ಸಾಕ್ಷಾತ್ ನಾರಾಯಣನೇ ನನ್ನ ತಮ್ಮನಾಗಿ ಹುಟ್ಟುವನು. ॥೨೧॥

ಇವನು ನಿನಗೆ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಮಂಗಳಕರವಾದ ಕೀರ್ತಿಯನ್ನು ತರುವನು. ನಾನು ಕಲಿಯುಗದಲ್ಲಿ ವಿಂಧ್ಯಪರ್ವತದಲ್ಲಿ ಹುಟ್ಟುವೆನು. ॥೨೨॥

ನಾನು ದುಃಖಪಡುತ್ತಿರುವ ಎಲ್ಲರನ್ನೂ ಉದ್ಧಾರಮಾಡುವೆನು. ನಾನು ಪುನಃ ಪುನಃ ಪ್ರತಿ ತಿಂಗಳಲ್ಲಿಯೂ, ಪೂಜೆಯನ್ನು ಸ್ವೀಕರಿಸುತ್ತಾ ನಿನಗೆ ಮಂಗಳವನ್ನುಂಟುಮಾಡುವೆನು. ॥೨೩॥

ನಾನು ಸಕಲ ಲೋಕದ ಜನರಿಗೂ ದುರ್ಲಭವಾದ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವೆನು. ಎಂದು ಆಕೆಯಿಂದ ವರಗಳನ್ನು ಪಡೆದು ಆ ಸಮಸ್ತ ಗೊಲ್ಲರೂ ಬಹಳ ಸಂತೋಷಪಟ್ಟರು. ॥೨೪॥

ಜಗ್ಮುಃ ಸ್ವನಿಲಯಾನೇವ ನತ್ವಾ ದೇವೀಂ ಸುರಾನಪಿ ।
ಅಥ ಸಾ ಪರಮೇಶಾನೀ ಜಗಾಮಾಂತರ್ಧಿಮಂಬಿಕಾ ॥೭೫॥

ಸಾವಿತ್ರೀ ಪರ್ವತಸ್ಥಾನಾ ಗಾಯತ್ರ್ಯಾ ಸಹಿತೋ ವಿಧಿಃ ।
ಸಮಾಹರತ್ಕ್ರತುಂ ಭೂಯಃ ಪುಷ್ಕರೇ ತೀರ್ಥಶೇಖರೇ ॥೭೬॥

ಇತ್ಯೇತತ್ತೇ ಸಮಾಖ್ಯಾತಂ ಸಾವಿತ್ರ್ಯಾಖ್ಯಾನಮುದ್ಭುತಂ ।
ಶೃಣ್ವತಾಂ ಪಾಪಶಮನಂ ಭೂಯಃ ಕಿಂ ಶ್ರೋತುಮಿಚ್ಛಸಿ ॥೭೭॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಸಾವಿತ್ರ್ಯುಪಾಖ್ಯಾನಂ ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

ಅವರೆಲ್ಲರೂ ಗಾಯತ್ರೀದೇವಿಯನ್ನೂ ಮತ್ತು ದೇವತೆಗಳನ್ನೂ ನಮಸ್ಕರಿಸಿ, ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು. ಅನಂತರದಲ್ಲಿ ಲೋಕಮಾತೆಯಾದ ಪರಮೇಶ್ವರಿಯಾದ ತ್ರಿಪುರಾದೇವಿಯೂ ಅಂತರ್ಧಾನವಾದಳು. ॥೭೫॥

ಸಾವಿತ್ರಿಯು ವಿಂಧ್ಯಪರ್ವತದ ಮೇಲುಗಡೆಯಲ್ಲಿ ನೆಲೆಸಿದಳು. ಬ್ರಹ್ಮನು ಗಾಯತ್ರಿಯೊಂದಿಗೆ ಪುನಃ ಶ್ರೇಷ್ಠವಾದ ಪುಷ್ಕರತೀರ್ಥದಲ್ಲಿ ಯಾಗವನ್ನು ಮಾಡಿದನು. ॥೭೬॥

ಎಲೈ ಪರಶುರಾಮನೇ, ಆಶ್ಚರ್ಯಕರವಾದ ಈ ಸಾವಿತ್ರಿಯ ಕಥೆಯನ್ನು ಹೇಳಿದ್ದೇನೆ. ಇದು ಕೇಳತಕ್ಕವರ ಪಾಪಗಳನ್ನೂ ನಾಶಮಾಡುತ್ತದೆ. ಪುನಃ ನೀನು ನನ್ನಲ್ಲಿ ಏನನ್ನು ಕೇಳಲು ಅಪೇಕ್ಷಿಸುತ್ತೀಯೆ? ಎಂದನು. ॥೭೭॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಸಾವಿತ್ರೀಕಥೆಯನ್ನು ತಿಳಿಸುವ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## ॥ ಚತ್ವಾರಿಂಶೋಽಧ್ಯಾಯಃ ॥

### ನಲವತ್ತನೆಯ ಅಧ್ಯಾಯವು

ಏವಂ ದತ್ತಾತ್ರೇಯಗೀತಾಂ ಕಥಾಮಾಕರ್ಣ್ಯ ಭಾರ್ಗವಃ ।
ಉತ್ಸುಕಃ ಶ್ರವಣೇ ಭೂಯಃ ಕಥಾಂ ಪಪ್ರಚ್ಛ ಸಾದರಂ ॥೧॥

ನ ತೃಪ್ತಿರ್ಲೇಶತೋಽಪ್ಯತ್ರ ಕಥಾರಸನಿಷೇವಣಾತ್ ।
ಪಾನಾತ್ಕಾಮ್ಯರಸಸ್ಯೇವ ಭೂಯಸ್ತತ್ಪಾತುಮುತ್ಸಹೇ ॥೨॥

ಗಾಯತ್ರೀ ಸಂಗತಾಂ ದೇವೀಂ ಬೀಜಾಽವಯವಶೋಭಿನೀಂ ।
ಅಭಿಷ್ಟುವರ್ವಿಧಿಮುಖಾ ಯಥಾ ತನ್ಮೇ ಸಮೀರಯ ॥೩॥

---

ಹೀಗೆ ದತ್ತಾತ್ರೇಯನು ಹೇಳಿದ ಕಥೆಯನ್ನು ಕೇಳಿ ಪರಶುರಾಮನು ಇನ್ನೂ ಹೆಚ್ಚಾದ ಉತ್ಸಾಹವುಳ್ಳವನಾಗಿ ಭಕ್ತಿಪೂರ್ವಕವಾಗಿ ಸ್ತೋತ್ರ ಕಥೆಯನ್ನು ತಿಳಿಯ ಹೇಳುವಂತೆ ಅವನನ್ನು ಪ್ರಾರ್ಥಿಸಿಕೊಂಡನು. ॥೧॥

ಓ ಗುರುಗಳೇ, ತಮ್ಮ ಕಥೆಗಳ ರಸದಪ್ರವಾಹವನ್ನು ಎಷ್ಟು ಪಾನಮಾಡಿದರೂ, ಇಷ್ಟವಾದ ಅಮೃತ ರಸದಂತೆ, ಇನ್ನೂ ಪಾನಮಾಡಬೇಕೆಂದು ನನಗೆ ಉತ್ಸಾಹವಾಗುತ್ತಿದೆ. ॥೨॥

ಗಾಯತ್ರೀಮಂತ್ರದಲ್ಲಿ ಸೇರಿದ ದೇವತಾಬೀಜಾಕ್ಷರಗಳ ಜಪದಿಂದ ಪ್ರಕಾಶಿಸುವ ಶ್ರೀತ್ರಿಪುರಾದೇವಿಯನ್ನು ಬ್ರಹ್ಮನೇ ಮೊದಲಾದವರು ಯಾವ ರೀತಿಯಲ್ಲಿ ಸ್ತೋತ್ರಮಾಡಿದರೆಂಬ ವಿಷಯವನ್ನು ನನಗೆ ದಯವಿಟ್ಟು ಹೇಳಬೇಕು. ॥೩॥

ಅಥಾಽಪಿ ಸಾ ಜಗನ್ಮಾತಾ ಪುನರ್ಗೋಽಪಸ್ಯ ಹೇ ಕಥಂ ।
ನಾರಾಯಣೇನ ಸಹಿತಾ ಭವಿಷ್ಯತಿ ಕದಾ ಕುತಃ ॥೪॥

ಕಥಂ ವಾ ನಂದಗೋಪಾಲೋ ವಿತತಾಂ ಕೀರ್ತಿಮಾಪ್ತವಾನ್ ।
ಕಥಂ ಕಾತ್ಯಾಯನೀ ಸಾಽಽಸೀದ್ಗೋಪ್ಯಃ ಕಿಂ ಪ್ರಾಪುರೀಪ್ಸಿತಂ ॥೫॥

ಏತನ್ಮೇ ಬ್ರೂಹಿ ವಿತತಂ ಶಿಷ್ಯಾಂಪ ಶ್ರೋತುಮಿಚ್ಛತೇ ।
ಇತಿ ಪೃಷ್ಟೋ ದತ್ತಗುರುಃ ಪ್ರಸನ್ನಃ ಪ್ರಾಹ ಭಾರ್ಗವಂ ॥೬॥

ಕಥಾಪ್ರಸಂಗ ಯೋಗ್ಯೋಽಸಿ ಯತ್ತೇ ತೃಪ್ತಿರ್ನ ವಿದ್ಯತೇ ।
ಜಾಮದಗ್ನ್ಯ ಮಹಾದೇವೀ ಶಕ್ತಿವಿದ್ಧೋಽಸಿ ಸರ್ವಥಾ ॥೭॥

---

ಆದಾಗ್ಯೂ ಆ ಜಗನ್ಮಾತೆಯಾದ ದೇವಿಯು ಪುನಃ ಗೊಲ್ಲರಮನೆಯಲ್ಲಿ ನಾರಾಯಣನೊಂದಿಗೆ ಹೇಗೆ, ಯಾವಾಗ, ಏತಕ್ಕಾಗಿ ಹುಟ್ಟಿದಳು? ॥೪॥

ನಂದಗೋಪಾಲನು ವಿಸ್ತಾರವಾದ ಕೀರ್ತಿಯನ್ನು ಹೇಗೆ ಹೊಂದಿದನು? ಕಾತ್ಯಾಯನಿಯು ಹೇಗೆ ಹುಟ್ಟಿದಳು? ಗೋಪಿಯರು ಯಾವ ಇಷ್ಟಾರ್ಥಗಳನ್ನು ಗಳಿಸಿದರು? ॥೫॥

ನಿಮ್ಮ ಶಿಷ್ಯನಾಗಿ ಕೇಳಲು ಬಯಸುತ್ತಿರುವ ನನಗೆ ಇದನ್ನು ವಿಸ್ತಾರವಾಗಿ ದಯವಿಟ್ಟು ಹೇಳಿರಿ. ಎಂದು ಪರಶುರಾಮನು ಕೇಳಲಾಗಿ ದತ್ತಾತ್ರೇಯ ಗುರುವು ಪ್ರಸನ್ನನಾಗಿ ಅವನನ್ನು ಕುರಿತು ಈ ಮುಂದೆ ಹೇಳುವ ರೀತಿಯಲ್ಲಿ ಹೇಳಿದನು. ॥೬॥

ನೀನು ಕಥೆಗಳನ್ನು ಕೇಳಲು ಯೋಗ್ಯನಾಗಿರುತ್ತೀಯೆ? ಏಕೆಂದರೆ ನಿನಗೆ ಅವುಗಳನ್ನು ಕೇಳುವುದರಲ್ಲಿ ತೃಪ್ತಿಯೇ ಇಲ್ಲ. ಎಲೈ ಪರಶುರಾಮನೇ, ನೀನು ಸರ್ವ ಪ್ರಕಾರದಲ್ಲೂ ಮಹಾದೇವಿಯಾದ ತ್ರಿಪುರಾದೇವಿಯ ಅನುಗ್ರಹಶಕ್ತಿಯ ಪ್ರಭಾವ ಕ್ಕೊಳಗಾಗಿದ್ದೀಯೆ! ॥೭॥

ಅಹೋ ಭಾಗ್ಯಮಿದಂ ಲೋಕೇ ದುರ್ಲಭಂ ವಿಷಯಾಽತ್ಮನಾಂ ।
ಯಚ್ಛ್ರೀದೇವ್ಯಾಃ ಕಥಾಸಾರ ಸಮುತ್ಸುಕಿತ ಚಿತ್ತತಾ ॥೮॥

ಶೃಣು ಭಾರ್ಗವ ವಕ್ಷ್ಯಾಮಿ ಯಥಾ ಶ್ರೀ ತ್ರಿಪುರೇಶ್ವರೀ ।
ಸಂಸ್ತುತಾ ವಾಗಾತ್ಮಮಯೀ ವಿಧಿವಿಷ್ಣುಮುಖೈಸ್ತದಾ ॥೯॥

ದೃಷ್ಟ್ವಾ ತಾಂ ಸರ್ವವಿದ್ಯಾಽತ್ಮ ಮಾತೃಕಾವರ್ಣರೂಪಿಣೀಂ ।
ಜಯೇತ್ಯುದ್ಘುಷ್ಯ ಪ್ರಣತಾಃ ಸ್ತವಂ ಚಕ್ರುರಸುತ್ತಮಂ ॥೧೦॥

ಜಯಜಯದೇವಿ ಪರಾಪರರೂಪಿಣಿ
ಜಯಜಯ ಜಗತಾಂ ಜನಯಿತ್ರೀ ।
ಜಯಜಯ ಲೀಲಾ ಭಾಸಿತ ಸಕಲೇ
ಜಯಜಯ ಸರ್ವಾಽಶ್ರಯರೂಪೇ ।

---

ಶ್ರೀತ್ರಿಪುರಾದೇವಿಯ ಕಥೆಗಳ ಪ್ರವಾಹಗಳನ್ನು ಕೇಳುವುದರಲ್ಲಿ ಕುತೂಹಲವುಳ್ಳ ಮನಸ್ಸನ್ನು ಹೊಂದಿರುವಿಕೆಯನ್ನು ಮನುಷ್ಯನ ಅತ್ಯಂತ ಆಶ್ಚರ್ಯಕರವಾದ ಅದೃಷ್ಟವೆಂದೇ ತಿಳಿಯಬೇಕು. ಈ ಲೋಕದಲ್ಲಿ ಪ್ರಪಂಚದ ಸುಖಗಳಲ್ಲೇ ಮಗ್ನರಾಗಿರುವ ಮನುಷ್ಯರಿಗೆ ಇಂತಹ ಮನೋಧರ್ಮದ ಪ್ರಾಪ್ತಿಯು ದುರ್ಲಭವು. ॥೮॥

ಎಲೈ ಪರಶುರಾಮನೇ, ಕೇಳು. ಆಗ ಬ್ರಹ್ಮ, ವಿಷ್ಣು, ಮುಂತಾದವರು ವರ್ಣಸ್ವರೂಪಳಾದ ತ್ರಿಪುರಾದೇವಿಯನ್ನು ಹೇಗೆ ಸ್ತುತಿಸಿದರೆಂಬ ವಿಷಯವನ್ನು ಹೇಳುವೆನು. ॥೯॥

ಅವರೆಲ್ಲರೂ ಸರ್ವ ವಿದ್ಯಾಸ್ವರೂಪವಾದ ಮಾತೃಕಾ, ಎಂಬ ವರ್ಣಗಳ ಸ್ವರೂಪಳಾದ ಆಕೆಯನ್ನು ನೋಡಿ "ಮಾತೆಗೆ ಜಯವಾಗಲಿ" ಎಂದು ಘೋಷಿಸಿ, ನಮಸ್ಕರಿಸಿ, ಶ್ರೇಷ್ಠವಾದ ಸ್ತೋತ್ರವನ್ನು ಹೀಗೆ ಮಾಡಿದರು. ॥೧೦॥

ಪರಾಪರ ಸ್ವರೂಪಳಾದ ದೇವಿಗೆ ವಿಶೇಷ ಜಯವಾಗಲಿ. ಜಗತ್ತಿನ ಸೃಷ್ಟಿಕರ್ತಳಾದ ನಿನಗೆ ಮೇಲಾದ ಜಯವಾಗಲಿ. ಲೀಲೆಯಿಂದಲೇ ಎಲ್ಲವನ್ನೂ ಬೆಳಗುತ್ತಿರುವ, ಎಲ್ಲಕ್ಕೂ ಆಶ್ರಯಸ್ವರೂಪಳಾದ, ಎಲ್ಲಾ ವಸ್ತುಗಳ ಪ್ರಳಯವನ್ನುಂಟುಮಾಡುವ, ಎಲ್ಲದರ ಒಳಗಿರುವ ಆತ್ಮಸ್ವರೂಪಳಾದ, ವಿದ್ಯೆಯಿಂದ ಪ್ರಕಾಶಿಸುತ್ತಿರುವ

ಜಯಜಯ ಸರ್ವಪ್ರಲಯ ವಿಭಾವಿನಿ
ಜಯಜಯ ಸರ್ವಾಂತರರೂಪೇ ।
ಜಯಜಯ ವಿದ್ಯಾವಿಲಸಿತ ದೇಹೇ
ಜಯಜಯ ಶಂಕರಿ ನಃ ಪಾಹಿ ॥೧೧॥

ನಿರ್ಗತಗುಣಕೃತಿ ಜಾತಿವಿಭೇದೇ
ಚಿತ್ಸುಖಸಾಂದ್ರ ಸುಧಾಜಲಧೇ ।
ಪರಿಹೃತ ಪರಿಮಿತಿ ಪರವಾಗ್ರೂಪಿಣಿ
ಮೂಲವಿಲಾಸಿನಿ ಮುಕ್ತಿಮಯಿ ।
ಸ್ವಾತಂತ್ರ್ಯೇಣ ಸಮೀಹಿತಭಾವೇ
ಮಣಿಪುರವಾಸಿನಿ ಪಶ್ಯಂತೀ ।
ಜಯಜಯ ವಿದ್ಯಾವಿಲಸಿತ ದೇಹೇ
ಜಯಜಯ ಶಂಕರಿ ನಃ ಪಾಹಿ ॥೧೨॥

ತದನು ಜ್ಞಾನಮಯಾತ್ಮ ವಿಭಕ್ತಾ
ನ್ಮಧ್ಯಮ ಭಾವಾನ್ ಕಲಯಂತೀ ।

---

ಚಿದ್ರೂಪವಾದ ಶರೀರವುಳ್ಳ ಶಂಕರಿಯಾದ ದೇವಿಗೆ ಮಿಗಿಲಾದ ಜಯವುಂಟಾಗಲಿ. ಲೋಕಮಾತೆಯಾದ ದೇವಿಯೇ, ನಮ್ಮನ್ನು ದಯವಿಟ್ಟು ಕಾಪಾಡು. ॥೧೧॥

ಗುಣ, ಆಕಾರ, ಕ್ರಿಯೆ ಮತ್ತು ಜಾತಿ, ಎಂಬ ಪದಾರ್ಥಗಳ ಯಾವ ಧರ್ಮಗಳೂ ಇಲ್ಲದಿರುವ, ಜ್ಞಾನ, ಮತ್ತು ಸುಖ, ಇವುಗಳಿಂದ ತುಂಬಿದ ಅಮೃತ ಸಾಗರ ಸ್ವರೂಪಳಾದ, ಅಪರಿಮಿತವಾದ ಶ್ರೇಷ್ಠವಾದ ಶಬ್ದತತ್ವಸ್ವರೂಪಳಾದ, ಎಲ್ಲಕ್ಕೂ ಮೂಲಭೂತಪ್ರಕಾಶಸ್ವರೂಪಳಾದ, ಮುಕ್ತಿಸ್ವರೂಪಳಾದ ಸ್ವೇಚ್ಛೆಯಾಗಿರುವ ಮನೋಭಾವವುಳ್ಳ, ಮಣಿಪುರದಲ್ಲಿ ವಾಸಮಾಡುವ, ಪಶ್ಯಂತೀ ಎಂಬ ನಾದಸ್ವರೂಪಳಾದ, ವಿದ್ಯೆಯಿಂದ ಪ್ರಕಾಶಿಸುತ್ತಿರುವ ಶರೀರವುಳ್ಳ, ದೇವಿಯಾದ ನಿನಗೆ ಹೆಚ್ಚಾದ ವಿಶೇಷ ಜಯವುಂಟಾಗಲಿ. ಶುಭಕರಳಾದ ನೀನು ದಯವಿಟ್ಟು ನಮ್ಮನ್ನು ಕಾಪಾಡು. ॥೧೨॥

ಅಲ್ಲದೇ ಜ್ಞಾನಮಯವಾದ ನಿನ್ನ ಸ್ವರೂಪದಲ್ಲಿ ವಿಭಾಗವನ್ನು ಮಾಡಿಕೊಂಡಂತೆ ಮಧ್ಯಮನಾದ ಭಾವವನ್ನು ಹೊರಗೆಡಹುತ್ತಿರುವ, ಮಧ್ಯಮಸ್ವರೂಪ

ಮಧ್ಯಮರೂಪಾಽನಾ ಹತವಾಸಿನಿ
ಮಿಶ್ರಿತರೂಪೇ ಬುದ್ಧಿಮಯಿ ।
ವಸುವಿಧಶಕ್ತಿ ಬಹಿಷ್ಕೃತಭಾವೇ
ಪೀಠವಿಭೇದೇ(ದ)ವಿಚಿತ್ರಕೃತೇ ।
ಜಯಜಯ ವಿದ್ಯಾವಿಲಸಿತದೇಹೇ
ಜಯಜಯ ಶಂಕರಿ ನಃ ಪಾಹಿ ॥೧೩॥

ಅದ್ವಯ ಸಂವಿನ್ಮಾತ್ರ ಶರೀರಂ
ಸದ್ವಯ ಭಾವಂ ಕಲಯಂತೀ ।
ಜಾತಾಽಸುತ್ತರ ಮುಖಶರ ಕಿರಣ್ಯೆ
ರ್ಮಿಥುನವಿಭೇದಾದಪಿ ದಶಧಾ ।
ಆದ್ಯಾ ತತ್ಪರ ಪರಸಂಯೋಗಾ
ದ್ದ್ವಿಯಶ್ಚಾಽಽಪಿ ಚತುರ್ವಿಧತಾ ।
ಜಯಜಯ ವಿದ್ಯಾವಿಲಸಿತದೇಹೇ
ಜಯಜಯ ಶಂಕರಿ ನಃ ಪಾಹಿ ॥೧೪॥

---

ದಿಂದ ಅನಾಹತಚಕ್ರದಲ್ಲಿ ಪ್ರಕಟವಾಗಿರುವ ಮಿಶ್ರವಾದ ಸ್ವರೂಪವುಳ್ಳ, ಬುದ್ಧಿ ಸ್ವರೂಪಳಾದ, ಎಂಟು ವಿಧವಾದ ಶಕ್ತಿಗಳಿಂದ ಪ್ರಕಾಶಪಡುವ ಸಕಲಭಾಗಗಳುಳ್ಳ, ನಾನಾ ವಿಧವಾದ ಪೀಠಗಳುಳ್ಳ ಆಶ್ಚರ್ಯಕರವಾದ, ಸ್ವರೂಪವುಳ್ಳ, ಶ್ರೀ ವಿದ್ಯೆಯಿಂದ ಪ್ರಕಾಶಿಸುತ್ತಿರುವ ಸ್ವರೂಪವುಳ್ಳ, ದೇವಿಗೆ ವಿಶೇಷ ಜಯವಾಗಲಿ ! ಓ ಶಂಕರಿಯೇ, ನೀನು ನಮ್ಮನ್ನು ಕಾಪಾಡು. ॥೧೩॥

ಅದ್ವೈತಜ್ಞಾನಸ್ವರೂಪವಾದ ಶರೀರವುಳ್ಳವಳಾಗಿದ್ದಾಗ್ಯೂ ಮಾಯೆಯಿಂದ ಎರಡು ಮತ್ತು ಅನೇಕರೂಪವನ್ನು ತೋರಿಸುತ್ತಿರುವ, ಪ್ರಶಸ್ತವಾಗಿರುವ ಹದಿನೈದು ಕಿರಣಗಳು ಅಥವಾ ಕಲೆಗಳು ಎಂಬ ಭೇದವನ್ನು ತೋರಿಸುತ್ತಾ, ಕೊನೆಗೆ ಹತ್ತು ವಿಧವಾಗಿ ತೋರುವ, ಮೊತ್ತಮೊದಲಿನವಳಾದ, ಮತ್ತು ಇತರ ವಸ್ತುಗಳ ಸಂಬಂಧದಿಂದ ಪುನಃ ನಾಲ್ಕು ವಿಧ ಉಳ್ಳವಳೂ ಆದ, ಶ್ರೀವಿದ್ಯೆಯಿಂದ ಪ್ರಕಾಶಿಸುತ್ತಿರುವ ಶರೀರವುಳ್ಳ ತಾಯಿಯಾದ ದೇವಿಗೆ ವಿಶೇಷ ಜಯವುಂಟಾಗಲಿ ! ಓ ಶಂಕರಿಯೇ, ನಮ್ಮನ್ನು ಕಾಪಾಡು. ॥೧೪॥

ಅಂತೇ ಬೇದಾಽಭೇದ ವಿಭೇದಾ
ದಪಿ ನೃಪಸಂಖ್ಯ ಸ್ವರರೂಪಾ ।
ಪಂಚವಿಧಂ ತತ್ಪಂಚಕಮಾದ್ಯಂ
ವ್ಯತ್ಯಯಯೋಗಾದ್ವೇದವಿಧಾ ।
ತದನು ಚತುರ್ಧಾ ಮಧ್ಯಮಹೀನಾ
ಮಿಥುನದ್ವಿತಯಂ ಕಲಯಂತೀ ।
ಜಯಜಯ ವಿದ್ಯಾವಿಲಸಿತದೇಹೇ
ಜಯಜಯ ಶಂಕರಿ ನಃ ಪಾಹಿ ॥೧೫॥

ಏವಂ ಭೂಶರ ಮಿತಭೇದಾಽಢ್ಯಾ
ವಿದ್ಯಾರಾಜ್ಞೀ ಮಾತಾ ತ್ವಂ ।
ತತ್ಸಂಭೇದಾ ದಖಿಲ(ವಿ)ಭಿನ್ನಂ
ಭಾವಯಸಿ ತ್ವಂ ಶಬ್ದಮಯೀ ।
ತ್ವತ್ಕಲಯಾ ಯದಿ ನೋ ಸಂಭಿನ್ನಂ
ಗಗನಮಯಂ ಸ್ಯಾ ದಖಿಲಮಿದಂ ।
ಜಯಜಯ ವಿದ್ಯಾವಿಲಸಿತದೇಹೇ
ಜಯಜಯ ಶಂಕರಿ ನಃ ಪಾಹಿ ॥೧೬॥

---

ಕೊನೆಯಲ್ಲಿ ಭೇದ, ಅಭೇದ, ವಿಭೇದ ಎಂಬ ಮೂರು ವಿಧವಾದ ಭೇದಗಳಿಂದ ಅಸಂಖ್ಯಾತಗಳಾದ ಸ್ವರೂಪಗಳುಳ್ಳ, ಐದು ವಿಧವಾದ ಮತ್ತು ಮೊದಲನೆಯ ಐದು ಬಗೆಯಿಂದಾದ ವ್ಯತ್ಯಾಸದಿಂದ ಇಪ್ಪತ್ತೈದು ವಿಧಗಳಾದ, ಹಾಗೆಯೇ ನಾಲ್ಕು ಪ್ರಕಾರವಾದ ಸ್ವರೂಪವುಳ್ಳ, ಮಧ್ಯಮಸ್ವರವಿಲ್ಲದೇ ಎರಡೆರಡು ವಿಧವಾದ ಸ್ವರೂಪವನ್ನು ತೋರಿಸುತ್ತಿರುವ, ಶ್ರೀವಿದ್ಯೆಯಿಂದ ಪ್ರಕಾಶವಾದ ಶರೀರವುಳ್ಳ ನಿನಗೆ ವಿಶೇಷವಾದ ಜಯವುಂಟಾಗಲಿ. ಓ ಶಂಕರಿಯೇ, ನೀನು ನಮ್ಮನ್ನು ಕಾಪಾಡು. ॥೧೫॥

ಹೀಗೆ ಭೂಮಿ ಮತ್ತು ಬಾಣಗಳು ಐವತ್ತೊಂದು ಸಂಖ್ಯೆಯಿಂದ ಪೂರ್ಣಳಾದ ವಿದ್ಯೆಗೆ ರಾಣಿಯಾದ, ತಾಯಿಯಾದ ನೀನು ಅವುಗಳಲ್ಲಿ ಭೇದವನ್ನುಂಟುಮಾಡುವುದರಿಂದ ಎಲ್ಲವನ್ನೂ ಭಿನ್ನವಾದಂತೆ ಮಾಡಿರುವೆ. ಓ ಮಾತೆಯೇ, ನೀನು ಶಬ್ದ

ಸ್ಥಾನತ್ರಯಮಪಿ ಕಲಯಾ ಹೀನಂ
ತವ ಯದಿ ಮಾತರ್ನೋ ಕಿಂಚಿತ್ ।
ಪರಮಂ ಚಾಪಿ ಪದಂ ವಿಕಲಂ ಚೇತ್
ಶಪಥೋ ಯೋಯಂ ನೇತರಥಾ ।
ತತ್ತ್ವಂ ಪ್ರತ್ಯಾಹೃತಕಲಯಾ ತ
ದ್ರೂಪಂ ವ್ಯಾಪ್ಯ ಸದಾ ಸ್ಫುರಸಿ ।
ಜಯಜಯ ವಿದ್ಯಾವಿಲಸಿತದೇಹೇ
ಜಯಜಯ ಶಂಕರಿ ನಃ ಪಾಹಿ ॥೧೭॥

ವಯಮಿಹ ಲೋಕೇ ಸರ್ಜನಮುಖ್ಯೇ
ಕೃತ್ಯೇ ಯುಕ್ತಾ ಸ್ತ್ವದ್ಭೀತ್ಯಾ ।
ತ್ವತ್ಪದಪದ್ಮ ಪ್ರಭವಾಃ ಕಾಲೇ
ಸೀದಂತಸ್ತ್ವಾಮ ವಿದಂತಃ ।

---

ಸ್ವರೂಪಳಾಗಿದ್ದೀಯೆ ! ನಿನ್ನ ಕಲಾಕೌಶಲವನ್ನು ತೋರಿಸದಿದ್ದರೆ, ಎಲ್ಲವೂ ಆಕಾಶದಂತೆ ಶೂನ್ಯಸ್ವರೂಪವಾಗುತ್ತಿತ್ತು. ಶ್ರೀವಿದ್ಯೆಯಿಂದ ಪ್ರಕಾಶಿಸುತ್ತಿರುವ ದೇಹವುಳ್ಳ ದೇವಿಯೇ ನಿನಗೆ ವಿಶೇಷ ಜಯವುಂಟಾಗಲಿ. ಶಂಕರಿಯಾದ ನೀನು ನಮ್ಮನ್ನು ಕಾಪಾಡು. ॥೧೬॥

ಓ ತಾಯಿಯೇ, ನಿನ್ನ ಕಲೆಯಿಲ್ಲದಿದ್ದರೆ ಮೂರು ಸ್ಥಾನಗಳು ಇರುತ್ತಲೇ ಇರಲಿಲ್ಲ. ಪರಮಪದವಾದರೂ ನಿನ್ನ ಕಲೆಯಿಲ್ಲದೇ ಇದ್ದರೆ ಬರಿಯ ಪ್ರತಿಜ್ಞೆಯಾಗುತ್ತಿತ್ತು ! ಹಾಗಲ್ಲದೇ ಬೇರೆ ವಿಧವಾಗಿಲ್ಲ. ಆದ್ದರಿಂದ ನೀನು ನಿನ್ನ ಪ್ರತ್ಯಾಹಾರ ಕಲೆಯ ಪ್ರಭಾವವನ್ನು ಅವುಗಳ ಮೇಲೆ ಬೀರಿ ಯಾವಾಗಲೂ ಪ್ರಕಾಶಿಸುತ್ತೀಯೆ. ಶ್ರೀವಿದ್ಯೆಯಿಂದ ಪ್ರಕಾಶವಾದ ಶರೀರವುಳ್ಳ ತಾಯಿಯೇ, ನಿನಗೆ ವಿಶೇಷವಾಗಿ ಜಯವಾಗಲಿ, ಓ ಶಂಕರಿಯೇ, ನೀನು ನಮ್ಮನ್ನು ಕಾಪಾಡು. ॥೧೭॥

ನಿನ್ನ ಭಯದಿಂದಲೇ ನಾವೆಲ್ಲರೂ ಸೃಷ್ಟಿಯೇ ಮುಂತಾದ ಕಾರ್ಯಗಳಲ್ಲಿ ತೊಡಗಿದ್ದೇವೆ. ನಿನ್ನ ಪಾದಕಮಲಗಳಿಂದಲೇ ಹುಟ್ಟಿದರೂ ನಿನ್ನ ಸ್ವರೂಪವನ್ನು ಮರೆತು ಈಗ ಹಾಳಾಗಿದ್ದೆವು ! ಪದೇ ಪದೆ ನಿನ್ನ ಕಾಲಿಗೆ ಬೀಳುತ್ತಿರುವ, ಹೆದರಿ

ಕಾಲೇ ಕಾಲೇ ಪಾದ ಪ್ರಣತಾನ್
ನನು ಭೀತಾನ್ ಮೂಢಾನತಿದೀನಾನ್ ।
ಜಯಜಯ ವಿದ್ಯಾವಿಲಸಿತದೇಹೇ
ಜಯಜಯ ಶಂಕರಿ ನಃ ಪಾಹಿ ॥೧೮॥

ಮೇಧಾ ವಾಣೀ ಭಾರತೀ ತ್ವಂ ವಿದ್ಯಾ ಮಾತಾ ಸರಸ್ವತೀ ।
ಬ್ರಾಹ್ಮೀ ಮಾಯಾ ವರ್ಣಮಯೀ ಪರಾಽದ್ಯಾ ಕೃತಿರವ್ಯಯಾ॥೧೯॥

ವಿಕಲ್ಪಾ ನಿರ್ವಿಕಲ್ಪಾಽಜಾ ಕಲಾ ನಾದಮಯೀ ಕ್ರಿಯಾ ।
ಕಾಲಶಕ್ತಿಃ ಸರ್ವರೂಪಾ ಶಿವಾ ಶ್ರುತಿರನುತ್ತರಾ ॥೨೦॥

ರಕ್ಷಾಽಸ್ಮಾಂಸ್ತ್ವಂ ಮಹಾದೇವಿ ಸರ್ವಲೋಕ ಮಹೇಶ್ವರಿ ।
ಪತಿತಾಂ ಸ್ತ್ವಚ್ಚರಣಯೋ ರಕ್ಷ ದೇವಿ ನನೋಽಸ್ತು ತೇ ॥೨೧॥

---

ಕೊಂಡಿರುವ, ಮೂಢರೂ ಮತ್ತು ಅತಿ ದೀನರೂ ಆದ ನಮ್ಮನ್ನು ಕಾಪಾಡು. ಶ್ರೀವಿದ್ಯೆಯಿಂದ ಪ್ರಕಾಶಿಸುತ್ತಿರುವ ಶರೀರವುಳ್ಳ ದೇವಿಯೇ, ನಿನಗೆ ವಿಶೇಷವಾದ ಜಯವಾಗಲಿ. ಓ ಶಂಕರಿಯೇ, ನಮ್ಮನ್ನು ಕಾಪಾಡು. ॥೧೮॥

ಓ ದೇವಿಯೇ, ನೀನು ಬುದ್ಧಿ, ವಾಣೀ, ಭಾರತೀ, ವಿದ್ಯಾ, ಮಾತಾ, ಸರಸ್ವತೀ, ಬ್ರಾಹ್ಮೀ, ಮಾಯಾ, ವರ್ಣಸ್ವರೂಪಾ, ಪರಾ, ಮೊದಲನೆಯವಳು, ನಾಶರಹಿತಳೂ, ಕರ್ಮಸ್ವರೂಪಳೂ, ಇವೇ ಮೊದಲಾದ ಎಲ್ಲಾ ಸ್ವರೂಪಳೂ ನೀನೇ ಆಗಿರುತ್ತೀಯೆ. ॥೧೯॥

ಓ ದೇವಿಯೇ, ನೀನು ವಿಕಲ್ಪಾ, ನಿರ್ವಿಕಲ್ಪಾ, ಅಜಾ, ಕಲಾ, ನಾದ ರೂಪ, ಕ್ರಿಯೆ, ಕಾಲಶಕ್ತಿ, ಸರ್ವರೂಪೇ, ಶಿವೇ, ಅತ್ಯಂತ ಶ್ರೇಷ್ಠವಾದ ವೇದ ಇವೆಲ್ಲಾ ಸ್ವರೂಪಳೂ ಆಗಿದ್ದೀಯೆ. ॥೨೦॥

ಎಲೌ ಮಹಾದೇವಿಯೂ, ಮತ್ತು ಮಹೇಶ್ವರಿಯೂ ಆದ ತಾಯಿಯೇ, ನಿಮ್ಮ ಚರಣಕಮಲಗಳಿಗೆರಗಿದ ನಮ್ಮನ್ನು ರಕ್ಷಿಸು. ಓ ದೇವಿಯೇ, ನಿನಗೆ ನಮ್ಮ ಅನಂತ ನಮಸ್ಕಾರವಿರಲಿ. ॥೨೧॥

ಇತಿ ಸ್ತುತಾ ಸಾ ಪರಮಾ ಮಾತೃಕಾ ವಿಶ್ವರೂಪಿಣೀ ।
ಪ್ರಾಹ ದೇವಾನ್ ವಿಧಿಮುಖಾನ್ ಪ್ರಸನ್ನಾ ತತ್ಕೃತಾಽರ್ಚನಾ॥೨೨॥

ಶೃಣುಧ್ವಂ ವಿಧಿಮುಖ್ಯಾ ಮೇ ವಚೋಽಭಿಲಷಿತಾಸ್ಪದಂ ।
ಸ್ತವೇನಾಽನೇನ ತುಷ್ಟಾಽಸ್ಮಿ ಶ್ರೇಷ್ಠೇಯಂ ಮತ್ಸ್ತುತಿಃ ಕೃತಾ ॥೨೩॥

ಗುಹ್ಯಾಽರ್ಥಗರ್ಭಿತಾ ಚೇಯಂ ಮಾತೃಕಾ ವರ್ಣಸಂಭವಾ ।
ಮಾತೃಕಾ ಸ್ತುತಿರಿತ್ಯೇಷಾ ವಿಖ್ಯಾತಾಽಸ್ತು ಸಮಂತತಃ ॥೨೪॥

ತ್ರಿಸಂಧ್ಯಂ ಯಃ ಪಠೇದೇನಾಂ ತಸ್ಯಾಽಹಂ ವಾಗ್ಮಯೀ ಹೃದಿ ।
ಪ್ರಾದುರ್ಭವಾಮಿ ಕಾವ್ಯಾದಿಮಯೀ ವಿದ್ಯಾಸ್ವರೂಪಿಣೀ ॥೨೫॥

ಏನಾಂ ಸ್ತುತಿಂ ಪ್ರಪಠತೋ ನ ಹಿ ವಿದ್ಯಾ ವಿಹೀಯತೇ ।
ಸಮೋ ವಾಕ್ಪತಿನಾ ಭೂಯಾದ್ವಾದೇಷು ವಿಜಯೀ ತಥಾ ॥೨೬॥

---

ಹೀಗೆ ಬ್ರಹ್ಮಾದಿಗಳು ಸ್ತೋತ್ರಮಾಡಲು ವಿಶ್ವಸ್ವರೂಪಳಾದ ದೇವಿಯು ಬ್ರಹ್ಮನೇ ಮೊದಲಾದವರನ್ನು ಅವರು ಮಾಡಿದ ಪೂಜೆಯಿಂದ ಮೆಚ್ಚಿ, ಅವರನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ||೨೨||

ಎಲೈ ಬ್ರಹ್ಮನೇ ಮೊದಲಾದ ದೇವತೆಗಳೇ, ನಿಮಗಿಷ್ಟವಾದ ಈ ನನ್ನ ಮಾತುಗಳನ್ನು ಕೇಳಿರಿ. ನಿಮ್ಮ ಈ ಸ್ತೋತ್ರದಿಂದ ಸಂತೋಷಗೊಂಡೆನು. ನೀವು ಶ್ರೇಷ್ಠವಾದ ಸ್ತೋತ್ರವನ್ನು ಮಾಡಿದ್ದೀರಿ. ||೨೩||

ನೀವು ಮಾಡಿದ ಸ್ತೋತ್ರವು ರಹಸ್ಯವಾದ ಅರ್ಥಗಳನ್ನು ಒಳಗೊಂಡದ್ದೂ, ಮಾತೃಕಾವರ್ಣಗಳಿಂದ ಹುಟ್ಟಿದುದೂ, ಆಗಿದೆ. ಆದ್ದರಿಂದ ಈ ಸ್ತೋತ್ರವು ಮಾತೃಕಾಸ್ತೋತ್ರವೆಂದು ಎಲ್ಲಾ ಕಡೆಯಲ್ಲಿಯೂ ಪ್ರಸಿದ್ಧವಾಗಲಿ. ||೨೪||

ಯಾವನು ಈ ಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿಯೂ, ಪಠಿಸುವನೋ ಅವನ ಹೃದಯದಲ್ಲಿ ನಾನು ಕಾವ್ಯವೇ ಮೊದಲಾದ ಸ್ವರೂಪವುಳ್ಳ, ವಿದ್ಯಾಸ್ವರೂಪಳಾಗಿ, ವಾಙ್ಮಯಸ್ವರೂಪಳಾಗಿ ಅಭಿವ್ಯಕ್ತವಾಗುತ್ತಿರುವೆನು. ||೨೫||

ಯಾವನು ಈ ಸ್ತೋತ್ರವನ್ನು ಪಠಿಸುತ್ತಾನೋ ಅವನ ವಿದ್ಯೆಯು ನಾಶವಾಗುವುದೇ ಇಲ್ಲ. ಅವನು ಬೃಹಸ್ಪತಿಗೆ ಸಮನಾಗಿ ವಾದಗಳಲ್ಲಿ ಜಯಶಾಲಿಯಾಗುವನು. ||೨೬||

ಚತುರ್ವಿಂಶತಿನಾಮಾನಿ ಭವದ್ಭಿಃ ಪಠಿತಾನಿ ತು ।
ಪ್ರತ್ಯಹಂ ತ್ರಿಷು ಕಾಲೇಷು ಪಠೇದ್ವೇದಾಕ್ಷನಾರಕಂ ॥೨೭॥

ತತೋ ಧಾರಯತಿ ಶ್ಲೋಕಸಹಸ್ರಮಪಿ ಪ್ರತ್ಯಹಂ ।
ಬುದ್ಧಿಃ ಕುಶಾಗ್ರಸದೃಶೀ ಸೂಕ್ಷ್ಮಾರ್ಥ ಪ್ರವಿಭೇದಿನೀ ॥೨೮॥

ಜಾಯತೇ ನಾತ್ರ ಸಂದೇಹಃ ಸತ್ಯಮೇತನ್ಮಯೇರಿತಂ ।
ವಿಧಿ ವಿಷ್ಣು ವಿರೂಪಾಕ್ಷಾಃ ಶೃಣುಧ್ವಂ ವಚನಂ ಮಮ ॥೨೯॥

ನ ಭೂಯಶ್ಶಕ್ತಯಶ್ಚೇಮಾಃ ಪರಿಭಾವ್ಯಾಃ ಕಥಂಚನ ।
ಕ್ರುದ್ಧಾ ಜಗದ್ಭಕ್ಷಯೇಯುರ್ವಿಧಿವಿಷ್ಣು ಶತಾವೃತಂ ॥೩೦॥

ಮದಂಶಭೂತಾ ಭವತಾ ಮಾತ್ರಯಾ ಮಾನನೋಚಿತಾಃ ।
ಇತ್ಯುಕ್ತ್ವಾ ಸಾ ಮಹಾದೇವೀ ಸ್ವಂ ರೂಪಂ ಪ್ರತ್ಯಪದ್ಯತ ॥೩೧॥

---

ನೀವು ಪಠಿಸಿದ ಇಪ್ಪತ್ತುನಾಲ್ಕು ನಾಮಗಳನ್ನು ಮಾನವನು ಮೂರು ಕಾಲಗಳಲ್ಲಿಯೂ ಪ್ರತಿದಿನವೂ ಇಪ್ಪತ್ತುನಾಲ್ಕು ಸಲ ಪಾಠಮಾಡಬೇಕು. ॥೨೭॥

ಆ ಮೇಲೆ ಯಾವನು (ಈ ಸ್ತೋತ್ರಗಳ) ಶ್ಲೋಕಗಳನ್ನು ಸಾವಿರ ಸಲ ಪ್ರತಿದಿನವೂ ಪಠಿಸುವನೋ ಅವನ ಬುದ್ಧಿಯು, ದರ್ಭೆಯ ತುದಿಯಂತೆ, ಸೂಕ್ಷ್ಮವಾಗಿ ಎಲ್ಲಾ ಅರ್ಥಗಳನ್ನೂ ಪ್ರತ್ಯೇಕವಾಗಿ ಗ್ರಹಿಸಬಲ್ಲದಾಗುತ್ತದೆ. ॥೨೮॥

ಹೀಗೆ ಅವನು ಬುದ್ಧಿಶಾಲಿಯಾಗುವನೆಂಬುದರಲ್ಲಿ ಸಂದೇಹವೇ ಇಲ್ಲವೆಂದು ನಾನು ಹೇಳಿದ ಈ ಅಂಶವನ್ನು ತಿಳಿದು, ಎಲೈ ಬ್ರಹ್ಮ, ವಿಷ್ಣು, ಮಹೇಶ್ವರರಿರಾ, ನೀವೆಲ್ಲರೂ ನನ್ನ ಮಾತನ್ನು ನಂಬಿರಿ. ॥೨೯॥

ಸಾವಿತ್ರಿಯ ಕೋಪದಿಂದುಂಟಾದ ಈ ಶಕ್ತಿಗಳನ್ನು ಯಾರೂ ತಿರಸ್ಕರಿಸಬಾರದು. ಏಕೆಂದರೆ ಅವು ಪುನಃ ನೂರಾರು ಬ್ರಹ್ಮ, ವಿಷ್ಣು ಮೊದಲಾದವರಿಂದ ಕೂಡಿದ್ದ ಜಗತ್ತನ್ನೂ ಹಿಂದಿನಂತೆ ನುಂಗಿಬಿಟ್ಟಾವು ! ॥೩೦॥

ಈ ಶಕ್ತಿಗಳು ನನ್ನ ಅಂಶಗಳೇ ಆಗಿ ನಿಮಗೂ ಆವಲಂಬನವಾಗಿರುವುದರಿಂದ ನೀವು ಗೌರವಿಸಲು ಯೋಗ್ಯಗಳಾಗಿವೆ. ಎಂದು ಹೇಳಿ ಮಹಾದೇವೀ ತ್ರಿಪುರಾಸ್ವರೂಪಳಾದ ದೇವಿಯು ತನ್ನ ಸ್ವರೂಪವನ್ನು ಹೊಂದಿದಳು. ॥೩೧॥

ಏತದ್ಭೃಗುಕುಲಾಽಽರಾಧ್ಯ ಪ್ರೋಕ್ತಂ ಸ್ತೋತ್ರಂ ಪುರಾ ಕೃತಂ ।
ಶೃಣು ವಕ್ಷ್ಯಾಮಿ ಸಾ ಭೂಯೋ ಯಥಾ ಗೋಪಕುಲೋದ್ಭವಾ ॥೩೨॥

ಯುಗೇಽಷ್ಟಾವಿಂಶತಿತಮೇ ದೈತ್ಯಾ ಮರ್ತ್ಯಸ್ವರೂಪಿಣಃ ।
ಭೂಲೋಕಂ ಪೀಡಯಿಷ್ಯಂತಿ ಹೀನಚರ್ಯಾ ಪರಾಯಣಾಃ ॥೩೩॥

ಕಾಲಿಂದ್ಯಾ ಸ್ತಟೆ ಸಂಸ್ಥಾನಾ ಮಧುರಾಽಽಖ್ಯಾ ತು ಯಾ ಪುರೀ ।
ಸಾಂಪ್ರತಂ ಲವಣಾಽಽಖ್ಯೇನ ದೈತ್ಯೇನಾಽಧಿಷ್ಠಿತಾ ಹಿ ಸಾ ॥೩೪॥

ತಸ್ಯಾಂ ಚಂದ್ರಾಽನ್ವಯ ಜನಿರ್ಭವಿಷ್ಯತಿ ನೃಪೋತ್ತಮಃ ।
ಉಗ್ರಸೇನ ಇತಿಖ್ಯಾತೋ ಭೋಜವಂಶ ವಿವರ್ಧನಃ ॥೩೫॥

ತಸ್ಯಾಽತ್ಮಜಃ ಸರ್ವಭೀಮಃ ಕಾಲನೇಮಿರ್ಮಹಾಸುರಃ ।
ಕ್ರೂರಃ ಕಂಸ ಇತಿಖ್ಯಾತಃ ಸರ್ವಲೋಕಪ್ರಪೀಡಕಃ ॥೩೬॥

---

ಎಲೈ ಭೃಗುವಂಶದಲ್ಲಿ ಗೌರವವನ್ನು ಹೊಂದಿರುವ ಪರಶುರಾಮನೇ, ಹಿಂದೆ ಬ್ರಹ್ಮಾದಿಗಳು ಮಾಡಿದ ತ್ರಿಪುರಾದೇವಿಯ ಸ್ತೋತ್ರವೇ ಇದೆಂದು ತಿಳಿ. ದೇವಿಯು ಗೊಲ್ಲರ ವಂಶದಲ್ಲಿ ಹುಟ್ಟಿದ ಕಥೆಯನ್ನು ಈಗ ಹೇಳುವೆನು ಕೇಳು. ॥೩೨॥

ಇಪ್ಪತ್ತೆಂಟನೆಯ ಯುಗದಲ್ಲಿ ದೈತ್ಯರೇ ಮನುಷ್ಯರೂಪವನ್ನು ಹೊಂದಿ ಕೆಟ್ಟ ನಡವಳಿಕೆಗಳಲ್ಲಿ ಆಸಕ್ತರಾಗಿ ಭೂಮಿಯನ್ನೆಲ್ಲವನ್ನೂ ಪೀಡಿಸುವವರಾಗುವರು. ॥೩೩॥

ಯಮುನಾನದಿಯ ದಡದಲ್ಲಿ ಮಥುರಾ ಎಂಬ ಪಟ್ಟಣವುಂಟಷ್ಟೆ? ಅದು ಲವಣನೆಂಬ ರಾಕ್ಷಸನಿಂದ ಈಗ ಆಶ್ರಯಿಸಲ್ಪಟ್ಟಿರುತ್ತದೆ. ॥೩೪॥

ಆ ಪಟ್ಟಣದಲ್ಲಿ ಚಂದ್ರವಂಶದಲ್ಲಿ ಹುಟ್ಟಿದ ಭೋಜ ಎಂಬ ವಂಶವನ್ನು ವೃದ್ಧಿಗೊಳಿಸಿದ ಉಗ್ರಸೇನನೆಂಬ ಒಬ್ಬ ಶ್ರೇಷ್ಠರಾಜನು ವಾಸವಾಗಿರುವನು. ॥೩೫॥

ಅವನ ಮಗನಾದ, ಎಲ್ಲರಿಗೂ ಭಯಂಕರನಾದ, ಕಾಲನೇಮಿಯೆಂಬ ದೊಡ್ಡ ರಾಕ್ಷಸನೂ, ಕ್ರೂರನಾದ ಎಲ್ಲಾ ಲೋಕಕ್ಕೂ ಸಂಕಟವನ್ನುಂಟುಮಾಡುವ ಕಂಸ ಎಂಬ ಪ್ರಸಿದ್ಧ ರಾಕ್ಷಸನೂ ಇರುವರು. ॥೩೬॥

ಶಿಶು ಪಾಲಶ್ಚೇದಿಷು ಚ ಹಿರಣ್ಯಕಶಿಪುಃ ಸ್ವಯಂ ।
ಹಿರಣ್ಯಾಕ್ಷೋ ದಂತವಕ್ರಃ ಶಾಲ್ವಃ ಸೌಮಪತಿಸ್ತಥಾ ॥೩೭॥

ನರಕಃ ಪ್ರಾಗ್ಜ್ಯೋತಿಷಜೋ ಜರಾಸಂಧಶ್ಚ ಮಾಗಧಃ ।
ಇತ್ಯಾದ್ಯಾ ಮಾನುಷಾಃ ತ್ಮಾನೋ ದೈತ್ಯಾ ಧರ್ಮಪ್ರಹಿಂಸಕಾಃ ॥೩೮॥

ಅನೇಕಕೋಟಿ ಸೇನಾಭಿಃ ಪ್ರತ್ಯೇಕಂ ಪರಿವಾರಿತಾಃ ।
ಅಪ್ರಧೃಷ್ಯಾ ಮಹಾಸತ್ವಾಃ ಸರ್ವಶಸ್ತ್ರಾಸ್ತ್ರ ಕೋವಿದಾಃ ॥೩೯॥

ತೇಷ್ವಗ್ರಗಣ್ಯಃ ಕಂಸೋ ವೈ ದೇವಬ್ರಾಹ್ಮಣ ಸಜ್ಜನಾನ್ ।
ಪ್ರಹಿಂಸನ್ ಸರ್ವದಾ ಭೂಮಾವುದ್ಭಟಃ ಸಂಭವಿಷ್ಯತಿ ॥೪೦॥

ಅಥಾಃಧರ್ಮ ಭರಾಃಕ್ರಾಂತಾ ಭೂಮಿಃ ಬ್ರಹ್ಮಾಣಮೇಷ್ಯತಿ ।
ಅಸಹಂತೀ ಮಹಾಭಾರ ಮಧರ್ಮಿಷ್ಠ ಜನೋದ್ಭವಂ ॥೪೧॥

---

ಅಲ್ಲದೇ ಚೇದಿದೇಶಗಳ ದೊರೆಯಾದ ಶಿಶುಪಾಲ, ಹಿರಣ್ಯಕಶಿಪು, ಹಿರಣ್ಯಾಕ್ಷ, ದಂತವಕ್ರ, ಶಾಲ್ವ, ಸೌಮಪತಿ, ಎಂಬ ರಾಕ್ಷಸಶ್ರೇಷ್ಠರೂ ಇರುವರು. ॥೩೭॥

ನರಕ, ಪ್ರಾಗ್ಜ್ಯೋತಿಷಜ, ಮಗಧದೇಶದ ದೊರೆಯಾದ ಜರಾಸಂಧ, ಮುಂತಾದ ರಾಕ್ಷಸರು ಮನುಷ್ಯರೂಪರಾಗಿ ಧರ್ಮವನ್ನು ಹಾಳುಮಾಡುತ್ತಿರುವರು. ॥೩೮॥

ಇವರೆಲ್ಲರೂ ಅನೇಕ ಕೋಟಿ ಸೈನ್ಯಗಳಿಂದ ಕೂಡಿದವರಾಗಿ ಸೋಲಿಸಲು ಅಸಾಧ್ಯರಾಗಿ ಬಹಳ ಪರಾಕ್ರಮಶಾಲಿಗಳಾಗಿ, ಎಲ್ಲಾ ಶಸ್ತ್ರಗಳು ಮತ್ತು ಅಸ್ತ್ರಗಳು ಇವುಗಳ ವಿದ್ಯೆಯಲ್ಲಿ ಬಹಳ ನಿಪುಣರಾಗಿರುವರು. ॥೩೯॥

ಇವರಿಗೆಲ್ಲರಿಗೂ ಮುಂದಾಳಾದ ಕಂಸನು ದೇವತೆಗಳು, ಬ್ರಾಹ್ಮಣರು, ಸಜ್ಜನರು ಇವರನೆಲ್ಲರನ್ನೂ ಹಿಂಸಿಸುತ್ತಾ ಯಾವಾಗಲೂ ಭೂಲೋಕದಲ್ಲಿ ಭಯಂಕರನಾಗಿರುವನು. ॥೪೦॥

ಹೀಗಿರಲು ಭೂದೇವಿಯು ಅಧರ್ಮದ ಭಾರದಿಂದ ಆಕ್ರಮಿಸಲ್ಪಟ್ಟವಳಾಗಿ ಬ್ರಹ್ಮನ ಸಮೀಪಕ್ಕೆ ಹೋಗುವಳು. ಏಕೆಂದರೆ ಅಧರ್ಮಪರರಾದ ಜನರಿಂದ ಉತ್ಪತ್ತಿಯನ್ನು ಪಡೆದ ಪಾಪದ ಭಾರವನ್ನು ಅವಳು ಸಹಿಸಲಾರದೇಹೋಗುವಳು. ॥೪೧॥

ವಿಧಿರ್ದೇವಗಣೋ ಪೇತೋ ಭೂಮ್ಯಾ ಚ ಹರಿಮೇಷ್ಯತಿ ।
ತತ್ರಾಽಽಯಾತಃ ಶಿವೋ ಧ್ಯಾತೋ ನ ತದ್ರಕ್ಷ್ಯೇತಿ ಚೋತ್ತರಂ ॥೪೨॥

ಅಥ ತ್ರಿಮೂರ್ತಿಭಿರ್ಧ್ಯಾತಾ ತ್ರಿಪುರಾ ಪರಮೇಶ್ವರೀ ।
ಆವಿರ್ಭವಿಷ್ಯತಿ ಸುರೈಃ ಪ್ರಣತಾ ಪೂಜಿತಾ ಚ ತೈಃ ॥೪೩॥

ಪ್ರಾರ್ಥಿತಾ ಭೂಭಾರಹತ್ಯೈ ಪ್ರವಕ್ಷ್ಯತಿ ಬುಧೇಶ್ವರಾನ್ ।
ದುರುದ್ಧರೋ ಹ್ಯಯಂ ಭಾರಃ ಸರ್ವೈರಪಿ ಸುರೇಶ್ವರೈಃ ॥೪೪॥

ದೈತ್ಯಾ ಸ್ತಪೋ ವೀರ್ಯಯುತಾ ಮಹಾಬಲ ಪರಾಕ್ರಮಾಃ ।
ನ ತೇ ಶಕ್ಯಾ ವಿಜೇತುಂ ವೋ ಕಾಲವೀರ್ಯ ಪ್ರಭಾವತಃ ॥೪೫॥

ತಸ್ಮಾದ್ಭವಂತಃ ಸರ್ವೇಽತ್ರ ಭೂಮೌ ಮಾನುಷಜನ್ಮತಃ ।
ಸಂಭವಂತ್ವಹಮಪ್ಯತ್ರ ಅಂಶೇನಾಽವತರಾಮ್ಯನು ॥೪೬॥

---

ಬ್ರಹ್ಮನು ದೇವತೆಗಳ ಗುಂಪಿನಿಂದ ಕೂಡಿದ್ಧವನಾಗಿ ಭೂಮಿಯೊಂದಿಗೆ ವಿಷ್ಣುವಿನ ಸಮೀಪಕ್ಕೆ ಹೋಗುವನು. ಅಲ್ಲಿ ಅವರೆಲ್ಲರೂ ಧ್ಯಾನಿಸಿದ ಕೂಡಲೇ ಶಿವನು ಬರುವನು. ಆದರೆ ಅವನೂ ಕೂಡ ಕಾಪಾಡಲು ಶಕ್ತನಲ್ಲವೆಂದು ಗೊತ್ತಾಗುವುದು! ||೪೨||

ಆನಂತರದಲ್ಲಿ ತ್ರಿಮೂರ್ತಿಗಳೂ ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಧ್ಯಾನಿಸಿಸುವರು. ಆಕೆಯೂ ಬರುವಳು. ದೇವತೆಗಳು ನಮಸ್ಕರಿಸಿ ಆಕೆಯನ್ನು ಪೂಜಿಸುವರು. ||೪೩||

ಅವರೆಲ್ಲರೂ ಆಕೆಯನ್ನು ಭೂಭಾರವನ್ನು ನಾಶಮಾಡಲು ಪ್ರಾರ್ಥಿಸುವರು. ಆಕೆಯು ಆ ದೇವಶ್ರೇಷ್ಠರನ್ನು ಕುರಿತು, ದೇವಶ್ರೇಷ್ಠರೂ ಈ ಭಾರವನ್ನು ಇಳಿಸಲಾರರು. ಎನ್ನುವಳು. ಏಕೆಂದರೆ, ||೪೪||

ದೈತ್ಯರು ತಪಸ್ಸಿನಿಂದುಂಟಾದ ಪರಾಕ್ರಮದಿಂದ ಕೂಡಿ, ಮಹಾಬಲಿಷ್ಠರಾಗಿದ್ದಾರೆ. ಕಾಲವಿಶೇಷದಿಂದುಂಟಾದ ಅವರ ಶಕ್ತಿಮಹಿಮೆಯಿರುವುದರಿಂದ ಅವರನ್ನು ಜಯಿಸಲಾಗುವುದಿಲ್ಲ. ||೪೫||

ಆದ್ದರಿಂದ ನೀವೆಲ್ಲರೂ ಭೂಮಿಯಲ್ಲಿ ಮನುಷ್ಯ ಜನ್ಮವನ್ನು ತಾಳಿರಿ. ನಾನೂ ನನ್ನ ಅಂಶದಿಂದ ಅವತಾರಮಾಡುವೆನು. ||೪೬||

ಶಾಪದಗ್ಧಂ ಕರೋಮ್ಯಾದೌ ಕಂಸಮೇಷ ಹರಿಸ್ತತಃ ।
ಹನಿಷ್ಯತಿ ಮಯಾಽಽವಿಷ್ಟಃ ಸರ್ವಾನಪಿ ತಥಾಽಽಸುರಾನ್ ॥೪೭॥

ಮತ್ತಃ ಪ್ರಾಪ್ತವರೋ ಗೋಪೋ ನಂದಃ ಪರಮಶೋಭನಃ ।
ಸಾಂಪ್ರತಂ ಭುವಿ ಕಾಲಿಂದೀ ಮನು ಗೋವ್ರಜನಾಯಕಃ ॥೪೮॥

ತಸ್ಯಾಽಹಂ ಸಂಭವಿಷ್ಯಾಮಿ ಪತ್ನ್ಯಾಮೇಷ ಹರಿಃ ಸ್ವಯಂ ।
ದೇವಕ್ಯಾಂ ವಸುದೇವೇನ ಭೂತ್ವಾ ನಂದ ಗೃಹಾತ್ತು ಮಾಂ ॥೪೯॥

ಕಂಸಾಽಂತಿಕಂ ಪ್ರಾಪಯತು ತತಸ್ತಂ ನಾಶಯಾಮ್ಯಹಂ ।
ಏವಂ ಪ್ರೋಕ್ತಾ ಮಹಾದೇವ್ಯಾ ದೇವಾಃ ಸರ್ವಮಹೀತಲೇ ॥೫೦॥

ದ್ವಿಜೇಷು ಜಾತಾಃ ಸ್ವಸ್ವಾಂಶೈಃ ಭಾರಾಽವತರಣೋದ್ಯತಾಃ ।
ನಾರಾಯಣೋಽಪಿ ದೇವಕ್ಯಾಂ ಭವಿಷ್ಯತ್ಯಖಿಲಾಂಶತಃ ॥೫೧॥

---

ಮೊದಲು ನಾನು ಈ ಕಂಸನನ್ನು ಶಾಪದಿಂದ ಹಾಳಾದವನನ್ನಾಗಿ ಮಾಡುವೆನು. ಆಮೇಲೆ ವಿಷ್ಣುವು ನನ್ನ ಆವೇಶವುಳ್ಳವನಾಗಿ ಕಂಸನನ್ನೂ ಮತ್ತು ಎಲ್ಲಾ ರಾಕ್ಷಸರನ್ನೂ ಸಂಹರಿಸುವನು. ॥೪೭॥

ನನ್ನಿಂದ ವರವನ್ನು ಪಡೆದು ಗೊಲ್ಲನಾದ ನಂದನು ಬಹಳ ಮಂಗಳಕರನಾಗಿರುವನು. ಭೂಮಿಯಲ್ಲಿ ಆಗ ಅವನು ಯಮುನಾನದಿಯ ದಡದಲ್ಲಿರುವ ಗೋಕುಲಕ್ಕೆ ನಾಯಕನಾಗಿರುವನು. ॥೪೮॥

ಅವನ ಪತ್ನಿಯ ಹೊಟ್ಟೆಯಲ್ಲಿ ನಾನೇ ಅವತರಿಸುವೆನು. ವಿಷ್ಣುವು ವಸುದೇವನಿಂದ ದೇವಕಿಯಲ್ಲಿ ಹುಟ್ಟಲಿ. ಆದರೆ ನಾನು ಹುಟ್ಟಿದಕೂಡಲೇ ನಾನು ಹೇಳಿದಂತೆ ಮಾಡಿರಿ. ॥೪೯॥

ನನ್ನನ್ನು ಕೂಡಲೇ ಕಂಸನ ಸಮೀಪಕ್ಕೆ ಒಯ್ಯಿರಿ. ಅನಂತರ ನಾನು ಅವನನ್ನು ನಾಶಮಾಡುವೆನು. ಎಂದು ಮಹಾದೇವಿಯಾದ ತ್ರಿಪುರಾದೇವಿಯು ಹೇಳಲಾಗಿ ಆದರಂತೆ ಎಲ್ಲಾ ದೇವತೆಗಳೂ ಭೂಮಿಯಲ್ಲಿ ಹುಟ್ಟುವರು. ॥೫೦॥

ದೇವತೆಗಳೆಲ್ಲರೂ ಭೂಭಾರವನ್ನು ಇಳಿಸಲು ತಮ್ಮ ತಮ್ಮ ಅಂಶಗಳಿಂದ ದ್ವಿಜರಲ್ಲಿ ಹುಟ್ಟುವರು. ನಾರಾಯಣನೂ ದೇವಕಿಯಲ್ಲಿ ತನ್ನ ಸಮಸ್ತ ಅಂಶದಿಂದಲೂ ಹುಟ್ಟುವನು. ॥೫೧॥

ವಸುದೇವೇನ ವೃಷ್ಣೀನಾಂ ಕುಲೇ ಪರಮಶೋಭನೇ ।
ನಿಶೀಥೇ ತಮಸಾ ವೀತೇ ಭಗವಾನ್ ಸ್ವಸ್ವರೂಪತಃ ॥೫೨॥

ಆವಿರ್ಭವಿಷ್ಯತಿ ತತೋ ವಸುದೇವೇನ ಸಂಸ್ತುತಃ ।
ಬಾಲಭಾವಂ ಸಮೇತ್ಯಾಽಥ ವಸುದೇವಂ ಪ್ರವಕ್ಷ್ಯತಿ ॥೫೩॥

ನಾರದೋಕ್ತ್ಯಾ ಸ್ವಸುರ್ಗರ್ಭಾದ್ವಿದಿತ್ವಾ ಸ್ವಾತ್ಮನೋ ಮೃತಿಂ ।
ಏಷ ಕಂಸೋ ಮಾತುಲೋ ಮೇ ಜಾಗರ್ತ್ಯತಿತರಾಂ ಭಿಯಾ ॥೫೪॥

ಸಂಪ್ರತಿ ಶ್ರೀಮಹಾದೇವ್ಯಾ ಮೋಹಿನ್ಯಾ ಮೋಹಿತೋ ಹಿ ಮಾಂ ।
ಜಾತಂ ಮೃತ್ಯುಂ ನ ಜಾನಾತಿ ಯಾವತ್ತಾವದ್ದ್ರುತಂ ಹಿ ಮಾಂ ॥೫೫॥

ನಯ ನಂದಗೋಪಗೃಹಂ ತತ್ರ ಸಾ ಪರಮೇಶ್ವರೀ ।
ಸಂಭೂತಾಽಸ್ತಿ ತಯಾಽಽವಿಷ್ಟೋಽಹಂ ಜೇಷ್ಯಾಮಿ ಸಮೇಧಿತಃ ॥೫೬॥

---

ನಾರಾಯಣನು ವಸುದೇವನಿಂದ ದೇವಕಿಯಲ್ಲಿ ಶ್ರೇಷ್ಠವಾದ ಯದುವಂಶದಲ್ಲಿ ಕತ್ತಲಿಂದ ಕೂಡಿದ ರಾತ್ರಿಯಲ್ಲಿ ಚಂದ್ರನು ಉದಯಿಸುತ್ತಿರಲು ತನ್ನ ನಿಜವಾದ ಸ್ವರೂಪದ ಪೂರ್ಣಾಂಶದಿಂದಲೇ ಹುಟ್ಟುವನು. ॥೫೨॥

ಅವನನ್ನು ವಸುದೇವನು ಸ್ತೋತ್ರಮಾಡಲಾಗಿ, ವಿಷ್ಣುವು ಬಾಲಭಾವವನ್ನು ಧರಿಸುವನು. ಮತ್ತು ವಸುದೇವನನ್ನು ಕುರಿತು ಈ ರೀತಿಯಲ್ಲಿ ಹೇಳುವನು.॥೫೩॥

ನಾರದನ ಮಾತಿನಪ್ರಕಾರ ಕಂಸನು ತನ್ನ ತಂಗಿಯ ಮಗನಿಂದ ತಾನು ಸಾಯುವೆನೆಂದು ತಿಳಿದು ಆ ನನ್ನ ಮಾವನಾದ ಕಂಸನು ಭಯದಿಂದ ಯಾವಾಗಲೂ ಎಚ್ಚರಗೊಂಡಿರುವನು. ॥೫೪॥

ಈಗ ಮಹಾದೇವಿಯು ಮೋಹಿನೀರೂಪವನ್ನು ಧರಿಸಿ ಅವನನ್ನು ಮರುಳುಗೊಳಿಸುವುದರಿಂದ, ಅವನಿಗೆ ಮೃತ್ಯುವಾಗಿ ಹುಟ್ಟಿರುವ ನನ್ನನ್ನು ತಿಳಿಯುವಷ್ಟರೊಳಗಾಗಿ, ಶೀಘ್ರವಾಗಿ ನನ್ನನ್ನು ಬೇರೆ ಕಡೆಗೆ ಸಾಗಿಸು. ಎಂಬುದಾಗಿ ಹೇಳುವನು. ॥೫೫॥

ನನ್ನನ್ನು ನಂದಗೋಪನ ಮನೆಗೆ ತಲಪಿಸು. ಅಲ್ಲಿ ಪರಮೇಶ್ವರಿಯಾದ ತ್ರಿಪುರಾದೇವಿಯು ಅಂಶದಿಂದ ಹುಟ್ಟಿರುತ್ತಾಳೆ. ಆಕೆಯ ಆವೇಶಕ್ಕೊಳಗಾಗಿ ವೃದ್ಧಿಹೊಂದಿ ನಾನು ಕಂಸನನ್ನು ಜಯಿಸುವೆನು. ॥೫೬॥

ಜೇತುಂ ನ ಶಕ್ಯಃ ಕಂಸೋಽಯಮಧುನಾಽತಿ ಬಲೀ ಯತಃ ।
ಸಂಯ ಮಾಂ ನಂದಸದನಂ ತತ್ರ ನಿಕ್ಷಿಪ್ಯ ತಾ ಮನು ॥೫೭॥

ಸಮಾಪರಾತ್ರ ತತ್ಪಶ್ಚಾತ್ಸಾಽಸ್ಯ ವೀರ್ಯಂ ಹರಿಷ್ಯತಿ ।
ಸ್ಮರ ತಾಂ ಸರ್ವಜನನೀಂ ಪ್ರತಿರೋಧೋ ನ ತೇ ಭವೇತ್ ॥೫೮॥

ವಿದಿತ್ವಾ ಪರಮಾಂ ಶಕ್ತಿಂ ವಿಷ್ಣೋರ್ವಾಕ್ಯಾತ್ಸ್ಮೃತಾ ಹಿ ಸಾ ।
ಪ್ರಭುಂ ಕರಿಷ್ಯತಿ ಗತೌ ತತಸ್ತಂ ಶಿಶುರೂಪಿಣಂ ॥೫೯॥

ಸಮಾದಾಯ ಯಾಸ್ಯತಿ ಸ ಗೋಕುಲಂ ಪ್ರತಿ ನಿರ್ಭಯಃ ।
ಮಹಾದೇವೀಂ ಸ್ಮರನ್ನೇವ ನಿಶೀಥೇಽತಿ ತಮೋವೃತೇ ॥೬೦॥

ಪ್ರಕಾಶಿತ ಮಹಾಮಾರ್ಗಃ ಕಾಲಿಂದೀಮಪಿ ಸಂತರತ್ ।
ಅಥ ಗತ್ವಾ ನಂದಗೃಹಂ ಮೋಹಗ್ರಸ್ತ ಜನಾಽಕುಲಂ ॥೬೧॥

---

ಅತಿ ಬಲಿಷ್ಠನಾದ ಕಂಸನನ್ನು ನಾನು ಈಗಲೇ ಕೊಲ್ಲಲಾಗುವುದಿಲ್ಲ. ಆದ್ದರಿಂದ ನನ್ನನ್ನು ನಂದಗೋಪನ ಮನೆಗೆ ಒಯ್ದು ಅಲ್ಲಿಡು. ॥೫೭॥

ಅನಂತರ ಆಕೆಯನ್ನಿಲ್ಲಿಗೆ ತಂದಿಡು. ಆಕೆಯು ಕಂಸನ ಶಕ್ತಿಯನ್ನಡಗಿಸುವಳು. ಎಲ್ಲಕ್ಕೂ ಜನನಿಯಾದ ಆ ದೇವಿಯನ್ನೇ ಸ್ಮರಿಸುತ್ತಿರು. ನಿನ್ನ ಕೆಲಸದಲ್ಲಿ ಯಾವ ಅಡಚಣೆಯೂ ಉಂಟಾಗಲಾರದು. ॥೫೮॥

ವಿಷ್ಣುವಿನ ಮಾತಿನಂತೆ ಆಕೆಯನ್ನು ಶ್ರೇಷ್ಠಳಾದ ಶಕ್ತಿಸ್ವರೂಪಳೆಂದು ತಿಳಿದು ವಸುದೇವನು ಸ್ಮರಿಸುವನು. ತರುವಾಯ ಶಿಶುವಿನ ರೂಪವುಳ್ಳ ವಿಷ್ಣುವನ್ನು ಅಲ್ಲಿಗೆ ಒಯ್ಯಲು ಅವನು ನಡೆಯುತ್ತಿರುವ ವೇಳೆಯಲ್ಲಿ ಅನುಕೂಲಮಾಡುವಳು. ॥೫೯॥

ಹೀಗಿರಲು ವಸುದೇವನು ನನ್ನನ್ನು ತೆಗೆದುಕೊಂಡು ನಿರ್ಭಯವಾಗಿ ಗೋಕುಲಕ್ಕೆ ಹೋಗುವನು. ಆಗ ಅತ್ಯಂತ ಕತ್ತಲಾದ ರಾತ್ರಿಯ ಕಾಲವಾಗಿರುವುದು. ॥೬೦॥

ವಸುದೇವನಿಗೆ ದೊಡ್ಡ ಮಾರ್ಗವು ತೋರುತ್ತಿರಲಾಗಿ ಯಮುನಾನದಿಯನ್ನೂ ದಾಟುವನು. ದೇವಿಯ ಮೋಹಕ್ಕೊಳಗಾಗಿದ್ದ ಜನಗಳಿಂದ ಕೂಡಿದ ನಂದನ ಮನೆಯನ್ನು ಸೇರುವನು. ॥೬೧॥

ಯಶೋದಾ ಶಯನೇಽಪಶ್ಯದ್ದೇವೀಂ ತಾಂ ಜನಿತಾಂ ತದಾ ।
ಕೋಟಿಸೂರ್ಯ ಸಮಾಽಽಭಾಸಾಂ ತ್ರಿನೇತ್ರಾಂ ಚಂದ್ರಶೇಖರಾಂ ॥೬೨॥

ಶೂಲಾಽಸಿ ಖಡ್ಗ ಪರಶು ಪಾನಪಾತ್ರ ಕಮಂಡಲೂನ್ ।
ಚರ್ಮಪಾಶಾ ವಷ್ಟಭುಜೈರ್ದಧಾನಾಂ ಭೀಮರೂಪಿಣೀಂ ॥೬೩॥

ಕಾಲರಾತ್ರಿಂ ಶಿಶುಂ ನ್ಯಸ್ಯ ಪ್ರಣಮ್ಯಾಽನಕ ದುಂದುಭಿಃ ।
ಬದ್ಧಾಂಜಲಿ ಪುಟಸ್ತಾವತ್ಪ್ರಾಪ್ತೋ ಬ್ರಹ್ಮಾ ಚ ಶಂಕರಃ ॥೬೪॥

ನಾರಾಯಣೋಽಪಿ ನತ್ವಾ ತಾಮಸ್ತನೀತ್ರಿಪುರಾಂ ಶಿವಾಂ ।
ಪ್ರಸನ್ನಾ ತಾನ್ ಸಮಾಧಾಯ ವಸುದೇವಂ ಪ್ರತೀಶ್ವರೀ ॥೬೫॥

ನಯ ಮಾಂ ತ್ವದ್ಗೃಹಮಿತಿ ವದಿಷ್ಯತಿ ತತಸ್ತು ತಾಂ ।
ಯಾವನ್ನೀತ್ವಾ ಗೃಹೇ ನ್ಯಸ್ಯ ತಾವತ್ಪಾಲೈಶ್ಚ ಸರ್ವತಃ ॥೬೬॥

---

ಯಶೋದೆಯು ತನ್ನ ಹಾಸಿಗೆಯ ಮೇಲೆ ದೇವಿಯು ಹುಟ್ಟಿರುವುದನ್ನು ನೋಡುವಳು. ಆ ದೇವಿಯು ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯಿಂದ ಕೂಡಿದವಳಾಗಿಯೂ, ಮುಕ್ಕಣ್ಣಳಾಗಿಯೂ, ಬಾಲಚಂದ್ರನನ್ನೇ ಶಿರಸ್ಸಿನಿಲ್ಲಿ ಧರಿಸಿದವಳಾಗಿಯೂ ಇರುವಳು! ॥೬೨॥

ದೇವಿಯು ಶೂಲ, ಕತ್ತಿ, ಖಡ್ಗ, ಕೊಡಲಿ, ಕುಡಿಯುವ ಪಾತ್ರೆ, ಕಮಂಡಲು, ಇವುಗಳನ್ನೂ, ಚರ್ಮದ ಗುರಾಣಿ, ಪಾಶಗಳನ್ನೂ, ತನ್ನ ಎಂಟು ಭುಜಗಳಲ್ಲಿ ಧರಿಸಿರುವವಳೂ ಮತ್ತು ಭಯಂಕರಸ್ವರೂಪಳೂ ಆಗಿರುವಳು. ॥೬೩॥

ಈ ರೀತಿಯಲ್ಲಿ ವಸುದೇವನು ಕಾಲರಾತ್ರಿಸ್ವರೂಪವಾದ ಆ ಶಿಶುವನ್ನು ನೋಡಿ, ತನ್ನ ಮಗುವನ್ನು ಅಲ್ಲಿರಿಸುವನು. ಆಗ ವಸುದೇವ ಮತ್ತು ಅಲ್ಲಿಗೆ ಬಂದ ಬ್ರಹ್ಮನೂ ಶಿವನೂ ಆಕೆಗೆ ನಮಸ್ಕರಿಸಿ ಕೈಜೋಡಿಸಿಕೊಂಡಿರುವರು. ಹಾಗೆಯೇ ಅಲ್ಲಿಗೆ ಬಂದ ॥೬೪॥

ನಾರಾಯಣನೂ ಕೂಡ ಮಂಗಕರಳಾದ ದೇವಿಯನ್ನು ಕಂಡು ಆ ದೇವಿಗೆ ನಮಸ್ಕರಿಸಿ, ಎಲ್ಲರೂ ಆಕೆಯನ್ನು ಸ್ತೋತ್ರಮಾಡುವರು. ದೇವಿಯು ಅವರಿಗೆ ಪ್ರಸನ್ನಳಾಗಿ ಅವರನ್ನೆಲ್ಲರನ್ನೂ ಸಮಾಧಾನಮಾಡಿ, ವಸುದೇವನನ್ನು ಕುರಿತು ಈ ರೀತಿಯಲ್ಲಿ ಹೇಳುವಳು. ॥೬೫॥

ಓ ವಸುದೇವನೇ, ನೀನು ನನ್ನನ್ನು ನಿನ್ನ ಮನೆಗೆ ಒಯ್ಯು. ನೀನು

ವಿದಿತ್ವಾ ತತ್ರ ಸಂ ಯಾಸ್ಯತ್ಯವೇಕ್ಷ್ಯ ಶಿಶುರೂಪಿಣಂ ।
ಸಮಾದಾಯಾತ್ಮ ಮೃತ್ಯುಂ ತಾಂ ಸ್ವಸ್ರಾ ಭೂಯೋ ನಿವಾರಿತಃ ॥೬೭॥

ಹಂತುಮೇವ ಮನೋ ಯಾವತ್ತಾಪ ದ್ಗುರುತರಾಂ ತು ತಾಂ ।
ಮತ್ವಾಽಸಮರ್ಥಸ್ತಾಂ ವೋಢುಂ ಪ್ರಕ್ಷೇಪ್ಸ್ಯತಿ ಮಹೀತಲೇ ॥೬೮॥

ಅಥ ಪ್ರಾಪ್ಯ ನಭೋಮಾರ್ಗಂ ಪ್ರಾಗ್ರೂಪಾ ತಂ ಪ್ರವಕ್ಷ್ಯತಿ ।
ಮೂಢ ಕಂಸ ನ ಜಾನಾಸಿ ಸ್ವಮೃತ್ಯುಂ ವಿಷಯಸ್ಥಿತಂ ॥೬೯॥

ಅಚಿರೇಣ ಸಮೇತ್ಯ ತ್ವಾಂ ಪಾತಯಿಷ್ಯತಿ ಭೂತಲೇ ।
ಹೃತಂ ತೇ ಬಲ ಸರ್ವಸ್ವಂ ಮಯಾ ಸದ್ಯೋ ವಿಭಾವಯ ॥೭೦॥

ಇತ್ಯುಕ್ತ್ವಾಽಂತರ್ಹಿತಾ ದೇವೀ ಭವಿಷ್ಯತಿ ಮಹೇಶ್ವರೀ ।
ತಸ್ಮಿನ್ನನು ಪ್ರವಿಷ್ಟಾ ಸಾ ಭವಿಷ್ಯತಿ ಸು ಬೃಂಹಿಣೀ ॥೭೧॥

---

ನನ್ನನ್ನು ನಿನ್ನ ಮನೆಯಲ್ಲಿಟ್ಟಮೇಲೆ ದ್ವಾರಪಾಲಕರಿಂದ ಕಂಸನು ಈ ಸಮಾಚಾರವನ್ನು ತಿಳಿದು ಅಲ್ಲಿಗೆ ಬರುವನು. ॥೬೬॥

ಈ ರೀತಿಯಲ್ಲಿ ಕಂಸನು ತಿಳಿದು ಆ ಮನೆಗೆ ಬಂದು ಶಿಶುರೂಪಳಾದ ನನ್ನನ್ನು ತನ್ನ ಮೃತ್ಯುವೆಂಬುಧಾಗಿ ಬಂದವಳೆಂದು ತಿಳಿಯದೇ, ತನ್ನ ತಂಗಿಯು ಬೇಡವೆಂದರೂ ತೆಗೆದುಕೊಳ್ಳುವನು. ॥೬೭॥

ಕಂಸನು ನನ್ನನ್ನು ಕೊಲ್ಲಲು ಮನಸ್ಸುಮಾಡುವಷ್ಟರಲ್ಲಿಯೇ ಅತ್ಯಂತ ಭಾರವಾದ ನನ್ನನ್ನು ಹೊರಲು ಅಶಕ್ತನಾಗಿ ಭೂಮಿಯ ಮೇಲೆ ಬಿಡುವನು. ॥೬೮॥

ಆಗ ಆ ಶಿಶುವು ಆಕಾಶಮಾರ್ಗಕ್ಕೆ ಹಾರಿ ತನ್ನ ಸ್ವರೂಪದಲ್ಲಿ ಕಂಸನನ್ನು ಕುರಿತು, ಎಲೋ ಮೂಢನಾದ ಕಂಸನೇ, ನಿನ್ನನ್ನು ಕೊಲ್ಲುವವನು ನಿನ್ನ ದೇಶದಲ್ಲಿಯೇ ಹುಟ್ಟಿರುವ ವಿಷಯವು ನಿನಗೆ ಗೊತ್ತಾಗಿಲ್ಲ! ಎನ್ನುವಳು. ॥೬೯॥

ಅವನು ಶೀಘ್ರದಲ್ಲಿಯೇ ಬಂದು ನಿನ್ನನ್ನು ನಾಶಮಾಡುವನು. ಈಗಲೇ ನಾನು ನಿನ್ನ ಶಕ್ತಿಯನ್ನೆಲ್ಲವನ್ನೂ ಹೀರಿಬಿಟ್ಟಿರುವೆನೆಂದು ತಿಳಿ. ॥೭೦॥

ಹೀಗೆ ಹೇಳಿ ಮಹೇಶ್ವರಿಯಾದ ದೇವಿಯು ಅಂತರ್ಧಾನವನ್ನು ಹೊಂದುವಳು. ಅನಂತರದಲ್ಲಿ ಆ ದೇವಿಯ ಶಕ್ತ್ಯಂಶವು ಕಂಸನೊಳಗೆ ಅವನನ್ನು ಬಹಳವಾಗಿ ಮೋಹಗೊಳಿಸುವುದು. ॥೭೧॥

ಅಥ ಕೃಷ್ಣಸ್ತ್ರಯಾ ದೇವ್ಯಾ ಚ ಬೃಂಹಿತೋಽತಿ ದುರ್ಹೃದಾನ್ ।
ಹತ್ವಾ ಕಂಸಂ ರಂಗತಲೇ ಹನಿಷ್ಯತಿ ಸುಲೀಲಯಾ ॥೭೨॥

ನಂದಸ್ತತ್ಕೃಪಯಾ ವಿಷ್ಣುಂ ಪ್ರಾಪ್ಯ ಪುತ್ರಂ ಜಗದ್ಗುರುಂ ।
ತ್ರಿಲೋಕವಿಶದಾಂ ಕೀರ್ತಿಂ ಪ್ರಾಪ್ಸ್ಯತ್ಯಖಿಲಪೂಜಿತಾಂ ॥೭೩॥

ಅಥ ತತ್ರ ಗೋಪಕನ್ಯಾ ರೂಪಲಾವಣ್ಯ ಸಂಶ್ರಯಾಃ ।
ನಾರಾಯಣಂ ಕೃಷ್ಣಮಿತಿ ಜ್ಞಾತ್ವಾ ತದ್ಗತಮಾನಸಾಃ ॥೭೪॥

ತತ್ಸಮಾಗಮ ಸಂಪ್ರಾಪ್ತ್ಯೈ ತಪಸ್ಯಂತಂ ನದೀಮನು ।
ಕಾತ್ಯಾಯನಂ ಮುನಿಂ ಸರ್ವಾ ಸ್ತೋಷಯಿಷ್ಯಂತಿ ಸೇವಯಾ ॥೭೫॥

ಸ ಪ್ರಸನ್ನೋ ವಿಮೃಶ್ಯಾಥ ತಾ ವಕ್ಷ್ಯತಿ ಕುಮಾರಿಕಾಃ ।
ಅಸಾಧ್ಯಂ ವಃ ಪ್ರೇಪ್ಸಿತಂ ಯನ್ನಾರಾಯಣ ಸುಸಂಗತಾಃ ॥೭೬॥

---

ಅನಂತರ ಕೃಷ್ಣನು ಆ ಶಕ್ತಿ ದೇವಿಯಿಂದ ಬಲವು ಹೆಚ್ಚಲು, ತನ್ನನ್ನು ಕೊಲ್ಲಿಸಲು ಕಂಸನು ಕಳುಹಿಸಿದ ಅತ್ಯಂತ ಕೆಟ್ಟವರಾದ ರಾಕ್ಷಸರನ್ನು ಸಂಹಾರಮಾಡಿ, ಕಡೆಗೆ ಯುದ್ಧರಂಗದಲ್ಲಿ ಕಂಸನನ್ನೂ, ಅನಾಯಾಸವಾಗಿಯೇ ಕೊಲ್ಲುವನು. ॥೭೨॥

ನಂದನು ತ್ರಿಪುರಾದೇವಿಯ ಕೃಪೆಯಿಂದ ಲೋಕಕ್ಕೆ ಗುರುವಾದ ವಿಷ್ಣುವನ್ನೇ ತನ್ನ ಮಗನನ್ನಾಗಿ ಪಡೆದು, ಎಲ್ಲರೂ ಗೌರವಿಸಲು ಯೋಗ್ಯವಾದ ಮೂರು ಲೋಕದಲ್ಲಿಯೂ ಪ್ರಕಾಶಿಸುತ್ತಿರುವ ಕೀರ್ತಿಯನ್ನು ಹೊಂದುವನು. ॥೭೩॥

ಆ ಮೇಲೆ ಅಲ್ಲಿ ಸೌಂದರ್ಯ ಮತ್ತು ಲಾವಣ್ಯಗಳಿಗೆ ಬೀಡಾಗಿರುವ ಗೋಪಿಕೆಯರು ನಾರಾಯಣನೇ ಕೃಷ್ಣನೆಂದು ತಿಳಿದು, ಅವನಲ್ಲೇ ನೆಟ್ಟಮನಸ್ಸುಳ್ಳವರಾಗುವರು. ॥೭೪॥

ಅವರೆಲ್ಲರೂ ತಾವು ಕೃಷ್ಣನ ಸಂಬಂಧವನ್ನು ಹೊಂದಬೇಕೆಂದು ಬಯಸಿ, ನದಿಯ ದಡದಲ್ಲಿ ತಪಸ್ಸನ್ನು ಮಾಡುತ್ತಿರುವ ಕಾತ್ಯಾಯನ ಎಂಬ ಋಷಿಯನ್ನು ಸೇವಿಸಿ ಅವನನ್ನು ಮೆಚ್ಚಿಸುವರು. ॥೭೫॥

ಅವನು ಗೋಪಿಕೆಯರನ್ನು ಮೆಚ್ಚಿ ಸ್ವಲ್ಪ ಹೊತ್ತು ವಿಮರ್ಶೆಮಾಡಿ, ಅನಂತರ ಆ ಕುಮಾರಿಯರನ್ನು ಕುರಿತು, ನಾರಾಯಣ ಸಂಬಂಧವನ್ನು ಕೋರುವ ನಿಮ್ಮ ಇಷ್ಟವು ಅಸಾಧ್ಯವಾಗಿರುತ್ತದೆ! ಎಂಬುದಾಗಿ ಹೇಳುವನು. ॥೭೬॥

ತುಷ್ಟೋಽಹಂ ಸಾಧಯಿಷ್ಯಾಮಿ ಸರ್ವಥಾ ತನ್ನ ಸಂಶಯಃ ।
ವಿದಿತ್ವಾ ನಂದಸದನ ಭವಾಂ ತಾಂ ಕೃಷ್ಣಸಂಶ್ರಯಾಂ ॥೭೭॥

ಉಪಸ್ಥಾಸ್ಯತಿ ಸದ್ಭಕ್ತ್ಯಾ ಸ್ತೋಸಾಸ್ಯಾಮೇವ ತನ್ಮಯೀಂ ।
ಅಥ ಸಾ ಕಾಲ ರಾತ್ರಿರ್ನೃಪ ಪ್ರಸನ್ನಾ ತೇನ ಸಂಸ್ತುತಾ ॥೭೮॥

ಆವಿರ್ಭವಿಷ್ಯತಿ ಶಿವಾ ಭಕ್ತಮಾನಸ ಪೂರಣೀ ।
ಸಾ ಪ್ರವಕ್ಷ್ಯತಿ ತುಷ್ಟಾ ತಂ ವಿಪ್ರವರ್ಯಂ ಸಮೀಹಿತಂ ॥೭೯॥

ಕಿಂ ತೇ ತದ್ಬ್ರೂಹಿ ಮತ್ತಸ್ತ್ವಂ ಮಾ ಚಿರಂ ಸಮವಾಪ್ನುಹಿ ।
ಅಥ ತಾಂ ವಕ್ಷ್ಯತಿ ನತ ಇಮಾ ಗೋಪಕುಮಾರಿಕಾಃ ॥೮೦॥

ವಿಷ್ಣುನಾಽಂಶಾವತೀರ್ಣೇನ ಪ್ರಾಪ್ಸ್ಯಂತ್ಯಚಿರಸಂಗತಂ ।
ತತ್ಪ್ರಸಾಧಯ ದೇವೇಶಿ ಏತನ್ಮೇ ಕಾಂಕ್ಷಿತಂ ಭವೇತ್ ॥೮೧॥

---

ಆದರೂ ನಿಮ್ಮ ಇಷ್ಟಾರ್ಥವನ್ನು ಸಾಧಿಸಿಕೊಡುವೆನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಹೀಗೆಂದು ಹೇಳಿ ಆ ಋಷಿಯು ಶಕ್ತಿದೇವಿಯು ನಂದನ ಮನೆಯಲ್ಲಿ ಕೃಷ್ಣನನ್ನು ಆಶ್ರಯಿಸಿರುವಳೆಂಬುದನ್ನು ತಿಳಿಯುವನು. ॥೭೭॥

ಆಗ ಆ ಋಷಿಯು ತಾನು ಪೂಜಿಸುತ್ತಲೇ ಇದ್ದ ಪರಾಶಕ್ತಿದೇವಿಯೇ ಆದ ಆ ಶಕ್ತಿಯನ್ನು ಒಳ್ಳೆಯ ಭಕ್ತಿಯಿಂದ ಪೂಜಿಸುವನು. ಆ ಬಳಿಕ ಕಾಲರಾತ್ರಿ ಸ್ವರೂಪಳಾದ ಆ ಶಕ್ತಿಯು ಋಷಿಯಿಂದ ಸ್ತೋತ್ರಮಾಡಲ್ಪಟ್ಟವಳಾಗಿ ಅವನನ್ನು ಮೆಚ್ಚುವಳು. ಮತ್ತು ॥೭೮॥

ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವ ಮಂಗಳಸ್ವರೂಪಳಾದ ದೇವಿಯು ಆವನಿಗೆ ಕಾಣಿಸಿಕೊಳ್ಳುವಳು. ಅವಳು ಪ್ರಸನ್ನಳಾಗಿ ಆ ಬ್ರಾಹ್ಮಣ ಶ್ರೇಷ್ಠನನ್ನು ಕುರಿತು ಹೀಗೆ ಹೇಳುವಳು. ॥೭೯॥

ಎಲೈ ಋಷಿಯೇ, ನಿನಗೆ ನನ್ನಿಂದಾಗಬೇಕಾದ ಇಷ್ಟಾರ್ಥವೇನೆಂಬುದನ್ನು ಕೇಳು. ಅದನ್ನು ಶೀಘ್ರದಲ್ಲಿಯೇ ನನ್ನಿಂದ ಹೊಂದುವೆ. ಹೀಗೆನ್ನಲು ಆತನು ಆಕೆಗೆ ನಮಸ್ಕರಿಸಿ ಗೋಪಿಕಾಸ್ತ್ರೀಯರ ಅಭಿಲಾಷೆಯನ್ನು ಹೇಳುವನು. ॥೮೦॥

ಈ ಗೋಪಿಕಾಸ್ತ್ರೀಯರು ವಿಷ್ಣುವಿನ ಅಂಶದಿಂದ ಹುಟ್ಟಿರುವ ಕೃಷ್ಣನೊಂದಿಗೆ ಸಂಬಂಧವನ್ನು ಶೀಘ್ರದಲ್ಲಿಯೇ ಹೊಂದುವಂತೆ ದಯವಿಟ್ಟು ಮಾಡು, ಓ ದೇವತೆಗಳಿಗೂ ಒಡೆಯಳಾದ ದೇವಿಯೇ, ಇದೇ ನನ್ನ ಇಷ್ಟಾರ್ಥವು. ॥೮೧॥

ಅಹಂ ಚಿರಂ ಸೇವಿತಃ ಸನ್ ಆಭಿಃ ಸರ್ವಾಽಽತ್ಮಭಾವತಃ ।
ದಿಶಾಮ್ಯಭೀಪ್ಸಿತಮಿತಿ ಸಂತುಷ್ಟೋಽಬ್ರುವಮಂಜಸಾ ॥೮೨॥

ತನ್ಮೇ ಮೃಷಾ ನ ಹಿ ಭವೇತ್ಕೃಪಯಾ ತವ ಶಂಕರಿ ।
ಏವಂ ಕಾತ್ಯಾಯನ ವಚಃ ಶ್ರುತ್ವಾ ತ್ರಿಜಗದೀಶ್ವರೀ ॥೮೩॥

ವಿಪ್ರಂ(ಸಾ)ವಕ್ಷ್ಯತಿ ಪುನರಸ್ತು ತತ್ತೇ ದ್ವಿಜೋತ್ತಮ ।
ಪರಂ ತ್ವತ್ರ ಮಹಾನ್ ಕಾಮ ಏಷ ತಾಸಾಂ ಮನೋಗತಃ ॥೮೪॥

ತನ್ಮೇ ವ್ರತಂ ಚರಂತ್ವೇತಾ ಮಾಸೇಽಸ್ಮಿನ್ಮಾರ್ಗ್ರಹಾಯಣೇ ।
ತವ ನಾಮ್ನಾ ಪ್ರಸಿದ್ಧಾಯಾಃ ಕಾತ್ಯಾಯನ್ಯಾ ಯಥಾವಿಧಿ ॥೮೫॥

ತತಃ ಕಾಮಂ ದಿಶಾಮ್ಯುಕ್ತ ಮಿತ್ಯುಕ್ತ್ವಾಽಂತರ್ಧಿಮೇಷ್ಯತಿ ।
ತತಸ್ತಾ ವಚನಾತ್ತಸ್ಯ ವ್ರತಂ ಕೃತ್ವಾ ಯಥಾವಿಧಿ ॥೮೬॥

---

ಈ ಗೋಪಿಕಾಸ್ತ್ರೀಯರು ನನ್ನನ್ನು ಬಹಳಕಾಲ ಸರ್ವಾತ್ಮಭಾವದಿಂದ ಸೇವಿಸಲಾಗಿ ನಾನೂ ಅದೇ ಭಾವದಿಂದ, ಕೂಡಲೆ ನಿಮ್ಮ ಇಷ್ಟಾರ್ಥವನ್ನು ಸಾಧಿಸಿ ಕೊಡುವೆನೆಂದು ಅವರಿಗೆ ಹೇಳಿದೆನು. ॥೮೨॥

ಓ ಶಂಕರಿಯೇ, ನಿನ್ನ ಕೃಪೆಯಿಂದ ನನ್ನ ಆ ಮಾತು ಸುಳ್ಳಾಗದಿರಲಿ. ಎಂಬುದಾಗಿ ಹೇಳಿದ ಕಾತ್ಯಾಯನನ ಮಾತನ್ನು ಕೇಳಿ ಮೂರು ಲೋಕಕ್ಕೂ ಒಡೆಯಳಾದ ದೇವಿಯು ಈ ರೀತಿಯಲ್ಲಿ ಹೇಳಿದಳು. ॥೮೩॥

ದೇವಿಯು, ಎಲೈ ಬ್ರಾಹ್ಮಣ ಶ್ರೇಷ್ಠನೇ, ನಿನ್ನ ಅಭಿಪ್ರಾಯವೇನೋ ನಡೆಯುವುದು. ಆದರೆ ಈ ಗೋಪಿಕಾಸ್ತ್ರೀಯರ ಅಭಿಲಾಷೆಯು ಬಹಳ ದೊಡ್ಡದು. ಎಂದು ಅವನಿಗೆ ಹೇಳುವಳು. ॥೮೪॥

ಆದ್ದರಿಂದ ಈ ಗೋಪಿಕೆಯರು ಬರುವ ಮಾರ್ಗಶೀರ್ಷ ಮಾಸದಲ್ಲಿ ನಿನ್ನ ಹೆಸರಿಂದ ಕಾತ್ಯಾಯನೀ ಎಂಬುದಾಗಿಯೇ ಪ್ರಸಿದ್ಧಳಾದ ನನ್ನ ವ್ರತವನ್ನು ಶಾಸ್ತ್ರೋಕ್ತಕಾಲದಲ್ಲಿ ಆಚರಿಸಲಿ. ॥೮೫॥

ಅನಂತರದಲ್ಲಿ ಅವರ ಇಷ್ಟಾರ್ಥವನ್ನು ಸಲ್ಲಿಸುವೆನೆಂದು ಹೇಳಿ ಆಕೆಯು ಅಂತರ್ಧಾನವನ್ನು ಹೊಂದುವಳು. ಆ ಮೇಲೆ ಕಾತ್ಯಾಯನನ ಮಾತಿನಂತೆ ಗೋಪಿಕೆಯರು ಈ ವ್ರತವನ್ನು ಶಾಸ್ತ್ರೋಕ್ತವಾಗಿ ಆಚರಿಸುವರು. ॥೮೬॥

ಪ್ರಿಯಂ ಕೃಷ್ಣಂ ಮನಃ ಕಾಂತಂ ಪ್ರಾಪ್ಸ್ಯಂತಿ ಪುರುಷೋತ್ತಮಂ ।
ಇತಿ ಶ್ರುತ್ವಾ ಕಥಾಂ ತತ್ರ ದತ್ತಾತ್ರೇಯಂ ಭೃಗೂದ್ವಹಃ ॥೮೭॥

ಪಪ್ರಚ್ಛ ಭೂಯಃ ಸೋತ್ಸಾಹೋ ಭಗವನ್ ಕರುಣಾನಿಧೇ ।
ವ್ರತಂ ತತ್ಕಿಂವಿಧಂ ಬ್ರೂಹಿ ಆಚರಿಷ್ಯಂತಿ ತಾಃ ಕಥಂ ॥೮೮॥

ಕಥಂ ಕಾತ್ಯಾಯನೀ ಪ್ರೀತಾ ತಾಸಾಮಿಷ್ಟಂ ಪ್ರದಾಸ್ಯತಿ ।
ಪೃಷ್ಟ ಏವಂ ದತ್ತಗುರು ರ್ಜಾಮದಗ್ನ್ಯೇನ ಹರ್ಷಿತಃ ॥೮೯॥

ಶೃಣು ವತ್ಸೇತ್ಯುಪಾಮಂತ್ರ್ಯ ವ್ರತಸ್ಯಾಽಽಹ ವಿಧಿಂ ಪರಾಂ।
ಶೃಣು ಭಾರ್ಗವ ವಕ್ಷ್ಯಾಮಿ ಜ್ಞಾನಾಮ್ಯಖಿಲಾಽಽಗಮಂ ॥೯೦॥

---

ಆ ಬಳಿಕ ಗೋಪಿಯರು ತಮ್ಮ ಮನಸ್ಸಿಗೆ ಪ್ರಿಯನಾದ ಪುರುಷಶ್ರೇಷ್ಠನಾದ ವಿಷ್ಣುವನ್ನು ಹೊಂದುವರು. ಎಂಬುದಾಗಿ ಗುರುವಾದ ದತ್ತಾತ್ರೇಯನು ಹೇಳಿದ ಈ ಕಥೆಯನ್ನು ಕೇಳಿ ಭೃಗುವಂಶಶ್ರೇಷ್ಠನಾದ ಪರಶುರಾಮನು ದತ್ತಾತ್ರೇಯನನ್ನು ಈ ರೀತಿಯಾಗಿ ಪ್ರಶ್ನಿಸಿದನು. ॥೮೭॥

ಪರಶುರಾಮನು ಪುನಃ ಉತ್ಸಾಹವುಳ್ಳವನಾಗಿ ದತ್ತಾತ್ರೇಯನನ್ನು ಕುರಿತು ಓ ಕರುಣಾಶಾಲಿಗಳಾದ ಗುರುಗಳೇ, ಆ ವ್ರತವೆಂತಹದು ? ಅದನ್ನು ಅವರು ಹೇಗೆ ಮಾಡುವರು ? ಅಲ್ಲದೆ ॥೮೮॥

ಕಾತ್ಯಾಯನಿಯು ಸಂತೋಷಪಟ್ಟು, ಅವರ ಇಷ್ಟವನ್ನು ಹೇಗೆ ನೀಡುವಳು ? ಎಂಬುದಾಗಿ ಪರಶುರಾಮನು ಕೇಳಲು, ದತ್ತಾತ್ರೇಯನು ಸಂತೋಷದಿಂದ ಈರೀತಿಯಲ್ಲಿ ಹೇಳಿದನು. ॥೮೯॥

ಎಲೈ ಮಗುವೇ, ಕೇಳು. ಎಂದು ಹತ್ತಿರಕ್ಕೆ ಕರೆದು ದತ್ತಾತ್ರೇಯನು ಆ ವ್ರತದ ಶ್ರೇಷ್ಠ ವಿಧಾನವನ್ನು ಹೇಳಲು ಪ್ರಾರಂಭಿಸಿ, ಎಲೈ ಪರಶುರಾಮನೇ, ಸಕಲ ಶಾಸ್ತ್ರಗಳನ್ನೂ ಬಲ್ಲವನಾದ್ದರಿಂದ ನಾನು ಈ ವ್ರತನಿಯಮವನ್ನೂ ಹೇಳುವೆನು. ಕೇಳು. ಎಂದನು. ॥೯೦॥

ಮಾರ್ಗಶೀರ್ಷಸ್ಯಾಽದ್ಯತಿಥಿಂ ಸಮಾರಭ್ಯ ವ್ರತಂ ಚರೇತ್ ।
ಕಾತ್ಯಾಯನ್ಯಾಃ ಪೂರ್ಣಿಮಾಂತಂ ಸ್ತ್ರೀಣಾ ಮತ್ರಾಧಿಕಾರಿತಾ ॥೯೧॥

ಸ್ನಾತ್ವೋಽಷಸಿ ನದಿತೀರೇ ಶುಕ್ಲವಸ್ತ್ರಾಽದಿ ಭೂಷಿತಾಃ ।
ಸೈಕತೀಂ ಪ್ರತಿಮಾಂ ಕೃತ್ವಾ ಕಾತ್ಯಾಯನ್ಯಾ ಯಥಾವಿಧಿ ॥೯೨॥

ತತ್ರ ಧ್ಯಾತ್ವಾ ಪ್ರೋಕ್ತವತ್ತಾಂ ಶುಕ್ಲಮಾಲ್ಯಾಽಕ್ಷತಾಽದಿಭಿಃ ।
ನವನೀತ ಪ್ರಧಾನಂ ವೈ ನೈವೇದ್ಯಂ ವಿವಿಧಂ ಭವೇತ್ ॥೯೩॥

ಏವಂ ಸಂಪೂಜ್ಯ ಸಂಸ್ತುತ್ಯ ಗೀತನೃತ್ಯೈಶ್ಚ ತೋಷಯೇತ್ ।
ಉದ್ವಾಸ್ಯ ಸೈಕತೀಂ ಮೂರ್ತಿಂ ನದ್ಯಾಂ ನಿಕ್ಷಿಪ್ಯ ಭಾರ್ಗವ ॥೯೪॥

ಮಾಲವೀ ಸಹದೇವಾ ಚ ನಂದಾ ಭದ್ರಾ ಸುನಂದಿನೀ ।
ಪದ್ಮಾ ವಿಶಾಲಾ ಗೋದಾಮ್ನೀ ಶ್ರೀದೇವೀ ದೇವಮಾಲವೀ ॥೯೫॥

---

ಮಾರ್ಗಶೀರ್ಷಮಾಸದ ಮೊದಲನೆಯ ಪಾಡ್ಯದಲ್ಲಿ ಪ್ರಾರಂಭಿಸಿ ಪೌರ್ಣೀಮಿಯವರೆಗೆ ಈ ಕಾತ್ಯಾಯನೀ ವ್ರತವನ್ನು ಆಚರಿಸಬೇಕು. ಇದನ್ನು ಮಾಡಲು ಸ್ತ್ರೀಯರೇ ಅಧಿಕಾರವುಳ್ಳವರು. ॥೯೧॥

ಉಷಃಕಾಲದಲ್ಲಿ ಸ್ತ್ರೀಯರು ಸ್ನಾನಮಾಡಿ ನದಿಯಲ್ಲಿ ಬಿಳಿಯ ಬಟ್ಟೆಯೇ ಮೊದಲಾದುವುಗಳಿಂದ ಶೋಭಿತರಾಗಿ, ಮರಳಿನಿಂದ ಮಾಡಿದ ಕಾತ್ಯಾಯನೀ ದೇವಿಯ ಪ್ರತಿಮೆಯನ್ನು ಶಾಸ್ತ್ರೋಕ್ತವಾದ ಕ್ರಮದಲ್ಲಿ ಧ್ಯಾನಿಸಬೇಕು. ॥೯೨॥

ಹೀಗೆ ಧ್ಯಾನಮಾಡಿ ಶಾಸ್ತ್ರೋಕ್ತಕ್ರಮದಲ್ಲಿ ಬಿಳಿಯ ಹೂವು ಅಕ್ಷತೇ ಮೊದಲಾದುವುಗಳಿಂದ ಆ ಪ್ರತಿಮೆಗೆ ಪೂಜಿಸಿ, ಬೆಣ್ಣೆಯಿಂದ ಮಾಡಿದ ನಾನಾವಿಧವಾದ ಪದಾರ್ಥಗಳನ್ನೇ ನೈವೇದ್ಯವನ್ನು ಆ ದೇವಿಗೆ ಸಮರ್ಪಿಸಬೇಕು. ॥೯೩॥

ಈರೀತಿಯಲ್ಲಿ ಪೂಜಿಸಿ ಸ್ತೋತ್ರಮಾಡಿ ಆ ದೇವಿಯನ್ನು ಗಾನ ಮತ್ತು ನರ್ತನಗಳಿಂದ ಸಂತೋಷಪಡಿಸಬೇಕು. ಎಲೈ ಪರಶುರಾಮನೇ, ಅನಂತರದಲ್ಲಿ ಆ ಪ್ರತಿಮೆಯನ್ನು ವಿಸರ್ಜಿಸಿ (ಉದ್ವಾಸನೆಯನ್ನು ಮಾಡಿ) ನದಿಯಲ್ಲಿ ಬಿಡಬೇಕು. ॥೯೪॥

ಮಾಲವೀ, ಸಹದೇವಾ, ನಂದಾ, ಭದ್ರಾ, ಸುನಂದಿನೀ, ಪದ್ಮಾ, ಗೋದಾಮ್ನೀ, ಶ್ರೀದೇವೀ, ದೇವಮಾಲವೀ, ಎಂಬುವರು ಕೆಲವು ಗೋಪಿಕಾಸ್ತ್ರೀಯರೆಂದು ತಿಳಿ. ॥೯೫॥

ಶ್ಯಾಮಾ ಸುಪೇಶಾ ಶಾಲಾಂಗೀ ಮಾನವೀ ಮಾನದಾಽಮೃತಾ ।
ಇತಿ ಗೋಪಕುಮಾರೀಣಾಂ ಪ್ರಧಾನಾಃ ಷೋಡಶೇರಿತಾಃ ॥೯೬॥

ಪೂಜಾಂತೇ ಸಂಸ್ಮರೇದೇತಾಃ ಪೂಜಾ ಸಂಪೂರ್ತಿಹೇತವೇ ।
ಗೋಪೀ ಪ್ರಿಯ ನಮಸ್ತುಭ್ಯಂ ಗೋಪಾಲ ಗೋವ್ರಜೇಶ್ವರ ॥೯೭॥

ಗೋಪೀ ವಸ್ತ್ರಾಪಹರಣ ಗೋಗೋಪಾಲ ನಿಷೇವಿತ ।
ಮಾತಃ ಕಾತ್ಯಾಯನಿ ನಮೋ ನಂದ ಗೋಪಕುಮಾರಿಕೇ ॥೯೮॥

ಕಂಸವೀರ್ಯ ಹರೇ ಕೃಷ್ಣ ವಿರ್ಯೇ ವಿಂಧ್ಯಾಽದ್ರಿವಾಸಿನಿ ।
ಇತೀ ದೇವೀಂ ಕೃಷ್ಣಮಪಿ ನತ್ವಾ ಗಾಂ ವತ್ಸಸಂಯುತಾಂ ॥೯೯॥

ಪ್ರದಕ್ಷಿಣೀ ಕೃತ್ಯ ದೂರ್ವಾ ಮುಷ್ಟಿಂ ತಸ್ಯೈ ನಿವೇದಯೇತ್ ।
ಹವಿಷ್ಯಾನ್ನಂ ಸಮಶ್ನೀಯಾನ್ಮಾಸಮಾತ್ರಂ ಸಮಾಹಿತಾ ॥೧೦೦॥

---

ಅಲ್ಲದೇ, ಶಾಮಾ, ಸುಪೇಶಾ, ಶಾಲಾಂಗೀ, ಮಾನವೀ, ಮಾನದಾ, ಅಮೃತಾ ಎಂಬುವರೂ ಒಟ್ಟು ಸೇರಿ, ಹದಿನಾರು ಮಂದಿ ಗೋಪಿಕಾಸ್ತ್ರೀಯರೆಂದು ಹೇಳಲ್ಪಟ್ಟಿದೆ. ॥೯೬॥

ಕಾತ್ಯಾಯನೀ ಪೂಜೆಯಾದ ಬಳಿಕ ಈ ಗೋಪಿಕಾಸ್ತ್ರೀಯರನ್ನೂ ಪೂಜೆಯು ಸಾಂಗವಾಗುವುದಕ್ಕೋಸ್ಕರ ಸ್ಮರಿಸಬೇಕು. ಅನಂತರದಲ್ಲಿ ಗೋಪಿಗಳಿಗೆ ಪ್ರಿಯನಾದ ಶ್ರೀಕೃಷ್ಣನೇ, ಗೋಪಾಲನೇ, ಗೋಕುಲಕ್ಕೆ ಒಡೆಯನೇ, ನಿನಗೆ ನಮಸ್ಕಾರವೆಂದು ಹೇಳಿ ನಮಸ್ಕರಿಸಬೇಕು. ॥೯೭॥

ಗೋಪಿಗಳ ಸೀರೆಗಳನ್ನು ಕದ್ದವನೇ, ಹಸುಗಳಿಂದ ಮತ್ತು ಗೊಲ್ಲರಿಂದ ಸೇವಿಸಲ್ಪಡುವವನೇ, ನಿನಗೆ ನಮಸ್ಕಾರವೆಂದು ಹೇಳಬೇಕು. ತರುವಾಯ ಎಲೌ ತಾಯಿಯೇ, ಕಾತ್ಯಾಯನಿಯೇ, ನಂದಗೋಪನ ಮಗಳೇ, ನಿನಗೆ ನಮಸ್ಕಾರವೆಂದು ಹೇಳಿ ನಮಸ್ಕರಿಸಬೇಕು. ॥೯೮॥

ಕಂಸನ ಶಕ್ತಿಯನ್ನು ಹೀರಿದವಳೇ, ಕೃಷ್ಣನ ಶಕ್ತಿಸ್ವರೂಪಳೇ, ವಿಂಧ್ಯ ಪರ್ವತದಲ್ಲಿ ವಾಸಮಾಡುವವಳೇ, ನಿನಗೆ ನಮಸ್ಕಾರವು. ಎಂದು ದೇವಿಯನ್ನೂ, ಕೃಷ್ಣನನ್ನೂ ನಮಸ್ಕರಿಸಿ, ಕರುವಿನ ಜೊತೆಯಲ್ಲಿರುವ ಹಸುವನ್ನು ಪ್ರದಕ್ಷಿಣೆ ಮಾಡಬೇಕು. ॥೯೯॥

ಈ ರೀತಿಯಲ್ಲಿ ಪ್ರದಕ್ಷಿಣೆಮಾಡಿ, ಅದಕ್ಕೆ ಒಂದು ಹಿಡಿ ಹುಲ್ಲನ್ನು ಕೊಡ

ಮಾಸಾಂತೇ ಶಕ್ತಿತೋಽಭ್ಯರ್ಚ್ಯ ವಿಶೇಷೇಣ ಮಹೇಶ್ವರೀಂ ।
ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ ನವನೀತಪ್ರಧಾನತಃ ॥೧೦೧॥
ಏವಂ ವ್ರತಾಽಽಚರಣತೋ ವಾಂಛಿತಂ ಪ್ರಾಪ್ಯತೇಽಖಿಲಂ ।
ಕುಮಾರೀ ಲಭತೇ ಶ್ರೇಷ್ಠಂ ಪತಿಂ ಸರ್ವಸುಖಾವಹಂ ॥೧೦೨॥
ತರುಣೀ ಲಭತೇ ಪುತ್ರಂ ಪೌತ್ರಂ ಪುತ್ರವತೀ ತಥಾ ।
ಸೌಭಾಗ್ಯಂ ಸರ್ವಸೌಖ್ಯಾನಿ ಲಭತೇ ನಾತ್ರ ಸಂಶಯಃ ॥೧೦೩॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಕಾತ್ಯಾಯನೀವ್ರತ ವರ್ಣನಂ ನಾಮ ಚತ್ವಾರಿಂಶೋಽಧ್ಯಾಯಃ

---

ಬೇಕು. ಹೀಗೆ ಶಾಂತಚಿತ್ತಳಾಗಿ ಒಂದು ತಿಂಗಳುಕಾಲ ಚರುವಿನ ಅನ್ನವನ್ನೇ ತಿನ್ನುತ್ತಾ ವ್ರತವನ್ನು ಆಚರಿಸಬೇಕು. ॥೧೦೦॥

ತಿಂಗಳ ಕೊನೆಯಲ್ಲಿ ತನ್ನ ಶಕ್ತ್ಯನುಸಾರವಾಗಿ ಮಹೇಶ್ವರಿಯನ್ನು ಪೂಜಿಸಿ, ಬೆಣ್ಣೆಯಿಂದ ಮಾಡಿದ ಪದಾರ್ಥಗಳಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ॥೧೦೧॥

ಹೀಗೆ ವ್ರತವನ್ನು ಮಾಡಿದರೆ ಸಮಸ್ತ ಇಷ್ಟಾರ್ಥವೂ ಲಭಿಸುವುದು. ಬಾಲಿಕೆಯು ಎಲ್ಲಾ ಸುಖಗಳನ್ನೂ ಉಂಟುಮಾಡುವ ಶ್ರೇಷ್ಠವಾದ ಪತಿಯನ್ನು ಹೊಂದುತ್ತಾಳೆ. ॥೧೦೨॥

ಯುವತಿಯು ಮಕ್ಕಳನ್ನು ಹೊಂದುವಳು. ಮಕ್ಕಳಿದ್ದವಳು ಮೊಮ್ಮಕ್ಕಳನ್ನು ಪಡೆಯುವಳು. ಮತ್ತು ಸ್ತ್ರೀಯು ಈ ರೀತಿಯಲ್ಲಿ ಎಲ್ಲಾ ಸೌಖ್ಯಗಳನ್ನೂ ಸೌಭಾಗ್ಯಗಳನ್ನೂ ಹೊಂದುವುದರಲ್ಲಿ ಸಂದೇಹವೇ ಇಲ್ಲ. ॥೧೦೩॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಕಾತ್ಯಾಯನೀ ವ್ರತವನ್ನು ವಿವರಿಸುವ ನಲವತ್ತನೆಯ ಅಧ್ಯಾಯವು ಮುಗಿದುದು.

---

ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ತ್ರಿಪುರಾರಹಸ್ಯಾರ್ಥಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥
ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತ್ರಿಪುರಾ ಪಾತು ಸಾಂಬೋ ರಾಜಾ ಚ ಭಾರತೀ ॥

ಮಾಸಾಂತೇ ಶಕ್ತಿತೋಽಭ್ಯರ್ಚ್ಯ ವಿಶೇಷೇಣ ಮಹೇಶ್ವರೀಂ ।
ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ ನವನೀತಪ್ರಧಾನತಃ ॥೧೦೧॥

ಏವಂ ವ್ರತಾಽಽಚರಣತೋ ವಾಂಛಿತಂ ಪ್ರಾಪ್ಯತೇಽಖಿಲಂ ।
ಕುಮಾರೀ ಲಭತೇ ಶ್ರೇಷ್ಠಂ ಪತಿಂ ಸರ್ವಸುಖಾವಹಂ ॥೧೦೨॥

ತರುಣೀ ಲಭತೇ ಪುತ್ರಂ ಪೌತ್ರಂ ಪುತ್ರವತೀ ತಥಾ ।
ಸೌಭಾಗ್ಯಂ ಸರ್ವಸೌಖ್ಯಾನಿ ಲಭತೇ ನಾಽತ್ರ ಸಂಶಯಃ ॥೧೦೩॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಕಾತ್ಯಾಯನೀವ್ರತ ವರ್ಣನಂ ನಾಮ ಚತ್ವಾರಿಂಶೋಽಧ್ಯಾಯಃ

---

ಬೇಕು. ಹೀಗೆ ಶಾಂತಚಿತ್ತಳಾಗಿ ಒಂದು ತಿಂಗಳುಕಾಲ ಚರುವಿನ ಅನ್ನವನ್ನೇ ತಿನ್ನುತ್ತಾ ವ್ರತವನ್ನು ಆಚರಿಸಬೇಕು. ॥೧೦೦॥

ತಿಂಗಳ ಕೊನೆಯಲ್ಲಿ ತನ್ನ ಶಕ್ತ್ಯನುಸಾರವಾಗಿ ಮಹೇಶ್ವರಿಯನ್ನು ಪೂಜಿಸಿ, ಬೆಣ್ಣೆಯಿಂದ ಮಾಡಿದ ಪದಾರ್ಥಗಳಿಂದ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ॥೧೦೧॥

ಹೀಗೆ ವ್ರತವನ್ನು ಮಾಡಿದರೆ ಸಮಸ್ತ ಇಷ್ಟಾರ್ಥವೂ ಲಭಿಸುವುದು. ಬಾಲಿಕೆಯು ಎಲ್ಲಾ ಸುಖಗಳನ್ನೂ ಉಂಟುಮಾಡುವ ಶ್ರೇಷ್ಠವಾದ ಪತಿಯನ್ನು ಹೊಂದುತ್ತಾಳೆ. ॥೧೦೨॥

ಯುವತಿಯು ಮಕ್ಕಳನ್ನು ಹೊಂದುವಳು. ಮಕ್ಕಳಿದ್ದವಳು ಮೊಮ್ಮಕ್ಕಳನ್ನು ಪಡೆಯುವಳು. ಮತ್ತು ಸ್ತ್ರೀಯು ಈ ರೀತಿಯಲ್ಲಿ ಎಲ್ಲಾ ಸೌಖ್ಯಗಳನ್ನೂ ಸೌಭಾಗ್ಯಗಳನ್ನೂ ಹೊಂದುವುದರಲ್ಲಿ ಸಂದೇಹವೇ ಇಲ್ಲ. ॥೧೦೩॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಕಾತ್ಯಾಯನೀ ವ್ರತವನ್ನು ವಿವರಿಸುವ ನಲವತ್ತನೆಯ ಅಧ್ಯಾಯವು ಮುಗಿದುದು.

ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ತ್ರಿಪುರಾರಹಸ್ಯಾರ್ಥಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥
ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತ್ರಿಪುರಾ ಪಾತು ಸಾಂಬೋ ರಾಜಾ ಚ ಭಾರತೀ ॥